ಮನುಷ್ಯ ಜಾತಿ ತಾನೊಂದೆ ವಲಂ

# ಚಾಮರಸನ ಪ್ರಭುಲಿಂಗಲೀಲೆ

ಗದ್ಯಾನುವಾದ

ಡಾ. ಎಸ್. ವಿದ್ಯಾಶಂಕರ್

2

**Chamarasana PRABHULINGA LEELE** - Original with prose rendering by : **Dr. S. Vidyashankar** Published by : **Kannada Sahitya Parishat** Pampa Mahakavi Road, Chamarajapet, Bangalore - 560018 Pages : 372 + iv
Price : Rs. **150=00** ; **2014**

ಮುದ್ರಣದ ವರ್ಷ : ೨೦೧೪

ಪ್ರತಿಗಳು : ೧೦೦೦

ಬೆಲೆ : ಒಂದುನೂರ ಐವತ್ತು ರೂಪಾಯಿಗಳು



ಮುಖಪುಟ ವಿನ್ಯಾಸ : ಫ್ಲವರ್ ಗ್ರಾಫಿಕ್



ಮುದ್ರಣ : ಬಿ.ಎಂ.ಶ್ರೀ. ಅಚ್ಚುಕೂಟ ಆಫ್‌ಸೆಟ್ ಕನ್ನಡ ಸಾಹಿತ್ಯ ಪರಿಷತ್ತು
ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು – ೧೮

# ಅಧ್ಯಕ್ಷರ ನುಡಿ

ಕನ್ನಡ ಸಾಹಿತ್ಯ ಪರಿಷತ್ತಿನಿಂದ ಮರುಮುದ್ರಣಗೊಳ್ಳುತ್ತಿರುವ ಮತ್ತು ಹೊಸದಾಗಿ ಮುದ್ರಿತವಾಗುತ್ತಿರುವ ವಿವಿಧ ಪ್ರಕಾರಗಳ ಪುಸ್ತಕಗಳನ್ನು ಸಹೃದಯರು ಮೆಚ್ಚಿ ಸ್ವೀಕರಿಸಲು ಯೋಗ್ಯವಾಗುವಂತೆ ಆಕರ್ಷಕ ವಿನ್ಯಾಸಗಳಲ್ಲಿ ಸಿದ್ಧಪಡಿಸುವ ಆಶಯ ನಮ್ಮದು.

ಸಮಗ್ರ ಕನ್ನಡಿಗರ ಏಕೈಕ ಪ್ರಾತಿನಿಧಿಕ ಸಂಸ್ಥೆ ಎಂಬ ಹೆಗ್ಗಳಿಕೆಗೆ ಭಾಜನವಾಗಿರುವ, ೧೯೧೫ರಲ್ಲಿ ಸ್ಥಾಪಿತವಾದ ಕನ್ನಡ ಸಾಹಿತ್ಯ ಪರಿಷತ್ತು, ಶತಮಾನೋತ್ಸವದ ಹೊಸ್ತಿಲಲ್ಲಿದೆ. ಕಳೆದ ೯೮ ವರ್ಷಗಳಿಂದಲೂ ಕನ್ನಡ ಗ್ರಂಥಗಳ ಪ್ರಕಟಣೆಯನ್ನು ನಿರಂತರವಾಗಿ ಮಾಡುತ್ತಾ ಬಂದಿರುವ ಪರಿಷತ್ತು ಸುಮಾರು ಒಂದು ಸಾವಿರದ ನಾಲ್ಕುನೂರಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸಿರುತ್ತದೆ. ಸರಿಸುಮಾರು ಒಂದು ಶತಮಾನದಷ್ಟು ಕಾಲಾವಧಿಯ ನಿರಂತರತೆ ಹಾಗೂ ಕೃತಿಗಳ ಮೌಲಿಕತೆಯ ದೃಷ್ಟಿಯಿಂದ ಇದೊಂದು ಅಪೂರ್ವ ದಾಖಲೆಯಾಗಿದೆ. ಕನ್ನಡ ಪ್ರಕಟಣಾ ಚರಿತ್ರೆಯಲ್ಲಂತೂ ಅನನ್ಯವೇ ಸರಿ.

ಕನ್ನಡದ ಅತ್ಯಂತ ಜನಪ್ರಿಯ ಕಾವ್ಯಗಳಲ್ಲಿ ಒಂದಾದ 'ಚಾಮರಸನ ಪ್ರಭುಲಿಂಗಲೀಲೆ' ಅಲ್ಲಮಪ್ರಭುವಿನ ಸಾಧನೆ-ಸಿದ್ಧಿಗಳನ್ನು ಅಲೌಕಿಕ ನೆಲೆಯಲ್ಲಿ ವಿವರಿಸುವ ಷಟ್ಪದಿ ಕಾವ್ಯ.

ಪುಸ್ತಕವನ್ನು ಅಚ್ಚುಕಟ್ಟಾಗಿ ಮುದ್ರಿಸಿದ ಬಿ.ಎಂ.ಶ್ರೀ. ಅಚ್ಚುಕೂಟದ ಸಿಬ್ಬಂದಿವರ್ಗಕ್ಕೆ ಹಾಗೂ ಈ ಕಾರ್ಯದಲ್ಲಿ ಸಹಕಾರ ನೀಡಿದ ಪ್ರಕಟಣ ಸಮಿತಿಯ ಎಲ್ಲಾ ಸದಸ್ಯರಿಗೆ ನನ್ನ ಕೃತಜ್ಞತೆಗಳು.

ಪುಂಡಲೀಕ ಹಾಲಂಬಿ
ಅಧ್ಯಕ್ಷರು

೭-೨-೨೦೧೪

4

# ವಿಷಯ ಸೂಚಿ



**ಅನುಬಂಧಗಳು**

# ಪೀಠಿಕೆ

**ಕವಿ :**

'ಪ್ರಭುಲಿಂಗಲೀಲೆ'ಯ ಕರ್ತೃ ಚಾಮರಸನು ಇಮ್ಮಡಿ ಪ್ರೌಢದೇವರಾಯನ ಕಾಲದ (೧೪೧೯-೧೪೪೬) ನೂರೊಂದು ವಿರಕ್ತರಲ್ಲಿ ಒಬ್ಬನು. ಇಮ್ಮಡಿ ದೇವರಾಯನ ಕಾಲವೆಂದರೆ ವೀರಶೈವ ಸಾಹಿತ್ಯದ ಸುವರ್ಣಕಾಲ ಎಂದು ಹೆಸರಿಸುವಷ್ಟು ಪ್ರಮಾಣದಲ್ಲಿ ರಾಜಾಶ್ರಯ ಆ ಸಾಹಿತ್ಯದ ಅಭಿವೃದ್ಧಿಗೆ ದೊರೆತಿದೆ. ಲಕ್ಕಣ್ಣದಂಡೇಶನಂತಹ ಮಹಾಮಂತ್ರಿ ಹಾಗೂ ದಂಡನಾಯಕನ ಬೆಂಬಲ, ಪ್ರೋತ್ಸಾಹ, ಕಾರ್ಯೋತ್ಸಾಹಗಳಿಂದಾಗಿ ೧೨ನೇ ಶತಮಾನದ ಕೊನೆಯ ವೇಳೆಗೆ ಶಕ್ತಿಗುಂದಿದ ವೀರಶೈವಧರ್ಮ ಹಾಗೂ ಸಾಹಿತ್ಯ ಚೇತರಿಸಿಕೊಳ್ಳಲಿಕ್ಕೆ, ಪುನರುಜ್ಜೀವನಗೊಳ್ಳಲಿಕ್ಕೆ ಸಾಧ್ಯವಾಯಿತು. ಲಕ್ಕಣ್ಣದಂಡೇಶ ವಿಜಯನಗರವನ್ನು ವರ್ಣಿಸುತ್ತಾ "ವಿಜಯಕಲ್ಯಾಣವಾದುದೀ ಧರೆಯಚೆಯೆ ದೇವರಾಜೇಂದ್ರಪುರ" (ಶಿವಚಿಂ. ೩೮-೨೦೫) ಎಂದಿರುವನು. ಈ ಮಾತಿನಲ್ಲಿ ಸತ್ಯಾಂಶವಿದೆ. ಬಸವನ ಕಲ್ಯಾಣದಲ್ಲಿ ಅಸಂಖ್ಯಾತ ಶರಣರಿದ್ದಂತೆ ಇಲ್ಲಿಯೂ ಇದ್ದರು. ವಿರೂಪಾಕ್ಷಪಂಡಿತ ತನ್ನ ಚನ್ನಬಸವಪುರಾಣದಲ್ಲಿ ವಿಜಯನಗರದಲ್ಲಿ ನೂರೊಂದು ಜನ ವಿರಕ್ತರಿದ್ದರೆಂದೂ ಅವರಿಗೆ ಸಂಗಮವಂಶದ ಆಶ್ರಯ ದೊರೆತಿದ್ದಿತೆಂದೂ ಹೇಳಿರುವನು.

ಚಾಮರಸನ ಬಗೆಗೆ ಅವನ ಕಾವ್ಯದಿಂದ ಏನೂ ತಿಳಿದುಬರುವುದಿಲ್ಲ. ತನ್ನ ಹಾಗೂ ತನ್ನ ತಂದೆ ತಾಯಿಗಳ ಹೆಸರು, ಸ್ಥಳ, ತನ್ನ ಗುರು, ತಾನು ಬರೆದ ಕೃತಿಗಳು, ಅವುಗಳ ಕಾಲ, ತನ್ನ ಪೂರ್ವ ಮತ್ತು ಸಮಕಾಲೀನ ಕವಿಗಳ ಸ್ಮರಣೆ-ಇವೇ ಬಗೆಯಾದ ಯಾವ ಸಂಗತಿಯನ್ನೂ ಪ್ರಭುಲಿಂಗಲೀಲೆಯಲ್ಲಿ ಕವಿ ಪ್ರಸ್ತಾಪಿಸಿಲ್ಲ. ಗುರುರಾಜ ಚಾರಿತ್ರದಲ್ಲಿ ಹೇಳುವಂತೆ ಚಾಮರಸ ಹಿಂದಣ ಜನ್ಮದಲ್ಲಿ ಇರುವೆಯಾಗಿದ್ದು ಕಕ್ಕಯ್ಯನ ಪ್ರಸಾದವನ್ನು ಬಸವಣ್ಣನಿಗೆ ತಂದುಕೊಟ್ಟನು (೧೩.೧೩). ಪ್ರಭುದೇವರ ಸಾಂಗತ್ಯದ ಪ್ರಕಾರ ಈತ ನಾಗಣಪುರದವನು (೨.೧೨) ಗುರುರಾಜ ಚಾರಿತ್ರದ ಪ್ರಕಾರ ಈತ ಗದುಗಿನವನು (೧೩.೨೭-೩೩). ಪ್ರೌಢರಾಯನ ಕಾವ್ಯ ಮತ್ತು ಭೈರವೇಶ್ವರ ಕಾವ್ಯ ಕಥಾಸೂತ್ರರತ್ನಾಕರ ಗ್ರಂಥಗಳಿಂದ ತಿಳಿದುಬರುವಂತೆ ಈತ ವಿಜಯನಗರದ ಎರಡನೇ ಪ್ರೌಢದೇವರಾಯನ ಆಸ್ಥಾನದಲ್ಲಿದ್ದವನು. ಚಾಮರಸ ಮತ್ತು ಕುಮಾರವ್ಯಾಸರಿಗೆ ಸಂಬಂಧಿಸಿದಂತೆ ಒಂದು ದಂತಕಥೆಯಿದೆ. ಇಮ್ಮಡಿ ಪ್ರೌಢದೇವರಾಯನು ಭಾಗವತವನ್ನು ರಚಿಸುವಂತೆ ಚಾಮರಸ ಕುಮಾರವ್ಯಾಸರಿಗೆ ಅಪ್ಪಣೆಮಾಡಿದಂತೆಯೂ ಕಾವ್ಯರಚನೆ ಮುಗಿದ ಮೇಲೆ ವಿದ್ವಾಂಸರು ಅದನ್ನು ಪರೀಕ್ಷಿಸಿ ಚಾಮರಸನ ಕೃತಿ ಹೆಚ್ಚು ರಸವತ್ತಾದುದೆಂದು ಅಭಿಪ್ರಾಯಪಟ್ಟಂತೆಯೂ ಕುಮಾರವ್ಯಾಸ ಖಿನ್ನನಾಗಿ ತನ್ನ ಹೆಂಡತಿಯ ಮೂಲಕ ಅವಳ ಅಣ್ಣನಾದ ಚಾಮರಸನ ಕೃತಿಯನ್ನು ಸುಡಿಸಿದಂತೆಯೂ ಕುಮಾರವ್ಯಾಸನಿಗೆ ಸಲ್ಲುವುದರಲ್ಲಿದ್ದ ಸನ್ಮಾನವನ್ನು ತಪ್ಪಿಸಲಿಕ್ಕಾಗಿ ಚಾಮರಸನಿಂದ ನೂರೊಂದು ವಿರಕ್ತರಲ್ಲಿ ಒಬ್ಬನಾದ ಜಕ್ಕಣಾರ್ಯನೇ ಮೊದಲಾದವರು ದಿನ ಒಂದಕ್ಕೆ ೧೦೧ ಪದ್ಯಗಳಂತೆ ಹನ್ನೊಂದು ದಿನಗಳಲ್ಲಿ ಸತ್ತವರಲ್ಲದವರ ಕಥೆಯನ್ನೊಳಗೊಂಡ ಪ್ರಭುಲಿಂಗಲೀಲೆಯನ್ನು ಬರೆಯಿಸಿ ಕವಿ ಹಾಗೂ

ಕೃತಿಗೆ ಸಲ್ಲಬೇಕಾದ ರಾಜಮರ್ಯಾದೆಯನ್ನು ದೊರಕಿಸಿಕೊಟ್ಟಂತೆಯೂ ಜಕ್ಕಣಾರ್ಯ ತಾನು ಮಂತ್ರಿಪದವಿಯಿಂದ ನಿವೃತ್ತನಾಗುವುದಕ್ಕೆ ಮುನ್ನ ರಾಜನನ್ನು ಒಪ್ಪಿಸಿ ಅದನ್ನು ಚಾಮರಸನಿಗೆ ಕೊಡಿಸಿ ಕೊಟ್ಟಂತೆಯೂ ಪ್ರೌಢದೇವರಾಯನ ಕಾವ್ಯ ಹೇಳುತ್ತದೆ (೨೧.೩೪). ಒಬ್ಬ ಕವಿಗಿಂತ ಮತ್ತೊಬ್ಬ ಮುಖ್ಯನೆನ್ನುವ ಈ ದಂತಕಥೆಗಳಿಗೆ ಹೆಚ್ಚಿನ ಪ್ರಾಧಾನ್ಯ ಕೊಡುವುದರಲ್ಲಿ ಅರ್ಥವಿಲ್ಲ. ಆದರೆ ಇವರೀರ್ವರೂ ಸಮಕಾಲೀನರು ಎನ್ನುವ ಮಾತನ್ನು ಸುಲಭವಾಗಿ ತೆಗೆದುಹಾಕಲಾಗದು. ಇವರೀರ್ವರ ಕೃತಿಗಳ ಕೆಲವು ಪದ್ಯಗಳಲ್ಲಿ ಕಾಣಬರುವ ಸಮಾನವಾದ ದಾಟಿಯನ್ನು ವಿದ್ವಾಂಸರು ಗುರುತಿಸಿರುವರು.[೧] ಪ್ರಭುವಿನ ಆರೋಗಣೆಯ ಪ್ರಸಂಗದಲ್ಲಿ ಮುನಿಸುಗೊಂಡು ಹೊರಹೋದ ಜಂಗಮಸ್ತೋಮವನ್ನು ಸಮಾಧಾನಿಸಿದ ಭಾಗ ಹಾಗೂ ಕುಮಾರವ್ಯಾಸ ಭಾರತದಲ್ಲಿ ಬರುವ ದೂರ್ವಾಸಾತಿಥ್ಯ ಭಾಗ ತುಂಬಾ ಹೋಲಿಕೆಯನ್ನು ಪಡೆದುಕೊಂಡಿವೆ.

**ಕಾವ್ಯ :**

ಪ್ರಭುಲಿಂಗಲೀಲೆಯು ಭಾಮಿನೀ ಷಟ್ಪದಿಯಲ್ಲಿದ್ದು ಒಟ್ಟು ೨೫ ಗತಿ ೧೧೧೧ ಪದ್ಯಗಳನ್ನು ಒಳಗೊಂಡಿದೆ. ಪ್ರಭುಲಿಂಗಲೀಲೆ ಪ್ರಭುವಿನ ಮಾನುಷಶಕ್ತಿಗಿಂತ ದೈವೀಶಕ್ತಿಗೆ ಹೆಚ್ಚು ಬೆಲೆಗೊಟ್ಟು ಅನುಪಮನೂ ಪರಿಪೂರ್ಣನೂ ಜಿತಕಾಮನೂ ಪರಮ ವೈರಾಗ್ಯಮೂರ್ತಿಯೂ ಆಗಿರುವಂತೆ ಚಿತ್ರಿತವಾದ ಹಿರಿಯ ಚೇತನವೊಂದರ ಅಮಾನುಷ ಜೀವನಚರಿತ್ರೆಯಾಗಿದೆ. ಹರಿಹರನ ಪ್ರಭುದೇವರ ರಗಳೆಯಲ್ಲಿ ಕೈಲಾಸದಲ್ಲಿ ನಿರ್ಮಾಯನಾದವನು ಸಾಮಾನ್ಯನಂತೆ ಮೋಹಪರವಶನಾದ ತಪ್ಪಿಗಾಗಿ ಭುವಿಯಲ್ಲಿ ಜನಿಸುವಂತೆ ಶಾಪಹೊಂದಿ ಸಾಮಾನ್ಯಜೀವಿಯಂತೆ ಮರ್ತ್ಯದಲ್ಲಿ ಹುಟ್ಟಿ ಕ್ರಮೇಣ ಸಿದ್ಧಾವಸ್ಥೆಗೆ ಏರಿದ ಪುರುಷಪ್ರಯತ್ನವಾದವನ್ನು ಕಾಣುತ್ತೇವೆ. ಹರಿಹರನು ಪ್ರಭು ಶಾಪ ಪ್ರಸಂಗದಿಂದ ಮರ್ತ್ಯಮಾನವನಾಗಿ ಅವತಾರವೆತ್ತಿದನೆಂದು ಹೇಳುವುದನ್ನು ಒಪ್ಪದ ಶೂನ್ಯ ಸಂಪಾದನೆಕಾರರು ತಮ್ಮ ಪ್ರತಿಭಟನೆಯನ್ನು ಬಲವಾಗಿಯೇ ವ್ಯಕ್ತಪಡಿಸಿದರು. ಇದರ ಪರಿಣಾಮವೋ ಎನ್ನುವಂತೆ ಲಕ್ಕಣ್ಣ ದಂಡೇಶನು ತನ್ನ ಶಿವತತ್ವ ಚಿಂತಾಮಣಿಯಲ್ಲಿ ನಿರ್ಮಾಯನು ಮಾಯಾಧೀನನಾಗಲಿಲ್ಲವೆಂಬ ಅಂಶವನ್ನು ಸಾಧಿಸಲು ಪ್ರಯತ್ನಪಟ್ಟಿದ್ದಾನೆ (ನೋಡಿ : ಶಿವಚಿಂ ೨೮-೩೪-೩೧). ಚಾಮರಸನೂ ಈ ಪಂಥಕ್ಕೆ ಸೇರಿದವನು. ಸಾಮಾನ್ಯಮಾನವ ದೇವಮಾನವನಾದ ಸಿದ್ಧಿಯ ಹಂತಗಳನ್ನು ಹರಿಹರ ಚಿತ್ರಿಸ ಹೊರಟರೆ ಅದಕ್ಕೆ ತದ್ವಿರುದ್ಧವಾಗಿ ದೇವನೇ ಅಲ್ಲಮಪ್ರಭುವೆಂಬ ಹೆಸರಿನಲ್ಲಿ ನಡೆಸಿದ ಲೀಲೆಗಳನ್ನು ಚಾಮರಸ ಚಿತ್ರಿಸಹೊರಟಿರುವನು. ಹೀಗೆ ಪ್ರಭುಲಿಂಗಲೀಲೆ ಪ್ರಭುಲಿಂಗನು ಅಲ್ಲಮನ ರೂಪದಲ್ಲಿ ಸಾಕಾರಗೊಂಡು ಭಕ್ತೋದ್ಧಾರಕ್ಕಾಗಿ ನಡೆಸಿದ ಲೀಲೆಗಳು ಎಂದೂ ಗ್ರಹೀತವಾಗುತ್ತವೆ. ಚಾಮರಸನು ಪ್ರಭುವನ್ನು ಸಾಮಾನ್ಯನಂತೆ ಕಾಣದೆ ಅಲೌಕಿಕನಂತೆ ಕಂಡಿರುವನು. ಈ 'ಅಲೌಕಿಕತೆ' ಕಾವ್ಯದುದ್ದಕ್ಕೂ ಮೆರೆದಿರುವುದರಿಂದ ಚಾಮರಸನ

---

೧. ಪ್ರೊ. ಬಸವನಾಳ ಶಿವಲಿಂಗಪ್ಪನವರು ಸಂಪಾದಿಸಿರುವ 'ಪ್ರಭುಲಿಂಗಲೀಲೆ' ಯಲ್ಲಿ ಅವರೇ ಬರೆದಿರುವ ಪ್ರಸ್ತಾವನೆ ಪುಟ ೧೮ರ ಅಡಿಟಿಪ್ಪಣಿ ನೋಡಿ.

ಗ್ರಹಿಕೆಯಂತೆ ಪ್ರಭು ಸಾಮಾನ್ಯನಲ್ಲ; ಸಿದ್ಧಪುರುಷ, ಪರಮಜ್ಞಾನಿ, ಭುವಿಯಲ್ಲವತರಿಸಿರುವ ಕಾರಣಿಕರುಗಳಿಗೆ ಅವರವರಿಗುಚಿತ ಜ್ಞಾನಮಾರ್ಗದಲ್ಲಿ ನಡೆಸಲು ಬಂದಿರುವ ಮಹದೇವ ಎಂಬುದು ವೇದ್ಯವಾಗುತ್ತದೆ.

ಹುಟ್ಟುಸಿದ್ಧನೂ ಪರಿಪೂರ್ಣಜ್ಞಾನಿಯೂ ಆದಂತೆ ಚಿತ್ರಿತನಾಗಿರುವ ಅಲ್ಲಮಪ್ರಭುವಿಗೆ ನೆಪಕ್ಕೆ ಗುರು ಅನಿಮಿಷ. ಅನಿಮಿಷಗುರುವಿನ ದರ್ಶನವಾಗುವುದು ಅಲ್ಲಮ ಗೊಗ್ಗಯ್ಯನಿಗೆ ಬೋಧಿಸುವ ಸಂದರ್ಭದಲ್ಲಿ. ಭಕ್ತಿಯ ಮಾಡುವ ವಿಧಾನವನ್ನು ದೃಷ್ಟಾಂತವೊಂದರ ಮೂಲಕ ಗೊಗ್ಗಯ್ಯನಿಗೆ ತೋರಿಸಿ ಅವನನ್ನು ಭಕ್ತಿಪಥದಲ್ಲಿ ನಡೆಸುವ ಸಂಕಲ್ಪದಿಂದ ಗೊಗ್ಗಯ್ಯ ಭೂಮಿಯನ್ನು ಉತ್ತು ಕಿತ್ತ ಹೆಂಟೆಯ ಕೆಳಗೆ ಹೊಂಗಳಸದಿಂದ ಕೂಡಿದ ದೇವಾಲಯವನ್ನು ಕಾಣಿಸಿದನು. ಭೂಮಿಯನ್ನು ಅಗೆದು ಸಮಾಧಿಸ್ಥಾನದ ದೇಗುಲವನ್ನು ಅದರಲ್ಲಿ 'ಮೌನದಿಂ ನಿಬ್ಬೆಱಗು ಹೊಡೆದವಧಾನದನಿಮಿಷದೃಷ್ಟಿ ಲಿಂಗ ಧ್ಯಾನದ' ಮಹಂತನನ್ನು ಗೊಗ್ಗಯ್ಯನಿಗೆ ಪ್ರಭುವು ಕಾಣಿಸಿದನು. 'ಶಿವಲಿಂಗಭಕ್ತಿಯ ಹೃದಯವನು ಸಾಧಿಸುವ ಪರಿ'ಯನ್ನು 'ಲಿಂಗಪ್ರಾಣತನುಮಯ'ವಾದ 'ಜಂತ್ರಗಿಟಿಗಿಟಿಯಾದ ಲಿಂಗದ ಚಿಂತೆಯಲಿ ಮರವಟ್ಟ ಮೆಯ್ಯ ಮಹಂತನ' ನಿದರ್ಶನದ ಮೂಲಕ ಅಲ್ಲಮಪ್ರಭುವು ಗೊಗ್ಗಯ್ಯನಿಗೆ ತಿಳಿಯಪಡಿಸಿದನು. ಹುಟ್ಟುಸಿದ್ಧನೂ ಅಲೌಕಿಕ ಜ್ಞಾನಿಯೂ ಆದ ಚಾಮರಸನ ಪ್ರಭುವು ಅನಿಮಿಷವನ್ನು "ಬಡವನಕ್ಷಯನಿಧಿನಿಧಾನವ ನೆಡಹುತಲಿ ಕಂಡಂತೆ ಕೈಕಾಲ್ ಮುಡುಬಗಳವಟ್ಟಂತೆ ಕುರುಡಗೆ ಕಣ್ಣು ಬಂದಂತೆ ಬಿಡದೆಯಱಸುವ ಬಳ್ಳಿ ಕಾಲನು ತೊಡರಿತೆಂಬಂತೆನ್ನ ಬಯಕೆಯ ಕಡೆಯ ಕಂಡೆನು" ಎಂದೂ "ಗುರುವೆ ಕರುಣಿಸು ಭಕ್ತಿಭಾವದ ಕರುವೆ ಕರುಣಿಸು ಲಿಂಗನಿಷ್ಠೆಯ ಗುರುವೆ ಕರುಣಿಸು ಕರುಣಿಸು" ಎಂದು ಕೊಂಡಾಡುತ್ತಾನೆ. (೧೧-೨೪-೨೫). ಮೊದಲಿನಿಂದಲೂ 'ಸಿದ್ಧ'ನೂ 'ಪರಿಪೂರ್ಣಜ್ಞಾನಿ'ಯೂ ಆಗಿ ಚಿತ್ರಿತನಾದ ಪ್ರಭುವು ಅನಿಮಿಷವನ್ನು ಗುರುವಾಗಿ ಸ್ವೀಕರಿಸುವುದು ಚಾಮರಸನ ಸೃಷ್ಟಿಗೆ ಒಪ್ಪಿಗೆಯಾಗದು. ಅದನ್ನು ಒಪ್ಪದ ಅವನ ಮನ-ಬುದ್ಧಿಗಳು "ನರನು ತಾ ದಿಟವೆಂಬ ಬಳಕೆಯ ಪರಿಯನಂಗೀಕರಿಸಿ ಪರರಿಗೆ ಪರಮನಲ್ಲಮ ನಟಿಸುತಿರ್ದನು ತನ್ನ ಲೀಲೆಯಲಿ" ಎಂದು ಹೊರಳುತ್ತವೆ; ಪ್ರಭುವಿನ ಲೀಲಾವಿಲಾಸವನ್ನು ಸಾರಹೊರಡುತ್ತವೆ.

**ಕಥಾಸಾರ :**

ಒಂದಾನೊಂದು ದಿನ ಕೈಲಾಸದಲ್ಲಿ ಪರಮೇಶ್ವರಿ ತನ್ನ ಪತಿಯನ್ನು ಕುರಿತು "ಶಿವನೆ, ನಿನ್ನೊಡ್ಡೋಲಗದೊಳೊಪ್ಪುವ ಮಹಾಘನಮಹಿಮರೆಲ್ಲರು ಭವಕೆ ಬಾರದೆ ನಿತ್ಯಸುಖದಿಂದಿಪ್ಪರೋ ಮೇಣು ಇವರಿಗೆಯು ನೆಲೆಯಿಲ್ಲವೊ?" ಎಂದು ಕೇಳಿದಳು. ಅದಕ್ಕೆ ಶಿವನು ನಾಮರೂಪ ಕ್ರಿಯೆಗಳನ್ನು ಗೆಲಬಲ್ಲವರಿಗೆ ಮಾತ್ರ ನಿತ್ಯಸುಖವೆಂದೂ, ಅದಕ್ಕಾಗಿ ಭೂಮಿಯಲ್ಲಿ ಮಾನವಶರೀರಿಗಳಾಗಿ ಹುಟ್ಟಿ ಸಾಧನೆ ಮಾಡಬೇಕೆಂದೂ ಹೇಳಿದನು. ಹಾಗಾದರೆ ಭೂಲೋಕದಲ್ಲಿ ಇದನ್ನು ಸಾಧಿಸುವ ಗುರುವಾರು? ಎಂದು ಗಿರಿಜೆ ಕೇಳಲು, ನಿರಹಂಕಾರ ಮತ್ತು ಸುಜ್ಞಾನಿಗಳ ಬಹುಕಾಲದ ಪ್ರಾರ್ಥನೆಗೆ ಒಲಿದು

ಅವರಿಗೆ ಮಗನಾಗಿ ಹುಟ್ಟಿದ ನನ್ನ ಸಾತ್ವಿಕರೂಪಾದ ಅಲ್ಲಮನೇ ಆ ಗುರು ಎಂದು ಹೇಳಿದನು. ಅಲ್ಲಮನೆನ್ನುವನನ್ನು ನಾನು ಬಲ್ಲೆ. ಅವನನ್ನು ನಾನು ವಶಪಡಿಸಿಕೊಂಡು ನಿಜತತ್ತ್ವವನ್ನು ತಿಳಿಯುವುದಾಗಿ ಗಿರಿಜೆ ಶಿವನೆದುರು ಪ್ರತಿಜ್ಞೆ ತೊಟ್ಟು ತನ್ನ ತಾಮಸ ಗುಣದ ಮೂರ್ತಿಯಾದ ಮಾಯೆಯನ್ನು ಆ ಕೆಲಸಕ್ಕೆ ನಿಯಮಿಸಿದಳು.

ಬೆಳುವಲ ದೇಶದಲ್ಲಿ ಬನವಸೆಯೆಂಬ ಪಟ್ಟಣ. ಅದನ್ನಾಳುವ ಮಮಕಾರನಿಗೂ ಪಟ್ಟದರಾಣಿಯಾದ ಮೋಹಿನೀದೇವಿಗೂ ಮಾಯೆ ಮಗಳಾಗಿ ಹುಟ್ಟಿದಳು. ಮಾಯೆಯಲ್ಲಿ ಯೌವನೋದಯವಾಗಲು ನೃಪತಿ ಅವಳ ಮದುವೆಯ ಬಗೆಗೆ ಮನದಲ್ಲಿ ಆಲೋಚಿಸಿದನು. ಆಗ ಕುಲಗುರುವಾದ ಅಹಂಕಾರಾಚಾರ್ಯನು ಬಂದು ಮಾಯೆಯು ಸದಾಶಿವನಿಗಲ್ಲದೆ ನರರಿಗೆ ಉಚಿತವಲ್ಲ ಎಂದು ಹೇಳಿ ಮಾಯಾದೇವಿಗೆ ಶಿವನನ್ನು ಒಲಿಸಿ ಕೊಳ್ಳುವ ಮಂತ್ರೋಪದೇಶವನ್ನು ಮಾಡಿ ಹೋದನು. ಮಾಯೆಯು ನಿತ್ಯವೂ ಮಧುಕೇಶ್ವರದೇವಾಲಯಕ್ಕೆ ಹೋಗಿ ಶಿವನನ್ನೇ ಪತಿಯಾಗಿ ಪಡೆಯಬೇಕೆಂದು ಅಷ್ಟವಿಧಾರ್ಚನೆ, ಷೋಡಶೋಪಚಾರಗಳಿಂದ ಮಧುಕನಾಥನನ್ನು ಅರ್ಚಿಸುತ್ತಿದ್ದಳು. ಹೀಗೆ ಮಾಯೆ ಪೂಜಿಸುತ್ತಿರಲು ಅಲ್ಲಮಪ್ರಭುವು ಹದಿನಾರು ಹದಿನೆಂಟು ವಯಸ್ಸಿನ ವಿಟನ ರೂಪನ್ನು ಧರಿಸಿ ಮದ್ದಳೆಯೊಂದಿಗೆ ಮಧುಕೇಶ್ವರಾಲಯಕ್ಕೆ ಬಂದು ಹೊರಗಡೆ ಬಾಗಿಲ ಬಳಿ ನಿಂತು ಎಲ್ಲರಿಗೂ ಆಶ್ಚರ್ಯವಾಗುವಂತೆ ಮದ್ದಳೆಯನ್ನು ನುಡಿಸಿದನು. ಅಲ್ಲಮನ ಮದ್ದಳೆಯ ಧ್ವನಿಗೇಳಿ ಮುದಗೊಂಡು ಅವನನ್ನು ಮಾಯೆ ಒಳಕ್ಕೆ ಕರೆಯಿಸಿದಳು. ಅಲ್ಲಮನನ್ನು ನೋಡಿದ ಕ್ಷಣವೇ ಮಾಯೆ 'ಹಿರಿದಾಗಿ ಚಿತ್ತಜನಳವಿಯಲಿ ಬೆಂಬಿದ್ದು ಮೌನದೊಳಿರ್ದಳು'. ಮಾಯೆಯ ಸಖಿಯರು ಅಲ್ಲಮನನ್ನು ಮುತ್ತಿ ಅವನ ದೇಶ, ಹೆಸರು, ವಾಸಸ್ಥಳ-ಇವೇ ಮೊದಲಾದುವನ್ನು ವಿಚಾರಿಸಿದರು. ಮಾಯಾದೇವಿ ಆ ಬಳಿಕ ಅಲ್ಲಮನನ್ನು ತನ್ನ ತಂದೆಯ ಬಳಿಗೆ ಕರೆದುತಂದು ತೋರಿಸಿ ಅವನ ಅನುಮತಿ ಪಡೆದು ಅಲ್ಲಮನನ್ನು ನಾಟ್ಯಾಚಾರ್ಯನನ್ನಾಗಿ ನಿಯಮಿಸಿಕೊಂಡಳು. ತಮ್ಮ ಒಡತಿ ಅಲ್ಲಮನ ವಿಚಾರದಲ್ಲಿ ತೋರಿಸುತ್ತಿರುವ ಕಾತುರವನ್ನು ಅರ್ಥಮಾಡಿಕೊಂಡ ಸಖಿಯರು ಮಾಯೆ-ಅಲ್ಲಮರನ್ನು ಒಂದುಗೂಡಿಸುವ ಏರ್ಪಾಟು ಮಾಡಿದರು. ಸುದ್ದಿ ತಿಳಿದ ಮೋಹಿನೀದೇವಿ ಮಗಳಿದ್ದಲ್ಲಿಗೆ ಬಂದು ಮಗಳನ್ನೂ ಮಗಳ ಸಖಿಯರನ್ನೂ ನಿಂದಿಸಿ, ಆಕ್ಷೇಪಿಸಿದಳು. ಕೊನೆಗೆ ಮೋಹಿನೀದೇವಿ ಮಗಳಿಗೆ "ಅರಸನಱಿಯದ ತೆಱದಲಿದ ನಾಚರಿಸುವುದು" ಎಂದು ಎಚ್ಚರಿಕೆ ಕೊಟ್ಟು ಹಿಂತಿರುಗಿದಳು.

ಮಾಯೆಯು ಅಲ್ಲಮನನ್ನು ಕಾಮಿಸಿ ವಿರಹತಪ್ತಳಾಗಿರಲು, ಕೈಲಾಸದಿಂದ ಮಾಯೆಯನ್ನು ಎಚ್ಚರಿಸಲು ಪಾರ್ವತಿ ವಿಮಳೆ ಎನ್ನುವವಳನ್ನು ಕಳುಹಿಸಿದಳು. ಪಾರ್ವತಿಯ ಅಪ್ಪಣೆಯಂತೆ ವಿಮಲೆ ಮಾಯೆಗೆ ಕಾಣಿಸಿಕೊಂಡಳು. ಮಾಯೆಗೆ ಹಿಂದಿನ ವೃತ್ತಾಂತವನ್ನೂ, ಅಲ್ಲಮನು ಯಾರೆಂಬುದನ್ನೂ ತಿಳಿಸಿದಳು. ಅಲ್ಲಮ ಪ್ರತ್ಯಕ್ಷ ಪರಬ್ರಹ್ಮನೆಂಬುದನ್ನು ಒಪ್ಪದ ಮಾಯೆ ಈ 'ನಟನಾಟಕ'ನನ್ನು ತನ್ನ ಬಲೆಗೆ ಒಳಗುಮಾಡುವ ಆಲೋಚನೆಯನ್ನು ಮನದಲ್ಲಿ ಮಾಡಿದಳು. ಅವಳ ವಿಚಾರಲಹರಿಯನ್ನರಿತ ಅಲ್ಲಮ

"ಸದಮಲ ಸ್ವಸ್ವರೂಪವ ಕಾಕರಿಗೆ ಕಾಣಿಸುವುದನುಚಿತವೆನುತ" ಮದ್ದಳೆಯನ್ನು ಬಿಸಾಡಿ ನಗುತ್ತ ಅಲ್ಲಿಂದ ಹೊರಟುಹೋದನು.

ತನ್ನನ್ನು ಹುಡುಕಿಕೊಂಡು ಬಂದು ಕಾಡುಮೇಡುಗಳಲ್ಲಿ ಅಲೆದಾಡಿದ ಮಾಯೆ ಹಾಗೂ ಅವಳ ಕೆಳದಿಯರಿಗೆ ದರ್ಶನವಿತ್ತು ಅವರ ಆಕ್ಷೇಪಣೆಗಳಿಗೆ ಪ್ರತ್ಯುತ್ತರ ಕೊಟ್ಟನು. ಕೊನೆಗೆ "ಕಡಲನೀರುಗಳೆಲ್ಲವಮೃತದ ಮಡುಗಳಾದಡೆಯಹವು, ಸುರಗಿರಿ ಕುಡಿವರಿದು ಹಬ್ಬಿದಡೆ ಹಬ್ಬುವುದವನಿಮಂಡಲವ, ಗಿಡುಗಳೆಲ್ಲವು ಕಲ್ಪತರುವಾದಡೆಯಹವು ಎತ್ತಾನು ಕಾಲಕೆ, ಮಡದಿ ಮಾಯೆಗೆ ಪರಮತತ್ತ್ವಜ್ಞಾನವಿಲ್ಲ" ಎಂದು ಖಡಾಖಂಡಿತವಾಗಿ ನುಡಿದು ಪ್ರಭುವು ಮಾಯವಾದನು. ನಿರಾಶಳಾದ ಮಾಯೆ ಕೈಲಾಸಕ್ಕೆ ಮರಳಿ ಬಂದು ತನಗಾದ ಭಂಗವನ್ನು ಉಮೆಯಲ್ಲಿ ತೋಡಿಕೊಳ್ಳುವಳು. ತಾಮಸಿಕಾಂಶಕ್ಕೆ ಒಳಗಾಗದ ತಾನು ಸಾತ್ವಿಕಾಂಶಕ್ಕೆ ಒಳಗಾಗುವುದಾಗಿ ಶಿವ ಗಿರಿಜೆಗೆ ಅಭಯನೀಡುವನು. ಮರ್ತ್ಯದಲ್ಲಿ ಭಕ್ತಿಯನ್ನು ಮೆಱೆದು ಪ್ರಭುವನ್ನು ಆ ಭಕ್ತಿಯಿಂದ ಒಲಿಸಿಕೊಂಡ ಬಸವನ ಮೂಲಕ 'ಸ್ವಾನುಭಾವ ಸುಖಸ್ವರೂಪನಿಧಾನವನು' ಎಲ್ಲರೂ ಸಾಧಿಸಲಿ ಎಂದು ಹೇಳಿದ ಶಿವನು, ಕೈಲಾಸದ ವೃಷಭನನ್ನು ಮರ್ತ್ಯಕ್ಕೆ ಹೋಗುವಂತೆ ಅಪ್ಪಣೆ ಮಾಡಿದನು. ಶಿವನ ಅಪ್ಪಣೆಯಂತೆ ವೃಷಭ ಮೊದಲಾದ ಶಿವಗಣಗಳು, ಏಳುನೂರೆಪ್ಪತ್ತು ಪ್ರಮಥಗಣಗಳು, ಕೆಲವರು ರುದ್ರಕನ್ನೆಯರು ಪಾರ್ವತಿಯ ಸಾತ್ವಿಕಾಂಶದೊಂದಿಗೆ ಧರೆಗಿಳಿದು ಬಂದರು. ಉಡುತಡಿಯ ನಿರ್ಮಳ-ಸುಮತಿಯರೆಂಬ ದಂಪತಿಗಳ ಮಗಳು ಮಹದೇವಿಯಾಗಿ ಶಿವೆಯ ಸಾತ್ವಿಕಾಂಶವು ರೂಪತಾಳಿತು. ಮಾದರಸ-ಮಾದಾಂಬಿಕೆಯರೆಂಬ ದಂಪತಿಗಳ ಮಗನಾಗಿ ವೃಷಭಗಣನಾಥನು ಬಸವನೆಂಬ ಹೆಸರಿನಿಂದ ಜನ್ಮವೆತ್ತಿದನು.

ಮಹದೇವಿಯಕ್ಕ ಶಿವಭಕ್ತಿಯೇ ರೂಪುಗೊಂಡಂತೆ ಬೆಳೆಯುತ್ತ ಬಂದಳು. ಅವಳಲ್ಲಿ ಯೌವನೋದಯವಾಯಿತು. ಒಂದು ದಿನ ವೈಹಾಳಿಯಿಂದ ಹಿಂದಿರುಗುತ್ತಿದ್ದ ಅರಸ ಕೌಶಿಕನು ಅವಳನ್ನು ಕಂಡು "ಕಾಮಾತುರದಿ ಮಿಗೆ ಕಂಗೆಟ್ಟು ಕಳವಳಿಸಿದನು ನಿಮಿಷದಲಿ". ಮಹದೇವಿಯನ್ನು ಬೇಡಲು ಹೆಗ್ಗಡಿತಿಯರನ್ನು ಕೌಶಿಕ ಕಳುಹಿಸಿದನು. ನಿರ್ಮಳನು ಅರಸುಕುಲದವರಿಗೆ ಮಗಳನ್ನು ಕೊಡೆವು ಎಂದನು. ಕಡೆಗೆ ಮಹದೇವಿ ಉಪಾಯವೊಂದನ್ನು ಮನದಲ್ಲಿ ಆಲೋಚಿಸಿ ಕೌಶಿಕನನ್ನೇ ತನ್ನಲ್ಲಿಗೆ ಕರೆಯಿಸಿಕೊಂಡಳು. ಮನೆಗೆ ಬಂದ ಕೌಶಿಕನು "ಲಲನೆ ಕೇಳೌ, ನಿನ್ನ ಬಯಕೆಯ ಸಲಿಸುವೆನು ಮೊದಲಲ್ಲಿ ಬಳಿಕಾನೊಲಿಸಿಕೊಂಬೆನು ನಿನ್ನನು" ಎಂದು ವಚನವಿತ್ತನು. 'ನಾನು ಹೇಳಿದುದನ್ನು ನೀನು ಕೇಳದಿದ್ದರೆ ನಾನು ನಿನ್ನನ್ನು ಬಿಟ್ಟುಹೋಗುವೆನು ಎಂದು ಮಹಾದೇವಿ ಹೇಳಲು "ನಾ ನೀನು ಹೇಳಿದ ಮಾಡದಾಕ್ಷಣ ನೀನು ಸುಖದಿಂದಾಡುತಿಪ್ಪುದು ನಿನ್ನ ಬುದ್ಧಿಗೆ ಬಂದ ಪರಿಯಿಂದೆ.... ನಿನ್ನ ಕೃಪಾನಿರೀಕ್ಷೆಯ ಜೋಡ ತೊಡಿಸೆನಗೆ" ಎಂದು ಮಹಿಪಾಲ ವಿನೀತನಾಗಿ ಪ್ರಾರ್ಥಿಸಿದನು. ಮಹದೇವಿ ಒಪ್ಪಿ ಅರಮನೆಗೆ ಬಂದಳು. ಅಂದು ರಾತ್ರಿ ಮಹದೇವಿಯನ್ನು ಅರಸನು ಏಕಾಂತದಲ್ಲಿ ಅಪ್ಪಹೊರಟಾಗ ಅವನನ್ನು ವಿನಯಪೂರ್ವಕವಾಗಿ ತಡೆದು "ನೀನು ಸಲೆ ಶಿವಭಕ್ತನಾದೊಡೆ ಕೂಡುವೆನು ನಿನ್ನ,

ನೀನು ಭವಿಯಾಗಿರ್ದೊಡೊಲ್ಲೆನು ನಾನು ಹೇಳುವುದಿನಿತೆ" ಎಂದಳು. ಜನಪತಿಗೆ ಆ ಮಾತು ಕೇಳಿ ಸುಮ್ಮಾನ ಹೋಗಿ ದುಮ್ಮಾನವಾಯಿತು. "ನಮಗೆ ಶಿವಭಕ್ತಿಯನು ಮಾಡುವ ಸಮಯವಳವಡದು" ಎಂದು ಅರಸ ನುಡಿಯಲು "ನಮಗೆ ನಿಮ್ಮಯ ಸಂಗವಳವಡದು" ಎಂದು ಮಹಾದೇವಿ ದೊರೆ ಕೊಟ್ಟಿದ್ದ ವಸ್ತ್ರಾಭರಣಗಳನ್ನೆಲ್ಲಾ ಕಳಚಿಟ್ಟು ವಿರಕ್ತಳಾಗಿ ಕೇಶಾಂಬರಿಯಾಗಿ ಹೊರಬಂದಳು. "ಶಿವಗರ್ಪಿಸಿದ ತನುವಿನ್ನು ಮೊದಲಾಗೆನ್ನ ಹಂಬಲನಿಂದು ಕಳೆವುದು ನೀವು" ಎಂದು ಬಂಧುಗಳಿಗೆ ಹೇಳಿ ಗುರು ಗುಹೇಶ್ವರನನ್ನು ಅರಸಲು ಹೊರಟಳು.

ಕಾರಣಿಕನಾದ ಅಲ್ಲಮನು ಭಕ್ತರನ್ನು ಅನುಗ್ರಹಿಸಲೆಂದು ಬರುತ್ತಿರಲು ದಾರಿಯಲ್ಲಿ ಗುರುಲಿಂಗಜಂಗಮ ಸೇವೆಗಾಗಿ ಕಾಯಕಮಾಡಿ ಮುಕ್ತಿ ಗಳಿಸಬಹುದೆಂದು ಭ್ರಮಿಸಿದ್ದ ಅದರ ಯಜಮಾನ ಗೊಗ್ಗಯ್ಯನನ್ನು ಕಂಡು ಪ್ರಭುವು ಗೊಗ್ಗಯ್ಯನಿಗೆ ಅದಷ್ಟೇ ಸಾಲದು, ಅದರಿಂದ ಪ್ರಾಣಲಿಂಗಜ್ಞಾನವನ್ನುಂಟುಮಾಡಿಕೊಳ್ಳಬೇಕೆಂದೂ ಬೋಧಿಸಿ ಅವನಿಗೆ ಅನಿಮಿಷಯೋಗಿಯ ದೃಷ್ಟಾಂತವನ್ನು ತೋರಿಸಿದನು. ಅನಿಮಿಷನ ಲಿಂಗವು ಅಲ್ಲಮನ ಕೈಸೇರಲು ಅಲ್ಲಮ ಮಹಾಪುರುಷನೆಂದು ನಂಬಿದ ಗೊಗ್ಗಯ್ಯನು ಆತನಿಂದ ಉಪದೇಶವನ್ನು ಪಡೆದನು. ಮುಂದೆ ಅಲ್ಲಮನು ಮುಕ್ತಾಯಕ್ಕನೆಂಬ ಶರಣೆಯನ್ನು ಕಂಡು ಆಕೆ ಸಹೋದರನಾದ ಅಜಗಣ್ಣನು ಲಿಂಗೈಕ್ಯನಾದುದಕ್ಕೆ ದುಃಖಿಸುತ್ತಿದ್ದುದನ್ನು ನೋಡಿ, ಅಜಗಣ್ಣನು ಶಿವಭಕ್ತನಾದುದರಿಂದ ಸಾಯಲಿಲ್ಲ, ಆತ ಲಿಂಗೈಕ್ಯನೂ, ನಿತ್ಯನೂ ಆಗಿರುವನೆಂದು ಹೇಳಿ ಅವಳನ್ನು ಪ್ರಭು ಸಂತಯಿಸಿ ಉಪದೇಶಿಸುವನು. ಅಲ್ಲಿಂದ ಮುಂದೆ ಬಗೆ ಬಗೆಯ ದೇಗುಲಗಳನ್ನು ತನ್ನ ಶಿಷ್ಯರುಗಳಿಂದ ಮಾಡಿಸುತ್ತಿದ್ದ ಸಿದ್ಧರಾಮನ ಸೊನ್ನಲಿಗೆಗೆ ಬಂದು ಚಿಕ್ಕಸಂಸಾರವನ್ನು ಸಡಿಲಿಸಿ ದೊಡ್ಡ ಸಂಸಾರವನ್ನು ಹೊಕ್ಕ ಸಿದ್ಧರಾಮನನ್ನು ಕಂಡು "ಒಡ್ಡರಾಮನಿದೇನು ಗೊಡವೆಯನೊಡ್ಡಿಕೊಂಡು ವ್ಯಥಾ ಮನಸ್ಸನು ಗೊಡ್ಡು ಮಾಡಿಯೆ ಕೆಟ್ಟ" ನಲ್ಲಾ ಎನ್ನುವನು. ಅದನ್ನು ಕೇಳಿ ಕೋಪೋದ್ದೀಪಿತನಾಗಿ ಸಿದ್ಧರಾಮ ಅಲ್ಲಿಗೆ ಬಂದನು. ಯತಿಯಾದವನಿಗೆ ಕೋಪ ತಾಪಗಳು ತಕ್ಕುದಲ್ಲವೆಂದು ಅಲ್ಲಮ ನಗುತ್ತ ನುಡಿದನು. ಮಾತಿಗೆ ಮಾತು ಬೆಳೆದಾಗ ಸಿದ್ಧರಾಮನ ಕೋಪ ಭುಗಿಲೆಂದೆದ್ದಿತು. ಪ್ರಭುವನ್ನು ಸುಡಲು ಸಿದ್ಧರಾಮ ತನ್ನ ನೊಸಲ ಕಣ್ಣನ್ನು ತೆರೆದನು. ಸಿದ್ಧರಾಮನ ನೊಸಲ ಕಣ್ಣಿನ ಬೆಂಕಿ ಸರ್ವಸ್ವವನ್ನೂ ನುಂಗಿ ನೊಣೆಯಬಹುದೆಂದು ಪ್ರಭುವು ಆ ಜ್ವಾಲೆಯನ್ನು ತನ್ನ ಪಾದಗಳಿಂದ ತೊಡೆಯುವನು. ಆಗ ಸಿದ್ಧರಾಮನಿಗೆ ಜ್ಞಾನೋದಯವಾಯಿತು.

ಸಿದ್ಧರಾಮನ ಜೊತೆಯಲ್ಲಿ ಪ್ರಭು ಬಸವಣ್ಣನ ಕಲ್ಯಾಣಕ್ಕೆ ಬಂದು ಬಸವಣ್ಣನ ಮನೆಯ ಬಾಗಿಲಲ್ಲಿ ನಿಂತನು. ಹಡಪದಪ್ಪಣ್ಣನು ಜಂಗಮರೀರ್ವರ ಆಗಮನದ ಸುದ್ದಿಯನ್ನು ಬಸವನಿಗೆ ಮುಟ್ಟಿಸಿದನು. ಶಿವಪೂಜಾಸಕ್ತನಾಗಿದ್ದ ಬಸವಣ್ಣ ತಡಮಾಡದೆ ಆ ಜಂಗಮರೀರ್ವರನ್ನು ಕರೆದುತರಲು ಹಡಪದಪ್ಪಣ್ಣನಿಗೆ ನೇಮಿಸಿದನು. ರಾಜರ ಮನೆಯಲ್ಲಿ ನಮಗೇನು ಕೆಲಸ, ನಾವು ಬರುವುದಿಲ್ಲವೆಂದು ಪ್ರಭು ಹೇಳುತ್ತಿರುವಷ್ಟರಲ್ಲಿ ಮಡಿವಳ

ಮಾಚಿದೇವನೂ ಚೆನ್ನಬಸವಣ್ಣನೂ ಬಸವಣ್ಣನಿಗೆ ಹೊರಗಡೆ ಬಾಗಿಲಲ್ಲಿ ನಿಂತಿರುವವರು ಪ್ರಭುದೇವ ಸಿದ್ಧರಾಮರೆಂದು ಹೇಳುವರು. ಬಸವಣ್ಣನು ಪಶ್ಚಾತ್ತಾಪಗೊಂಡ ಮನಸ್ಸಿನಿಂದ ಹೊರಬಂದು ಪ್ರಭುವಿನ ಪಾದಗಳಿಗೆ ನಮಸ್ಕರಿಸಿ ತನ್ನ ತಪ್ಪನ್ನು ಕ್ಷಮಿಸಬೇಕೆಂದು ಪ್ರಾರ್ಥಿಸುವನು. ಚೆನ್ನಬಸವಣ್ಣನೂ ಮಡಿವಳ ಮಾಚಿದೇವನೂ ಕರುಣಿಸುವಂತೆ ಪ್ರಭುವನ್ನು ಪ್ರಾರ್ಥಿಸಿದರು. ಕೊನೆಗೆ ದಯಾಸಮುದ್ರನಾದ ಪ್ರಭುವು ಕ್ಷಮಿಸಿ ಸಿದ್ಧರಾಮನೊಡನೆ ಒಳಗೆ ಬಂದನು. ಶಿಲೆಯ ಮರೆಯ ಹೊನ್ನಿನಂತೆ ಮರುಳ ವೇಷದಲ್ಲಿದ್ದ ಸಾಕಾರ ಶಂಕರನಾದ ಮರುಳಶಂಕರದೇವನನ್ನು ತೋರಿಸಿ ಪ್ರಭುವು ಬಸವಣ್ಣನಿಗೆ ಇಷ್ಟಲಿಂಗೋಪದೇಶವನ್ನು ಮಾಡಿ ಅವನನ್ನು ಮನಸಾರೆ ಹೊಗಳಿ ಶಿವಾನುಭವಗೋಷ್ಠಿಯಲ್ಲಿರುತ್ತಿರಲು ಅಲ್ಲಿಗೆ ಮಹದೇವಿಯಕ್ಕನು ಬಂದು ನಮಸ್ಕರಿಸುವಳು. ಅವಳನ್ನು ಪರೀಕ್ಷಿಸಿ ಅವಳ ನಿಲವನ್ನು ತಿಳಿದು ಸಂತೋಷಿಸಿ ಅವಳಿಗೆ ಉಪದೇಶವನ್ನು ಮಾಡಿ ಶ್ರೀಗಿರಿಯ ಕದಳೀಬನಕ್ಕೆ ಹೋಗಲು ಪ್ರಭು ಅನುಜ್ಞೆ ಕೊಡುವನು.

ಪ್ರಭುವು ದೇಶಸಂಚಾರಮಾಡುತ್ತಾ ಶ್ರೀಗಿರಿಗೆ ಬರುವನು. ಅಲ್ಲಿ ಗೋರಕ್ಷನೆಂಬ ಹಠಯೋಗಿಯನ್ನು ಸಂಧಿಸಿ ವಜ್ರದೇಹಿಯಾಗಿದ್ದ ಅವನ ದೇಹಾಭಿಮಾನವನ್ನು ನಿವಾರಿಸಿ ಅವನಿಗೆ ವೀರಶೈವತತ್ತ್ವೋಪದೇಶಮಾಡುವನು. ಅಡವಿಯಲ್ಲಿ ಸಂಚರಿಸುತ್ತಾ ಬರುವಾಗ ಬೇಟೆಯಾಡುತ್ತಿದ್ದ ಮುನಿಗಳು ತಮ್ಮ ತಪಸ್ಸಿಗಾಗಿ ಸಾಮಗ್ರಿಗಳನ್ನು ಒಟ್ಟುಗೂಡಿಸುತ್ತಿದ್ದುದನ್ನು ಕಂಡು ಅವರಿಗೂ ಸಂಸಾರಬಾಧೆ ಬಿಟ್ಟಿಲ್ಲವೆಂದು ತಿಳಿದು ಅವರಿಗೆಲ್ಲ ಉಪದೇಶವಿತ್ತು ಕಲ್ಯಾಣಕ್ಕೆ ಬಂದನು. ಬಸವಣ್ಣನು ಕಲ್ಯಾಣದಲ್ಲಿ ಶೂನ್ಯಸಿಂಹಾಸನವನ್ನು ರಚಿಸಿ ಈ ಶೂನ್ಯಪೀಠವನ್ನು ಏರಿ ನಿಲ್ಲಬಲ್ಲವನು ನನ್ನೊಡೆಯ ಪ್ರಭುವಾಗಿರುವನು ಎಂದು ನಿಶ್ಚಯಿಸಿ ತನ್ನ ಮನೋನುರಾಗದಲ್ಲಿ ಶುದ್ಧಮನದಲ್ಲಿ ಧ್ಯಾನಿಸುತ್ತಾ ಗುಹೇಶ್ವರನನ್ನು ನೆನೆಯುತ್ತಿದ್ದನು. ಅವನನ್ನು ತನ್ನರಮನೆಗೆ ಕರೆದುತಂದು ಶೂನ್ಯ ಸಿಂಹಾಸನದಲ್ಲಿ ಕುಳ್ಳಿರಿಸಿದನು. ಪ್ರಭುವು ತೃಪ್ತನಾದ ಮಾತ್ರಕ್ಕೆ ಜಂಗಮರೆಲ್ಲರೂ ತೃಪ್ತರಾಗಿರುವುದನ್ನು ಕಂಡು ಬಸವಣ್ಣನಿಗೆ ಆಶ್ಚರ್ಯವಾಯಿತು. ಬಸವಾದಿಗಳಿಗೆ ಪ್ರಭುವು ಜ್ಞಾನೋಪದೇಶ ಮಾಡಿ ಅನಂತರ ಬಸವಣ್ಣನನ್ನು ಹೊಗಳಿದನು; ಎಲ್ಲರಿಗೂ ನಿತ್ಯಪದವಿಯನ್ನು ಅನುಗ್ರಹಿಸಿ ಅಲ್ಲಿಂದ ನಿರ್ಗಮಿಸಿದನು.

ಗಿರಿಜೆ ಶಿವನ ಕರುಣೆಯಿಂದಾಗಿ ನಿತ್ಯನಾದ ಅಲ್ಲಮನ ನಿಜವನ್ನರಿತಳು. ಕಾಂತೆಯೊಂದಿಗೆ ಶಿವನು ಸತತೋತ್ಸಾಹದಿಂದ, ಸಂತತಾನಂದೈಕಸುಖದಿಂದ ಇರುತ್ತಿದ್ದನು.

**ಪಾತ್ರಸೃಷ್ಟಿ:**

ಅನುಪಮವಾದ ಸಿದ್ಧಿಯ ಸಾಧನೆಗೆ ಕರ್ಮೋದ್ಯೋಗಭೂಮಿಯ ಕರ್ಮತನು ಒಂದು ಮಾಧ್ಯಮ. ಈ ಮಾಧ್ಯಮದ ಬಳಕೆಯಿಂದಲೇ ಮಾನವರು 'ನಿಜ'ವನ್ನರಿಯಲು ಸಾಧ್ಯ. ಈ ನಿಜದ ತಿಳುವಳಿಕೆಗೆ ಮಾರ್ಗದೋರುವ ಗುರು ಶಿವನ ಸಾತ್ವಿಕರೂಪವಾದ ಅಲ್ಲಮಪ್ರಭು (ಪ್ರಭುಲೀ. ೨-೩೪-೩೬). ಈತ ಮಾತುಮಾತಿಗೆ ಸಿಕ್ಕನು; 'ಆರಾರವರ ಭಕ್ತಿಗಳ ರೀತಿಗಳಲಿಹರವರಿಗವರಾ ಪ್ರೀತಿಯಲಿ ರೂಪಾಗಿ ತೋರುವನು' (ಪ್ರಭುಲೀ.

೨-೩೮). 'ಮರ್ತ್ಯದ ಮನುಜರನು ಪಾವನವ ಮಾಡುವೆನೆನುತೆ' ಲೀಲೆಯಿಂದ ಸಂಚರಿಸುವನು (ಪ್ರಭುಲೀ. ೧೯-೪). 'ಧರಣಿಯೊಳಗಾರಾರದಾವಾಚರಣೆ ಗಳನಾಚರಿಸುತಿಹರಾ ಪರಿಯುಲವರವರಿಗೆ ಯಥೋಚಿತ ಸುಪ್ರಸನ್ನತೆಯು ಕರುಣಿಸುವೆನೆಂದೆನುತ ಸಚರಾಚರರಿಗುಪಕಾರಾರ್ಥವಾಗಿಯೆ' ತನ್ನ ಲೀಲೆಯಲ್ಲಿ ಸುಳಿಯುವನು (ಪ್ರಭುಲೀ. ೧೯-೬). 'ಇಳೆಯ ಭಕ್ತರ ಪಾವನವ ಮಾಡಲಿಕೆ ತಾನೇ ಕುಜುಹುವಿಡಿದಗ್ಗಳೆಯತನದಲಿ' ಅಲ್ಲಮಲಿಂಗ ತನ್ನ ಲೀಲೆಯಲ್ಲಿ ಸಂಚರಿಸುವನು (೧೧-೩೭). ಈ ಅಲ್ಲಮ ಬೇರೆಯಲ್ಲ ಗುಹೇಶ್ವರಲಿಂಗ ಬೇರೆಯಲ್ಲ (ಪ್ರಭುಲೀ. ೧೯-೪೪). ಆತ್ಮನೇ ಗುಹೆ. ಈ ಗುಹೆಗೆ ಒಡೆಯ ಅಲ್ಲಮ. ಗುಹೇಶ್ವರಾಂಕಿತದ ಕಾರಣದಿಂದ ಲೋಕದ ಲೌಕಿಕರಲ್ಲಿ ಮರೆಮಾಡಿ ಯೋಗ್ಯವೆನ್ನುವಂತೆ ಗುಹೇಶ್ವರನೆಂಬ ಸಹಜವಾದ ಹೆಸರನ್ನೇ ತನ್ನ ಲೀಲೆಯಲ್ಲಿ ಪಡೆದುಕೊಂಡನು (ಪ್ರಭುಲೀ. ೧೯-೪೫). 'ತಥ್ಯವನು ಹೇಳುವೊಡೆ ಭಕ್ತರ ಚಿತ್ತದಲಿ ಸುಜ್ಞಾನ ಬೀಜವ ಬಿತ್ತಲು' ಈ ರೀತಿ ಅಲ್ಲಮಲಿಂಗನು ನಟಿಸಿದನು (ಪ್ರಭುಲೀ. ೧೯-೪೯). 'ಎಲ್ಲ ಜಾಡ್ಯದ ಜಂಜಡಂಗಳನಲ್ಲವೆನಿಸುವ' ಕಾರಣ ಈತನಿಗೆ ಅಲ್ಲಮಪ್ರಭುವೆಂಬ ಹೆಸರು (ಪ್ರಭುಲೀ. ೬-೨೯).

ಕ್ರಮಕ್ರಮವಾದ ವ್ಯಕ್ತಿತ್ವವಿಕಸನವನ್ನು ಪಡೆದುಕೊಂಡು ಪೂರ್ಣರೂಪಾದ ಪಾತ್ರವಲ್ಲ ಅಲ್ಲಮನದು. ಚಾಮರಸನು ಚಿತ್ರಿಸಹೊರಟಿರುವುದು 'ಬೆಳೆಯುತ್ತಿರುವ ಇಲ್ಲವೆ ಬಿದ್ದು ಎದ್ದ ವ್ಯಕ್ತಿಯನ್ನಲ್ಲ, ಬೆಳೆದ ಮತ್ತು ಸಿದ್ಧನಾದ ವ್ಯಕ್ತಿಯನ್ನು'[೧]. ಸುಜ್ಞಾನಿ-ನಿರಹಂಕಾರ ದಂಪತಿಗಳ ಭಕ್ತಿಗೆ ಮೆಚ್ಚಿ ಅವರ ಮಗನಾಗಿ ಕಾಣಿಸಿಕೊಂಡ 'ಸುಗುಣ ನಿರ್ಗುಣ ಮೂರ್ತಿಯಲ್ಲದ ವಿಗಡ ಶಿಶುವಾದ ಅಲ್ಲಮನು "ಬಿಸಿಲ ಬೇಜೆಟ್ಟಿಳೆಗಿಳಿದು ಶೋಭಿಸುವ ಸೂರ್ಯನೊ ಹಿಮವನತಿಗಳೆದೆಸೆವ ಚಂದ್ರನೊ ನೆಟ್ಟನಾಶ್ರಿತ ಭಕ್ತಗುಣವಳಿದು ಮಿಸುಗುವಗ್ನಿಯೊ" ಎನ್ನುವಂತೆ ಕಾಣಿಸಿಕೊಂಡನು (ಪ್ರಭುಲೀ. ೬-೨೩). ಅಷ್ಟೇ ಅಲ್ಲ, ಗುರು ಗುಹೇಶ್ವರನು ಭುವಿಯಲ್ಲಿ ರೂಪು ಧರಿಸಿ ಅಲ್ಲಮನಾಗಿ ಮೆರೆದ ಕಾರಣದಿಂದ 'ಕೊರಡುಗಳು ಕೊನರಿದುವು, ಕಜಿೆಯದ ಬರಡುಗಳು ಹಯನಾದವು' (ಪ್ರಭುಲೀ. ೬-೨೫) ಎಂದು ಕವಿ ಅಲ್ಲಮನ ಮಹಿಮಾತಿಶಯಕ್ಕೆ ಘೊಂಪುಳಿಗೊಂಡು ನುಡಿದಿರುವನು. ನಿರಹಂಕಾರ ಹೇಳುವಂತೆ ಶಿಶುರೂಪದ ಅಲ್ಲಮನು "ಸದಾ ಸಾಕ್ಷಾತ್ ಅವನಿ ಜಲ ಅನಲ ಅನಿಲ ಭೂತತತ್ವವಿದೂರ, ಪರಮಾನಂದ ರಸಭರಿತ, ಜಾತನಲ್ಲ, ವಿಚಾರಿಸುವೊಡೆ ಅಜಾತನಲ್ಲ ಎಂದೆನುತಲುಪಮಾತೀತನು." ಕವಿಯೇ ಹೇಳುವಂತೆ ಅಲ್ಲಮ ತನ್ನ ಲೀಲೆಯಲ್ಲಿ ಗಳಿಗೆ ಸಂಖ್ಯೆಗೆ ನುಡಿಯನ್ನು ನಡೆಯನ್ನು ಕಲಿತು ಬೆಳೆದನು; ಗಳಿಗೆ ಸಂಖ್ಯೆಗೆ ಬಾಲಲೀಲೆಯನಳವಡಿಸಿಗೊಂಡು ಆಡುತಿಹ ಮಕ್ಕಳಲಿ ಮೆಜಿೆವುತಲಿದ್ದನು. ಓದದೆಯೇ ವೇದ ಶಾಸ್ತ್ರಗಳು ಆತನ ನಾಲಗೆಯಲ್ಲಿ ಬಂದು ನೆಲಸಿದುವು (೬-೩೦, ೩೩).

---

೧. ಡಾ. ರಂ. ಶ್ರೀ. ಮುಗಳಿ : ಕನ್ನಡ ಸಾಹಿತ್ಯ ಚರಿತ್ರೆ, ಪು. ೩೫೩.

ತಂದೆ-ತಾಯಿಯರು ಪ್ರೀತಿಯಿಂದ ಕರೆಯಲು 'ಬಾಲಭಾವದ ಪರಿಯನಾಗಳೆ ಬಿಸುಟು ಸಾಕೆನ್ನೆನುತ ನಡೆತಂದು ವರಗುರು ಶ್ರೀಮೂರ್ತಿಯಾಗಿಯೆ ಪರಮತತ್ವನಿರೂಪಣೆಯ ವಿಸ್ತರಿಸಲುದ್ಯೋಗಿಸಿ'ದನು (೬-೩೬). 'ತತ್ವವಿವೇಕವೆಲ್ಲವನಳವಡಿಸಿ ಕೊಟ್ಟೈಕ್ಯಭಾವಸ್ಥಳವ ಕಾಣಿಸಿ ದೃಷ್ಟದಲಿ ಪರಿಪೂರ್ಣಮಯರೆನಿಸಿ.... ನಿತ್ಯವನಿತ್ತನು' (೬-೪೦).

ಅನುಪಮನೂ ಮಾಯಾತೀತನೂ ಆದ ಅಲ್ಲಮ ಮಾಯಾದೇವಿಯ ಮದಭಂಗ ಮಾಡಿದ ಪ್ರಸಂಗ ಆತನ ಪರಮವೈರಾಗ್ಯವನ್ನೂ ಲೀಲಾವಿನೋದವನ್ನೂ ಸೂಚಿಸುತ್ತದೆ. ಮಧುಕನಾಥನ ಮಂದಿರದಲ್ಲಿ ಮದ್ದಳಿಗನಾಗಿ ಕಾಣಿಸಿಕೊಂಡು ಮಾಯಾದೇವಿಯ ಮನವನ್ನು ಸೂರೆಗೊಂಡು 'ಈ ತರುಣಿ ತಾನೇನು ಮಾಡುವ ಕೌತುಕವನೆಂದೆನುತ ವಿದ್ಯಾವಸ್ತು ತಾನಾಗಿ ಪ್ರೀತಿವಟ್ಟವನಂತೆ ನಟ್ಟುವ ಜಾತಿ ರೀತಿ'ಯನ್ನು ಅಲ್ಲಮ ತನ್ನ ಲೀಲೆಯಲ್ಲಿ ನಟಿಸಿದನು. ಅಲ್ಲಮನಿಗೆ ಮನಸೋತ ಮಾಯೆಯ ಅಂತರಂಗವನ್ನರಿತು ಅವಳ ಬಯಕೆಯನ್ನು ಪೂರೈಸಲು ಮದಮಾನಿ ಅಲ್ಲಮನಲ್ಲಿಗೆ ಬಂದಾಗ ಅದನ್ನರಿತ ಆತ ಇವಳಿಗೆ ನಾನು ಮೊದಲೇ ದಾರಿದೋರುವೆನೆಂದು ಮನದಲ್ಲಿ ಆಲೋಚಿಸಿ "ಬೀಡಾರ ಕಿನ್ನಾವೆಯ್ದಬೇಹುದು ನಮ್ಮನಟಿಸಿದೊಡೆ ನಾರಿ ನೀನೀ ಹದನ ಹೇಳು ಕುಮಾರಿಗೆನುತ ನಿಜ ವಿನೋದವಿಚಾರದಿಂದಲಿ" ಮದಮಾನಿಗೆ ನುಡಿದನು. ನಮ್ಮ ಒಡತಿ ನಿನ್ನ ಮೇಲೆ ಕೃಪೆಮಾಡಿರುವಳು. ನಮ್ಮ ಅರಮನೆಯಲ್ಲಿ ನೀನು ಸುಖವಾಗಿರು ಎಂದು ನಯವಾಗಿ ಮದಮಾನಿ ನುಡಿಯಲು ಅದಕ್ಕೆ ಪ್ರತಿಯಾಗಿ ನುಡಿದ ಅಲ್ಲಮನ ನಾನಾ ಬಗೆಯ ಬಣ್ಣದ ಮಾತುಗಳು (೫-೩೧-೩೮) ಅವನ ಲೀಲಾವಿಲಾಸಕ್ಕೆ ಸಾಕ್ಷಿಯಾಗಿವೆ. ಮದಮಾನಿ ಹಾಗೂ ಅವಳ ಗೆಳತಿಯರು 'ತಮವ ತರಣಿಯನೊಂದು ಮಾಡುವೆನೆಂಬ ಭಾವಭ್ರಮಿತ ಬುದ್ಧಿಯಲಿ' ಮಾಯೆ-ಅಲ್ಲಮರನ್ನು ಸೆಜ್ಜೆಮನೆಯಲ್ಲಿ ಸೇರಿಸಿದರು. ನಿರ್ಮಾಯನಾದ ಅಲ್ಲಮನನ್ನು ಮಾಯೆ ಸೇರಲು ಬಂದಾಗ

> **ಬಯಲ ಚಪ್ಪಿಸಿವಂತೆ ಚುಂಬನ**
> **ಬಯಲನಪ್ಪುವವೊಲು ಸಮಪ್ಪಿಕೆ**
> **ಬಯಲನೀಕ್ಷಿಸುವಂತೆ ನೋಟದ ಕೂಟದನುಭವಣೆ**
> **ಬಯಲುಗೊಂಡುವು ಭಾವಿಸಲು ನಿ**
> **ರ್ವಯಲಿನಲ್ಲಮಗೋತ ಕಾರಣ**
> **ಬಯಲ ಬಿಹ್ವದ ಬಲೆಗೆ ಬಿದ್ದಳು ಮಾಯೆ ಸುರತದಲಿ** ೫-೪೬

ನಿರಾಕಾರನೂ ನಿರ್ಮಾಯನೂ ಆದ ಅಲ್ಲಮನ ಪರಿಯನ್ನು ಕವಿ ಅತ್ಯಂತ ಸೊಗಸಾಗಿ ಕೆಳಗಿನಂತೆ ಹೇಳುವನು:

> **ಮಳೆಗೆ ನೆನೆವುದೆ ಗಾಳಿ ಬೀಸಿದೊ**
> **ಡೊಲೆವುದೇ ಬಲುಗಿಚ್ಚಿನುರಿಯಿಂ**
> **ದಳಿವುದೇ ನಭವಾ ಪರಿಯ ಬಯಲಂಗನು ತಾನಾಗಿ**
> **ಕಳವಳದ ವಿಷಯಗಳ ವ್ಯಸನಗ**
> **ಳೊಳಗೆ ಸಿಕ್ಕುವನಲ್ಲವಾತನ**
> **ಹೊಲಬು ತಾ ಬೇಜಿಸೊಂದು ಪರಿಯೇನೆಂಬೆನಲ್ಲಮನ** ೫-೪೭

ಪ್ರತ್ಯಕ್ಷ ಪರಬ್ರಹ್ಮಸ್ವರೂಪಿಯಾದ ಅಲ್ಲಮನು ಮದ್ದಳೆಕಾರನಾಗಿ ನಿಂತು ಮದ್ದಳೆಯನ್ನು ಮಧುಕೇಶ್ವರ ದೇವಾಲಯಲ್ಲಿ ನುಡಿಸಲು ಮಾಯೆ ಲೋಕವನ್ನೇ ಮರುಳುಮಾಡುತ್ತ ನೃತ್ಯವನ್ನಾಡಿದಳು. ಮನೋಹರವೂ ಪರಿಶುದ್ಧವೂ ಆದ ಚಂದ್ರಕಾಂತಶಿಲೆಯ ಹತ್ತಿರವಿರುವ ಬಳ್ಳಿಯನ್ನು ಕಾಳ್ಗಿಚ್ಚು ಆವರಿಸಲು ಆ ಬೆಂಕಿಯ ಜ್ವಾಲೆಯು ಚಂದ್ರಕಾಂತ ಶಿಲೆಯೊಳಗೆ ಪ್ರತಿಬಿಂಬಿಸಿ ತೋರುವಂತೆ ಸತ್ಯಾಂಶವನ್ನರಿಯದ ಜನರಿಗೆ ಮಾಯೆಯು ಹೊಂದಿದ್ದ ಮದನಾಗ್ನಿಯು ಅಲ್ಲಮನೇ ಕಾಮಿ ಎನ್ನುವಂತೆ ಅಲ್ಲಮನೊಳಗೆ ಪ್ರತಿಬಿಂಬಿಸಿತು (೬-೨೫) ಎಂದು ಹೇಳಿ ಕವಿ ಮತ್ತೆ ಮತ್ತೆ ನಮ್ಮನ್ನು ಎಚ್ಚರಿಸಿ, ಅಲ್ಲಮನ ಶುದ್ಧತ್ವವನ್ನು ನಿರ್ಮಾಯತ್ವವನ್ನು ನಮ್ಮ ಬಗೆಯಂಗಳದಲ್ಲಿ ಮೂಡಿಸುವ ಪ್ರಯತ್ನ ಮಾಡುವನು. ಈ ನಟನಾಟಕನ ಸಿಕ್ಕಿಸುವ ಆಲೋಚನೆಗೆ ಮಾಯೆ ತೊಡಗಿದಾಗ ಅವಳ ಅಂತರಂಗವನ್ನರಿತ ಅಲ್ಲಮನು 'ನಾವಿನ್ನೇಕೆ ಸದಮಲ ಸಸ್ವರೂಪವ ಕಾಕರಿಗೆ ಕಾಣಿಸುವುದನುಚಿತವೆನುತ ತನ್ನೊಳಗೆ ಸಾಕೆನುತ ನಟ್ಟುವಿಗತನವನು ನೂಕುತಲಿ ಮದ್ದಳೆಯ ತಾನೊಡಹಾಕಿ' ಜಗತ್ತಿಗೇ ತಿಳಿಯುವಂತೆ ಅಲ್ಲಿಂದ ನಿರ್ಗಮಿಸಿದನು. ಮಾಯೆ ಅವನನ್ನು ಹುಡುಕುತ್ತ ಕಾಡು ಮೇಡುಗಳಲ್ಲಿ ಬರಲು ಜಪತಪ ಸಮಾಧಿಯ ಮಾಡುವವರು 'ಹುಲಿಗಂಡ ಹುಲ್ಲೆಗಳಂತೆ' ದೆಸೆದೆಸೆಗೆ ಓಡಿದರು. ಆಗ 'ಕರುಣೆಗಳ ಬಲ್ಲಹನು ಬೋಳೆಯರರಸ ಭಜಕರ ಬಂಧುವೆನಿಸುವ ಪರಮಪಾವನನಲ್ಲಮಪ್ರಭು' ಓಡುತ್ತಿದ್ದ ತಪಸ್ವಿಗಳನ್ನು ತಡೆದು ನಿಲ್ಲಿಸಿ, ಭಯ ಬೇಡವೆಂದು ಓರ್ವ ತಪಸ್ವಿಯ ರೂಪಿನಲ್ಲಿ ಕರುಣಾಮಯನಾಗಿ ಆ ತಪಸ್ವಿಗಳ ಸಮೂಹಕ್ಕೆ ಕಾಣಿಸಿಕೊಂಡು ಧೈರ್ಯಗೊಟ್ಟನು. ಓಡಿಬರುತ್ತಿದ್ದ ಮಾಯೆಯನ್ನು ಮೂದಲಿಸಿ ಭಂಗಿಸಿ ಹಿಂತಿರುಗಿಸುವೆನೆಂದು ಮೊದಲಿನಂತೆ ಮಾಯೆಗೆ ರೂಪುದೋರಿದನು (೬-೪೭). ಅಲ್ಲಮ ಮಾಯೆ ಹಾಗೂ ವಿಮಳೆಯರ ಜೊತೆ ನಡೆಸುವ ಮಾತುಕತೆಯಲ್ಲಿ ತನ್ನ ನಿಲವನ್ನು ಖಚಿತಪಡಿಸುವನು. "ಕಾಮವೆತ್ತಲು ಪರಮತತ್ವದ ಸೀಮೆಯೆತ್ತಲು ತಿಮಿರವೆತ್ತಲು ತಾಮರಸಸಖನೆತ್ತಲರಿಸಿನವೆತ್ತ ಬಿಸಿಲೆತ್ತ ಭ್ರಾಮಕದ ನುಡಿ ಸಾಕು ನೀನೆತ್ತ ಆ ಮಹಾಘನವೆತ್ತ ಮರುಳೇ ಕ್ಷೇಮದಲಿ ನೀ ಬಂದ ಬಟ್ಟೆಯಲಬಲೆ ಹೋಗು" ಎಂದು ಮಾಯೆಯನ್ನು ಅಲ್ಲಮ ತಿರಸ್ಕರಿಸುತ್ತಾನೆ. ಕೈಲಾಸದಲ್ಲಿ ನಾನು ತೊಟ್ಟ ಪ್ರತಿಜ್ಞೆ ಈಡೇರದೆ ಅಲ್ಲಿಗೆ ಹಿಂತಿರುಗಿದರೆ ನನ್ನ ಹೆಣ್ತನಕ್ಕೇ ಹಾನಿ, ಕೈಲಾಸಕ್ಕೆ ಹೇಗೆ ಮರಳಲಿ ಎಂದು ಮಾಯೆ ಅಲ್ಲಮನನ್ನು ಕೇಳಲು ಅದಕ್ಕೆ ಆತ

> ಕಡಲನೀರುಗಳೆಲ್ಲವಮೃತದ
> ಮಡುಗಳಾದರೆಯಹವು ಸುರಗಿರಿ
> ಕುಡಿವಿಡಿದು ಹಬ್ಬಿದೊಡೆ ಹಬ್ಬುವುದವನಿಮಂಡಲದ
> ಗಿಡುಗಳೆಲ್ಲವು ಕಲ್ಪತರುವಾ
> ದೊಡೆಯಹವು ತತ್ತದನುಗಾಲಕೆ
> ಮಡದಿ ಮಾಯೆಗೆ ಪರಮತತ್ವಜ್ಞಾನವಿಲ್ಲೆಂದ ೭-೪೮

"ನುಣ್ಣನೆಯ ಮಾತನ್ನಾಡಿ ನೀನು ಮೆಲ್ಲನೆ ಜಾರಿ ಹೋದರೆ ನಾನು ನಿನ್ನನ್ನು ಬಿಡುವೆನೇ? ಕೇಳು, ನನ್ನ ಪ್ರತಿಜ್ಞೆ ನೆರವೇರುವವರೆವಿಗೆ ನಿರ್ದೇಹಿ ನೀನು ಎಂಬ

ಬಿಂಕದ ಬೆಡಗು ನಿನಗೆ ಬೇಡ. ನಿನ್ನನ್ನು ಏನೇ ಆಗಲಿ ಹಿಡಿದಲ್ಲದೆ ಬಿಡೆನು" (೬-೮೫) ಎಂದು ಮಾಯೆ ಅಲ್ಲಮನನ್ನು ತುಡುಕಲು ಬಂದಾಗ ನಿಮಿಷದಲ್ಲೇ ಮಾಯೆಗೆ ಅಲ್ಲಮನು ನಿರ್ವಯಲ ಜಾಲವ ಬೀಸಿ ಹೋದನು. ಈ ಸಂದರ್ಭದಲ್ಲಿ ಮಾಯಾತೀತನಾದ ಅಲ್ಲಮನನ್ನು ಕವಿ ಉಬ್ಬೆದ್ದ ಮನದಲ್ಲಿ ವರ್ಣಿಸುತ್ತಾ "ಗಾಜುದೂಜಿನ ಮಾಯೆಗೀಯೆಗೆ ತೋಜಿಸುವನೇ ತನ್ನ ನಿಜವನು ಮೀಜಿ ಮೀಸಲನಲ್ಲಮಪ್ರಭು ಗುರು ಗುಹೇಶ್ವರನು" (೬-೮೭) ಎಂದು ಅವನ ನಿಲುವನ್ನು ತಿಳಿಯಪಡಿಸುವನು.

'ಶಿವಕವಿ'ಯಾದ ಚಾಮರಸನ ಪ್ರಭುಲಿಂಗಲೀಲೆ, ಕವಿಯೆ ಹೇಳುವಂತೆ ಸತ್ತವರ ಕಥೆಯಲ್ಲ. ಜನನದ ಕುತ್ತದಲಿ ಕುದಿಕುದಿದು ಕರ್ಮದ ಕತ್ತಲೆಗೆ ಸಿಲ್ಕುವರ ಸೀಮೆಯ ಹೊಲಬು ತಾನಲ್ಲ. ಹೊತ್ತು ಹೋಗದೆ ಪುಂಡಗಾಲಿಪ ಮತ್ತಮತಿಗಳ ಗೋಷ್ಠಿಯಲ್ಲ. ಇದು ಪ್ರಭುಲಿಂಗನ ಲೀಲೆ (೧-೧೩) ಗುರುಗುಹೇಶ್ವರನೇ ಅಂತರಂಗದಲ್ಲಿ ನೆಲೆಗೊಂಡು ನುಡಿಸಲು ಪ್ರಭುಲಿಂಗನ ಲೀಲೆಗಳನ್ನು ನಾನು ಹೇಳುತ್ತಿರುವೆನು (೧-೯). ಇದು ಶಿವನ ನಟನಾಟಕದ ಮಹಿಮೆ (೧-೧೦). ಚಾಮರಸನ ಪಾಲಿಗೆ ಪ್ರಭುಲಿಂಗಲೀಲೆ ಮರ್ತ್ಯ ಮಾನವನ ಚಾರಿತ್ರನಿರೂಪಣೆಗೆ ಮಾತ್ರ ಮೀಸಲಾದ ಕೃತಿಯಲ್ಲ. ಈ ಉದ್ದೇಶಕ್ಕೆ ವಿಭಿನ್ನವಾದ ಅಷ್ಟೇ ಮಹೋನ್ನತವಾದ ಧ್ಯೇಯ ಆತನ ಬಗೆಯಾಳದಲ್ಲಿದೆ. ಕವಿಯ ಕಣ್ಣಿಗೆ ಪ್ರಭು ಮರ್ತ್ಯಮಾನವನಲ್ಲ, ಲೌಕಿಕನಲ್ಲ; ಅಮರ್ತ್ಯ ಮಾನವ, ಅನುಪಮ. ಹೀಗಾಗಿ ಪ್ರಭು ಲೋಕೋದ್ಧಾರಕ್ಕಾಗಿ ಭುವಿಗಿಳಿದುಬಂದ ದೇವಮಾನವ; ನಿರಂಜನ ಪ್ರಣವಸ್ವರೂಪಿ. ಕೃತಿನಾಯಕ ಪ್ರಭುಲಿಂಗನ ಲೀಲಾಮಾತ್ರವಾದ ಕೃತಿ ಪ್ರಭುಲಿಂಗಲೀಲೆ. ಶಿವರೂಪಿಯಾದ ಅಲ್ಲಮಪ್ರಭುವಿನ ಲೋಕೋದ್ಧಾರಕ ಲೀಲೆಗಳ ಕಥನವೆ ಪ್ರಭುಲಿಂಗಲೀಲೆ. ಶಿವನು ಹಿಂದೆ ೨೫ ಲೀಲೆಗಳನ್ನು ಧರಿಸಿದಂತೆ ಪ್ರಭುಲಿಂಗಲೀಲೆಯಲ್ಲೂ 'ಪ್ರಭುಲಿಂಗ'ನ ಲೀಲೆಗಳನ್ನು ೨೫ ಗತಿಗಳಲ್ಲಿ ಹೇಳಲಾಗಿದೆ. ಕವಿಯೇ ಹೇಳುವಂತೆ 'ಅಲ್ಲಮಪ್ರಭುವೆಂದೆನಿಸಿಕೊಂಬುವನು ತಾ ಪ್ರತ್ಯಕ್ಷ ಪರಬೊಮ್ಮ (೪-೧೩೬). ಪರಬ್ರಹ್ಮಸ್ವರೂಪಿಯಾದ ಅಲ್ಲಮನೇ ಲೋಕವನ್ನು ನಡೆಸುವ ಸೂತ್ರಧಾರಿ (೧೫-೨೦) ಈ ಜಗನ್ನಾಟಕ ಸೂತ್ರಧಾರಿ "ಧರಣಿಯೊಳಗಾರಾರದಾವಾಚರಣೆಗಳನಾಚರಿಸುತಿಹರಾ ಪರಿಯಲವರವರಿಗೆ ಯಥೋಚಿತ ಪ್ರಸನ್ನತೆಯ ಕರುಣಿಸುವೆನೆಂದೆನುತ ಸಚರಾಚರರಿಗುಪಕಾರಾರ್ಥವಾಗಿಯೆ" ತನ್ನ ಲೀಲೆಯಲ್ಲಿ ಸುಳಿದನು (೧೯-೬). ಲೋಕೋದ್ಧಾರವೇ ಪ್ರಧಾನವಾಗಿರುವ ಪ್ರಭುವಿನ ಸುತ್ತಾಟದಲ್ಲಿ ಪ್ರಭುವು ಕೆಲವರೊಡನೆ ಕರುಣದಿಂದ ಮಾತನಾಡಿ, ಕೆಲವರನ್ನು ನುಡಿಸಿ, ಕೆಲವರನ್ನು ಜರಿದು, ಕೆಲವರನ್ನು ಜಡಿದು, ಕೆಲವರನ್ನು ಸ್ತುತಿಸಿ, ಕೆಲವರನ್ನು ಆಶೀರ್ವದಿಸಿ, ಕೆಲವರಿಗೆ ನಿತ್ಯಸುಖವನ್ನು ಅನುಗ್ರಹಿಸಿ ತನ್ನ ಘನಮಹಿಮೆಯನ್ನು ಪ್ರಕಟಪಡಿಸಿದನು (೧೫-೨೭). "ಸಾತ್ವಿಕಾಂಶದ ಪ್ರಭುವನ್ನು ಗೆಲ್ಲಲಾರದ ತಾಮಸಿಕಾಂಶದ ಮಾಯೆ ಕೊನೆಗೆ ಸಾತ್ವಿಕಾಂಶದ ಮಹದೇವಿಯಾಗಿ ಜನಿಸಿ ಶಿವನನ್ನು ಒಲಿಸಿಕೊಂಡ ಶಿವೆಯ ಪೈಜೆಯ ಕಥೆ ಪ್ರಭುಲಿಂಗಲೀಲೆಯಾಗಿದೆ. ಗಿರಿಜೆ ಶಿವನೊಡನೆ ಅನುಪಮನೂ ಅಸಾಮಾನ್ಯನೂ ಆದ

ಅಲ್ಲಮನನ್ನು ಗೆಲ್ಲುವೆನೆಂದು ತನ್ನ ತಾಮಸಕಳೆಯೆ ಮೂರುತಿಯಾದ ಮಾಯೆಯನ್ನು ಭೂಲೋಕಕ್ಕೆ ಕಳುಹಿಸುವುದರೊಂದಿಗೆ ಪ್ರಭುಲಿಂಗಲೀಲೆ ಪ್ರಾರಂಭವಾಗಿ ಗಿರಿಜೆ ತನ್ನ ಪೈಜೆಯನ್ನು ಪೂರ್ಣಗೊಳಿಸಲಾಗದೆ ಕೊನೆಗೆ 'ದೇವ ನೀನೆಂದಂತೆ ಘನಮಹಿಮಾವಲಂಬನು ತಪ್ಪದೈ ಪ್ರಭುದೇವ ನಾನದನಜಿದೆನೀಗಳು ನಿನ್ನ ಕರುಣದಲಿ ದೇವ ನಿನ್ನ ನಿಜಸ್ವರೂಪಕಿದಾವುದರಿದು' (೨೫-೧೯) ಎಂದು ತನ್ನ ತಪ್ಪೊಪ್ಪಿಕೊಳ್ಳುವಲ್ಲಿಗೆ ಪ್ರಭುಲಿಂಗಲೀಲೆ ಮುಕ್ತಾಯಗೊಳ್ಳುತ್ತದೆ. ಸಾತ್ವಿಕಾಂಶ ಹಾಗೂ ತಾಮಸಿಕಾಂಶಗಳ ನಡುವಣ ಘರ್ಷಣೆಯಲ್ಲಿ ಜಯ ಸಾತ್ವಿಕಕ್ಕೆ ಎಂಬ ಉದಾತ್ತ ವಿಚಾರವನ್ನು ಕವಿ ಶಿವ-ಶಿವೆಯರ ಮೂಲಕ ಸಾರಹೊರಟು ಒಂದು ಅರ್ಥದಲ್ಲಿ ಕವಿ ಪ್ರಭುಲಿಂಗಲೀಲೆ 'ಪ್ರಭುಲಿಂಗನ ಲೀಲೆ' ಎಂಬಂತೆ ಮಾಡಿರುವವನು.[೧] ಪರಬ್ರಹ್ಮಸ್ವರೂಪಿಯಾದ ಅಲ್ಲಮನು ಕರುಣೆಗಳರಸನಾಗಿ ಗೊಗ್ಗಯ್ಯ, ಮುಕ್ತಾಯಿ, ಸಿದ್ಧರಾಮ, ಮಹಾದೇವಿ, ಬಸವ, ಗೋರಕ್ಷ, ತಪೋವನದ ತಾಪಸಿಗಳು-ಇವರೆಲ್ಲರನ್ನೂ ಅನುಗ್ರಹಿಸಿದನು. ದಯಾಮಯಿಯಾದ ಅಲ್ಲಮ ಮನುಷ್ಯರ ಲೋಪ-ದೋಷಗಳನ್ನೂ, ಸಾಧಕರ ಸಾಧನೆಯಲ್ಲಿನ ಕೊರತೆಯನ್ನೂ ತಿಳಿದು ಯೋಗ್ಯರೀತಿಯಲ್ಲಿ ಅವನ್ನು ತನ್ನ ಸುತ್ತಾಟದ ಕಾಲದಲ್ಲಿ ತಿದ್ದಿದನು. ಲೋಕೋದ್ಧಾರದ ಹಿಂದೆಯೇ 'ಸಮಸ್ತ ಜಾತಿಯ ಜಾಲವನು ಸರ್ವರನು ಕರುಣಿಸಿ ಪಾಲಿಸುವ' ಮತ್ತು 'ಜಗತೀಜನವ ಸುಖಿಗಳ ಮಾಡುವ' ಮಹದುದ್ದೇಶವೂ ಅಲ್ಲಮಪ್ರಭುವಿನ ಕಾರ್ಯಾಚರಣೆಯಲ್ಲಿರುವುದನ್ನು ನಾವು ಮುಖ್ಯವಾಗಿ ಗುರುತಿಸಬಹುದಾಗಿದೆ.

ಪ್ರಭುವನ್ನು ಅಮಾನುಷವ್ಯಕ್ತಿಯಾಗಿ ಚಾಮರಸ ಕಂಡಿದ್ದಾನೆ. ಕವಿಯೇ ಹೇಳುವಂತೆ ಪ್ರಭುವಿನ ತಂದೆ-ತಾಯಿಯರು ನಿರಹಂಕಾರ-ಸುಜ್ಞಾನಿಗಳು. ಈ ದಂಪತಿಗಳು ಯೋಗಸಮಾಧಿಯಲ್ಲಿದ್ದಾಗ ಶಿಶುವಾಗಿ ಪ್ರಭುವು ಗೋಚರನಾಗುವನು. 'ಸಗುಣ ನಿರ್ಗುಣಮೂರ್ತಿಯಲ್ಲದ ವಿಗಡಶಿಶು'ವನ್ನು ಆ ದಂಪತಿಗಳು ಕಾಣುತ್ತಾರೆ. "ಆಗ ದೇವತೆಗಳು ಹೂಮಳೆಗರೆದರು. ದೇವದುಂದುಭಿಗಳು ಮೊಳಗಿದುವು. ಮುನಿಜನಗಳ ಮನದಲ್ಲಿ ಉತ್ಸಾಹವುಂಟಾಯಿತು. ಕೊರಡುಗಳು ಕೊನರಿದುವು. ಕರೆಯದ ಬರಡು ಹಯನಾದುವು" - ಎನ್ನುತ್ತಾನೆ ಚಾಮರಸ (೬-೨೫). ಚಾಮರಸನ ಪ್ರಕಾರ ಅಲ್ಲಮನು ಗಳಿಗೆ ಸಂಖ್ಯೆಗೆ ನುಡಿ, ನಡೆಗಳನ್ನು ಕಲಿತು ಆ ಭಕ್ತದಂಪತಿಗಳ ಮನೋರಥದೊಂದಿಗೇ ಬಳೆದನು. ಅವನಿಗೆ ಓದದೆಯೆ ವೇದಶಾಸ್ತ್ರಗಳು ಕರಗತವಾದುವು; ಆತನ ನಾಲಗೆಯ ತುದಿಯಲ್ಲಿ ನೆಲಸಿ ಅವು ಅವನ ಆಜ್ಞೆಯನ್ನು ಬೇಡುತ್ತಿರುವವು ಎಂದು ಪ್ರಭುವಿನ ಅಗಾಧಸ್ವರೂಪದ ಪರಿಚಯವನ್ನು ಕವಿ ಚೆನ್ನಾಗಿ ಮಾಡಿಕೊಡುವನು. ನಿರ್ದೇಹಿಯಾದ ಅಲ್ಲಮನ ಲೀಲಾವಿಲಾಸಗಳನ್ನು ಆತ ಶೂನ್ಯಸಿಂಹಾಸನವನ್ನು ಏರಲು ಕಲ್ಯಾಣಕ್ಕೆ ಬಂದಾಗಿನ ಸಂದರ್ಭದಲ್ಲಿ ನೋಡಬಹುದಾಗಿದೆ. ಕಲ್ಯಾಣನಗರದ ಬೀದಿ ಬೀದಿಗಳಲ್ಲಿ ನೋಟಕರಿಗೆ ಪ್ರಭುವು-ಅನಾವಿಸಿದ್ದನು- "ಹಲವು ಮೈಯಲಿ ಭೇದವಿಲ್ಲದೆ ಸುಳಿದನು"

---

೧. ಡಾ. ಎಸ್. ವಿದ್ಯಾಶಂಕರ : 'ವೀರಶೈವ ಪುರಾಣಗಳು ಒಂದು ಅಧ್ಯಯನ' (ಅಪ್ರಕಟಿತ ಕೃತಿ)

(೨೨-೩೧) ಬಸವಣ್ಣನನ್ನು ಪರೀಕ್ಷಿಸಬೇಕೆಂದು ಪ್ರಭುವು "ಬಿಟ್ಟ ಮಂಡೆಯ ಕೆಂಚುಗೂದಲ ನಿಟ್ಟೊಡಲ ನಿಡುದೋಳ ತೊನಹಿನ ಮುಟ್ಟದೆವೆಗಳ ನಟ್ಟ ನೋಟದ ಲಂಬಕರ್ಣಗಳ ದಟ್ಟಡಿಯ ಮಲೆವಂಗದೊಲಹಿನ ಕಟ್ಟಳೆಯ ಕಡು ಮರುಳು ವೇಷವತೊಟ್ಟು ತೊಟ್ಟನೆ ಸುಳಿದನು" (೨೨-೩೩). ಅವನ ಮರುಳುವೇಷವೋ ವಿಚಿತ್ರತರವಾದುದು:

**ಉಱುಗು ಟೊಂಕದ ಕುಂಟಗಾಲಿನ**
**ಬೆಱಿತ ಬಿಂಕದ ಮೆಯ್ಯ ಬಿಗುಹಿನ**
**ತೆಱಿದ ಬಾಸುಳ ಬದಿಯ ಮುಸುಱುವ ನೊಣದ ಹುಣ್ಣುಗಳ**
**ಕಿಱುನಗೆಯ ಕಟವಾಯ ಜೋಱಿನ**
**ಕುಱುಹನದಗಿಸಿಕೊಂಡು ಹಸ್ತದ**
**ನಿಱೆಗೆಯಲಿ ನೆಱೆ ಸುಳಿದನಾ ಪ್ರಭುಲಿಂಗಲೀಲೆಯಲಿ (೨೨-೩೪)**

ಕೀವು ರಕ್ತಗಳನ್ನು ಸ್ರವಿಸುತ್ತಿದ್ದ ಹುಣ್ಣುಗಳುಳ್ಳ ದೇಹವನ್ನು ಧರಿಸಿ ಬಂದ ಪ್ರಭು ನಾನಾ ವಿನೋದಗಳನ್ನು ಪ್ರದರ್ಶಿಸುವನು (೨೨-೩೫). ಒಮ್ಮೆ ಶಿಶುವಾಗಿ ಮತ್ತೊಮ್ಮೆ ಗುರುವಾಗಿ, ಒಮ್ಮೆ ಕ್ಷುಲ್ಲಕನಾಗಿ ಮತ್ತೊಮ್ಮೆ ದಕ್ಷನಾಗಿ, ಒಮ್ಮೆ ಸಾಕಾರನಾಗಿ ಮತ್ತೊಮ್ಮೆ ನಿರಾಕಾರನಾಗಿ, ಒಮ್ಮೆ ಇಲ್ಲಿ ಮತ್ತೊಮ್ಮೆ ಅಲ್ಲಿ ಇರುವವನಾಗಿ, ಮಗುದೊಮ್ಮೆ ಎಲ್ಲಾ ಕಡೆ ಇರುವ ಪರಬ್ರಹ್ಮಸ್ವರೂಪಿಯಾಗಿ ಅಲ್ಲಮಪ್ರಭುವು ನಟಿಸುವನು (೨೨-೩೬). ಈ ನಿರ್ದೇಹಿ ಹಾಗೂ ಮಹಿಮಾವಲಂಬನ ಲೀಲಾವಿಲಾಸಗಳನ್ನು ಕಂಡ ಜನ ಆಶ್ಚರ್ಯಪರವಶರಾಗಿರಲು "ನೆಲನ ಮಱೆಗೊಂಡಿಹ ನಿಧಾನದ ಹೊಲಬನಂಜನವಿಡಿದ ಕಣ್ಣಿನ ಬಲುಹನುಳ್ಳವ ಕಾಲವೊಲು" ದಂಡನಾಯಕನು ವಿಕೃತವೇಷದಲ್ಲಿ ಸುಳಿದ ಸಾಕ್ಷಾದಪ್ರಮೇಯನ ನಿಲವನ್ನು ತಿಳಿದು ಅವನ ಪಾದಗಳಿಗೆ ನಮಸ್ಕರಿಸುವನು.

ಅಲ್ಲಮಪ್ರಭುವು ಕಥಾನಾಯಕನಾದರೂ ಬಸವಣ್ಣನ ಪಾತ್ರವೂ ಮಹತ್ವಪೂರ್ಣ ಸ್ಥಾನ-ಮಾನಗಳನ್ನು ಪಡೆದಿದೆ. 'ಬಸವನಂಗಣ ವಾರಣಾಸಿ ವಿಮುಖ್ಯ ತೀರ್ಥಕ್ಷೇತ್ರ ದಿಂದಧಿಕ' (೧೫-೨೨); ಬಸವರಾಜನ ಭಕ್ತಿಯನು ಬಣ್ಣಿಸುವೊಡಾತನ ಭಕ್ತಿಯನು ಲೆಕ್ಕಿಸುವೊಡರಿದಗಣಿತ (೧೫-೨೪); 'ನಿಗಮಾಗಮಂಗಳ ಸತ್ವಸಾರವನಾಗು ಮಾಡಲು ಬಂದ ಕಾರಣಪುರುಷ' (೧೬-೫); 'ಸಾರಭಕ್ತಿಯ ಶರಧಿ' (೨೩-೧೦) 'ಆದಿಪುರುಷನು ಬಸವರಾಜ' (೧೮-೧೨) ; 'ಪರಮಪೂರ್ವಾಚಾರ್ಯ ಬಸವೇಶ್ವರನು' (೧೮-೧೦); 'ಬಸವ ಮಾಡಿದೊಡಾಯ್ತು ಗುರುನೆಲೆ ಬಸವ ಮಾಡಿದೊಡಾಯ್ತು ಲಿಂಗವು' (೨೪-೨೯); 'ಬಸವನೇ ಚೇತನಕಳಾತ್ಮಕ' (೨೪-೩೦)-ಇವೇ ಮೊದಲಾದ ಗೌರವ ಸಂಬೋಧನೆಗಳನ್ನು ಗಮನಿಸಿದಾಗ ಬಸವಣ್ಣನ ಬಗೆಗೆ ಕವಿಗಿದ್ದ ಪರಮಭಕ್ತಿಯ ಪರಿಚಯ ನಮಗಾಗುತ್ತದೆ. ಬಸವಣ್ಣನಂತಹ ಶ್ರೇಷ್ಠವ್ಯಕ್ತಿಯಲ್ಲೂ ಇದ್ದ ಕೊರತೆಯನ್ನು ನಿವಾರಿಸಲು ಬಂದ ವಾತ್ಸಲ್ಯಮೂರ್ತಿ ಅಲ್ಲಮ, "ಸಿದ್ಧರಾಮ ಬಸವೇಶ್ವರ ಮೊದಲಾದ ಶರಣರು ತಂತಮ್ಮ ನೆಲೆಯಲ್ಲಿ ಎತ್ತರ ಮುಟ್ಟಿದವರಾದರೂ ಅಲ್ಲಮನಂತಹ ಆಕಾಶದೆತ್ತರದ ಮುಂದೆ ಅವರು ನಮ್ರರಾಗುತ್ತಾರೆ"[೧]. ಪ್ರಭುವಿನ ಅವತಾರ ಭಕ್ತೋದ್ಧಾರ, ಧರ್ಮೋದ್ಧಾರಕ್ಕಾಗಿ. ಪ್ರಭುವಿನ

೧. ಡಾ. ರಂ. ಶ್ರೀ. ಮುಗಳಿ : ಕನ್ನಡ ಸಾಹಿತ್ಯ ಚರಿತ್ರೆ, ಪು. ೩೫೫

ಕಥೆಯ ಜೊತೆಗೆ ಕೃತಿಯಲ್ಲಿ ಹಾಸುಹೊಕ್ಕಾಗಿ ಬಂದಿರುವ ಇತರ ಶರಣ ಶರಣೆಯರ ಕಥೆಗಳು ಅಲ್ಲಮನ ವ್ಯಕ್ತಿತ್ವನಿರೂಪಣೆಗೆ ತೊಡಕಾಗಿ ಬರದೆ ಅವು ಆತನ ಪಾತ್ರಪೋಷಣೆಗೆ, ಆತನ ಅಪ್ರಮೇಯತ್ವದ ನಿರೂಪಣೆಗೆ ಪೋಷಕಾಂಗಗಳಾಗಿ ಬರುತ್ತವೆ.

ಗಿರಿಜೆ-ಶಿವ ಇವರ ಸಂವಾದ, ಕಥೆಯ ಕೇಂದ್ರಬಿಂದುವಾಗಿದೆ. ಸಾತ್ವಿಕ ತಾಮಸ ಶಕ್ತಿಗಳ ಘರ್ಷಣೆಯಲ್ಲಿ ಜಯ ಸಾತ್ವಿಕಕ್ಕೆ. ಪ್ರಭುಲಿಂಗಲೀಲೆಯಲ್ಲೂ ಇದನ್ನೇ ನಾವು ನೋಡುತ್ತೇವೆ. ಶಿವನ ಸಾತ್ವಿಕಾಂಶದ ಇದಿರು ಶಿವೆಯ ತಾಮಸಿಕಾಂಶ ಸೋತು ಶರಣಾಗುತ್ತದೆ. ಮರ್ತ್ಯದಲ್ಲಿ ಮಾನವರು ಸ್ವಾನುಭಾವ ಸುಖಸ್ವರೂಪನಿಧಾನವನ್ನು ಸಾಧಿಸಲು ಬಸವಣ್ಣ ಕಾರಣನಾಗುವನು. ಅವನು ಭಕ್ತಿಯನ್ನು ಭುವಿಯಲ್ಲಿ ಮೆರೆದಿದ್ದರಿಂದಲೇ ಶಿವನ ಸಾತ್ವಿಕಾಂಶವಾದ ಪ್ರಭು ಅವನಿಗೆ ಒಲಿದದ್ದು. ಬಸವಣ್ಣನ ಭಕ್ತಿಯ ಹಿರಿಮೆಯನ್ನು ಅರಿಯಲೆಂದೇ ಶಿವನಿಂದ ಆಜ್ಞಪ್ತರಾಗಿ ಗಣಗಳು ಭುವಿಯಲ್ಲಿ ಉದಯಿಸಿ ಬಂದರು. ಚಾಮರಸನ ಪ್ರಕಾರ ಅಕ್ಕನಾಗಾಯಿ ಬಸವನ ಒಕ್ಕುಮಿಕ್ಕ ಮಹಾಪ್ರಸಾದವನ್ನು ಉಣಲು ಕ್ಷಣದಲ್ಲೇ ಯೋಗ್ಯವಾದ ಶಿವತತ್ವಸ್ವರೂಪವೆ ಬೆಳೆದು ಹುಟ್ಟಲು ಚನ್ನಬಸವಣ್ಣನ ಜನನವಾಯಿತು. ಮಹದೇವಿಯಕ್ಕಳು ಚಾಮರಸ ಹೇಳುವಂತೆ ಮಾಯೆಯಾಗಿ ಶಿವನ ಸಾತ್ವಿಕಾಂಶವನ್ನು ಗೆಲ್ಲದ ಶಿವೆಯು ಸಾತ್ವಿಕಾಂಶ. ಮಹದೇವಿಯಕ್ಕ-ಕೌಶಿಕರ ಪ್ರಸಂಗ ಹರಿಹರನನ್ನು ಸ್ವಲ್ಪಮಟ್ಟಿಗೆ ಅನುಸರಿಸಿದಂತಿದ್ದರೂ ಭಿನ್ನ. ಅವರ ಮದುವೆಯ ಪ್ರಸ್ತಾಪಮಾಡದೆ ಅವಳ ವೈರಾಗ್ಯವನ್ನು ಅತಿಶಯಮಾಡಿ ಹೇಳುವ ಪ್ರಯತ್ನ ಚಾಮರಸ ಮಾಡಿದಂತಿದೆ. ಗೊಗ್ಗಯ್ಯ, ಮುಕ್ತಾಯಿ, ಗೋರಕ್ಷ, ಕಾಡಿನ ಬೇಡರು, ತಪಸಿಗಳು-ಇವರನ್ನು ಸಂಧಿಸುವ ಅವರವರಿಗುಚಿತ ರೀತಿಯಲ್ಲಿ ಮನಂಬುಗುವಂತೆ ಬೋಧಿಸುವ ಪ್ರಭುವಿನ ಪಾತ್ರ ಚಾಮರಸನ ಪ್ರಭುಲಿಂಗಲೀಲೆಯಲ್ಲಿ ಅನುಪಮವಾಗಿ ಬಂದಿದೆ. ವೀರಶೈವ ಪುರಾಣಗಳಲ್ಲಿ ಕಾಣಬರುವ ಉಪಕಥೆಗಳಾಗಲೀ, ಷಟ್ಸ್ಥಲ, ಅಷ್ಟಾವರಣ, ಪಂಚಾಚಾರಗಳ ಸುದೀರ್ಘ ವಿವರಣೆಯಾಗಲೀ ಪ್ರಭುಲಿಂಗಲೀಲೆಯಲ್ಲಿ ಕಂಡುಬರುವುದಿಲ್ಲ. ಇಷ್ಟಲಿಂಗ, ಪ್ರಾಣಲಿಂಗಗಳ ಸ್ವರೂಪ ವಿವರಣೆ, ಶೂನ್ಯ ಸಿಂಹಾಸನದ ಕಾಲ್ಪನಿಕ ಚಿತ್ರ ಪ್ರಭುಲಿಂಗಲೀಲೆಯಲ್ಲಿ ಬಂದಿದ್ದರೂ ಅವು ತಮ್ಮ ಅತಿತನದಿಂದ ಬೇಸರತರಿಸುವುದಿಲ್ಲ. ಸಾಧಕಾಂಗದ ಗತಿಯಲ್ಲಿ ಬರುವ ತಾತ್ವಿಕ ವಿವರಣೆಯನ್ನು ಇಲ್ಲವೇ ಗೋರಕ್ಷನ ಗತಿಯಲ್ಲಿ ಬರುವ ಬೋಧೆಯನ್ನು ಗಮನಿಸಿದಾಗ ಅಲ್ಲೆಲ್ಲಾ ಕವಿ ಸರಳ ನಿರೂಪಣಾಮಾರ್ಗವನ್ನನುಸರಿಸಿರುವುದು ಕಂಡುಬರುತ್ತದೆ. ಆಧ್ಯಾತ್ಮಕ್ಕೆ ಸಂಬಂಧಿಸಿದಂತೆ ಹೇಳುವಾಗ ಕವಿ ಸರಳ ಸುಲಭ ಶೈಲಿಯನ್ನು ಅನುಸರಿಸಿರುವುದು ಅವನ ವೈಶಿಷ್ಟ್ಯವೆನ್ನಬಹುದಾಗಿದೆ. ಚಾಮರಸ ಎಲ್ಲೂ ತನ್ನ ಪಾಂಡಿತ್ಯವನ್ನು ಪ್ರದರ್ಶಿಸಬೇಕು ಎನ್ನುವ ಚಾಪಲ್ಯಕ್ಕೆ ಒಳಗಾಗಿಲ್ಲ. ಶ್ಲೇಷೆ, ವಿರೋಧಾಭಾಸ ಮೊದಲಾದ ಅಲಂಕಾರಗಳನ್ನು ಬಳಸದೆ ಶಬ್ದಾಲಂಕಾರಕ್ಕೆ ಮನ ತೆರೆದ ಕವಿ ಕಾವ್ಯಕ್ಕೆ ಮೆರುಗುನೀಡುವ ಉಪಮೆ ರೂಪಕಗಳನ್ನು ಅರ್ಥವತ್ತಾಗಿ ಬಳಸಿ ಅನುಪಮವಾದ ತನ್ನ ಒತ್ತುಮುದ್ರೆಯನ್ನು ಒತ್ತಿರುವನು.

ಚಾಮರಸ ಜನಪ್ರಿಯ ಕವಿ. ಆತನ ಕೃತಿ ತೆಲುಗು, ತಮಿಳು, ಮರಾಠಿ, ಸಂಸ್ಕೃತ ಭಾಷೆಗಳಿಗೆ ಪರಿವರ್ತಿತವಾಗಿದೆ. ತೆಲುಗು ಭಾಷೆಯಲ್ಲಿ ಪಿಡುಪರ್ತಿ ಸೋಮನಾಥ ಹಾಗೂ ಬಸವಕವಿ ಕ್ರಮವಾಗಿ ದ್ವಿಪದಿ, ಚಂಪೂ ರೂಪಗಳಲ್ಲಿ ಭಾಷಾಂತರ ಮಾಡಿರುವರು. ತಮಿಳುಭಾಷೆಯಲ್ಲಿ ತಿರುವಣ್ಣಾಮಲೆಯ ಶಿವಪ್ರಕಾಶಸ್ವಾಮಿಗಳು ಅನುವಾದಿಸಿರುವರು. ಮರಾಠಿಯಲ್ಲಿ ಬ್ರಹ್ಮದಾಸನೆಂಬ ಕವಿ 'ಲೀಲಾವಿಶ್ವಂಬರ' ಎಂಬ ಹೆಸರಿನಲ್ಲಿ ಭಾಷಾಂತರಿಸಿರುವನು. ಸಂಸ್ಕೃತದಲ್ಲಿ ತೆಲುಗುಕವಿ ಪಿಡುಪರ್ತಿ ಸೋಮನಾಥನೇ ಕೃತಿರಚನೆ ಮಾಡಿರಬಹುದೆಂಬ ಅಭಿಪ್ರಾಯವಿದೆ.

ಎಂ. ಆರ್. ಶ್ರೀ. ಯವರು ಹೇಳುವಂತೆ "ಮಹಾತ್ಮರ ಜೀವನ ಚರಿತ್ರೆಯನ್ನು ಕಾವ್ಯರೂಪದಲ್ಲಿ ಹೇಗೆ ಬರೆಯಬೇಕೆಂಬುದಕ್ಕೆ ಪ್ರಭುಲಿಂಗಲೀಲೆ ಉತ್ತಮ ನಿದರ್ಶನವಾಗಿದೆ."[೧]

**ಎಸ್. ವಿದ್ಯಾಶಂಕರ**

೧. ಪ್ರಭುಲಿಂಗಲೀಲೆಯ ಸಂಗ್ರಹ, ಪು. ೪೫

## ೧. ಮಂಗಳಾಚರಣ

### ಗತಿ ೧

ಸೂಚನೆ : ಶ್ರೀಮದಮೃತಾಂಶು ಪ್ರಮೌಲಿ
ಪ್ರೇಮಿಗಳಿಗಾನಂದ ನಿತ್ಯವ
ನೇಮಿಸಿದನೆಮ್ಮಲ್ಲಮಪ್ರಭು ಗುರು ಗುಹೇಶ್ವರನು

ಶ್ರೀಮದಮಲಜ್ಞಾನಭಕ್ತಿ
ಪ್ರೇಮ ವೇದಪುರಾಣಶಾಸ್ತ್ರ
ಸ್ತೋಮನುತನತಚಾರುಚರಣಾಂಭೋಜ ಘನಮಹಿಮ
ನಾಮ-ರೂಪ-ಕ್ರಿಯಾಕಳಾಪವಿ
ರಾಮನನುಪಮದಿವ್ಯತೇಜೋ
ವ್ಯೋಮಮೂರುತಿ ಗುರು ಗುಹೇಶ್ವರಲಿಂಗ ಶರಣಾರ್ಥಿ ೧

ಕಾಯದೊಳು ಗುರುಲಿಂಗಜಂಗಮ
ದಾಯತವನರಿಯಲ್ಕೆ ಸುಲಭೋ
ಪಾಯದಿಂದಿದಿರಿಟ್ಟು ಬಾಹ್ಯಸ್ಥಲಕೆ ಕುರುಹಾಗಿ
ದಾಯದೋರಿ ಸಮಸ್ತಭಕ್ತ ನಿ
ಕಾಯವನು ಪಾವನವ ಮಾಡಿದ
ರಾಯ ಪೂರ್ವಾಚಾರ್ಯ ಸಂಗನ ಬಸವ ಶರಣಾರ್ಥಿ ೨

ಸೂ: ಶೋಭಾಯುಕ್ತವಾದ ಅಮೃತಕಿರಣಗಳನ್ನುಳ್ಳ ಚಂದ್ರನನ್ನು ತಲೆಯಲ್ಲಿ ಧರಿಸಿರುವ ಶಿವನ ಪ್ರೇಮಿಗಳಿಗೆ (ಭಕ್ತರುಗಳಿಗೆ) ಆನಂದವನ್ನೂ ಹುಟ್ಟು ಸಾವುಗಳಿಲ್ಲದ ಪರಮಪದವಿಯನ್ನೂ ಗುಹೇಶ್ವರಾಂಕಿತ ವಚನಮುದ್ರಿಕೆಯುಳ್ಳ ನಿಷ್ಕಳಲಿಂಗಸ್ವರೂಪನಾದ ಅಲ್ಲಮಪ್ರಭುವು ಅನುಗ್ರಹಿಸಿದನು. ೧. ಸಂಪದ್ಯುಕ್ತವಾದ, ಪರಿಶುದ್ಧವಾದ ಜ್ಞಾನ, ಭಕ್ತಿ ಪ್ರೇಮನೂ; ನಾಲ್ಕುವೇದ, ಅಷ್ಟಾದಶಪುರಾಣಗಳು ಹಾಗೂ ಆಗಮಾದಿ ಶಾಸ್ತ್ರ ಸಮೂಹಗಳಿಂದ ಕೀರ್ತಿಸಲ್ಪಟ್ಟವನೂ; ನಮಸ್ಕರಿಸಲ್ಪಟ್ಟ ಮನೋಹರವಾದ ಪಾದಕಮಲಗಳನ್ನು ಹೊಂದಿರುವವನೂ ಘನಮಹಿಮನೂ, ನಾಮ ರೂಪು ಕ್ರಿಯಾದಿಗಳು ಇಲ್ಲದೆ ಅವ್ಯಕ್ತನಾಗಿ ಶೋಭಿಸುವವನೂ; ಎಣೆಯಿಲ್ಲದ ಕಾಂತಿಯಿಂದ ಕೂಡಿದವನೂ; ಆಕಾಶದೇಹಿಯೂ ಆದ ಅಲ್ಲಮಪ್ರಭುವಿಗೆ ಶರಣಾರ್ಥಿ ೨. ದೇಹದಲ್ಲಿ ಗುರುಲಿಂಗ ಜಂಗಮದ ಸರಿಯಾದ ಕ್ರಮವನ್ನು ತಿಳಿಯಲು ಸುಲಭೋಪಾಯವಾದ ಇಷ್ಟಲಿಂಗವನ್ನು ಬಾಹ್ಯಸ್ಥಲಕ್ಕೆ ಚಿಹ್ನೆಯಾಗಿ ತೋರಿ ಆ ಮೂರನ್ನೂ ತಿಳಿಯುವ ಉಪಾಯವನ್ನು ತಿಳಿಸಿ (ತನು-ಮನ-ಧನಗಳರ್ಪಿತದಿಂದ ಒಲಿಸಿಕೊಳ್ಳುವ ಉಪಾಯವನ್ನು ತೋರಿ) ಎಲ್ಲ ಭಕ್ತರನ್ನು ಪುನೀತರನ್ನಾಗಿ ಮಾಡಿದ ಪೂರ್ವಾಚಾರ್ಯ ಬಸವಣ್ಣನಿಗೆ ಶರಣಾರ್ಥಿ.

ವೀರಶೈವಾಚಾರಮಾರ್ಗವಿ
ಚಾರದಭ್ಯಂತರದೊಳೀ ಪರಿ
ಯೋರಣಿಸಿ ಹರಕರ್ಮಭಕ್ತಿಜ್ಞಾನವಿಹುದೆಂದು
ಧಾರುಣಿಯೊಳಜೀವಂತೆ ಕರುಣಾ
ಕಾರನಾಗಿ ಷಡುಸ್ಥಳವನು
ದ್ಧಾರಿಸಿದ ಗುರು ಚೆನ್ನಸಂಗನ ಬಸವ ಶರಣಾರ್ಥಿ ೩

ಕಂತುವನೆ ಕಂಗೆಡಿಸಿಯೊಳಪೊ
ಕ್ಕಂತರಂಗವಿಚಾರವೆಲ್ಲವ
ಸಂತೆಯಂಗಡಿಯಂತೆ ಸೊನ್ನಲಪುರದೊಳೊಡ್ಡಯಿಸಿ
ಚಿಂತಿತಾರ್ಥವನರ್ಥಿಗಿತ್ತು ನಿ
ರಂತರಖಿಳರಿಗಜೀವನೀವ ಮ
ಹಂತನೆನಿಸಿದ ಸಿದ್ಧರಾಮಯ್ಯಂಗೆ ಶರಣಾರ್ಥಿ ೪

ಗೋಮುಖವ್ಯಾಘ್ರಂಗಳಂದದ
ಕಾಮ ಮೊದಲಾದಖಿಳವಿಷಯ
ಸ್ತೋಮವನು ಮುಚಿದಿಕ್ಕಿ ಮುಂಬರಿದಂತರಂಗದಲಿ
ಆ ಮಹಾಶಿವಲಿಂಗಸಂಗ
ಪ್ರೇಮಿಯಾಗಿ ಶಿವೈಕ್ಯಪದವನು
ನೇಮಿಸಿದ ಮಹದೇವಿಯಕ್ಕಗೆ ಶರಣು ಶರಣಾರ್ಥಿ ೫

೩. ವೀರಶೈವಮತದ ಆಚಾರಕ್ರಮ ಹಾಗೂ ಒಳಹೊರಗಿನ ವಿಚಾರವನ್ನು ಕ್ರಮಗೊಳಿಸಿ, ಶಿವಸಂಬಂಧವಾದ ಕರ್ಮ-ಭಕ್ತಿ-ಜ್ಞಾನಗಳು ಈ ರೀತಿ ಇವೆಯೆಂದು ಲೋಕವೆಲ್ಲ ತಿಳಿಯುವಂತೆ ಬೋಧಿಸಿ ಕರುಣೆಯೇ ರೂಪುತಾಳಿದಂತೆ ಇದ್ದು ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಈ ಷಟ್ಸ್ಥಲವನ್ನು ಬೋಧಿಸಿದ ಗುರು ಚನ್ನಬಸವಣ್ಣನಿಗೆ ಶರಣಾರ್ಥಿ. ೪. ಮನ್ಮಥನನ್ನು ಗೆದ್ದು ಅಂತರಂಗವನ್ನು ಹೊಕ್ಕ ವಿಚಾರಗಳನ್ನೆಲ್ಲಾ ಸಂತೆಯಲ್ಲಿನ ಅಂಗಡಿಯಂತೆ ಸೊನ್ನಲಾಪುರದಲ್ಲಿ ಹರಡಿ, ಬೇಡಿದವರ ಬಯಕೆಗಳನ್ನು ಈಡೇರಿಸಿ ಸರ್ವರಿಗೂ ಬಿಡುವಿಲ್ಲದೆ ಬೋಧೆಮಾಡುವ 'ಜ್ಞಾನಿ' ಎಂದೆನಿಸಿದ ಸಿದ್ಧರಾಮಯ್ಯನಿಗೆ ಶರಣಾರ್ಥಿ. ೫. ಹೊರಗೆ ಹಸುವಿನಂತೆ ಸಾಧುವಾಗಿದ್ದು ಒಳಗೆ ಹೆಬ್ಬುಲಿಯಂತೆ ಭಯಂಕರವಾಗಿರುವ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ-ಈ ಅರಿಷಡ್ವರ್ಗಗಳನ್ನು ಧ್ವಂಸಮಾಡಿ ಮುಂದುವರಿದು ಅಂತರಂಗದಲ್ಲಿ ಆ ಮಹಾಶಿವಲಿಂಗ (ಚೆನ್ನಮಲ್ಲಿಕಾರ್ಜುನ)ವನ್ನು ಕೂಡುವುದರಲ್ಲಿ ಆಸೆಯುಳ್ಳವಳಾಗಿ ಶಿವನಲ್ಲಿ ಐಕ್ಯಪದವಿಯನ್ನು ಬೋಧಿಸಿದ ಮಹಾದೇವಿಯಕ್ಕನಿಗೆ ಶರಣು ಶರಣಾರ್ಥಿ.

ಶರಣುವೊಕ್ಕ ಸಮಸ್ತರಂತಃ
ಕರಣದಲ್ಲಿಯನಾದಿ ಮಾಯಾಂ
ಬರದ ಮೈಲಿಗೆದೊಳೆದು ಭಕ್ತಿರಸಪ್ರವಾಹದಲಿ
ಶರಣಪದವಿಗೆ ಸಲಿಸಿ ಪರಮೇ
ಶ್ವರನ ತೋಱುವ ಸುಲಭ ಕರುಣಾ
ಶರಧಿ ಮಡಿವಳಮಾಚಿದೇವಯ್ಯಂಗೆ ಶರಣಾರ್ಥಿ ೬

ಮರುಳಶಂಕರದೇವರಿಗೆ ಕಿ
ನ್ನರಿಯ ಬೊಮ್ಮಣ್ಣಂಗೆ ಯೇಲೇ
ಶ್ವರದ ಕೇತಯ್ಯಂಗೆ ಗಾಣದ ಕನ್ನಪಯ್ಯಂಗೆ
ಪರಿಪರಿಯ ಶಿವಲಿಂಗಭಕ್ತಿಯ
ಪರುಠವಿಸಿ ಕಾಲನ ನಿವಾರಿಸಿ
ಹರನನೊಚ್ಚತಗೊಂಡ ಶಿವಶರಣರಿಗೆ ಶರಣಾರ್ಥಿ ೭

ಅಲ್ಲಮಪ್ರಭುಸಂಪ್ರದಾಯದ
ಸಲ್ಲಲಿತ ಸನ್ಮಾರ್ಗವನು ನಾ
ನೆಲ್ಲರಱಿವಂದದಲಿ ಪೇಳುವೆನುಚಿತವಚನದಲಿ
ಸೊಲ್ಲಿನೊಳಗಣ ಸೊಂಪನಿಂಪನು
ಬಲ್ಲವರು ಭಾವುಕರು ಭಕ್ತಿಯ
ಬಲ್ಲಿದರು ಭಾವಿಸುವುದೀ ಪ್ರಭುಲಿಂಗಲೀಲೆಯಲಿ ೮

ದೇಗುಲವೆ ಮಾತಾಡುವಂದದೊ
ಳಾಗಿರದೆ ಒಳಗಿರ್ದು ನುಡಿದೊಡೆ
ಲೋಗರಿಗೆ ಪ್ರತಿಶಬ್ದದಿಂದಾ ಪರಿಯಱೆನ್ನೊಳಗೆ
ಲಾಗಿನಿಂದಲಿ ಗುರು ಗುಹೇಶ್ವರ
ನಾಗಳೆನ್ನನು ನುಡಿಸಿದೊಡೆ ನುಡಿ
ದಾಗುಮಾಡಿಯೆ ಪೇಳ್ವೆನೀ ಪ್ರಭುಲಿಂಗಲೀಲೆಯನು ೯

೬. ಶರಣುಬಂದೆಲ್ಲರ ಮನದಲ್ಲಿನ ಅನಾದಿಮಾಯೆಯೆಂಬ ಬಟ್ಟೆಯ ಮೈಲಿಗೆಯನ್ನು ಭಕ್ತಿರಸಪ್ರವಾಹದಲ್ಲಿ ತೊಳೆದು, ಅವರನ್ನು ಶುದ್ಧಗೊಳಿಸಿ, ಶರಣಪದವಿಗೆ ಸಲ್ಲಿಸಿ ಶಿವನನ್ನು ಕಾಣಿಸುವ ಮತ್ತು ಭಕ್ತರಿಗೆ ಸುಲಭನೂ ಕರುಣಾಸಮುದ್ರನೂ ಆದ ಮಡಿವಳ ಮಾಚಿದೇವಯ್ಯನಿಗೆ ಶರಣಾರ್ಥಿ. ೭. ಮರುಳಶಂಕರದೇವ, ಕಿನ್ನರಿಯ ಬೊಮ್ಮಣ್ಣ, ಏಲೇಶ್ವರದ ಕೇತಯ್ಯ, ಗಾಣದ ಕನ್ನಪಯ್ಯ-ಈ ಮಹಾಶರಣರುಗಳಿಗೆ ಹಾಗೂ ನಾನಾ ಬಗೆಯಲ್ಲಿ ಶಿವಭಕ್ತಿಯನ್ನು ಪ್ರಸಾರಮಾಡಿ ಯಮನ ಆಕ್ರಮಣಭಯವನ್ನು ದೂರಮಾಡಿ ಶಿವನಲ್ಲಿ ಐಕ್ಯಹೊಂದಿದ ಶಿವಶರಣರಿಗೆ ಶರಣಾರ್ಥಿ. ೮. ವೈರಾಗ್ಯಮೂರ್ತಿಯಾದ ಅಲ್ಲಮಪ್ರಭುವಿನ ಸಂಪ್ರದಾಯದ ಮನೋಹರವಾದ ಸನ್ಮಾರ್ಗವನ್ನು ನಾನು ಎಲ್ಲರೂ ತಿಳಿಯುವಂತೆ ಯೋಗ್ಯವಾದ ಮಾತುಗಳಿಂದ ಹೇಳುವೆನು. ನನ್ನ ಮಾತಿನ ಒಳಗಿನ ಸೌಂದರ್ಯವನ್ನೂ ಮಾಧುರ್ಯವನ್ನೂ ತಿಳಿದಂಥವರು (ಜ್ಞಾನಿಗಳು), ಸಹೃದಯರು, ಭಕ್ತಿಯಲ್ಲಿ ಮಿಗಿಲಾದವರು ಈ ಪ್ರಭುಲಿಂಗಲೀಲೆಯನ್ನು ಗೌರವಿಸುವುದು. ೯. ಯಾರಾದರೂ ದೇವಸ್ಥಾನದ ಒಳಗಡೆ ಇದ್ದು ನೋಡಿದರೆ ಸಾಮಾನ್ಯರಿಗೆ ಆ ಪ್ರತಿಧ್ವನಿ

ವಿವರಿಸುವೊಡೀ ಲೀಲೆಯನು ಹೇ
ಳುವನು ದಿಟ ನಾನಲ್ಲ ಮಿಗೆ ಕೇ
ಳುವರು ಮಾನವರಲ್ಲವಿದು ಸಾಮಾನ್ಯತರದವಲ್ಲಾ
ಶಿವನ ನಟನಾಟಕದ ಮಹಿಮೆಯ
ಶಿವನೆ ಬಲ್ಲನದಂತುಕಾರಣ
ಶಿವನ ಭಕ್ತರು ತಿಳಿವುದೀ ಪ್ರಭುಲಿಂಗಲೀಲೆಯನು ೧೦

ಬಾಯ ಸುದಿಗಳ ಕೇಳಿ ಕಿವಿಯೊಳ
ಗಾಯೆನುತೆ ಪರಿಣಮಿಸಿ ಹೋಪ ವಿ
ಡಾಯವಲ್ಲಿದು ತಮ್ಮ ತನುಮನಧನವನೆಲ್ಲವನು
ಬೀಯಮಾಡಿಯೆ ಲಿಂಗದಲಿ ನಿಜ
ಕಾಯ ನಿಲುವೊಡೆ ನಿತ್ಯರಪ್ಪೊಡೆ
ದಾಯಿಗರು ಲಾಲಿಸುವುದೀ ಪ್ರಭುಲಿಂಗಲೀಲೆಯನು ೧೧

ಕಾಳಗದ ಕಥೆಯಲ್ಲ ವಿಷಯಗ
ಳೇಳಿಗೆಯ ವಿಧಿಯಲ್ಲ ಹೊಟ್ಟೆಯ
ಹೂಳಲಿಕೆ ಹಿಂಸೆಯನು ಮಾಡುವ ಹೊಲಬು ತಾನಲ್ಲ
ಕಾಳಗವು ಕರಣದಲಿ ಸುರತದ
ಕೀಲು ಕುಂಡಲಿಯಲ್ಲಿ ತೃಪ್ತಿಯ
ದಾಳಿ ಗಗನದೊಳೆಂದು ಪೇಳುವುದೀ ಸುಬೋಧೆಯಲಿ ೧೨

ದೇಗುಲವೇ ಮಾತನಾಡಿದಂತೆ ತೋರುವುದು. ಆದರೆ ನಿಜವಾಗಿ ಹಾಗಿರುವುದಿಲ್ಲ. ಅದರಂತೆ ಗುರು ಗುಹೇಶ್ವರನು ನನ್ನ ಹೃದಯದಲ್ಲಿದ್ದುಕೊಂಡು ಜಾಗ್ರತನಾಗಿ ನನ್ನ ಮೂಲಕ ಈ ಪ್ರಭುಲಿಂಗಲೀಲೆಯನ್ನು ನುಡಿಸಿರುವನಲ್ಲದೆ ನಾನೇ ಸ್ವತಃ ನುಡಿದವನಲ್ಲ. ೧೦. ವಿವರಿಸುವುದಾದರೆ ಈ ಪ್ರಭುಲಿಂಗಲೀಲೆಯನ್ನು ಹೇಳುವವನು ನಿಜವಾಗಿಯೂ ನಾನಲ್ಲ. ಇದನ್ನು ವಿಶೇಷ ಗಮನವಿಟ್ಟು ಕೇಳುವವರು ಮಾನವರಲ್ಲ. ಇದು ಸಾಮಾನ್ಯತರದ ಕೃತಿಯೂ ಅಲ್ಲ. ಶಿವನ ನಟನಾಟಕದ ಮಹಿಮೆಯನ್ನು ಶಿವನೇ ಬಲ್ಲನು. ಹಾಗೆಯೇ ಈ ಪ್ರಭುಲಿಂಗಲೀಲೆಯನ್ನು ಶಿವನ ಭಕ್ತರು ತಿಳಿಯುವುದು. ೧೧. ಇದು ವಾಚಾಳಿಗಳ ಸವಿಯಾದ ಮಾತುಗಳನ್ನು ಕೇಳಿ, ಕಿವಿ ಹೊಕ್ಕ ಆ ಮಾತುಗಳಿಗೆ ಆಹಾ ಎಂದು ಚಪ್ಪರಿಸಿ ಕೆಲವೇ ನಿಮಿಷಗಳಲ್ಲಿಯೇ ಮರೆತುಬಿಡುವ ಮಾತಿನ ಬೂಟಾಟಿಕೆಯಲ್ಲ. ತಮ್ಮ ತನು-ಮನ-ಧನಗಳನ್ನೆಲ್ಲ ಗುರುಲಿಂಗಜಂಗಮರಿಗೆ ವ್ಯಯಿಸಿ ಲಿಂಗದೇಹಿಗಳಾದರೆ, ಹುಟ್ಟು ಸಾವುಗಳನ್ನು ಹೊಂದದೆ ಪರಮಪದವಿಯನ್ನು ಹೊಂದಿದವರಾದರೆ ಅಂತಹ ಭಕ್ತರು ಈ ಪ್ರಭುಲಿಂಗಲೀಲೆಯನ್ನು ಕೇಳುವುದು. ೧೨. ಇದು ಯುದ್ಧದ ಕಥೆಯಲ್ಲ; ವಿಷಯವಾಸನೆಗಳ ಅಭಿವೃದ್ಧಿಯ ವಿಧಾನವಲ್ಲ; ಹೊಟ್ಟೆ ಹೊರೆಯಲಿಕ್ಕೆ ಹಿಂಸೆಯನ್ನು ಮಾಡುವ ಮಾರ್ಗವಿದಲ್ಲ (ಪ್ರಭುಲಿಂಗಲೀಲೆಯು ವೀರ, ಜಾರ, ಚೋರರ ಕಥೆಯಲ್ಲ). ಈ ದಿವ್ಯೋಪದೇಶದಲ್ಲಿ ಯುದ್ಧವು ಪಂಚೇಂದ್ರಿಯಗಳೊಡನೆ, ಕಾಮವು ಹೃದಯದಲ್ಲಿರುವ ಯೋಗಶಕ್ತಿಯ ಕೇಂದ್ರದೊಡನೆ (ಕುಂಡಲಿನಿಯೊಡನೆ), ತೃಪ್ತಿಯ ದಾಳಿ ಶೂನ್ಯದೊಡನೆ

ಸತ್ತವರ ಕಥೆಯಲ್ಲ ಜನನದ
ಕುತ್ತದಲಿ ಕುದಿಕುದಿದು ಕರ್ಮದ
ಕತ್ತಲೆಗೆ ಸಿಲುಕುವರ ಸೀಮೆಯು ಹೊಂಬು ತಾನಲ್ಲ
ಹೊತ್ತು ಹೋಗದೆ ಪುಂಡರಾಲಿಪ
ಮತ್ತಮತಿಗಳ ಗೋಷ್ಠಿಯಲ್ಲಿದು
ಸತ್ಯಶರಣರು ತಿಳಿವುದೀ ಪ್ರಭುಲಿಂಗಲೀಲೆಯನು ೧೩

ಕುರಿಗಳೋಪಾದಿಯಲಿ ಕಬ್ಬಿನ
ಹೊಱಗಣೆಲೆಯನೆ ಮೇದಕಟ ಮೆಲು
ಕಿಱಿವುತಲ್ಪಸುಖಕ್ಕೆ ಸೋಲದೆ ಕಬ್ಬಿನೊಳು ರಸವ
ನೆಱೆ ಸವಿವ ಗಜದಂತೆ ಭಕ್ತಿಯ
ತೆಱನ ತಿಳಿದಾಚರಿಸಬೇಕೆಂ
ದಱಿದವರು ಲಾಲಿಸುವುದೀ ಪ್ರಭುಲಿಂಗಲೀಲೆಯನು ೧೪

ಪರುಷದಂಗಕೆ ಸತಿ ಸುವರ್ಣಾ
ಭರಣ ಬೇಕೆಂದೇನು ವಿಧಿಯೇ
ಕರಕನಿಷ್ಠದ ಕಬ್ಬುನದ ತೊಡವಿಕ್ಕೆ ಹೊನ್ನಾಗೆ
ವಿರಚಿಸಿದೆ ನಾನಂತುಕಾರಣ
ಗುರು ಗುಹೇಶ್ವರಲಿಂಗಲೀಲೆಯ
ನೊರೆವೆನೆನ್ನಯ ತೊದಲುನುಡಿಯಲಿ ಸೇವ್ಯಮಪ್ಪಂತೆ ೧೫

ಗಗನವನು ಮುಟ್ಟುವೊಡೆ ನೆಟ್ಟನೆ
ನಿಗುರಿ ನಿಂದಿರಲೇನು ಕಾರಣ
ಸಗುಣ ನಿರ್ಗುಣಭರಿತ ಚಿನುಮಯ ಗುರು ಗುಹೇಶ್ವರನ
ಹೊಗಳಲಾತನನೆನ್ನ ಬಡನುಡಿ
ಮೊಗಸಿ ಮುಟ್ಟಿಹುವೆಂದು ಪೇಳುವ
ಬಗೆಯಲುದ್ಯೋಗಿಸಿದೆನೀ ಪ್ರಭುಲಿಂಗಲೀಲೆಯನು ೧೬

ಎಂದು ತಿಳಿಯುವುದು. ೧೩. ಇದು ಸತ್ತವರ ಕಥೆಯಲ್ಲ; ಹುಟ್ಟೆಂಬ ಬೇನೆಯಲ್ಲಿ ನೊಂದು ಬೆಂದು ಕರ್ಮದ ಕತ್ತಲೆಗೆ ಸಿಲುಕಿಕೊಳ್ಳುವವರ ಕ್ಷೇತ್ರವಲ್ಲ; ಹೊತ್ತು ಹೋಗದೆ ಪುಂಡರು ಕೇಳುವಂತಹ ಗರ್ವಿಗಳ ಸಭೆಯಲ್ಲ. ಈ ಪ್ರಭುಲಿಂಗಲೀಲೆಯನ್ನು ಸತ್ಯವಂತರಾದ ಶಿವಶರಣರು ತಿಳಿಯುವುದು. ೧೪. ಕಬ್ಬಿನ ಹೊರಗಿನ ಎಲೆಯನ್ನೇ ಮೇದು ಮೆಲುಕು ಹಾಕುವ ಕುರಿಗಳ ರೀತಿಯಲ್ಲಿ ಅಲ್ಪಸುಖಕ್ಕೆ ಸೋಲದೆ, ಕಬ್ಬಿನ ಒಳಗಿನ ಸಿಹಿಯಾದ ರಸವನ್ನು ವಿಶೇಷವಾಗಿ ಸವಿಯುವ ಆನೆಯಂತೆ ಭಕ್ತಿಯ ಕ್ರಮವನ್ನರಿತು ಆಚರಿಸಬೇಕು. ಹೀಗೆ ಅರಿತವರು ಈ ಪ್ರಭುಲಿಂಗಲೀಲೆಯನ್ನು ಕೇಳುವುದು. ೧೫. ಸ್ಪರ್ಶಮಣಿಯ ದೇಹಕ್ಕೆ ಚಿನ್ನದ ಆಭರಣಬೇಕೆಂದು ನಿಯಮವೆ? ತುಂಬಾ ಕನಿಷ್ಠವಾದ ಕಬ್ಬಿಣದ ಆಭರಣವನ್ನಿಡಲು ಅದು ಹೊನ್ನಾಗುವಂತೆ ಸಾಧಾರಣ ನುಡಿಗಳಿಂದ ನಾನಿದನ್ನು ವಿರಚಿಸಿದೆನು. ನನ್ನ ತೊದಲುನುಡಿಯಲ್ಲಿ ಸ್ವೀಕಾರವಾಗುವಂತೆ ಗುರುಗುಹೇಶ್ವರಲಿಂಗಲೀಲೆ (ಪರಬ್ರಹ್ಮನಾದ ಅಲ್ಲಮಪ್ರಭುವಿನ ಲೀಲೆ)ಯನ್ನು ಹೇಳುವೆನು. ೧೬. ಆಗಸವನ್ನು ಮುಟ್ಟಬೇಕಾದರೆ ನೆಟ್ಟಗೆ ನಿಗುರಿ ನಿಲ್ಲಲು ಕಾರಣವೇನು? ಸಗುಣ ನಿರ್ಗುಣಗಳಿಂದ

ಆವುದಾನೊಂದನುಪಮದ ಮಹಿ
ಮಾವಲಂಬದ ನಿರ್ವಿಕಾರದ
ಕೇವಲ ಬ್ರಹ್ಮಸ್ವರೂಪಿನ ಲಿಂಗತತ್ತ್ವದಲಿ
ತೀವಿ ರೂಪಾದನು ಸದಾಶಿವ
ದೇವನಾತಂಗಾದಳೊಬ್ಬಳು
ದೇವಿ ಪರಮಜ್ಞಾನಶಕ್ತಿಯೆನಿಪ್ಪಳಾತನಲಿ ೧೭

ಜ್ಞಾನಶಕ್ತಿ - ಸದಾಶಿವಂಗೆ ಸು
ಖಾನುಭವ ಶಿವನಾದನಾತಗ
ನೂನದಿಚ್ಛಾಶಕ್ತಿಯಾದಳು ಬಳಿಕಲವರಿಂದ
ತಾನೆಯಾದನು ರುದ್ರ ರುದ್ರಂ
ಗೇನು ಹೇಳುವೆನಾ ಕ್ರಿಯಾಶ
ಕ್ತ್ಯಾನುಗುಣಮತಿಯಾದಳೀ ಕ್ರಮದಿಂದಲಾದಿಯಲಿ ೧೮

ಬಗೆಯಲಾ ರುದ್ರ - ಕ್ರಿಯಾಶ
ಕ್ತಿಗಳಿಗಾದನು ವಿಷ್ಣು ವಿಷ್ಣುವಿ
ಗಗಲದಿಹ ಮಾಲಕ್ಷ್ಮಿಯಾದಳು ಲಕ್ಷ್ಮಿವಿಷ್ಣುವಿಗೆ
ನೆಗಳ್ದನಂತಾ ಬ್ರಹ್ಮನಾತಂ
ಗೊಗೆದು ತೋಱಿದಳಾ ಸರಸ್ವತಿ
ಮಿಗೆ ಸರಸ್ವತಿ - ಕಮಲಸಂಭವರಿರ್ದರೊಲವಿನಲಿ ೧೯

ಎನಿತು ತೋಱಿಕೆಯಾದ ತೋಱಿಕೆ
ಯನಿತನೆಮ್ಮಯ ಗುರು ಗುಹೇಶ್ವರ
ನೆನಹು ಮಾತ್ರವೆ ಮಾಡಿ ದಿಟವೆಂಬಂತೆ ತೋಱಿಸಿದ
ಇನಿತರೊಳಗೆಲ್ಲರಿಗೆ ಮಿಗಿಲೆಂ
ದೆನಿಸಿ ತನ್ನಯ ಲೀಲೆಯಿಂದಲಿ
ವಿನುತ ಪದವಿಯ ಕೊಟ್ಟು ನಿಲಿಸಿದನಾದಿರುದ್ರಂಗೆ ೨೦

ಕೂಡಿದ ಜ್ಞಾನಸ್ವರೂಪಿಯಾದ ಗುರುಗುಹೇಶ್ವರನನ್ನು ಹೊಗಳಲು ನನ್ನ ಬಡಮಾತುಗಳು ಪ್ರಯತ್ನಪೂರ್ವಕವಾಗಿ ತೊಡಗಿರುವುವು. ನನ್ನ ಬಡಮಾತುಗಳು ಆತನನ್ನು ತಲುಪುವುವು. ಈ ರೀತಿಯ ಭಾವನೆಯಿಂದ ಪ್ರಭುಲಿಂಗಲೀಲೆಯನ್ನು ಬರೆಯಲು ತೊಡಗಿದೆನು. ೧೭. ಅನುಪಮ ಮಹಿಮಾಶ್ರಯನಾದ, ನಿರ್ವಿಕಾರನಾದ, ಕೇವಲ ಬ್ರಹ್ಮಸ್ವರೂಪಿಯಾದ ಲಿಂಗತತ್ವದಿಂದ ಕೂಡಿದವನು ಸದಾಶಿವನು. ಆತನಿಗೆ ಪರಮಜ್ಞಾನಶಕ್ತಿಯೆಂಬ ದೇವಿ ಯಾದಳು. ೧೮. ಆದಿಯಲ್ಲಿ ಕ್ರಮವಾಗಿ ಜ್ಞಾನ ಶಕ್ತಿ ಸದಾಶಿವರಿಂದ ಸುಖಾನುಭವ ಮೂರ್ತಿಯಾದ ಶಿವನು ಹುಟ್ಟಿದನು. ಆ ಶಿವನಿಗೆ ಇಚ್ಛಾಶಕ್ತಿ ಸತಿಯಾದಳು. ಬಳಿಕ ಅವರಿಂದ ರುದ್ರನಾದನು. ಆ ರುದ್ರನಿಗೆ ಕ್ರಿಯಾಶಕ್ತಿ ಹೆಂಡತಿಯಾದಳು. ೧೯. ಯೋಚಿಸಿ ನೋಡುವುದಾದರೆ ಆ ರುದ್ರ-ಕ್ರಿಯಾಶಕ್ತಿಯರಿಂದ ವಿಷ್ಣುವಾದನು. ವಿಷ್ಣುವಿಗೆ ಸದಾ ಅಗಲದೆ ಇರುವ ಮಹಾಲಕ್ಷ್ಮಿಯಾಗಿ, ಅವರಿಂದ ಬ್ರಹ್ಮನು ಹುಟ್ಟಿದನು. ಆ ಬ್ರಹ್ಮನಿಗೆ ಸರಸ್ವತಿ ಸತಿಯಾದಳು. ಸರಸ್ವತಿ-ಬ್ರಹ್ಮರು ಹೆಚ್ಚಿನ ಪ್ರೇಮದಿಂದ ಕೂಡಿ ಇದ್ದರು. ೨೦. ನಮ್ಮ ಗುರು ಗುಹೇಶ್ವರನು ನೆನಹು ಮಾತ್ರದಿಂದ ತೋರಿಕೆಗೆ ಎಷ್ಟು ನಿಲುಕುವುದೋ

ಹುಟ್ಟಿಸುವ ಗುಣವೊಂದು ಬ್ರಹ್ಮಂಗೆ
ಹುಟ್ಟಿಸುವ ರಕ್ಷಿಸುವ ಗುಣವನು
ನೆಟ್ಟನಾ ವಿಷ್ಣುವಿಗೆ ರುದ್ರನೆನಿಪ್ಪ ಮಹಿಮಂಗೆ
ಹುಟ್ಟಿಸುವ ರಕ್ಷಿಸುವ ಭಕ್ಷಿಪ
ಕಟ್ಟಳೆಯನಳವಡಿಸಿ ಪಟ್ಟವ
ಕಟ್ಟಿ ಕರುಣಿಸಿ ಮೆಱೆದನೆಮ್ಮಯ ಗುರು ಗುಹೇಶ್ವರನು ೨೧

*ಅಂತು ಗತಿ ೧ ಕ್ಕಂ ಪದ ೨೧ ಕ್ಕಂ ಮಂಗಳಂ*

ಅಷ್ಟನ್ನೂ ಸತ್ಯವಾಗಿ ಮಾಡಿ ತೋರಿಸಿದನು. ಈ ತೆರದ ತನ್ನ ಲೀಲೆಗಳಿಂದ ತಾನು ಇತರರೆಲ್ಲರಿಗೆ ಮಿಗಿಲೆಂದೆನಿಸಿ ತೋರಿಸಿ, ಆದಿರುದ್ರನಿಗೆ ಹೊಗಳಲರ್ಹವಾದ ಪದವಿಯನ್ನು ಅನುಗ್ರಹಿಸಿದನು. ೨೧. ಆ ನಮ್ಮ ಗುರು ಗುಹೇಶ್ವರನೇ ಬ್ರಹ್ಮನಿಗೆ ಸೃಷ್ಟಿಸುವ ಅಧಿಕಾರವನ್ನೂ ವಿಷ್ಣುವಿಗೆ ಸೃಷ್ಟಿಸುವ-ರಕ್ಷಿಸುವ ಕೆಲಸವನ್ನೂ ರುದ್ರನಿಗೆ ಹುಟ್ಟಿಸುವ-ರಕ್ಷಿಸುವ-ಲಯಗೊಳಿಸುವ ಕೆಲಸವನ್ನೂ ಕೊಟ್ಟು ಅವರುಗಳನ್ನು ಕರುಣಿಸಿ ಮೆರೆದನು.

# ೨. ಪಾರ್ವತೀ ಪರಮೇಶ್ವರ ಸಂವಾದ

## ಗತಿ ೨

ಸೂಚನೆ : ಪರಮನಿತ್ಯಾನಂದ ಸುಖವಹ
ಪರಿಯ ಕೇಳಿದೊಡೀಶ ಹೇಳಲು
ಗಿರಿಜೆ ಮಾಯೆಯನಿಳೆಗೆ ಕಳುಹಿದಳಜಿವೊಡಲ್ಲಮನ

ಪರಿಭವಂಗಳ ನೀಗಿಯಂತಃ
ಕರಣವನು ಶುದ್ಧಯಿಸಿ ಮುಂದಣ
ಮರಣಬಾಧೆಯನೊದೆದು ನಿಶ್ಚಿಂತೆಯಲಿ ಸುಖದಿಂದೆ
ಪರಮ ಸುಜ್ಞಾನಾಮೃತವನಾ
ವರಿಸಿ ನಿತ್ಯವನಜೆವವರು ಸ
ತ್ಕರಿಸಿ ಕೇಳುವುದೀ ಮಹಾಪ್ರಭುಲಿಂಗಲೀಲೆಯನು ೧

ವರಸರಸ್ವತಿ ಕಮಲಸಂಭವ
ರಿರವಿನಿಂದೆ ಸಮಸ್ತ ಸಚರಾ
ಚರದ ನಾನಾ ಯೋನಿಜಸ್ತ್ರೀಪುರುಷರೆಂದೆಂಬ
ಪರಿಪರಿಯಲಿಹ ಜೀವಜಾಲದ
ಹೊರಳಿ ಹುಟ್ಟಿತು ಕಮಲಜಾಂಡದ
ಹೊರೆಹೊರೆಗಳೆಡೆಗಳಲಿ ಕಿಕ್ಕಿರಿಗಿಜಿದು ಸಂದಣಿಸಿ ೨

ಹರಿಸುರೇಂದ್ರಾದಿಗಳು ಮೊದಲಾ
ದರಿಗೆ ನಿರ್ಮಿತವಾಗಿ ಬಹುವಿ
ಸ್ತರದಲವರವರಿಗೆ ಚತುರ್ದಶಭುವನಭವನದಲಿ
ಸುರನರೋರಗಮುಖ್ಯ ಸಚರಾ
ಚರರಿಗಿರಲಳವಡಿಕೆ ಮಾಡಿದ
ಪರುಠವಣೆ ಚೆನ್ನಾಯ್ತು ಚತುರಾನನನ ಚಮರಿಸಲಿ ೩

ಸೂ: ಶಿವನನ್ನು ಗಿರಿಜೆ ಶ್ರೇಷ್ಠವಾದ ನಿತ್ಯಾನಂದಸುಖವು ಸಿಗುವ ರೀತಿ ಯಾವುದೆಂದು ಕೇಳಲು ಶಿವ ಅದನ್ನು ತಿಳಿಸಿದನು. ಅಲ್ಲಮನನ್ನು ಅರಿಯಲು ಗಿರಿಜೆ ಮಾಯೆಯನ್ನು ಭೂಲೋಕಕ್ಕೆ ಕಳುಹಿಸಿದಳು. ೧. ಬಾಳಿನಲ್ಲಿ ಬರಬಹುದಾದ ಸೋಲನ್ನು ನಿವಾರಿಸಿ, ಅಂತಃಕರಣವನ್ನು ಸ್ವಚ್ಛಗೊಳಿಸಿ, ಮುಂದೆ ಬರುವ ಮರಣಬಾಧೆಯನ್ನು ಗೆದ್ದು, ಚಿಂತೆಯಿಲ್ಲದೆ ಶ್ರೇಷ್ಠವಾದ ಸುಜ್ಞಾನವೆಂಬ ಅಮೃತವನ್ನು ತುಂಬಿಕೊಂಡು ಸುಖದಿಂದ ಶಾಶ್ವತಪದವಿಯನ್ನು ತಿಳಿಯಬಯಸುವವರು ಈ ಮಹಾಕೃತಿಯಾದ ಪ್ರಭುಲಿಂಗ ಲೀಲೆಯನ್ನು ಗೌರವಿಸಿ ಆಲಿಸುವುದು. ೨. ಶ್ರೇಷ್ಠರಾದ ಸರಸ್ವತಿ-ಬ್ರಹ್ಮರ ಅಸ್ತಿತ್ವದಿಂದ ಚಲಿಸುವ ಮತ್ತು ಚಲಿಸದ ಸರ್ವವಸ್ತುಗಳೂ, ಸ್ತ್ರೀ-ಪುರುಷರುಗಳೆಂಬ ನಾನಾಬಗೆಯ ಜೀವಿಗಳ ಸಮೂಹವೂ, ಎಲ್ಲೆಡೆಗಳಲ್ಲಿ ದಟ್ಟವಾಗಿ ತುಂಬುವಷ್ಟು ಜನ್ಮತಾಳಿದವು. ೩. ವಿಷ್ಣು, ದೇವೇಂದ್ರರೇ ಮೊದಲಾದವರಿಗೆ ಹದಿನಾಲ್ಕು ಲೋಕಗಳೆಂಬ ಮನೆಗಳಲ್ಲಿ ಅವರವರಿಗೆ ಇರಲು ವಿಸ್ತಾರವಾದ ಎಡೆಗಳು ನಿರ್ಮಾಣಗೊಂಡವು. ಮುಖ್ಯವಾಗಿ

ಆ ಸರೋಜಭವಾಂಡದೊಳಗತಿ
ಲೇಸೆನಿಸುವನುಪಮದ ಪರಶಿವ
ನಾ ಸದಾಶಿವನಾ ಶಿವನ ಮಹಿಮಾಭಿಧಾನಗಳ
ಭಾಸುರವೆ ಸಾಕಾರವಾದ ವಿ
ಳಾಸತೆಯಲಿಪ್ಪಾದಿರುದ್ರಗೆ
ವಾಸವಾದುದು ತನಗೆ ತಾನೆ ಮಹಾ ಮಹತ್ವದಲಿ ೪

ಮಿಸುಪ ಸತ್ವಗುಣಸ್ವಭಾವ
ಪ್ರಸರವೇ ರಜತಾದ್ರಿಯೆಂಬೀ
ಹೆಸರ ಪೆತ್ತು ನವೀನ ವಿಮಲಾಕಾರವೃತ್ತಿಯಲಿ
ದೆಸೆದೆಸೆಗೆ ದೇದೀಪ್ಯಮಾನದ
ಲೆಸೆದುದಂತಿಂತೆಂದು ಮಿಗೆ ಬ
ಣ್ಣಿಸಲು ಬಲ್ಲವನಾವನೈ ಕೈಲಾಸಪರ್ವತವ ೫

ನಿಗಮನಿಕರದ ಸುತ್ತುವಳಯದ
ಬಿಗಿದ ಕೋಂಟೆಯ ಶಾಸ್ತ್ರಸಂಚಯ
ದಗಳಿನಾಗಮಸಮುದಯಂಗಳ ದಾರವಟ್ಟಗಳ
ಹಗಲಿರುಳ ಹಂಗಿಲ್ಲದತಿಮಹಿ
ಮೆಗಳಿಗಾಸ್ಪದಮಾಗಿ ಮಿಗೆ ಝಗ
ಝಗಿಸುತಿರ್ದುದು ರಮ್ಯವೆನೆ ರಚನೆಯಲಿ ರಜತಾದ್ರಿ ೬

ಸರ್ಪಗಳೇ ಮೊದಲಾದ ಚಲಿಸುವ ಜೀವಿಗಳಿಗೂ, ಪರ್ವತಾದಿ ಚಲಿಸದೇ ಇರುವ ವಸ್ತುಗಳಿಗೂ ಬ್ರಹ್ಮನು ಜಾಣತನದಿಂದ ಮಾಡಿದ ಯೋಗ್ಯ ವ್ಯವಸ್ಥೆಯು ಶೋಭಿಸಿತು. ೪. ಆ ಬ್ರಹ್ಮಾಂಡದೊಳಗೆ ಅತ್ಯುತ್ತಮನೆನಿಸುವ ಹೋಲಿಕೆಯಿಲ್ಲದ ಪರಶಿವನ, ಸದಾಶಿವ ಹಾಗೂ ಶಿವ-ಈ ಮಹಿಮಾಪೂರ್ಣವಾದ ಹೆಸರುಗಳ ತೇಜಸ್ಸೇ ರೂಪುತಾಳಿ, ವಿಳಾಸದಿಂದ ಕೂಡಿರುವ ಆದಿರುದ್ರನಿಗೆ ತನಗೆ ತಾನೇ ಮಹಾಮಹಿಮೆಯಿಂದ ಸೇರಿ ಕೊಂಡಿತು. ೫. ಪ್ರಕಾಶಿಸುವ ಸತ್ವಗುಣ ಸ್ವಭಾವಗಳ ಮೊತ್ತವೇ ರಜತಾದ್ರಿಯೆಂಬ ಹೆಸರು ಪಡೆದು, ನೂತನವಾದ ಪರಿಶುದ್ಧ ರೂಪಿನಿಂದ ಅತ್ಯಂತ ಪ್ರಕಾಶಭರಿತವಾಗಿ ದಿಕ್ಕು ದಿಕ್ಕುಗಳಲ್ಲಿ ಶೋಭಿಸಿತು. ಆ ಕೈಲಾಸ ಪರ್ವತವನ್ನು ಹಾಗೆ ಹೀಗೆ ಎಂದು ಚೆನ್ನಾಗಿ ವರ್ಣಿಸುವುದು ಯಾರಿಗೆ ಸಾಧ್ಯ. ೬. ಆ ರಜತಾದ್ರಿಯು ವೇದಸಮೂಹಗಳಿಂದ ಸುತ್ತುವರಿಯಲ್ಪಟ್ಟ ಬಲವಾದ ಕೋಟೆ, ಶಾಸ್ತ್ರ ಸಮೂಹಗಳೆಂಬ ಕಂದಕ, ಆಗಮಗಳೆಂಬ ಅಗಸೆಯ ಬಾಗಿಲುಗಳಿಂದ ಹಗಲಿರುಳುಗಳ ಹಂಗಿಗೆ ಒಳಗಾಗದೆ ಹೆಚ್ಚಿನ ಮಹಿಮೆಗಳಿಗೆ ಆಶ್ರಯಸ್ಥಾನವಾಗಿ ನಿರ್ಮಾಣಗುಣವಿಶೇಷದಿಂದ ಮನೋಹರವಾಗಿ ಹೊಳೆಯುತ್ತಿದ್ದಿತು.

ಶಕ್ತಿಸಂಚವನಱಿದ ಸದಮಲ
ಭಕ್ತಿಮಾರ್ಗದ ರಾಜಬೀದಿಯ
ಯುಕ್ತಿಗೊಪ್ಪುವ ಸೋಹಮೆಂಬೀ ಗುಡಿಯ ತೋರಣದ
ವ್ಯಕ್ತಮಲ್ಲದ ತತ್ವಮಸಿಯೆಂ
ಬುಕ್ತಿಯುಪ್ಪರಿಗೆಯಲಿ ನೆಱೆ ನಿ
ರ್ಮುಕ್ತಮಹಿಮೆಯ ಮನೆಗಳಲಿ ಮೆಱೆಯಿತ್ತು ಕೈಲಾಸ ೭

ನಿರುತ ನಿಜಸುಖ ದೇವತಾಮಂ
ದಿರದ ಚಿತ್ತಸ್ಥಿರದ ಬಾಗಿಲ
ಪಿರಿದು ಪರಮಾನಂದದೊಡ್ಡೋಲಗದ ಚಾವಡಿಯ
ನೆರೆದು ಶೋಭಿಸುವಷ್ಟಮಹದೈ
ಸಿರಿಯ ಮೊದಲಾಗಿರ್ದ ನಾನಾ
ಪರಿಯ ಸಂಪದ ಸಂದಣಿಸಿದುದು ಶಿವನ ಭವನದಲಿ ೮

ಹೊಳೆವ ಸಮ್ಯಗ್‌ಜ್ಞಾನಪೀಠ
ಸ್ಥಲದ ನಿತ್ಯಾನಂದ ನಿಜ ನಿ
ಶ್ಚಲ ನಿರಾಕುಳ ನಿರ್ವಿಕಾರ ನಿರಾಳ ನಿಶ್ಚಿಂತ
ಬಳಸಬಾರದ ಬಱೆಯ ಬೊಮ್ಮದ
ಹೊಳಹು ಸಾಕ್ಷಾತ್ಕರಿಸಿ ನೆಱೆ ನಿ
ರ್ಮಲತೆವೆತ್ತಾ ರುದ್ರನಿರುತಿರ್ಪನು ವಿನೋದದಲಿ ೯

ಮೂಲತತ್ವವೆ ಮೋಱೆ ವಾಯುವೆ
ತೋಳುವಾದಿಯನಾದಿಯೆಂಬುವೆ
ಕಾಲು ಪಾವಕ ದಿವಸಪತಿ - ಹಿಮಕರರೆ ಕಣ್ಣುಗಳು
ಕೀಲಿಸಿದ ಹೃದ್‌ಬೀಜಬಿಂದು ಚ
ಢಾಳಿಸಿದ ಶೀತಾಂಶುವಾಗಲು
ಮೇಳವಿಸಿ ತನುವೊಪ್ಪುತಿರ್ದುದು ಪಾರ್ವತೀಪತಿಯ ೧೦

೭. ಆ ಕೈಲಾಸವು ಶಕ್ತಿಯ ರಹಸ್ಯವನ್ನು ತಿಳಿದ ಪರಿಶುದ್ಧ ಭಕ್ತಿಮಾರ್ಗದ ರಾಜಬೀದಿಗಳಿಂದಲೂ, ವಿಚಾರ ಮಾಡಿದಾಗ ಹೊಳೆಯುವ 'ಸೋऽಹಂ-ಅವನೇ ನಾನು' ಎಂಬ ಗುಡಿಯ ತೋರಣಗಳಿಂದಲೂ, ಗಹನವಾದ 'ತತ್ವಮಸಿ-ಆ ಪರಬ್ರಹ್ಮವಸ್ತುವೇ ನೀನೆಂಬ' ಮಹಡಿಯ ಮನೆಗಳಿಂದಲೂ, ಮುಕ್ತರಾದವರಿಗೆ ಆಸ್ಪದವಾದ ಮನೆಗಳಿಂದಲೂ ಶೋಭಿಸಿತ್ತು. ೮. ಆ ಶಿವಮಂದಿರವು ಶಾಶ್ವತವಾದ ಸುಖವೆಂಬ ದೇವಾಲಯದಿಂದಲೂ ಚಿತ್ತಸ್ಥೈರ್ಯವೆಂಬ ಬಾಗಿಲುಗಳಿಂದಲೂ, ಹಿರಿದಾದ ಪರಮಾನಂದವೆಂಬ ಒಡ್ಡೋಲಗದ ಚಾವಡಿಯಿಂದಲೂ ಕೂಡಿ ಶೋಭಿಸುವ ಅಣಿಮಾದಿ ಎಂಟು ಐಶ್ವರ್ಯಗಳೇ ಮೊದಲಾಗಿರುವ ನಾನಾ ರೀತಿಯ ಸಂಪತ್ತುಗಳಿಂದಲೂ ಒಟ್ಟುಗೂಡಿತ್ತು. ೯. ಶೋಭಿಸುವ ಸಮೀಚೀನವಾದ ಅರಿವಿನ ಪೀಠದಲ್ಲಿ ಸದಾ ಆನಂದಭರಿತನೂ, ಸತ್ಯನೂ, ನಿಶ್ಚಲನೂ, ಚಿಂತಾರಹಿತನೂ, ವಿಕಾರರಹಿತನೂ, ಶಾಂತನೂ ಆದ ರುದ್ರನು ವಿನೋದದಿಂದ ಇದ್ದನು. ಆತನು ವರ್ಣಿಸಲಾಗದ ಕೇವಲ ಬ್ರಹ್ಮತೇಜಸ್ಸಿನ ಮೂರ್ತಿಯಾಗಿದ್ದನು. ಅವನು ಅತ್ಯಂತ ಪರಿಶುದ್ಧ. ೧೦. ಜಗತ್ತಿನ ಮೂಲತತ್ವವೇ ಮುಖವು, ವಾಯುವೇ ತೋಳು, ಆದಿ-ಅನಾದಿಗಳೆ ಕಾಲು, ಅಗ್ನಿ-ಸೂರ್ಯ,ಚಂದ್ರರೇ ಕಣ್ಣುಗಳು, ಸೇರ್ಪಡೆಯಾದ ಆತ್ಮತೇಜಸ್ಸೇ

ಕಾಲು ಕಲ್ಪ-ವಿಕಲ್ಪಗಳು ನಳಿ
ತೋಳು ಮೋಹ - ಸ್ನೇಹಗಳು ನಡು
ವೇ ಲಸನ್ಮದ ವೃತ್ತಕುಚಗಳು ಕಾಮ-ಲೋಭಗಳು
ಲಾಲಿತಾಸ್ಯವೆ ಮಮತೆ ತೊಳಗುವ
ಲೋಲಲೋಚನವಱುಹುಕುಱುಹು ೫
ಮೇಳವಾಗಿಹ ಗಿರಿಜೆ ಮೆಱೆದಳು ಶಂಕರಾಂಕದಲಿ ೧೧

ಉರಗನಾಭರಣದ ಲಸನ್ಮಣಿ
ವಿರಚಿಸುವ ಭೂಷಣದ ಕಾಯದ
ಪರಮಶುದ್ಧಸ್ಫಟಿಕಕಾಂತಿಯ ದಿವ್ಯತನುರುಚಿಯ
ಗಿರಿಸುತೆಯನೀಕ್ಷಿಸುವ ನೋಟದ
ಹರನ ನೋಡುವ ವರಕಟಾಕ್ಷದ
ಚಿರಕೆಯೊಪ್ಪಿನ ದೇವ -ದೇವಿಯರಿರ್ದರೊಲವಿನಲಿ ೧೨

ಸಸಿಯ ಶೀತಳದಂತೆ ಕಪ್ಪುರ
ದೆಸೆವ ಕಂಪುಗಳಂತೆ ಕನಕದ
ಮಿಸುಪ ಲೋಹಸುವರ್ಣದಂತೆ ಸುಧಾಂಶುರುಚಿಯಂತೆ
ಲಸಿತ ಮಿಥುನಾಳಾಪ ಹೊಱಗಾ
ಣಿಸದೆ ಶಕ್ತಿಸಮೇತ ಶಂಕರ
ನೊಸೆದು ಕುಳ್ಳಿತು ಮೆಱೆಯುತಿರ್ದನು ದಿವ್ಯತೇಜದಲಿ ೧೩

ಕಾಂತಿಯಿಂದ ಕೂಡಿದ ಚಂದ್ರ-ಇವೆಲ್ಲವುಗಳಿಂದ ಕೂಡಿದ ಪಾರ್ವತೀಪತಿಯ ಆ ದೇಹವು ಶೋಭಿಸುತ್ತಿತ್ತು. ೧೧. ಜ್ಞಾನ-ಅಜ್ಞಾನಗಳೇ ಕಾಲುಗಳು, ಮೋಹ-ಸ್ನೇಹಗಳೇ ತೋಳುಗಳು, ಸಾತ್ವಿಕ ಮದದ ಗಡಿಯೇ ನಡು, ಕಾಮ-ಲೋಭಗಳೇ ದುಂಡನೆಯ ಕುಚಗಳು, ಮಮತೆಯೇ ಮನೋಹರವಾದ ಮುಖ, ಅರಿವಿನ ಚಿಹ್ನೆ ಪ್ರಕಾಶಿಸುವ ಚಂಚಲ ಕಣ್ಣುಗಳು-ಇವೆಲ್ಲವೂ ಹೊಂದಿಕೆಯಾಗಿರುವ ಗಿರಿಜೆ ಶಂಕರನ ತೊಡೆಯ ಮೇಲೆ ಶೋಭಿಸಿದಳು. ೧೨. ಆ ಒಡ್ಡೋಲಗದಲ್ಲಿದ್ದ ಪುರುಷದೇವತೆಗಳು ಸರ್ಪಭೂಷಣನಾದ ಮತ್ತು ಅತ್ಯಂತ ಪರಿಶುದ್ಧವಾದ ಸ್ಫಟಿಕದಂತೆ ದೇಹಕಾಂತಿಯುಳ್ಳ ಪರಶಿವನನ್ನೂ, ದೇವಿಯರು ಬೆಳಗುವ ರತ್ನಗಳ ದಿವ್ಯ ಆಭರಣಗಳಿಂದ ಮತ್ತು ದಿವ್ಯವಾದ ದೇಹಕಾಂತಿಯಿಂದ ಕೂಡಿದ ಪಾರ್ವತಿಯನ್ನೂ ತಮ್ಮ ಕಡೆಗಣ್ಣಿನಿಂದ ಪ್ರೀತಿಯಿಂದ ನೋಡುತ್ತಲಿದ್ದರು. ೧೩. ಚಂದ್ರನಲ್ಲಿ ಒಳಗೊಂಡಿರುವ ತಂಪಿನಂತೆ, ಕರ್ಪೂರದಲ್ಲಿ ಸೇರಿಕೆಯಾಗಿ ಶೋಭಿಸುವ ಸುವಾಸನೆಯಂತೆ, ಚಿನ್ನದಲ್ಲಿ ಹೊಂದಿಕೊಂಡಿರುವ ಸುವರ್ಣದ ಕಾಂತಿಯಂತೆ, ಚಂದ್ರನಲ್ಲಿ ಅಡಗಿರುವ ಕಿರಣದಂತೆ (ಅವಿಭಾಜ್ಯ ಸಂಬಂಧವನ್ನು ಹೊಂದಿ) ಮನೋಹರವಾದ ಸತಿ-ಪತಿಗಳ ಸಂಭಾಷಣೆ ಹೊರಗಿನ ನೋಟಕ್ಕೆ ಕಾಣಿಸದಂತೆ ಪಾರ್ವತಿಯೊಡಗೂಡಿ ಕುಳಿತ ಶಂಕರ ತನ್ನ ದಿವ್ಯತೇಜದಿಂದ ಶೋಭಿಸುತ್ತಿದ್ದನು.

ಜೆಡೆಗಳೇ ಬೇರುಗಳು ಗಂಗೆಯ
ಮಡುವೆ ಬೆಳೆನೀರಂಗವೇ ತರು
ತೊಡವೆ ಪರ್ಣಗಳಭಯವರದವೆ ಕುಸುಮ ಸತ್ಫಲವು
ಒಡಲನಪ್ಪಿದ ಮಡದಿಯೇ ಬಿಡ
ದಡರಿ ಹಬ್ಬಿದ ಲತೆಯೆನಲ್ಕಾ
ಮೃಡನೆನಿಪ ಮೂಲಾತ್ಮವೃಕ್ಷ ಮಹಾ ವಿರಾಜಿಸಿತು ೧೪

ವರಸುಗಂಧದ ಭೂಷಣದ ಸೀ
ಗುರಿಯ ವಸ್ತ್ರದ ಪಾದುಕೆಯ ಚಾ
ಮರದ ಹಡಪದ ಕನ್ನಡಿಯ ಪರಿಚರ್ಯದೂಳಿಗದ
ಪರಮಸುಕೃತಿಗಳಿದ್ದರಾ ಶಂ
ಕರನ ಶರ್ವಾಣಿಯ ಸಮೀಪದ
ಹೊರೆಯಲಗ್ಗದ ರುದ್ರಗಣಗಳು ರುದ್ರಕನ್ಯೆಯರು ೧೫

ಬೆಸನ ಪಾರುವ ಪಾರ್ವತಿಯ ತಾ
ಮಸರಜಃಸಾತ್ವಿಕಗುಣಂಗಳು
ಪೆಸರುವಡೆದಬಲಾಕೃತಿಯಲೋಲಗಿಸಿಕೊಂಡಿಹವು
ಎಸೆವ ಮಾಯಾನಾಮವೇ ತಾ
ಮಸಗುಣಾನ್ವಿತೆಯಾಗಿ ಮಿಗೆ ರಂ
ಜಿಸಿದಳವರೊಳು ಮಂಗಳೆಯ ಮನ್ನಣೆಯ ಮಹಿಮೆಯಲಿ ೧೬

ಕೆಂಜೆಡೆಯ ಮಕುಟಗಳ ತನುವಿನ
ರಂಜಿಸುವ ಚಾತುರ್ಭುಜಂಗಳ
ಕೆಂಜುರಿಯ ಹಣೆಗಣ್ಣುಗಳ ವಾಮಾಂಗಶಕ್ತಿಗಳ
ಕುಂಜರನ ಚರ್ಮಾಂಬರದ ಭವ
ಭಂಜನರು ಮುಂಬಿನಲಿ ತೇಜಃ
ಪುಂಜನೊಡ್ಡೋಲಗದೊಳಿರ್ದರು ರುದ್ರಕೋಟಿಗಳು ೧೭

೧೪. ಜೆಡೆಗಳೇ ಬೇರುಗಳು, ಗಂಗೆಯ ಮಡುವೇ ಬೆಳೆಯಲಿಕ್ಕೆ ಬೇಕಾದ ನೀರು, ದೇಹವೇ ವೃಕ್ಷ, ಮೈಮೇಲಿನ ಆಭರಣಗಳೇ ಎಲೆಗಳು, ಅಭಯಹಸ್ತವೇ ಹೂ, ವರದಹಸ್ತವೇ ಹಣ್ಣು, ದೇಹವನ್ನಪ್ಪಿದ ಹೆಂಡತಿಯೇ ವೃಕ್ಷವನ್ನು ಬಿಡದೆ ಹಬ್ಬಿರುವ ಬಳ್ಳಿ ಎನ್ನುವಂತೆ ಆ ಶಿವನೆನ್ನುವ ಮೂಲ ಆತ್ಮನೆಂಬ ಮಹಾವೃಕ್ಷವು ಶೋಭಿಸಿತು. ೧೫. ಶ್ರೇಷ್ಠವಾದ ಸುಗಂಧಗಳ, ಆಭರಣಗಳ, ಚವರಿಯ, ವಸ್ತ್ರದ, ಪಾದುಕೆಗಳ, ಚಾಮರದ, ಸಂಚಿಯ, ಕನ್ನಡಿಯ ಸೇವೆಗಳನ್ನು ಮಾಡುವ ಊಳಿಗದ ಭಾಗ್ಯವಂತರಾದ ಶ್ರೇಷ್ಠ ರುದ್ರಗಣಗಳು ಮತ್ತು ರುದ್ರಕನ್ನಿಕೆಯರು ಆ ಶಿವ-ಪಾರ್ವತಿಯರ ಬಳಿಯಲ್ಲಿ ಗುಂಪುಗೂಡಿ ಇದ್ದರು. ೧೬. ಪಾರ್ವತಿಯ ತಾಮಸ, ರಾಜಸ, ಸಾತ್ವಿಕ ಗುಣಗಳು ಹೆಸರಾಂತ ಸ್ತ್ರೀರೂಪವನ್ನು ಹೊಂದಿ ಆಕೆಯ ಆಜ್ಞೆಯನ್ನು ನಿರೀಕ್ಷಿಸುತ್ತಾ ಸೇವಿಸಿಕೊಂಡಿದ್ದುವು. ಅವುಗಳಲ್ಲಿ ಪ್ರಸಿದ್ಧವಾದ ತಾಮಸಗುಣವೇ ಮಾಯಾದೇವಿಯೆಂಬ ಹೆಸರನ್ನು ಹೊಂದಿತ್ತು. ಅವಳು ಗಿರಿಜೆಯ ಸಮಾನದ ಹಿರಿಮೆಯಿಂದ ಹೆಚ್ಚಾಗಿ ಶೋಭಿಸಿದಳು. ೧೭. ಕಾಂತಿಯ ಮೊತ್ತವಾದ ಶಂಕರನ ಒಡ್ಡೋಲಗದಲ್ಲಿ ಕೆಂಜೆಡೆಯ ಕಿರೀಟಗಳೂ, ಶೋಭಿಸುವ ಚತುರ್ಭುಜಗಳೂ, ಕೆಂಪಾದ ಉರಿವ ಹಣೆಗಣ್ಣುಗಳೂ, ಎಡಭಾಗದಲ್ಲಿ ಶಕ್ತಿಯರೂ,

ಪ್ರೇಮದಿಂದಲಿ ನೀಲಮೇಘ
ಶ್ಯಾಮಕಾಯರು ಸಾತ್ವಿಕಸ್ಥಿತ
ನಾಮಧೇಯರು ಕೌಸ್ತುಭೋರಸ್ಥಳದ ಚೆನ್ನಿಗರು
ಶ್ರೀ ಮಹಾಲಕ್ಷ್ಮೀ ಸಮೇತರು
ಕಾಮಜನಕರು ಕಮಲನೇತ್ರರು
ವಾಮದಲಿ ಶಿವಸಭೆಯೊಳಿರ್ದರು ವಿಷ್ಣುಕೋಟಿಗಳು ೧೮

ಚತುರತೆಯ ಚತುರಾನನದ ಶಾ
ಶ್ವತರಜೋಗುಣರಚಿತಮೂರ್ತಿಯ
ನುತಸುವರ್ಣಚ್ಛವಿಯ ನಿರ್ಮಲಕಾಯಕಾಂತಿಗಳ
ಅತಿಶಯದ ಸಾಕ್ಷಾನ್ಮಹಾಭಾ
ರತಿಸಮೇತದ ಮಹಿಮರಾ ಪಶು
ಪತಿಯ ಬಲದಲಿ ಮೆಱೆದರತುಳಬ್ರಹ್ಮಕೋಟಿಗಳು ೧೯

ಸುರರು ಖಚರರು ಸಿದ್ಧ ವಿದ್ಯಾ
ಧರರು ಮನುಗಳು ಯಕ್ಷ ರಾಕ್ಷಸ
ಗರುಡ ಗಂಧರ್ವಾದಿ ನಾನಾ ದೇವಯೋನಿಜರು
ಉರಗನರರೊಡಗೂಡಿ ದೇವೇಂ
ದ್ರರುಗಳಗಣಿತಕೋಟಿ ನೆರೆದುದು
ಸರಸಿಜಾಸನನಪರದೆಸೆಯಲಿ ಶಿವನ ಸಭೆಯೊಳಗೆ ೨೦

ಆನೆಯ ಚರ್ಮದ ಉಡಿಗೆಯೂ, ಮುಂಭಾಗದಲ್ಲಿ ಜನಮರಣರಹಿತರಾದವರೂ ಆದ ಕೋಟಿಸಂಖ್ಯೆಯ ರುದ್ರರು ಇದ್ದರು. ೧೮. ಆ ಶಿವನ ಸಭೆಯ ಎಡಭಾಗದಲ್ಲಿ ನೀಲಿಯ ಮೋಡದಂತೆ ಶ್ಯಾಮಲವರ್ಣದ ದೇಹದವರೂ, ಸಾತ್ವಿಕರೆಂಬ ಶಾಶ್ವತವಾದ ಹೆಸರನ್ನು ಹೊಂದಿರುವವರೂ, ಕೌಸ್ತುಭರತ್ನವನ್ನು ಎದೆಯ ಭಾಗದಲ್ಲಿ ಧರಿಸಿರುವ ಮನೋಹರಕಾರರೂ, ಮಹಾಲಕ್ಷ್ಮಿಯನ್ನು ಜೊತೆಯಲ್ಲಿ ಹೊಂದಿರುವವರೂ, ಮನ್ಮಥನ ತಂದೆಯಾದವರೂ, ಕಮಲನಯನರೂ ಆದ ಕೋಟಿಸಂಖ್ಯೆಯ ವಿಷ್ಣುಗಳು ಇದ್ದರು. ೧೯. ಆ ಪಶುಪತಿಯ ಬಲಭಾಗದಲ್ಲಿ ದಕ್ಷತೆಯಿಂದ ಕೂಡಿದ ಚತುರ್ಮುಖಗಳಿಂದಲೂ, ಶಾಶ್ವತವಾದ ರಜೋಗುಣವೇ ರೂಪಾಂತ ದೇಹದಿಂದಲೂ, ಶ್ರೇಷ್ಠಸುವರ್ಣದಂತಹ ಪರಿಶುದ್ಧವಾದ ದೇಹಕಾಂತಿಯಿಂದಲೂ, ಹೆಗ್ಗಳಿಕೆಯ ವಾಗ್ದೇವಿಯ ಸಂಗದಿಂದಲೂ ಎಣೆಯಿಲ್ಲದ ಮಹಿಮಾವಂತರಾದ ಕೋಟಿಸಂಖ್ಯೆಯ ಬ್ರಹ್ಮರು ಶೋಭಿಸಿದರು. ೨೦. ಬ್ರಹ್ಮನ ಹಿಂಭಾಗದಲ್ಲಿ ದೇವತೆಗಳು, ಗಗನದಲ್ಲಿ ಸಂಚರಿಸುವವರು, ಸಿದ್ಧರು, ವಿದ್ಯಾಧರರು, ಮನುಗಳು, ಯಕ್ಷರು, ರಾಕ್ಷಸರು, ಗರುಡರು, ಗಂಧರ್ವರು ಇವರೇ ಮೊದಲಾದ ನಾನಾ ದೇವತೆಗಳಲ್ಲಿ ಹುಟ್ಟಿದವರು; ನಾಗರು, ಮಾನವರುಗಳೊಂದಿಗೆ ದೇವೇಂದ್ರರುಗಳು ಲೆಕ್ಕವಿಲ್ಲದಷ್ಟು ಕೋಟಿಸಂಖ್ಯೆಯಲ್ಲಿ ಶಿವನ ಸಭೆಯಲ್ಲಿ ಒಟ್ಟುಗೂಡಿದ್ದರು.

ಚಂದ್ರಕಳೆಗಳನೆಯ್ದೆ ಕರಗಿಸಿ
ತಂದು ಕರುವಿನೊಳೆಱೆದರೋ ಮೇ
ಣಿಂದುಮೌಳಿಯ ದರಹಸಿತವೇನೊಂದು ರೂಪಾಯ್ತೊ
ಎಂದೆನಲು ಪರಮೇಶ್ವರಂಗಾ
ನಂದದಾಶ್ರಯವೆನಿಪ ಮಹಿಮೆಯ
ನಂದಿಕೇಶ್ವರನಿರ್ದ ಸಮ್ಮುಖದಲಿ ಶಂಕರನ ೨೧

ಜವನ ಜವಗೆಡಿಸುವ ಮಹಾಮೃ
ತ್ಯುವಿನ ಮಿತ್ತುವ ಮಿಡಿವ ಕಾಲನ
ಕವಣೆಯನು ತಕ್ಕಿಸುವ ಕರ್ಮಭ್ರಮೆಯ ಭಂಗಿಸುವ
ಶಿವಪದದ್ರೋಹಿಗಳ ಸಜ್ಜನೆ
ಸವರಿ ಸೀಳ್ದಪ್ಪಳಿಸುವಧಟನ
ತವಕತಕ್ಕೆಯ ವೀರಭದ್ರನು ಮುಂದೆ ಮೋಹಿಸಿದ ೨೨

ಹರನ ಹರುಷದ ಹಕ್ಕೆ ಪರಮೇ
ಶ್ವರನ ಪರಿಣಾಮದ ಪಸರ ಶಂ
ಕರನ ಸೌಖ್ಯದ ಸಾಲೆ ಮೃಡನೀಕ್ಷಿಸುವ ಮುಖಮುಕುರ
ಪರಮಭಕ್ತಿಯ ಭಾವಭಂಗಿಯ
ಕರುವೆನಿಸುವಾ ಭೃಂಗೀನಾಥನ
ಪರಿ ವಿರಾಜಿಸುತಿರ್ದುದಾ ಶಶಿಧರನ ಸಭೆಯೊಳಗೆ ೨೩

ಕಡಲನಾದೊಡೆ ಕಂಗಳಿಂದವೆ
ಕುಡಿವ ತತ್ತೊಡೆ ಮೇರುಗಿರಿಯನು
ಮಿಡಿದು ಮೀಂಟುವ ಮುಳಿದೊಡಬುಜಭವಾಂಡಮಂಡಲವ
ಹಿಡಿದು ಹಿಸುಕುವ ವೀರವೃತ್ತಿಯ
ಕಡುಹಿನುಗ್ರಸಮಗ್ರರಿರ್ದರು
ಮೃಡನ ಮುಂದೆಸೆಯಲ್ಲಿ ಭೂತಪ್ರೇತಗಣನಿಕರ ೨೪

೨೧. ಪರಮೇಶ್ವರನಿಗೆ ಆನಂದದ ನೆಲೆಯೆಂಬ ಮಹಿಮಾವಂತನಾದ ನಂದೀಶ್ವರನು, ಚಂದ್ರಕಾಂತಿಯನ್ನು ಚೆನ್ನಾಗಿ ಕರಗಿಸಿ ತಂದು ಪ್ರತಿಮೆಯಲ್ಲಿ ಎರಕ ಹೊಯ್ದರೋ ಅಥವಾ ಶಿವನ ಮಂದಹಾಸವೇ ಒಂದು ರೂಪಾಯಿತೋ, ಎನ್ನುವಂತೆ ಶಂಕರನ ಮುಂಭಾಗದಲ್ಲಿದ್ದನು. ೨೨. ಯಮರಾಜನ ಶಕ್ತಿಗುಂದಿಸುವ, ಮಹಾಮೃತ್ಯುವಿನ ಕೊಲ್ಲುವ, ಶಕ್ತಿಯನ್ನು ಅಲುಗಾಡಿಸುವ, ಕಾಲನ ಬರುವಿಕೆಗೆ ಅಡ್ಡಿತರುವ, ಕ್ರಮದ ಭ್ರಮೆಯನ್ನು ನಾಶಗೊಳಿಸುವ, ಶಿವನಿಗೆ ಅಪಚಾರವೆಸಗುವ ದ್ರೋಹಿಗಳನ್ನು ತಕ್ಷಣ ತಿಕ್ಕಿ ಸೀಳಿ ಅಪ್ಪಳಿಸುವ ಪರಾಕ್ರಮದ ಅತ್ಯುತ್ಸಾಹದ ವೀರಭದ್ರನು ಶಿವನ ಮುಂದೆ ಮರುಳುಗೊಳಿಸುವಂತೆ ವಿರಾಜಿಸುತ್ತಿದ್ದನು. ೨೩. ಶಿವನ ಸಂತೋಷದ ವಿಶ್ರಾಂತಿಸ್ಥಾನ, ಪರಮೇಶ್ವರನ ಸುಖದ ವಿಸ್ತರಣೆ, ಶಂಕರನ ಸೌಖ್ಯದ ಶಾಲೆ, ಶಿವನು ನೋಡುವ ಮುಖಗನ್ನಡಿ, ಶ್ರೇಷ್ಠಭಕ್ತಿಯ ಭಾವಭಂಗಿಯ ಪುತ್ಥಳಿ ಎನಿಸುವ ಆ ಭೃಂಗಿನಾಥನ ಚೆಲುವು ಶಿವನ ಸಭೆಯೊಳಗೆ ಶೋಭಿಸುತ್ತಿದ್ದಿತು. ೨೪. ಸಮುದ್ರವನ್ನಾದರೂ ಕಣ್ಣುಗಳಿಂದಲೆ ಹೀರುವ, ಸಂದರ್ಭ ಬಂದರೆ ಮೇರುಪರ್ವತವನ್ನು ಹೊಡೆದು ಹಾರಿಸುವ,

ಪರವಿನಾಯಕ ದುರ್ಗೆ ಭೈರವ
ನೆರೆದ ವೇತಾಳಿಯರು ಕರಭೀ
ಕರದ ಶಾಕಿನಿ ಡಾಕಿನಿಯರುಗಳಾದಿಯಾಗಿರ್ದ
ಪರಿಪರಿಯ ಪೆಸರವರನೇಕರು
ನೆರೆದರಾ ಶಂಕರನ ಸಭೆಯೊಳು
ಹಿರಿದು ಹರುಷಂಗಳಲಿ ಸಚರಾಚರರು ಸಂದಣಿಸಿ ೨೫

ಅತ್ರಿ ಭಾರದ್ವಾಜ ವಿಶ್ವಾ
ಮಿತ್ರ ಗೌತಮ ಗಾರ್ಗ್ಯ ನಿರ್ಮಳ
ಗಾತ್ರ ನಾರದ ಭೃಗು ಪುಲಸ್ತ್ಯ ವಶಿಷ್ಠ ದುರ್ವಾಸ
ಚಿತ್ರತರವೆನಿಸುವ ಪವಿತ್ರಚ
ರಿತ್ರರಾ ಶಿಖಿ ರವಿ ಸುಧಾಕರ
ನೇತ್ರನೊಡ್ಡೋಲಗದೊಳಿರ್ದುದು ಪರಮಮುನಿನಿಕರ ೨೬

ಓಲಗಿಸುವ ನವಗ್ರಹಂಗಳ
ಸಾಲುಗಳ ಸೌರಂಭಗಳ ದಿಕ್
ಪಾಲಕರ ಸಂದಣಿಯ ಸಡಗರದಖಿಳಸಂಭ್ರಮದ
ಮೇಲೆಮೇಲುಘ್ಘಡಿಪ ಪಾಠಕ
ರೋಳಿಗಳ ಗಡಬಡಿಯ ಗಡಣದ
ಮೇಳದಲಿ ಮೆಱೆದಿರ್ದುದಾ ಶಶಿಮೌಳಿಯಾಸ್ಥಾನ ೨೭

ಕೋಪಗೊಂಡರೆ ಬ್ರಹ್ಮಾಂಡಮಂಡಲವನ್ನು ಹಿಡಿದು ಹಿಸುಕಿಹಾಕುವ ವೀರವೃತ್ತಿಯವರೂ ದರ್ಪಿಷ್ಠರೂ ಉಗ್ರರೂ ಆದ ಸಕಲ ಭೂತಪ್ರೇತಗಣಗಳ ಸಮೂಹವು ಶಿವನ ಮುಂಭಾಗದಲ್ಲಿದ್ದಿತು. ೨೫. ಸಿದ್ಧಿವಿನಾಯಕ, ದುರ್ಗೆ, ಭೈರವ, ಬೇತಾಳರು, ಅತಿಕ್ರೂರಿಗಳಾದ ಶಾಕಿನಿ ಡಾಕಿನಿಯರೇ ಮೊದಲಾದ ನಾನಾ ಬಗೆಯ ಹೆಸರಿನ ಅನೇಕ ಸಚರಾಚರರು ಆ ಶಂಕರನ ಸಭೆಯಲ್ಲಿ ಹಿರಿದಾದ ಸಂತಸದಿಂದ ಗುಂಪುಗೂಡಿದ್ದರು. ೨೬. ಅತ್ರಿ, ಭಾರದ್ವಾಜ, ವಿಶ್ವಾಮಿತ್ರ, ಗೌತಮ, ಗಾರ್ಗ್ಯ, ನಿರ್ಮಳದೇಹಿಯಾದ ನಾರದ, ಭೃಗು, ಪುಲಸ್ತ್ಯ, ವಶಿಷ್ಠ, ದುರ್ವಾಸ, ವಿಚಿತ್ರವೆನ್ನಿಸುವ ಪವಿತ್ರ ಚಾರಿತ್ರ್ಯವುಳ್ಳ ಶ್ರೇಷ್ಠಮುನಿಗಳ ಸಮೂಹವು ಅಗ್ನಿ ಸೂರ್ಯ ಚಂದ್ರರೇ ಮೂರು ಕಣ್ಣುಗಳಾಗಿ ಉಳ್ಳ ಮುಕ್ಕಣ್ಣಶಿವನ ಒಡ್ಡೋಲಗದಲ್ಲಿ ಇದ್ದಿತು. ೨೭. ಸೇವೆಮಾಡುತ್ತಿರುವ ನವಗ್ರಹಗಳ ಸಾಲುಗಳ ಸಂಭ್ರಮ, ದಿಕ್ಪಾಲಕರ ಗುಂಪಿನ ಉತ್ಸಾಹ, ಹೆಚ್ಚಾದ ಸಂಭ್ರಮದಿಂದ ಕೂಡಿ ಮತ್ತೆ ಮತ್ತೆ ಘೋಷಿಸುವ ಹೊಗಳುಭಟ್ಟರ ಸಾಲುಗಳ ಸದ್ದುಗದ್ದಲಗಳಿಂದ ಕೂಡಿ ಆ ಆಸ್ಥಾನವು ಶೋಭಿಸುತ್ತಿತ್ತು.

ನೋಡಿದೋಡೆ ಮುಕುಳಿತಕರಂಗಳು
ಮೂಡುವುವು ಮಣಿಮುಕುಟದಲಿ ಮಾ
ತಾಡಿದೊಡೆ ತನತನಗೆ ಜೀಯ ಹಸಾದಪೆಂದೆನುತ
ಕೂಡೆ ಮಣಿವರು ಮೌಳಿಗಳನಾ
ರೂಢಿಯಾಧ ವೃಷಧ್ವಜನ ಮನ
ಮಾಡಿದಂತಾಡುತ್ತುಮಿರ್ದುದು ಸಭೆ ಸಘಾಟದಲಿ ೨೮

ಬೆಳಗುಮಣಿಭೂಷಣದಿನತಿ ಮೆ
ಯ್ವೆಳಗು ಭೂಷಣ ಮೆಯ್ವೆಳಗಿನಿಂ
ಬೆಳಗು ನಖನಯನಂಗಳಾಸ್ಥಾನದ ಮಹೋತ್ತಮರ
ಬೆಳಗು ಬೆಳೆದಾ ಶಿವನ ಮೂರ್ತಿಯ
ಬೆಳಗಿನೊಳು ಬೆರಸಿದೊಡೆ ಸಭೆಯುದು
ಬೆಳಗುತಿರ್ದುದು ಶುದ್ಧಜ್ಯೋತಿರ್ಲೋಕವೆಂಬಂತೆ ೨೯

ಇರುತಲೊಂದಾನೊಂದು ದಿನ ವಿ
ಸ್ತರವಿನೋದಂಗಳಲಿ ಸಭೆಯೊಳು
ಹರಿಕರಿಸಿ ದಂತಚ್ಛವಿಯ ಬೆಳುದಿಂಗಳನು ಸುರಿವ
ಕರಚೆಲುವ ಬಾಯ್ದೆಱೆಯ ಪರಮೇ
ಶ್ವರಿ ನಿಜಾಂತಃಕರಣಜನಿತ
ಸ್ಫುರಣೆಯನು ಬಿನ್ನೈಸಲುದ್ಯೋಗಿಸಿದಳಭವಂಗೆ ೩೦

೨೮. ಕೈಲಾಸದ ಸಭೆಯಲ್ಲಿ ಶಿವನು ನೆರೆದವರನ್ನು ದೃಷ್ಟಿಸಿದುದೇ ಆದರೆ ಒಡನೆಯೇ ಅವರು ಕೈಮುಗಿಯುತ್ತಿದ್ದರು. ಶಿವನು ಮಾತಾಡಿಸಿದರೆ 'ಸ್ವಾಮಿ, ಅಪ್ಪಣೆ' ಎಂದೆನುತ್ತ ಕೂಡಲೇ ಕಿರೀಟಗಳನ್ನು ಬಾಗಿಸುವರು. ಹೀಗೆ ಶಿವನ ಮನವು ವರ್ತಿಸಿದಂತೆ ಆ ಸಭೆಯು (ಹೆಚ್ಚಿನ ಸ್ನೇಹದಿಂದ) ವರ್ತಿಸುತ್ತಲಿದ್ದಿತು. ೨೯. ಪ್ರಕಾಶಭರಿತವಾದ ರತ್ನಾಲಂಕಾರಗಳಿಗಿಂತ ಹೆಚ್ಚಿನದು ಶಿವನ ದೇಹಕಾಂತಿಯು. ಆಭರಣ ಹಾಗೂ ದೇಹಕಾಂತಿಗಳಿಗಿಂತ ಹೆಚ್ಚಿನದು ನುಣುಪಾದ ಉಗುರುಗಳ ಬೆಳಗು. ಹೀಗೆ ಆಸ್ಥಾನದ ಶ್ರೇಷ್ಠರ ಕಾಂತಿಯು ಬೆಳೆದು ಶಿವನ ಮೂರ್ತಿಯ ಕಾಂತಿಯಲ್ಲಿ ಬೆರೆಯಲು ಸಭೆಯು ಶುದ್ಧವಾದ ಜ್ಯೋತಿರ್ಲೋಕವೆಂಬಂತೆ ಬೆಳಗುತ್ತಿದ್ದಿತು. ೩೦. ಹೀಗಿರಲು ಒಂದಾನೊಂದು ದಿನ ಬೆಳುದಿಂಗಳನ್ನು ಚೆಲ್ಲುವ ಅತಿ ಮನೋಹರವಾದ ದಂತಪಂಕ್ತಿಯುಳ್ಳ ಪಾರ್ವತಿಯು ಹೆಚ್ಚಿನ ವಿನೋದಗಳಿಂದ ಸಭೆಯಲ್ಲಿ ತನ್ನ ಸುಂದರವಾದ ತುಟಿಗಳನ್ನುಳ್ಳ ಪಾರ್ವತಿಯು ಶಿವನಿಗೆ ತನ್ನ ಮನದಲ್ಲಿ ಮೂಡಿದ ಆಲೋಚನೆಯನ್ನು ತಿಳಿಸತೊಡಗಿದಳು.

ಶಿವನೆ ನಿನ್ನೊಡ್ಡೋಲಗದೊಳೊ
ಪ್ಪುವ ಮಹಾಘನಮಹಿಮರೆಲ್ಲರು
ಭವಕೆ ಬಾರದೆ ನಿತ್ಯಸುಖದಿಂದಿಪ್ಪರೋ ಮೇಣು
ಇವರಿಗೆಯು ನೆಲೆಯಿಲ್ಲವೋ ಪೇ
ಳಿವರವಸ್ಥೆಯನೆನುತ ಕೇಳಲು
ಶಿವೆಗೆ ತಿಳಿವಂದದಲಿ ಬಳಿಕಾ ಶಂಭುವಿಂತೆಂದ ೩೧

ಗಿರಿಜೆಯಹುದೌ ನಿನ್ನ ಬುದ್ಧಿಯ
ಪರಿಯದೊಳ್ಳಿಹ ಪ್ರಶ್ನೆಯಾಯಿತು
ಹರಿವಿರಂಚಿಗಳಾದಿಯಾದವರಾದೊಡೆಯು ತುದಿಗೆ
ವಿರಚಿಸುತ್ತಿಹ ನಾಮರೂಪಗ
ಳೊರೆದ ಸತ್ಕ್ರಿಯೆಯಿದ್ದುವಾದೊಡೆ
ದೊರಕಲಱಿಯದು ನಿತ್ಯಸುಖವಗಜಾತೆ ಕೇಳೆಂದ ೩೨

ಆಗಲಾದೊಡೆ ನಾಮ ರೂಪು
ಕ್ರೀಗಳನು ಗೆಲಬಲ್ಲ ವಿಮಲೋ
ದ್ಯೋಗವಾವುದು ಕರುಣಿಸಿದ ನಾನಱಿಯಬೇಕೆನಲು
ನಾಗಭೂಷಣ ದುರಿತಭೀಷಣ
ರಾಗಶೋಷಣ ಭಜಕಪೋಷಣ
ನಾಗಳಾ ಪಾರ್ವತಿಗೆ ಕರುಣಿಸಿ ಶಂಭುವಿಂತೆಂದ ೩೩

ಭೋಗಭೂಮಿಯ ಭೋಗತನುವಿನ
ಲಾಗದನುಪಮಸಿದ್ಧಿ ಕರ್ಮೋ
ದ್ಯೋಗಭೂಮಿಯ ಕರ್ಮತನುವಿನಲಲ್ಲದದಱಿಂದೆ
ಯೋಗಯೋಗ್ಯರು ಯೋಚಿಸುತ ಭೂ
ಭಾಗದಲಿ ಮಾನವಶರೀರಿಗ
ಳಾಗಿ ಸಾಧಿಸಿ ನಿಜವನಱಿವರು ಗಿರಿಜೆ ಕೇಳೆಂದ ೩೪

೩೧. "ಶಿವನೇ, ನಿನ್ನ ಈ ಒಡ್ಡೋಲಗದಲ್ಲಿ ಶೋಭಿಸಿರುವ ಮಹಾ ಘನಮಹಿಮರೆಲ್ಲರು ಹುಟ್ಟು ಸಾವುಗಳಿಗೆ ಒಳಗಾಗದೆ ನಿತ್ಯಸುಖದಿಂದ ಇರುವರೋ? ಅಥವಾ ಇವರಿಗೂ (ನಿಶ್ಚಿತವಾದ) ನೆಲೆಯಿಲ್ಲವೋ? ಇವರ ಅವಸ್ಥೆಯನ್ನು ಹೇಳು" ಎಂದು ಕೇಳಲು, ಪಾರ್ವತಿಗೆ ಅರ್ಥವಾಗುವಂತೆ ಬಳಿಕ ಆ ಶಿವ ಹೀಗೆಂದನು. ೩೨. "ಗಿರಿಜೆ, ನಿನ್ನ ಬುದ್ಧಿಗೆ ನಿಲುಕುವ ರೀತಿಯಲ್ಲಿ ಒಳ್ಳೆಯ ಪ್ರಶ್ನೆಯನ್ನು ಕೇಳಿದೆ, ಸರಿಯಾಗಿದೆ. ಪಾರ್ವತಿಯೇ ಕೇಳು, ವಿಷ್ಣುಬ್ರಹ್ಮರೇ ಮೊದಲಾದರಾದರೂ ಕಡೆಯಲ್ಲಿ ನಾಮ ರೂಪ ಕ್ರಿಯೆಗಳನ್ನು ಪಡೆದಿದ್ದರೆ, ಅವರಿಗೆ ನಿತ್ಯಸುಖವು ದೊರೆಯುವುದಿಲ್ಲ" ಎಂದು ಶಿವ ನುಡಿದನು. ೩೩. "ಹಾಗಾದರೆ ನಾಮ ರೂಪ ಕ್ರಿಯೆಗಳನ್ನು ಗೆಲ್ಲಬಲ್ಲ ಪವಿತ್ರವಾದ ಕರ್ತವ್ಯವಾವುದು? ಇದನ್ನು ನಾನು ತಿಳಿಯಬೇಕು ಕರುಣಿಸಿ" ಎಂದು ಪ್ರಾರ್ಥಿಸಲು, ಸರ್ಪಭೂಷಣನೂ ಪಾಪಗಳಿಗೆ ಭಯಂಕರಸ್ವರೂಪನೂ ಆಸೆಯನ್ನು ಹಿಂಗಿಸುವವನೂ ಭಕ್ತರನ್ನು ಕಾಪಾಡುವವನೂ ಆದ ಶಂಭು ಪಾರ್ವತಿಗೆ ಕರುಣೆಯಿಂದ ಹೀಗೆ ಹೇಳಿದನು. ೩೪. "ಗಿರಿಜೆಯೇ ಕೇಳು, ಅನುಪಮವಾದ ನಿತ್ಯಸುಖವೆಂಬ ಸಿದ್ಧಿಯು ಭೂಲೋಕದ ಮಾನವ ಶರೀರದಲ್ಲಲ್ಲದೆ ದೇವಲೋಕದ ಭೋಗೋಪಭೋಗಗಳಲ್ಲಿ ಮುಳುಗಿದ ಭೋಗತನುವಿನಲ್ಲಿ

ಎನೆ ಹಸಾದವದಪ್ಪುದಾದೊಡೆ
ಮನುಜಲೋಕದೊಳಾವ ಪರಿಯಿಂ
ದನುಭವಸ್ಥಿತಿಗತಿಯನುಪದೇಶಿಸುವ ಗುರುವಾರು
ಎನಗೆ ತಿಳಿವಂದದಲಿ ಪೇಳೆನ
ಲಿನಿಯಳಿಗೆ ವಿಸ್ತರಿಸಬೇಕೆಂ
ದನುಕರಿಸಿದನು ಶಂಭು ತತ್ವೋದ್ಯೋಗದಾಯಿಗನ ೩೫

ಏನ ಹೇಳುವೆನಾದಿಯಲಿ ಸು
ಜ್ಞಾನಿ ನಿರಹಂಕಾರರೆಂಬರ
ನೂನತಪವನು ಮಾಡಲೆನ್ನ ನಿಜಸ್ವರೂಪವರ
ಸೂನುವೆಂಬಂದದಲಿ ಸುಳಿದನು
ತಾನೆಯಲ್ಲಮನೆಂಬ ಪೆಸರೊಳು
ಮಾನಿನಿಯೆ ಕೇಳಾ ಮಹಾತ್ಮನೊಳಱಿವುದಱಿವುಗಳ ೩೬

ಅಲ್ಲಮಪ್ರಭುವೆನಿಪನಾತನ
ಬಲ್ಲೆ ನಾನೀಗಱಿದೆ ಬಳಿಕಿ
ನ್ನಲ್ಲಿ ನಿಜತತ್ವಸ್ವರೂಪವನಱಿವುದಱಿವೊಡೇನರಿದು
ಒಳ್ಳಿತಾಯಿತು ತಿಳಿಯಬೇಕೆಂ
ಬೆಲ್ಲರಿಗೆ ಕರಸುಲಭವೆನುತಲಿ
ಭುಲ್ಲವಿಸಿ ಗಿರಿಜಾತೆ ನುಡಿಯಲು ಶಂಭುವಿಂತೆಂದ ೩೭

ಆಗದು. ಆದಕಾರಣ ಯೋಗದಲ್ಲಿ ದೇಹವನ್ನು ಸವೆಸಬಲ್ಲಂತಹ ಯೋಗ್ಯರು ಆಲೋಚಿಸಿ ಭೂಭಾಗದಲ್ಲಿ ಮಾನವದೇಹಿಗಳಾಗಿ ನಿತ್ಯಸುಖವೆಂಬ ಅನುಪಮವಾದ ಸಿದ್ಧಿಯನ್ನು ಸಾಧಿಸಿ ಸತ್ಯವನ್ನು ತಿಳಿಯುವರು" ಎಂದು ಶಿವ ನುಡಿದನು. ೩೫. ಹಾಗೆಂದು ಶಿವ ನುಡಿಯಲು ಅದಕ್ಕೆ ಗಿರಿಜೆ "ಅದು ನಿನ್ನ ಅಪ್ಪಣೆಯಾದರೆ ಭೂಲೋಕದಲ್ಲಿ ಆವ ರೀತಿಯಿಂದ ಅನುಭವದ ಸ್ಥಿತಿ-ಗತಿ ತಿಳಿಯಲು ಸಾಧ್ಯ? ಅವನ್ನು ಉಪದೇಶಿಸುವ ಗುರು ಯಾರು? ನನಗೆ ತಿಳಿಯುವಂತೆ ಹೇಳು" ಎಂದು ಪ್ರಾರ್ಥಿಸಲು, ಹೆಂಡತಿಗೆ ವಿಸ್ತಾರವಾಗಿ ಹೇಳಬೇಕೆಂದು ಶಿವನು ತತ್ವೋಪದೇಶಕನ ರೀತಿಯನ್ನು ಅನುಕರಿಸಿದನು. ೩೬. "ಮಾನಿನಿಯೇ ಕೇಳು, ಏನು ಹೇಳಲಿ ಹಿಂದೆ ಸುಜ್ಞಾನಿ - ನಿರಹಂಕಾರರೆಂಬ ದಂಪತಿಗಳು (ಮಕ್ಕಳಿಗಾಗಿ ಹಂಬಲಿಸಿ) ಭಂಗಗೊಳ್ಳದಂತೆ ತಪಸ್ಸನ್ನು ಮಾಡಲು, ನನ್ನ ಸ್ವರೂಪವು ಅವರ ಮಗನೆನ್ನುವ ರೀತಿಯಲ್ಲಿ ಅಲ್ಲಮನೆಂಬ ಹೆಸರಿನಲ್ಲಿ ತಾನೇ ಸುಳಿಯಿತು. ಆ ಮಹಾತ್ಮನಲ್ಲಿ ತಿಳಿಯಬೇಕಾದ್ದನ್ನು ತಿಳಿಯುವುದು". ೩೭. (ಆ ಮಾತಿಗೆ) ಗಿರಿಜೆ, 'ಅಲ್ಲಮಪ್ರಭುವೆಂಬಾತನನ್ನು ನಾನು ಬಲ್ಲೆ. ಆತನಾರೆಂಬುದನ್ನೂ ನಾನೀಗ ತಿಳಿದೆ. ಇನ್ನು ಮುಂದೆ ಅವನ ತತ್ವಸ್ವರೂಪವನ್ನು ತಿಳಿಯುವುದು ಅಸಾಧ್ಯವೇನಲ್ಲ. (ನಿನ್ನ ಮಾತಿನಿಂದ ನನಗೀಗ) ಒಳ್ಳೆಯದೇ ಆಯಿತು. ಅವನನ್ನು ತಿಳಿಯಬಯಸುವವರಿಗೆಲ್ಲಾ ಆತ ಅತಿ ಸುಲಭನು" ಎಂದು ಗರ್ವದಿಂದ ಉಬ್ಬಿ ನುಡಿಯಲು ಶಿವ ಹೀಗೆಂದನು

ಖಾತಿಗೊಳ್ಳದಿರಾಡಿ ತೋಱಿದೊ
ಡೀತ ನಿಷ್ಠುರನೆನ್ನದಿರು ಬಱಿ
ಮಾತುಮಾತಿಗೆ ಸಿಕ್ಕನಾರಾರವರ ಭಕ್ತಿಗಳ
ರೀತಿಗಳಲಿಹರವರಿಗವರಾ
ಪ್ರೀತಿಯಲಿ ರೂಪಾಗಿ ತೋಱುವ
ನಾತನನುಪಮನಗಜೆ ಕೇಳ್ ಸಾಮಾನ್ಯನಲ್ಲೆಂದ ೩೮

ಇದು ಯಥಾರ್ಥದ ವಾಕ್ಯವದು ತ
ಪ್ಪದು ವಿಚಾರಿಸಲುಳಿದವರಿಗಾ
ದುದು ಮಹಾದುಸ್ತರತೆಯೆನ್ನಯ ಚಾರು ಚತುರತೆಗೆ
ಹೃದಯವನು ತೋಱಿಸದೆಯಲ್ಲಮ
ಹದುಳ ಹೋಪನೆ ಕಾಂಬೆನೆನುತಲಿ
ಮದಮತಿಯಲಾ ಗಿರಿಜೆ ನುಡಿದೊಡೆ ಶಂಭುವಿಂತೆಂದ ೩೯

ರಾಣಿಯಹುದೌ ನಿನ್ನ ಬುದ್ಧಿಯ
ಕಾಣಬಹುದಿನ್ನಾದೊಡೀ ಪರಿ
ಹೂಣಿಕೆಯ ನುಡಿದಿನ್ನು ಹೋಳಿದೊಡೆ ಸೋಲು ನಿನಗೆನಲು
ಮಾಣು ಬಱುಮಾತುಗಳನೆನುತಾ
ಪ್ರಾಣವಲ್ಲಭಗೆಂದಳಾ ಶ
ರ್ವಾಣಿಯೆನ್ನಯ ಪ್ರಜೆಯಿದೆಯಹುದೆಂದಳಘಟಿನಲಿ ೪೦

೩೮. "ಗಿರಿಜೆ ಕೇಳು, ನನ್ನ ಮಾತಿನಿಂದ ನೀನು ಕೋಪಗೊಳ್ಳದಿರು. ಸತ್ಯವನ್ನು ನಾನು ನುಡಿಯಲು ನೀನು ನನ್ನನ್ನು ನಿಷ್ಠುರನೆನ್ನದಿರು. ಅಲ್ಲಮನು ತಿರುಳಿಲ್ಲದ (ವ್ಯರ್ಥ) ಮಾತುಗಳಿಗೆ ಒಳಗಾಗನು. ಅವರವರ ಭಕ್ತಿಗಳ ಪರಿಯಂತೆ ಅವರವರಿಗೆ ಅವರವರ ಪ್ರೀತಿಯಂತೆ ರೂಪಾಗಿ ಕಾಣುವ ಆತ ಹೋಲಿಕೆಗೆ ಸಿಗದವನು; ನೀನು ಭಾವಿಸಿರುವಂತೆ ಆತ ಸಾಮಾನ್ಯನಲ್ಲ" ಎಂದನು. ೩೯. "ಇದು ಸತ್ಯವಾದ ನುಡಿಯಾಗಿದ್ದರೂ ನನ್ನ ಪಾಲಿಗದು ತಪ್ಪು. ಅನ್ಯರಿಗೆ ಅಲ್ಲಮನ ಬಗೆಗೆ ಚಿಂತಿಸುವುದು ಅತಿಕಷ್ಟವೆನಿಸಿದರೂ ನನ್ನ ಚಾತುರ್ಯಕ್ಕೆ ಆತ ತನ್ನ ಅಂತರಂಗವನ್ನು ಕಾಣಿಸದೇ ಕ್ಷೇಮದಿಂದ ಹೋಗುವನೆ? ನೋಡೋಣ" ಎಂದು ಗರ್ವದಿಂದ ಗಿರಿಜೆ ನುಡಿಯಲು ಶಿವ ಹೀಗೆಂದನು. ೪೦. "ನೀನು ರಾಣಿಯಾಗಿರುವೆ. ನಿನ್ನ ಬುದ್ಧಿಯನ್ನು ಕಾಣಬಹುದು. ಇನ್ನಾದರೂ ಈ ರೀತಿಯ ಪ್ರತಿಜ್ಞೆಯನ್ನು ನುಡಿದು ಮಿಂಚಿದರೆ ಸೋಲು ನಿನಗೆ" ಎಂದು ಶಿವ ನುಡಿಯಲು ಅದಕ್ಕೆ ಪ್ರತಿಯಾಗಿ "ವ್ಯರ್ಥವಾದ ಮಾತುಗಳನ್ನು ನಿಲ್ಲಿಸು. ಇದೇ ನನ್ನ ಪ್ರತಿಜ್ಞೆಯಾಗಿರುವುದು" ಎಂದು ಪರಾಕ್ರಮದಿಂದ ಗಿರಿಜೆ ತನ್ನ ಪ್ರಾಣವಲ್ಲಭನಿಗೆಂದಳು.

ಬಳಿಕಲಂಬಿಕೆ ತನ್ನ ತಾಮಸ
ಕಳೆಯ ಮೂರುತಿಯಾದ ಮಾಯೆಯ
ನಿಳೆಯೊಳುದಯಿಸಿಯಲ್ಲಮನ ನೀನರಿದು ಬಾಯೆನಲು
ತಿಳಿವೆನಾತನ ನಿಜವನಥವಾ
ತೊಳೆದನಾದೊಡೆ ಮುಟ್ಟಿ ಹಿಡಿಕೊಂ
ಡೆಳೆದುತಹೆ ನಾನೆನುತ ಪ್ರತಿಜೆಯ ನುಡಿದಳಾ ಮಾಯೆ ೪೧

ಇಂತು ನುಡಿದುನ್ಮತ್ತ ವೃತ್ತಿ
ಭ್ರಾಂತಿಯಲಿ ತನ್ನಳವನರಿಯದೆ
ಕಂತುಹರನಾಸ್ಥಾನದಲಿ ಬೀಳ್ಕೊಂಡು ಬಿಂಕದಲಿ
ಮುಂತೆ ಮಲೆವುತ ನಲಿದು ಭೂಲೋ
ಕಾಂತರವ ನಿಶ್ಚೈಸಿ ಮಾಯಾ
ಕಾಂತೆ ಕರ ಭರವಸದಲೈದಿದಳತಿ ವಿನೋದದಲಿ ೪೨

ಅಂತು ಗತಿ ೨ ಕ್ಕಕಂ ಪದ ೬೩ಕ್ಕಂ ಮಂಗಳಂ

೪೧. ಅನಂತರ ಗಿರಿಜೆ ತನ್ನ ತಾಮಸಕಳೆಯ ಮೂರುತಿಯಾದ ಮಾಯೆಯನ್ನು ಕುರಿತು "ಭುವಿಯಲ್ಲಿ ಹುಟ್ಟಿ ಅಲ್ಲಮನನ್ನು ನೀನು ತಿಳಿದು ಬಾ" ಎನ್ನಲು, ಅದಕ್ಕೆ ಮಾಯೆ "ಅಲ್ಲಮನ ನಿಜವನ್ನು ತಿಳಿಯುವೆನು. ಇಲ್ಲವೇ ಆತ ನನ್ನನ್ನು ಮಿಂಚಿದನಾದರೆ ಆತನನ್ನು ನಾನು ಮುಟ್ಟಿ ಹಿಡಿದುಕೊಂಡು ಎಳೆದುತರುವೆನು. ಇದು ನನ್ನ ಪ್ರತಿಜ್ಞೆ" ಎಂದು ನುಡಿದಳು.
೪೨. ಹೀಗೆ ಉನ್ಮತ್ತವೃತ್ತಿಯ ಭ್ರಾಂತಿಯಿಂದ ತನ್ನ ಶಕ್ತಿಯ ಮಿತಿಯನ್ನರಿಯದೆ ನುಡಿದು ಪರಶಿವನ ಆಸ್ಥಾನದಿಂದ ಬೀಳ್ಕೊಂಡು ಬಿಂಕದಿಂದ ಮುಂದೆ ಮಲೆಯುತ್ತ ನಲಿದು ಭೂಲೋಕಾಂತರವನ್ನು ನಿಶ್ಚಯಿಸಿ, ಮಾಯಾದೇವಿ ಹೆಚ್ಚಿನ ವಿನೋದದಿಂದ ಅತಿ ಉತ್ಕಂಠಿತಳಾಗಿ ಭೂಲೋಕವನ್ನು ಮುಟ್ಟಿದಳು.

# ೩. ಮಾಯೆ ಹುಟ್ಟಿದುದು

ಗತಿ ೩

ಸೂಚನೆ : ಭೂವಳಯದೊಳು ಜನಿಸಿ ಮಾಯಾ
ದೇವಿ ಬಳೆಯುತ್ತಿರ್ದಳೊಪ್ಪುವ
ಹಾವ ಭಾವ ವಿಲಾಸ ವಿಭ್ರಮದಿಂದೆ ಮಿಗೆ ಸೊಗಸಿ

ಚಿತ್ತವಿಸುವುದು ಸಕಲಶಿವಭ
ಕ್ತೋತ್ತಮರು ಮುಂದಣ ಕಥಾಸದ್
ಬಿತ್ತರವನಮರಾದ್ರಿಗೊಪ್ಪುವ ತೆಂಕದಿಕ್ಕಿನಲಿ
ಸತ್ಯದಲಿ ಸದ್ಭಕ್ತಿಯಲಿ ಸ
ದ್ವೃತ್ತಿಯಲಿ ಸಚ್ಚರಿತದಲಿ ಸಂ
ಪತ್ತಿನಲಿ ಸಲೆ ಸೊಗಸಿ ಬೆಳುವೊಲ ದೇಶ ಮೆಱೆದಿಹುದು ೧

ಅದಱೊಳವನೀಕಾಂತೆಗೊಪ್ಪುವ
ವದನವೋ ಶೃಂಗಾರಸಾರದ
ಸದನವೋ ಸೊಬಗಿನ ಸುಮಾನದ ಸುಖದ ನೆಲೆವೀಡೊ
ಸುದತಿರತ್ನಗಳೊಗೆವ ಚೆಲುವಂ
ಬುಧಿಯೊ ಪೇಳೆನೆ ಸಕಲಸೌರಂ
ಭದಲಿ ಸೊಗಸಿಹುದಲ್ಲಿ ಬನವಸೆಯೆಂಬ ಪಟ್ಟಣವು ೨

ಆವ ಕಾಲದಲಾದೊಡೆಯು ಫಲ
ವೀವುತಿಹ ಪಲತೆರದ ನೇಱಿಲು
ಮಾವು ದಾಡಿಮ ತೆಂಗು ನಾರಂಗಾದಿ ತರುಲತೆಯು
ತೀವಿ ಚರಿಸುವ ಶುಕಪಿಕಭ್ರಮ
ರಾವಳಿಯ ನಾನಾವಿಧದ ಶೋ
ಭಾವಹವೆ ತಾನಾದುದಾ ಬನವಸೆಯಉದ್ಯಾನ ೩

ಸೂ : ಮಾಯಾದೇವಿಯು ಭೂವಲಯದಲ್ಲಿ ಜನಿಸಿ ತನಗೆ ಒಪ್ಪುವ ಹಾವ ಭಾವ ವಿಲಾಸ ವಿಭ್ರಮಗಳಿಂದ ಅತಿಶಯವಾಗಿ ಕಂಗೊಳಿಸಿ ಬೆಳೆಯುತ್ತಿದ್ದಳು. ೧. ಎಲ್ಲಾ ಶಿವಭಕ್ತ ಶ್ರೇಷ್ಠರು ಮುಂದಿನ ವಿಸ್ತಾರವಾದ ಸತ್ಕಥೆಯನ್ನು ಕೇಳುವುದು. ಅಮರಾದ್ರಿಗೆ ಒಪ್ಪುವ ದಕ್ಷಿಣದಿಕ್ಕಿನಲ್ಲಿ ಸತ್ಯ, ಸದ್ಭಕ್ತಿ, ಸದ್ವೃತ್ತಿ, ಸಚ್ಚಾರಿತ್ರ, ಸಂಪತ್ತು-ಇವುಗಳಿಂದ ಅತಿಶಯವಾಗಿ ಕಾಣುವ ಬೆಳವೊಲ ದೇಶ ಶೋಭಿಸುತ್ತಿದೆ. ೨. ಅದರಲ್ಲಿ ಭೂಕಾಂತಿಗೆ ಒಪ್ಪುವ ಮುಖವೋ; ಶೃಂಗಾರದ ತಿರುಳಿನ ಮನೆಯೋ; ಸೌಂದರ್ಯದ, ಸಂತೋಷದ, ಸುಖದ ಆವಾಸಸ್ಥಾನವೋ; ಚೆಲುವಾದ ರತ್ನಗಳನ್ನು ಹೊರಚೆಲ್ಲುವ ಮನೋಹರವಾದ ಸಮುದ್ರವೋ ಎನ್ನುವಂತೆ ಬನವಸೆಯೆಂಬ ಪಟ್ಟಣವು ಸರ್ವ ಸಂಭ್ರಮಗಳಿಂದ ಮನೋಹರವಾಗಿರುವುದು. ೩. ಎಲ್ಲಾ ಕಾಲಗಳಲ್ಲೂ ಫಲವನ್ನೀಯುತ್ತಿರುವ ನೇರಿಳೆ, ಮಾವು, ದಾಳಿಂಬ, ತೆಂಗು, ಕಿತ್ತಳೆ-ಇವೇ ಮೊದಲಾದ ಮರಗಿಡಗಳಿಂದ ತುಂಬಿ, ಅಲ್ಲಿ ಸುತ್ತಾಡುವ ಗಿಳಿ, ಕೋಗಿಲೆ, ದುಂಬಿಗಳ ಸಮೂಹದಿಂದ ಒಪ್ಪಿ ಬನವಸೆಯ ಉದ್ಯಾನವನವು ನಾನಾಬಗೆಯ ಚೆಲುವಿನಿಂದ ಕೂಡಿ ಶೋಭಿಸಿತು.

ಕೇರಿಕೇರಿಯ ತಳಿರಿಡಿದ ಗುಡಿ
ತೋರಣಂಗಳ ಪರಿಮಳಿಸುತಿಹ
ಸಾರಣೆಯ ಕಾರಣೆಯ ಗಂಧೋದಕದ ಚಳೆಯಗಳ
ಸೌರಭದ ಪೂವಲಿಗಳಲಿ ಶೃಂ
ಗಾರಿಸಿದ ಬೀದಿಗಳ ಸೊಬಗಿನ
ಸಾರದಲಿ ಸಮನಿಸಿದುದತಿಸಂರಂಭ ಬನವಸೆಯು ೪

ವೇದಶಾಸ್ತ್ರಾಗಮಪುರಾಣವ
ನೋದುವ ಧ್ವನಿಯಿಂದೆ ಕಳನೊಳು
ಕಾದಿ ಗೆಲಿದತಿಬಳರ ಕೈವಾರಿಸುವ ಧ್ವನಿಯಿಂದೆ
ಬೀದಿಬೀದಿಗಳಲ್ಲಿ ನಿಗಡನಿ
ರೋಧ ಮದಗಜತತಿಯ ಬೃಂಹಿತ
ನಾದದಲಿ ಕಳಕಳತೆವೆತ್ತಿಹುದಾಗಳಾ ಪುರವು ೫

ನುಡಿವ ಜಾಣರು ಸಕಲಶಬ್ದವ
ನ್ನಡೆವ ಜಾಣರು ನಿಖಿಳರೀತಿಯ
ಕುಡುವ ಜಾಣರು ಕುಂದದಂತಿರಲರ್ಥಿಗರ್ಥವನು
ಪೊಡವಿಗಿದು ಪೊಸತೆಂಬ ಜನಪದ
ವಿಡಿದು ಕಿಕ್ಕಿಱಿಗಿಱಿದು ಬನವಸೆ
ಗೊಡೆಯನಾಗಿರುತಿರ್ಪನ್ನೆ ಮಮಕಾರಭೂಪಾಲ ೬

೪. ಬೀದಿಬೀದಿಗಳಲ್ಲಿ ಚಿಗುರಿನಿಂದ ತುಂಬಿದ ಬಾವುಟ ತೋರಣಗಳು, ಸುಗಂಧ ಭರಿತವಾದ ನೀರಿನಿಂದ ನೆಲಸಾರಿಸುವ, ಸುಣ್ಣಗೊಂಡ ಗೋಡೆಗಳ ಅಂಚಿಗೆ ಬಣ್ಣಗಟ್ಟುವ, ಗಂಧದ ನೀರನ್ನು ಚಿಮುಕಿಸುವ, ಆನಂದವನ್ನುಂಟುಮಾಡುವ ರಂಗವಲ್ಲಿಗಳು, ಹೀಗೆ ಸಿಂಗರಿಸಿದ ಬೀದಿಗಳ ಸೌಂದರ್ಯದ ತಿರುಳಿನಿಂದ ಬನವಸೆಯು ನೋಡುವವರಿಗೆ ಹೆಚ್ಚಿನ ಆನಂದವನ್ನುಂಟುಮಾಡಿತು. ೫. ವೇದಶಾಸ್ತ್ರ ಆಗಮ ಪುರಾಣಗಳನ್ನು ಓದುವ ಧ್ವನಿಯಿಂದ, ಕಣದಲ್ಲಿ (ಜಟ್ಟಿಯೊಂದಿಗೆ) ಹೋರಾಡಿ ಗೆದ್ದ ಅತಿಶಕ್ತಿವಂತರನ್ನು ಹೊಗಳುವ ಧ್ವನಿಯಿಂದ, ಬೀದಿಬೀದಿಗಳಲ್ಲಿ ಕಾಲಿಗೆ ಕಟ್ಟಲ್ಪಟ್ಟ ಸರಪಳಿಯ ಅಡ್ಡಿಯಿಂದಾಗಿ (ಕೆರಳಿ) ಘೀಳಿಡುವ ಮದ್ದಾನೆಗಳ ತಂಡದ ಧ್ವನಿಯಿಂದ, ಆ ಪುರವು ಗದ್ದಲಮಯ ವಾಗಿರುವುದು. ೬. ಸರ್ವಶಬ್ದಗಳನ್ನೂ ನುಡಿವ ಜಾಣರು, ಸರ್ವರೀತಿಯಲ್ಲೂ ನಡೆವ ಜಾಣರು, ಯಾಚಕನಿಗೆ ಕೊರತೆಯಾಗದ ರೀತಿಯಲ್ಲಿ ಸಂಪತ್ತನ್ನು ದಾನಮಾಡುವ ಜಾಣರುಗಳಿಂದ ಕೂಡಿ ಭುವಿಗಿದು ಹೊಸತು ಎನ್ನುವಂತೆ ಕಿಕ್ಕಿರಿದು ತುಂಬಿದ ಬನವಸೆನಾಡಿಗೆ ಮಮಕಾರ ಭೂಪಾಲನು ಒಡೆಯನಾಗಿರುವನು.

ಆರು ಬಣ್ಣಿಸಬಲ್ಲರಾ ಮಮ
ಕಾರನೃಪನ ಮಹಾಪ್ರತಾಪವ
ಶೂರತೆಯ ಸಾಹಸವನಾತನ ಸಕಲಗುಣಗಣವ
ಧಾರುಣಿಯಲಪ್ರತಿಮನಾಗಿಯು
ದಾರತೆಯಲಿರುತಿಪ್ಪನಾತಗೆ
ನಾರಿಯಾಗಿಹಳೊಬ್ಬ ಮಾನಿನಿ ಮೋಹಿನೀದೇವಿ ೭

ಕುಸುಮಬಾಣನೊ ರತಿಯೊ ಮೇಣಾ
ಶಶಿಯೊ ರೋಹಿಣಿದೇವಿಯೋ ಮೇ
ಣೆಸೆವ ಸುರಪನೊ ಶಚಿಯೊ ಮೇಣ್ ಪುರುಷೋತ್ತಮನೊ ಸಿರಿಯೊ
ಹೆಸರಿಡಲು ಹವಣಲ್ಲವೆಂಬೊಂ
ದಸಮ ಸಮ್ಮೇಳದ ಸಗಾಢದ
ಬೆಸುಗೆಯಲಿ ಮಮಕಾರನೃಪ - ಮೋಹಿನಿಯರೆಸೆದಿಹರು ೮

ಅವರು ಮಕ್ಕಳ ಬಯಸಿ ಭರದಲಿ
ವಿವಿಧ ಗೌರೀವ್ರತವೆ ಮೊದಲಾ
ದವನು ನಾನಾ ಶಕ್ತಿದೇವತೆಗಳ ಸಮೂಹವನು
ಶಿವಪದಪ್ರಾಂತವನು ಸಾರದೆ
ಕವಲುವಟ್ಟೆಗಳಲ್ಲಿ ಜಡದೈ
ವವನು ಮಿಗೆ ಮಮಕಾರನೃಪ - ಮೋಹಿನಿಯರರ್ಚಿಪರು ೯

ಭಾವಿಸಲು ಮಮಕಾರ-ಮೋಹಿನಿ
ದೇವಿಯರ ಬಸುಜೆನಲಿ ವರರಾ
ಜೀವಲೋಚನೆ ರಚಿತರಂಜನೆ ಸಕಲಸಂಪನ್ನೆ
ದೇವ ದಾನವ ಮಾನವರುಗಳ
ದಾವಣಿಯ ದನವಾಗೆ ಕಟ್ಟುವ
ಭಾವೆ ಮಾಯಾದೇವಿ ಹುಟ್ಟಿದಳಖಿಳವಿಭವದಲಿ ೧೦

೭. ಆ ಮಮಕಾರ ಮಹಾರಾಜನ ಮಹಾಶೌರ್ಯವನ್ನು ಯಾರು ತಾನೇ ಬಣ್ಣಿಸಿಬಲ್ಲರು! ವೀರತ್ವ, ಸಾಹಸ ಹಾಗೂ ಸಕಲ ಗುಣಗಳ ಮೊತ್ತದಿಂದ ಭುವಿಯಲ್ಲಿ ಎಣೆಯಿಲ್ಲದವನಾಗಿ ಉದಾರಗುಣದಿಂದ ಕೂಡಿರುವ ಆತನಿಗೆ ಮೋಹಿನೀದೇವಿಯೆಂಬ ಸ್ತ್ರೀ ಪತ್ನಿಯಾಗಿರುವಳು. ೮. ಮನ್ಮಥ-ರತಿಯರೋ, ಚಂದ್ರ-ರೋಹಿಣೀದೇವಿಯರೋ, ದೇವೇಂದ್ರ-ಶಚಿದೇವಿಯರೋ ಇಲ್ಲವೆ ಪುರುಷೋತ್ತಮ-ಲಕ್ಷ್ಮಿಯರೋ, ಹೆಸರಿಡಲು ಸಾಧ್ಯವಿಲ್ಲ-ಎಂಬೊಂದು ಅಸಮಾನವಾದ ಸೇರಿಕೆಯ ಗಾಢ ಮೈತ್ರಿಯಲ್ಲಿ ಮಮಕಾರ-ಮೋಹಿನಿಯರು ಶೋಭಿಸಿರುವರು. ೯. ಅವರು ಮಕ್ಕಳನ್ನು ಬಯಸಿ ಶಿವನ ಪಾದಪ್ರವೇಶವನ್ನು ಪೂಜಿಸದೆ ನಾನಾಬಗೆಯ ಗೌರೀವ್ರತವೇ ಮೊದಲಾದ ವ್ರತಗಳನ್ನೂ, ನಾನಾಬಗೆಯ ಶಕ್ತಿದೇವತೆಗಳ, ಜಡದೇವತೆಗಳ ಪೂಜೆಯನ್ನೂ ಕವಲುದಾರಿಯಲ್ಲಿ ಮಾಡುತ್ತಿದ್ದರು. ೧೦. ಮಕ್ಕಳಿಗಾಗಿ ಮನದಲ್ಲಿ ಬಯಸಲು ಮಮಕಾರ- ಮೋಹಿನಿದೇವಿಯರ ಗರ್ಭದಲ್ಲಿ ಕಮಲದಂತೆ

ಸೂಳವಿಸಿದುವು ಗಡಣದಲಿ ನಿ
ಸ್ಸಾಳ ಗಿಡಿಬಿಡಿ ಕೊಂಬು ಚಂಬಕ
ಡೋಳು ಡೌಡೆ ಡಮಾಣ ಜಾಗಟೆ ಮದ್ದಳಾದಿಗಳು
ಓಳಿಯಲಿ ಘೀಳಿಟ್ಟು ಚೀಱುವ
ಕಾಳೆಗಳು ಮೊದಲಾದ ವಾದ್ಯದ
ಮೇಳ ಮೆಱೆದಿರ್ದುದು ಕುಮಾರಿಯ ಹೆತ್ತ ಹರುಷದಲಿ ೧೧

ಹಲವುಕಾಲಕೆ ಹರಸಿ ಹೆತ್ತರು
ಲಲಿತಗಾತ್ರೆಯ ವಿಮಳನೇತ್ರೆಯ
ವಿಳಸಿತವ್ಯಾಮೋಹ ನವರಸಭರಿತ ಪಾತ್ರೆಯನು
ಬಳಿಕ ಬುಧರಿಗೆ ಸಕಲರಿಗೆ ಪೊಂ
ಗಳನು ಭೂ ಗೋ ವಸ್ತ್ರ ರತ್ನವ
ನೊಲಿದು ದಾನವ ಮಾಡಿದನು ಮಮಕಾರಭೂಪಾಲ ೧೨

ಇತ್ತಲಿಂತೀ ಮಾಯೆ ಹುಟ್ಟಿದ
ಡತ್ತಲಖಿಳಬುಧವ್ರಜಂಗಳ
ಚಿತ್ತಗಳು ಪಲ್ಲಟಿಸಿಯಾಶಾಪಾಶ ವೆಗ್ಗಳಿಸಿ
ಮುತ್ತು ನರೆತಿಹ ಜೀವಜಾಳರಿ
ಗೆತ್ತಿ ಕಾಮಗ್ರಹವಿಕಾರತೆ
ಮುತ್ತಿ ಮುರುಟಿಸುತಿರ್ದುದೇನೆಂದೆಂಬೆನಚ್ಚರಿಯ ೧೩

ಕಣ್ಣುಳ್ಳವಳೂ, ರಂಜನೆಯನ್ನುಂಟು ಮಾಡುವವಳೂ, ಸರ್ವಗುಣಸಂಪನ್ನಳೂ ದೇವ ದಾನವ ಮಾನವರುಗಳನ್ನು ತನ್ನ ಮಾಯೆಯೆಂಬ ಹಗ್ಗದಿಂದ ಸಾಲುಗಟ್ಟುವ ಹೆಣ್ಣಾಗಿ ಮಾಯೆಯು ಸರ್ವಸಂಪದದಿಂದ ಕೂಡಿ ಹುಟ್ಟಿದಳು. ೧೧. ಭೇರಿ, ಗಿಡಿಬಿಡಿ, ಕೊಂಬು, ಚಂಬಕ, ಡೋಳು, ನಗಾರಿ, ಡಮಾಣ, ಜಾಗಟೆ, ಮದ್ದಳೆ-ಇವೇ ಮೊದಲಾದ ವಾದ್ಯಗಳು ಗುಂಪುಗೂಡಿ ಶಬ್ದಮಾಡಿದುವು. ಸಾಲಾಗಿ ಘೀಳಿಟ್ಟು ಚೀರುವ ಕಹಳೆಗಳೇ ಮೊದಲಾದ ವಾದ್ಯಗಳ ಮೇಳ ರಾಜಕುಮಾರಿಯನ್ನು ಹೆತ್ತ ಹರುಷದಲ್ಲಿ ಶೋಭಿಸಿದ್ದುವು. ೧೨. ಹಲವು ದೈವಗಳಿಗೆ ಹರಕೆ ಹೊತ್ತ (ಆ ದಂಪತಿಗಳು) ಕೆಲಕಾಲಾನಂತರ ಮನೋಹರವಾದ ಶರೀರವುಳ್ಳ, ಕಮಲದಂತಹ ಕಣ್ಣುಳ್ಳ, ವ್ಯಾಮೋಹಕ್ಕೆ ಒಳಗಾದ ಹೊಳೆಯುವ ನವರಸಭರಿತ ಪಾತ್ರೆಯನ್ನು (ಮಗುವನ್ನು) ಪಡೆದರು. ಬಳಿಕ ವಿದ್ವಾಂಸರಿಗೆ (ಹಾಗೂ) ಎಲ್ಲರಿಗೆ ಹೊನ್ನು, ಭೂಮಿ, ಗೋ, ವಸ್ತ್ರ, ರತ್ನಗಳನ್ನು ಮಮಕಾರಭೂಪಾಲನು ಒಲಿದು ದಾನ ಮಾಡಿದನು. ೧೩. ಇತ್ತ ಈ ಮಾಯೆ ಹುಟ್ಟಲು ಅತ್ತ ಸರ್ವ ವಿದ್ವಾಂಸರುಗಳ ಮನ ಅಸ್ತವ್ಯಸ್ತವಾಗಿ, ಆಶಾಪಾಶ ಹೆಚ್ಚಿ, ವಯಸ್ಸಾಗಿ ನರೆಬಂದ ಜೀವಸಮೂಹಕ್ಕೆ ಕಾಮವೆಂಬ ಗ್ರಹದಿಂದ ವಿಕಾರವು ಆವರಿಸಿ ಬಾಡಿಸುತ್ತಿದ್ದ ಆ ಆಶ್ಚರ್ಯವನ್ನು ಏನೆಂದು ಹೇಳಲಿ.

ಊರ ತೊಱೆದಡವಿಯೊಳು ಗಂಗಾ
ತೀರದೊಳು ಗಿರಿಗಹ್ವರಂಗಳ
ಘೋರತರ ಗುಹೆಗಳೊಳು ಜಲಪಂಚಾಗ್ನಿ ಮಧ್ಯದೊಳು
ಧೀರಮುನಿಗಳು ದಿಟ್ಟ ಸಿದ್ಧರು
ದಾರ ಯೋಗೀಶ್ವರರು ಭಯದಲಿ
ಘೋರನೆದೆಗುಂದಿದರು ಮಾಯೆಯ ಜನನಕಾಲದಲಿ ೧೪

ಬೆತ್ತ ಬಿದಿರಿಡಿದಿರ್ದ ತರುಲತೆ
ಹುತ್ತು ಬೆಳೆದ ಸಮಾಧಿವಂತರು
ಚಿತ್ತ ಸಂಚಲವಾಗಿ ನೆನಹಿನ ನೇಮ ನೆಲೆಗೆಡಲು
ಎತ್ತಲಿಂದೀ ಮಾಯೆ ಹುಟ್ಟಿತೆ
ನುತ್ತೆ ಚಿಂತಾಕ್ರಾಂತರಾಗಿರೆ
ಸತ್ಯನಿಧಿ ದುರ್ವಾಸನಾ ಪ್ರಸ್ತಾವದಲಿ ಸುಳಿದ ೧೫

ವಿನಯ ಮಿಗೆ ಬಳಿಕರ್ಘ್ಯಪಾದ್ಯಾ
ಸನಗಳಿಂ ಸತ್ಕರಿಸಿ ಮುದದಲಿ
ತನತನಗೆ ಸಾಧಕರು ಸಿದ್ಧರು ವರತಪೋಧನರು
ಇನಿತು ಕಾಲದೊಳಿಲ್ಲದೀಗಲು
ಮನಸು ಸಂಚಲವಾದುದೆಮಗೆಂ
ದೆನುತೆ ಪೇಳಿದರವರುಗಳು ದುರ್ವಾಸಮುನಿಪತಿಗೆ ೧೬

ಹೂಣಿಸಿಯೆ ಹುರಿಗೊಂಡು ನೆಱೆ ಗೀ
ರ್ವಾಣರೆಲ್ಲರ ಮುಂದೆ ಮಿಗೆ ರು
ದ್ರಾಣಿ ತನ್ನಯ ತಾಮಸಾಂಗದ ಮಾಯೆಯನು ಕಳುಹೆ
ಮಾಣದಿಳೆಯೊಳು ಜನಿಸಿ ಬಂದಳು
ಕಾಣಿರೇ ಬಳಿಕಲಿ ಸಮಾಧಿ
ತ್ರಾಣಿಗಳಿಗೆಲ್ಲಿಯದು ತರಹರವೆಂದನಾ ಮುನಿಪ ೧೭

೧೪. ಊರನ್ನು ಬಿಟ್ಟು ಅಡವಿಯಲ್ಲಿ, ಗಂಗಾತೀರದಲ್ಲಿ, ಪರ್ವತಗಳ ಕಠಿಣ ಪ್ರದೇಶಗಳಲ್ಲಿ, ಭಯಂಕರವಾದ ಗುಹೆಗಳಲ್ಲಿ, ಜಲಪಂಚಾಗ್ನಿಗಳ ಮಧ್ಯದಲ್ಲಿ, ಧೀರಮುನಿಗಳು ದಿಟ್ಟ ಸಿದ್ಧರು, ತ್ಯಾಗಿಗಳಾದ ಯೋಗೀಶ್ವರರು ಮಾಯಾದೇವಿಯ ಜನನಕಾಲದಲ್ಲಿ ಭಯದಿಂದ ಬೇಗನೆ ಶಕ್ತಿಗುಂದಿದರು. ೧೫. ಸುತ್ತ ಬೆತ್ತ ಬಿದಿರು ದಟ್ಟವಾಗಿ ಕವಿದಿದ್ದು, ಗಿಡಬಳ್ಳಿಗಳು, ಹುತ್ತ ಬೆಳೆದು (ನಡುವೆ) ಸಮಾಧಿಸ್ಥಿತಿಯಲ್ಲಿದ್ದ ಯೋಗಿಗಳ ಮನ ಕದಡಿ ಚಿಂತನೆಯ ನಿಯಮ ನೆಲೆತಪ್ಪಿ ಎತ್ತಲಿಂದ ಈ ಮಾಯೆ ಹುಟ್ಟಿತು ಎನ್ನುತ್ತ ಚಿಂತೆಯಿಂದ ಕೂಡಿರಲು ಸತ್ಯವೇ ನಿಧಿಯಾದ ದುರ್ವಾಸಮುನಿಯು ಆ ಸಂದರ್ಭದಲ್ಲಿ ಕಾಣಿಸಿಕೊಂಡನು. ೧೬. ಬಳಿಕ ಅತಿ ವಿನಯದಿಂದ ಅರ್ಘ್ಯ ಪಾದ್ಯ ಆಸನಗಳಿಂದ ದುರ್ವಾಸನನ್ನು ಸತ್ಕರಿಸಿದ ಸಾಧಕರು, ಸಿದ್ಧರು, ಶ್ರೇಷ್ಠ ತಪೋಧನರುಗಳೆಲ್ಲಾ "ನಮಗೆ ಇಷ್ಟುಕಾಲದವರೆಗೆ ಇಲ್ಲದಿದ್ದ ಮನಸ್ಸು ಈಗ ಚಂಚಲವಾದುದು" ಎಂದು ದುರ್ವಾಸ ಮುನಿಪತಿಗೆ ಹೇಳಿದರು. ೧೭. ಅದಕ್ಕೆ ದುರ್ವಾಸಮುನಿಯು "ಅತಿ ಉತ್ಸಾಹದಿಂದ ದೇವತೆಗಳೆಲ್ಲರ ಮುಂದೆ ಪ್ರತಿಜ್ಞೆಗೊಂಡ ಪಾರ್ವತಿ ತನ್ನ ತಾಮಸರೂಪಾದ ಮಾಯೆಯನ್ನು ಕಳುಹಲು (ಆಕೆ)

ಅಲ್ಲದಿರ್ದೊಡೆ ನಮಗಿದೆತ್ತಣ
ತಲ್ಲಣವು ಬರಲೇನು ಕಾರಣ
ವಿಲ್ಲ ನಿಮ್ಮ ನಿರೂಪವಿದು ದಿಟವೆನುತೆ ಮುನಿನಿಕರ
ಒಳ್ಳಿತಾಯಿತು ನೀವು ಕೃಪೆಯಿಂ
ದಿಲ್ಲಿಗೈತಂದುದು ನಿಮಿತ್ತದ
ಲ್ಲೆಲ್ಲ ಸಂಶಯವಳಿದುದೆಂದರು ಮುನಿಗಳಾತಂಗೆ ೧೮

ಮತ್ತೆ ಮಾಣದೆ ಕೇಳಿದರು ಮುನಿ
ಪೋತ್ತಮರು ದುರ್ವಾಸಮುನಿಯನು
ಚಿತ್ತವಿಸು ತನ್ಮಾಯೆ ಜನಿಸಿದಳೇನು ಕಾರಣವು
ಎತ್ತಣದು ಸಾಂಗತ್ಯ ನಮಗೀ
ಬಿತ್ತರವನುಸುರೆಂದೊಡವರಿಗೆ
ತಥ್ಯವನು ವರಮುನಿಗಳಿಗೆ ದುರ್ವಾಸನಿಂತೆಂದ ೧೯

ಮಾತುಮಾತಿನೊಳೋಲಗದೊಳಗ
ಜಾತೆ ಶಿವನೊಳು ಗೋಷ್ಠಿ ಮಾಡುತ
ಲಾತನನು ನಿಜರೂಪ ಕೇಳಿದೊಡಲ್ಲಮಪ್ರಭುವ
ಭೂತಳದೊಳಱಿದಲ್ಲಿ ತಿಳಿಯೆನೆ
ಭೂತನಾಥನು ಬಳಿಕ ಪಾರ್ವತಿ
ಪ್ರೀತಿಯಿಂದಟ್ಟಿದಳು ನಿಜತಾಮಸದ ಮಾಯೆಯನು ೨೦

ಭುವಿಯಲ್ಲಿ ಹುಟ್ಟಿ ಬಂದಳು. ನೋಡಿ, ತಾಮಸರೂಪಾದ ಆ ಮಾಯೆಯು ಭೂಮಿಯಲ್ಲಿ ಹುಟ್ಟಿ ಬಂದ ಮೇಲೆ ಸಮಾಧಿಸ್ಥಿತಿಯಲ್ಲಿರುವವರಿಗೆ ಶಾಂತಿ ಎಲ್ಲಿಯದು?" ಎಂದನು. ೧೮. ಹಾಗಿಲ್ಲದಿದ್ದರೆ ನಮಗೆ ಅದೆಲ್ಲಿಂದಲೋ ಭಯಬರಲು ಏನೂ ಕಾರಣವಿಲ್ಲ. ನಿಮ್ಮ ಈ ಆಜ್ಞಾಪನೆಯಲ್ಲಿ ಸತ್ಯವಿದೆ. ನೀವು ಕೃಪೆಯಿಟ್ಟು ಇಲ್ಲಿಗೆ ಬಂದುದು ಒಳ್ಳೆಯದಾಯಿತು. ನಿಮ್ಮ ಆಗಮನದ ಕಾರಣದಿಂದ ನಮ್ಮ ಸಂಶಯುಗಳೆಲ್ಲಾ ನಾಶವಾದುವು" ಎಂದು ಮುನಿಗಳು ದುರ್ವಾಸನಿಗೆ ಹೇಳಿದರು. ೧೯. ಮತ್ತೆ ಮುನಿಶ್ರೇಷ್ಠರು ದುರ್ವಾಸಮುನಿಯನ್ನು ಬಿಡದೆ, "ಆ ಮಾಯೆ ಏನು ಕಾರಣ ಜನಿಸಿದಳು? ಅವಳಿಗಿದೆಲ್ಲಿಯ ಸಂಬಂಧ? ನಮಗಿದನ್ನು ವಿಸ್ತಾರವಾಗಿ ದಯಮಾಡಿ ತಿಳಿಸಿ" ಎಂದು ಕೇಳಿದರು. ಆಗ ದುರ್ವಾಸನು ಆ ಶ್ರೇಷ್ಠ ಮುನಿಗಳಿಗೆ ದಿಟವನ್ನು ಹೀಗೆಂದು ಹೇಳಿದನು. ೨೦. ಕೈಲಾಸದ ಒಡ್ಡೋಲಗದಲ್ಲಿ ಪಾರ್ವತಿ ಶಿವನೊಂದಿಗೆ ಮಾತುಮಾತಿಗೆ ಚರ್ಚೆ ಮಾಡುತ್ತ ಆತನ ನಿಜರೂಪದ ಬಗೆಗೆ ಕೇಳಿದಾಗ, ಭೂಮಿಯಲ್ಲಿ ಅಲ್ಲಮಪ್ರಭುವನ್ನು ತಿಳಿದು ಅವನಿಂದ ಇದನ್ನು ಅರಿ ಎಂದು ಶಿವನು ಹೇಳಿದನು. ಬಳಿಕ ಪಾರ್ವತಿಯು ತನ್ನ ತಾಮಸಕನ್ಯೆಯಾದ ಮಾಯೆಯನ್ನು ಪ್ರೀತಿಯಿಂದ (ಭೂಲೋಕಕ್ಕೆ) ಕಳಿಸಿದಳು.

ಇದುವೆ ಕಾರಣ ಮಾಯೆ ತಾ ಹು
ಟ್ಟಿದಳು ಬಳಿಕಿನ್ನಾರಿಗಾದೊಡೆ
ವಿದಿತವಾಗಿಹುದಲ್ಲಮಪ್ರಭುಲಿಂಗಸಂಗವನು
ಹೃದಯದೊಳು ಹುರಿಗೊಳಿಸುವೊಡೆ ಬಳಿ
ಕದಱ ಮಹಿಮೆಯನೇನ ಹೇಳುವೆ
ಸದಮಳಸ್ವಾತಂತ್ರ್ಯ ನಿಜವಹುದೆಂದನಾ ಮುನಿಪ ೨೧

ಎಂದು ಪೇಳ್ದೆಲ್ಲರಿಗೆ ಮನದ ತ
ಮಂಧವನು ಪರಿಹರಿಸಿ ಬಳಿಕಾ
ನಂದದಲಿ ದುರ್ವಾಸಮುನಿ ಹೋದನು ನಿಜಾಶ್ರಮಕೆ
ಅಂದು ಮೊದಲಾಗಜಿವವರು ಮನ
ಬಂದ ಪರಿಯಲಿ ಭಕ್ತಿಯುಕ್ತಿಗ
ಳಿಂದ ಸಾಧಿಸುತಿರ್ದರೆಮ್ಮಯ ಗುರು ಗುಹೇಶ್ವರನ ೨೨

ಮತ್ತೆ ಮನದಲಿ ತಮ್ಮ ತಮ್ಮಯ
ಚಿತ್ತದೊಳಗಲ್ಲಮನ ನೆನೆವುತೆ
ಸುತ್ತಿ ಸುಳಿಯದೆ ಮುನ್ನಿನಂತಿರ್ದರು ತಪೋಧನರು
ಇತ್ತಲೀ ಮಮಕಾರನೆಂಬ ನೃ
ಪೋತ್ತಮನ ಸುಕುಮಾರಿ ಮಿಗೆ ಬಳೆ
ವುತ್ತಲಿರ್ದಳು ಗಳಿಗೆಸಂಖ್ಯೆಗೆ ಸಕಲಸುಖದಿಂದೆ ೨೩

೨೧. ಈ ಕಾರಣದಿಂದ ಮಾಯೆಯು ಹುಟ್ಟಿದಳು. ಶಿವನ ಸಾತ್ವಿಕರೂಪಾದ ಅಲ್ಲಮಪ್ರಭುವಿನ ಸಂಗವನ್ನು ಹೃದಯದಲ್ಲಿ ತೀವ್ರಗೊಳಿಸುವವರು ಯಾರೇ ಆಗಲಿ ಅವರಿಗೆ ಅವನ ನಿಜರೂಪು ತಿಳಿದ ಅನಂತರ - ಅದರ ಮಹಿಮೆಯನ್ನು ಏನೆಂದು ಹೇಳಲಿ-"ಒಳ್ಳೆಯದಾದ, ಪರಿಶುದ್ಧವಾದ ಸ್ವಾತಂತ್ರ್ಯ ಸಿದ್ಧಿಸುವುದು" ಎಂದು ಮುನಿಪನು ಆ ಋಷಿಗಳಿಗೆ ತಿಳಿಸಿದನು. ೨೨. ಹೀಗೆಂದು ಎಲ್ಲರ ಮನಸ್ಸಿನ ಕತ್ತಲೆಯನ್ನು ಕಳೆದು ಬಳಿಕ ಆನಂದದಿಂದ ದುರ್ವಾಸಮುನಿ ತನ್ನ ಆಶ್ರಮಕ್ಕೆ ಮರಳಿದನು. ಅಂದು ಮೊದಲಾಗಿ ಪರಶಿವನ ನಿಜವನ್ನರಿಯಲು ಬಯಸುವವರು ಮನಬಂದ ರೀತಿಯಲ್ಲಿ ಭಕ್ತಿಯುಕ್ತಿಗಳಿಂದ ನಮ್ಮ ಗುರು ಗುಹೇಶ್ವರನನ್ನು ಒಲಿಸಿಕೊಳ್ಳಲು ಅಭ್ಯಾಸಮಾಡುತ್ತಿರುವರು. ೨೩. ಮನದಲ್ಲಿ, ತಮ್ಮ ತಮ್ಮ ಚಿತ್ತದಲ್ಲಿ ಅಲ್ಲಮನನ್ನು ಧ್ಯಾನಿಸುತ್ತಾ ಮತ್ತೆ ಮನವನ್ನು ಅತ್ತ ಇತ್ತ ಸುಳಿಯದಂತೆ ಒಂದೆಡೆ ನಿಲಿಸಿ ಆ ಮುನಿಗಳು ಮೊದಲಿನ ಹಾಗೆ ಇದ್ದರು. ಇತ್ತ ಈ ಮಮಕಾರನೆನ್ನುವ ರಾಜಶ್ರೇಷ್ಠನ ಮಗಳು ಮಾಯಾದೇವಿಯು ಸರ್ವಸುಖದಿಂದ ಕೆಲ ನಿಮಿಷಗಳಲ್ಲೇ ವರ್ಧಿಸಿ ಬೆಳೆಯುತ್ತಿದ್ದಳು.

ಸಿಸುವ ನೋಡಿದ ಕಣ್ಗೆ ಮಾಯವೆ
ಮುಸುಕುವುದು ಮನ ಮೆಚ್ಚುವುದು ಮೋ
ಹಿಸುವುದೀ ಪರಿ ಜನನಿಜನಕಾದ್ಯರುಗಳೆಲ್ಲರಿಗೆ
ವಸುಮತೀಪತಿ ಬಳಿಕಲತಿಸಂ
ತಸದಲಾತ್ಮಜೆಗಖಿಲವಿಭವದಿ
ಹೆಸರನಿಟ್ಟನು ಮಾಯೆಯೆಂಬ ನವೀನನಾಮವನು ೨೪

ಉಲಿವ ಗೆಜ್ಜೆಯ ಕಾಲ ಕಡಗದ
ಘುಲಘುಲಿಸುವಂದುಗೆಯ ರತುನದ
ಉಳಿಯ ಕಟಿಸೂತ್ರದ ಝಣತ್ಕಾರಿಸುವ ಕಂಕಣದ
ಹುಲಿಯುಗುರ ಬಂದಿಯ ಸುಥಾಳದ
ಲೊಲೆವ ಮಾಗಾಯಿಗಳ ಪೊಳೆವರ
ಳೆಲೆಯ ಮಿಸುಗುವ ಬಾಲದೊಡಿಗೆಯ ಮಾಯೆಗಿಕ್ಕಿದರು ೨೫

ಪೆಚ್ಚುನೀರೆಱೆದಿಟ್ಟು ತೊಟ್ಟಲೊ
ಳೊಚ್ಚೆಱಗ ದುಗುಲದಲಿ ಹೊಕ್ಕುಳ
ಮುಚ್ಚಿ ಸೊಡರಕ್ಕಿನಲಿ ಬೊಟ್ಟಟ್ಟೊಲವಿನಲಿ ಹರಸಿ
ನಿಚ್ಚದಲಿ ತೂಪಿಱೆದು ತೂಗುವ
ನಚ್ಚುಮಚ್ಚಿನ ದಾದಿಯರ್ಗಂ
ಮೆಚ್ಚನೀವುತೆ ಹೆಚ್ಚುತಿರ್ದಳು ಮೋಹಿನೀದೇವಿ ೨೬

೨೪. ತಾಯಿ ತಂದೆಯರೇ ಮೊದಲಾದವರಿಗೆಲ್ಲಾ ಶಿಶುವನ್ನು ನೋಡಿದ ಕಣ್ಣುಗಳಿಗೆ ಮಾಯವೆ ಕವಿಯುವುದು, ಮನಸ್ಸು ಮೆಚ್ಚುವುದು, ಆಕರ್ಷಿಸುವುದು. ಈ ರೀತಿಯಲ್ಲಿರಲು ಮಮಕಾರನು ಅತಿ ಸಂತೋಷದಿಂದ ತನ್ನ ಮಗಳಿಗೆ ಸರ್ವವೈಭವದಿಂದ ಮಾಯೆ ಎಂಬ ಹೊಸದಾದ ಹೆಸರನ್ನು ಇಟ್ಟನು. ೨೫. ನಾದವನ್ನುಂಟುಮಾಡುವ ಕಾಲಗೆಜ್ಜೆ, ಕಡಗ, ಮಧುರನಾದವನ್ನುಂಟುಮಾಡುವ ಕಾಲಂದುಗೆ, ಕಾಂತಿಯುಕ್ತವಾದ ರತ್ನ, ಉಡಿದಾರ, ಝಣತ್ಕಾರಮಾಡುವ ಕಂಕಣ, ಹುಲಿಯುಗುರ ಆಭರಣ, ಕಾಂತಿಯಿಂದ ತೂಗಾಡುವ ಮಾಗಾಯಿ, ಹೊಳೆಯುವ ಅರಳೆಲೆ ಇತ್ಯಾದಿ ಪ್ರಕಾಶಿಸುವ ಬಾಲದೊಡಿಗೆಗಳನ್ನು ಮಾಯಾದೇವಿಗೆ ತೊಡಿಸಿದರು. ೨೬. ಬಿಸಿನೀರನ್ನು ಹಾಕಿ (ಸ್ನಾನಮಾಡಿಸಿ) ತೊಟ್ಟಿಲಿನಲ್ಲಿ ಮಲಗಿಸಿ ಒಚ್ಚೆರಗಿನ ವಸ್ತ್ರದಿಂದ ಹೊಕ್ಕಳವನ್ನು ಮುಚ್ಚಿ, ದೀಪದ ಬತ್ತಿಯ ಮಸಿಯಿಂದ ಬೊಟ್ಟನಿಟ್ಟು, ಪ್ರೀತಿಯಿಂದ ಆಶೀರ್ವದಿಸಿ, ನಿತ್ಯವೂ ದೃಷ್ಟಿತೆಗೆದು ತೊಟ್ಟಿಲನ್ನು ತೂಗುವ ನಂಬಿಕೆಯ ಪ್ರೀತಿಗೆ ಪಾತ್ರರಾದ ದಾದಿಯರಿಗೆ ಬಹುಮಾನವನ್ನು ಕೊಡುತ್ತ ಮೋಹಿನಿದೇವಿ ಹಿಗ್ಗುತ್ತಲಿದ್ದಳು.

ಹಲಗೆಮಾಣಿಕದೊಟ್ಟಿಲಲಿ ಮ
ಗ್ಗುಲಿಸಿ ಮಲಗಿ ನಿರೀಕ್ಷಿಸುತೆ ಮಾ
ರ್ಪೊಳೆವ ತನ್ನನೆ ಕಂಡು ನಲಿಯುತೆ ನಗುತೆ ಕೈದುಡುಕಿ
ಸೆಳೆದು ತೆಗೆದರು ಬಾರದಿರಲಾ
ನೆಳಲನೊದೆವುತೆ ಕಾಲಗೆಜ್ಜೆಗ
ಳುಲುಹನಾಲಿಪ ಮಾಯೆ ಮೆಱೆದಳು ಬಾಲಲೀಲೆಯಲಿ ೨೭

ಹೊಡೆಮರಳ ಕಲಿತರೆ ವಿರಕ್ತರ
ದೃಢತೆ ಹೊಡೆಗೆಡೆಯಿತ್ತು ದಟ್ಟಡಿ
ಯಿಡಲು ಕೆಟ್ಟುದು ಶೌಚ ಬಾಲಬ್ರಹ್ಮಚಾರಿಗಳ
ನುಡಿಗಲಿಯೆ ಮೌನಿಗಳ ಬಾಯ್ಗಳ
ಲಿಡಿದ ಮುದ್ರೆಗಳೊಡೆದುವೆಂದೆನೆ
ನುಡಿವೆನಾನಿನ್ನೇನ ಮಾಯೆಯ ಬಳವಿಗೆಯ ಬಲುಹ ೨೮

ಆಡಿಸುವ ದಾದಿಯರ ಸಂಜ್ಞೆಯ
ಲಾಡಿ ಪರಿದಪ್ಪಪ್ಪೆನುತ್ತಲಿ
ಕೂಡೆ ನಡೆತಂದಪ್ಪಿ ಮೇಲುದ ಸೆಱಗಿನೊಳಗಡಗಿ
ನೋಡುತಲಿ ದಾ ಎನುತೆ ಚೆಲ್ವಿಮುಂ
ಡಾಡಿ ಮುಂದಲೆವಿಡಿದು ಕುಣಿಕುಣಿ
ದಾಡಿ ಸೌಖ್ಯವನೀಯುತಿರ್ದಳು ಮಾಯೆ ಮೋಹಿನಿಗೆ ೨೯

೨೭. ಮಾಣಿಕ್ಯದ ಹಲಗೆಗಳ ತೊಟ್ಟಿಲಿನಲ್ಲಿ ಮಗ್ಗುಲಾಗಿ ಮಲಗಿ, ಅದರಲ್ಲಿ ತನ್ನ ಪ್ರತಿಬಿಂಬವನ್ನು ಕಂಡು ನಲಿದು ನಗುತ್ತಾ ಕೈಚಾಚಿ ಸೆಳೆದು ತೆಗೆಯಲು ಪ್ರಯತ್ನಿಸಿ ಅದು ಕೈಗೆ ಬರದಿರಲು ಆ ನೆಳಲನ್ನು ಒದೆಯುತ್ತಾ ಕಾಲಗೆಜ್ಜೆಗಳ ಧ್ವನಿಯನ್ನು ಆಲಿಸುವ ಮಾಯೆ ತನ್ನ ಬಾಲಲೀಲೆಯಿಂದ ಶೋಭಿಸಿದಳು. ೨೮. ಮಾಯೆ ಮಗ್ಗುಲಾಗ ಕಲಿತರೆ ವಿರಕ್ತರ ದೃಢತೆ ಏಟು ತಿಂದು ಶಕ್ತಿಹೀನವಾಗುತ್ತಿತ್ತು. ಮೃದುವಾದ ಹೆಜ್ಜೆಗಳನ್ನಿಡಲು ಬಾಲಬ್ರಹ್ಮಚಾರಿಗಳ ಶುಚಿತ್ವ ನಾಶವಾಗುತ್ತಿತ್ತು. ಮಾತು ಕಲಿಯಲು ಮೌನಿಗಳ ಮುಚ್ಚಿದ ಬಾಯ ಮುದ್ರೆಗಳು ಒಡೆದುವು ಎನ್ನಲು, ಮಾಯೆಯ ಬೆಳವಣಿಗೆಯ ಶಕ್ತಿಯನ್ನು ನಾನಿನ್ನೇನ ಹೇಳುವೆ? ೨೯. ತನ್ನನ್ನು ಆಡಿಸುವ ದಾದಿಯರ ಸಂಜ್ಞೆಯಂತೆ ಆಡಿ ನಡೆದು, ಅಪ್ಪಪ್ಪೆನುತ್ತಾ ಅವರ ಜೊತೆಯೇ ನಡೆದುಬಂದು (ಬೀಳುವ ಸಮಯದಲ್ಲಿ) ಅವರನ್ನು ಅಪ್ಪಿಹಿಡಿದು, ಮೇಲುವಸ್ತ್ರದ ಸೆರಗಿನನಲ್ಲಿ ಮುಖವನ್ನು ಅಡಗಿಸಿ ನೋಡುತ್ತಾ ದಾ ಎನ್ನುತ್ತಾ ಚೆನ್ನಾಗಿ ತಲೆದೂಗುವ, ಮುಂಗುರುಳನ್ನು ಹಿಡಿದುಕೊಂಡು ಕುಣಿಕುಣಿದಾಡುವ ಮಾಯೆ ಮೋಹಿನಿದೇವಿಗೆ (ತನ್ನ ಬಾಲಲೀಲೆಗಳಿಂದ) ಸೌಖ್ಯವನ್ನು ಉಂಟುಮಾಡುತ್ತಿದ್ದಳು.

ಒಮ್ಮೆ ಮಮಕಾರವನಿಪನನೊ
ಮ್ಮೊಮ್ಮೆ ಮೋಹಿನಿದೇವಿಯನು ಮ
ತ್ತೊಮ್ಮೆ ತನ್ನುವನಾಡಿಸುವ ತರುಣಿಯರ ತಂಡವನು
ಹೆಮ್ಮೆಗೊಳಿಸುತೆ ಸುಖಮುಖವ ಹೊಱ
ಹೊಮ್ಮಿಸುತೆ ನೆಱೆ ಬಾಲಲೀಲೆಯ
ಸೊಮ್ಮ ಸೂಱೆಯ ಕೊಡುತಲಿರ್ದಳು ಮಾಯೆ ಮಹಿಯೊಳಗೆ ೩೦

ಬೀಱುತಿರ್ದಳು ಮುದ್ದುತನವನು
ಹೇಱುತಿರ್ದಳು ಸಕಲ ಚೆಲುವನು
ತೋಱುತಿರ್ದಳು ಜಗದ ಜಂಗುಳಿಗಾಡುವೊಲನಾಗಿ
ಸಾಱುತಿರ್ದಳು ಸಕಲಸೊಬಗನು
ಮೀಱುತಿರ್ದಳು ದಿನದಿನಕೆ ಕಳೆ
ಯೇಱುತಿರ್ದಳು ಮಾಯೆ ವಿವಿಧವಿಲಾಸವೃತ್ತಿಯಲಿ ೩೧

ಹಿಡಿಹಿಡಿದುಕೊಂಡರ್ತಿಯಲಿ ಬೆಂ
ಬಿಡದೆ ಶಿಕ್ಷಾಚಾರ್ಯತನದಲಿ
ಜಡಿದು ಜಂಕಿಸಿ ಮುದ್ದುತನ ಮಿಗೆ ಮಾಯೆ ತನ್ನಂತೆ
ನಡೆಯ ಕಲಿಸಿದಳಂಚೆವಿಂಡಿಗೆ
ನುಡಿಯ ಕಲಿಸಿದಳರಗಿಳಿಗೆ ಸರ
ವಿಡಲು ಕಲಿಸಿದಳಾಕೆ ತನ್ನರಮನೆಯ ಕೋಗಿಲೆಗೆ ೩೨

ಮನದ ಮಾತಿನ ರೀತಿಗಳು ಕ
ಣ್ಣಿನಲಿ ಕೈಗಳ ಸಂಜ್ಞೆಗಳು ಹು
ಬ್ಬಿನಲಿ ಸೊಬಗಿನ ಸೌಮ್ಯತೆಯ ಸಂಗ್ರಹವು ಮೊಲೆಗಳಲಿ
ಅನುಕರಿಸಿ ಮೊನೆದೋಱುತಿರ್ದುವು
ದಿನದಿನಕೆ ಹೆಚ್ಚುತಲಿ ಮಾಯಾ
ವನಿತೆಗಂಕುರಿಸಿತ್ತು ಜವ್ವನ ಜಗವ ಜೋಂಪಿಸುತೆ ೩೩

೩೦. ಒಮ್ಮೆ ಮಮಕಾರ ಮಹಾರಾಜನನ್ನು, ಒಮ್ಮೊಮ್ಮೆ ಮೋಹಿನಿದೇವಿಯನ್ನು, ಮತ್ತೊಮ್ಮೆ ತನ್ನನ್ನು ಆಡಿಸುವ ತರುಣಿಯರ ಸಮೂಹವನ್ನು ಹೆಮ್ಮೆಗೊಳಿಸುತ್ತ, ಸುಖವನ್ನು ಮುಖದಲ್ಲಿ ಹೊಮ್ಮಿಸುತ್ತ ಮಾಯೆ ಭುವಿಯೊಳಗೆ ತನ್ನ ಬಾಲಲೀಲೆಯೆಂಬ ಐಶ್ವರ್ಯವನ್ನು ಸೂರೆಮಾಡಿಕೊಡುತ್ತಿದ್ದಳು. ೩೧. ಮಾಯೆ ಮುದ್ದುತನವನ್ನು ಬೀರುತ್ತಾ, ತನ್ನ ಸಕಲ ಚೆಲುವಿಕೆಯನ್ನು ಹೇರುತ್ತಾ ಜಗದ ಸಮೂಹಕ್ಕೆ ಆಡುಸ್ಥಳವಾಗಿ (ತನ್ನ ಲೀಲೆಗಳನ್ನು) ತೋರುತ್ತಿದ್ದಳು, ತನ್ನ ಸರ್ವಸೌಂದರ್ಯವನ್ನು (ಲೋಕಕ್ಕೆ) ಸಾರುತ್ತಿದ್ದಳು. ದಿನದಿನಕ್ಕೆ ಮೀರಿ ಬೆಳೆಯುತ್ತ, ಕಳೆಯೇರುತ್ತ ತನ್ನ ವಿವಿಧ ವಿಲಾಸವೃತ್ತಿಗಳಿಂದ ರಂಜಿಸುತ್ತಿದಳು. ೩೨. ಪ್ರೀತಿಯಿಂದ ಬೆನ್ನು ಹತ್ತಿಹೋಗಿ ಹಿಡಿಹಿಡಿದುಕೊಂಡು ಗುರುತನದಲ್ಲಿ ತನ್ನ ಮುದ್ದುತನ ಅತಿಶಯವಾಗಿರಲು ಮಾಯೆ ತನ್ನಂತೆಯೇ ನಡೆಯನ್ನು ಹಂಸೆಗಳ ಸಮೂಹಕ್ಕೆ, ನುಡಿಯನ್ನು ಅರಗಿಳಿಗೆ, ಹಾಡಲು ತನ್ನರಮನೆಯ ಕೋಗಿಲೆಗೆ ಕಲಿಸಿದಳು. ೩೩. ಮನಸ್ಸಿನ ಆಲೋಚನೆಯ ರೀತಿಗಳು ಕಣ್ಣಿನಲ್ಲೂ, ಕೈಗಳ ಸಂಜ್ಞೆಗಳು ಹುಬ್ಬಿನಲ್ಲೂ, ಸೌಂದರ್ಯದ ಪ್ರಶಾಂತತೆಯ ಕೂಡಿಕೆಯು ಮೊಲೆಗಳಲ್ಲೂ ಅನುಕರಿಸಿ ತೋರುತ್ತಿದ್ದುವು. ಜಗತ್ತನ್ನೇ

ಆ ನಟನೆಯಾ ರೀತಿಯಾ ನಿಲ
ವಾ ನಡೆವ ಗತಿ ಗಮಕವಾ ತೊಡೆ
ಯಾ ನಿತಂಬಗಳಾ ನಡುವಿನಸಿದಾ ಪೊಲೆಯ ಚೆಲುವು
ಆ ನಯದ ತೋಳಾ ಮುಖಾಂಬುಜ
ವಾ ನಯನವಾ ನೋಟವಾ ತುಱು
ಬಾ ನವೀನತೆಯುಡಿಗೆಯೇಂ ನೆಲಸಿದವೊ ಮಾಯೆಯಲಿ ೩೪

ಮಾಡಿಸಿದನು ಕುಮಾರಿತಿಗೆ ಮಣಿ
ಮಾಡ ನಾನಾಪರಿಯ ಮಂಟಪ
ಖೇಡಕುಳಿಯುಪವನಗಳೋಲಗ ಶಾಲೆ ಮೊದಲಾದ
ರೂಢಿಸಿದ ವಿನಿಯೋಗ ಕೇಳಿಗೆ
ಜೋಡಿಸಿದ ಮನೆಗಳನು ಕನ್ನೆಗೆ
ಮಾಡವೊಂದನು ರಚನೆಯಲಿ ಮಮಕಾರಭೂಪಾಲ ೩೫

ಆಕೆ ಕನ್ಯಾಮಾಡದೊಳು ನಾ
ನಾ ಕುಶಲಶಾಸ್ತ್ರವನು ವಿದ್ಯಾ
ನೀಕವನು ಪರಿಚರಿಸಿ ಪರಿಣತೆಯಾಗಿ ಸುಖದಿಂದೆ
ಆ ಕುಮಾರಿತಿಯಿರುತಿರಲು ಬಳಿ
ಕಾ ಕಳಾನಿಧಿ ನೃಪತಿ ಮಾಯೆಗೆ
ಬೇಕೆನುತಲಾಳಾಪಿಸಿದ ಮದುವೆಯಂಸು ಮನದೊಳಗೆ ೩೬

ಮೈಮರೆಸುವ ಯೌವನವು ಮಾಯಾದೇವಿಯಲ್ಲಿ ಹುಟ್ಟಿ ದಿನದಿನವೂ ವರ್ಧಿಸುತ್ತಲಿದ್ದಿತು. ೩೪. ಆ ನಟನೆಯ ಕ್ರಮ, ಆ ನಿಲವು, ಆ ನಡೆವ ನಡಿಗೆಯ ರೀತಿ, ಆ ತೊಡೆ, ಆ ನಿತಂಬಗಳು, ಆ ಸಣ್ಣನೆಯ ನಡುವು, ಆ ಮೊಲೆಗಳ ಚೆಲುವು, ಆ ನಯವಾದ ತೋಳುಗಳು, ಆ ಕಮಲದಂತಹ ಮುಖವು, ಆ ಕಣ್ಣು, ಆ ನೋಟ, ಆ ಮುಂದಲೆ, ಆ ನವೀನವಾದ ಉಡಿಗೆಗಳು ಮಾಯಾದೇವಿಯಲ್ಲಿ ಏನು ಸೊಗಸಾಗಿ ನೆಲಸಿದುವೋ! ೩೫. ಮಮಕಾರಭೂಪಾಲನು ಕುಮಾರಿ ಮಾಯಾದೇವಿಗೆ ಮಣಿಮಯವಾದ ಉಪ್ಪರಿಗೆಯನ್ನೂ, ನಾನಾ ಬಗೆಯ ಮಂಟಪಗಳನ್ನೂ ಆಟದ ಸ್ಥಳಗಳನ್ನೂ, ಉಪವನಗಳನ್ನೂ, ಓಲಗಶಾಲೆ ಮೊದಲಾದುವುಗಳನ್ನೂ, ಪ್ರಸಿದ್ಧರಾದ ಊಳಿಗದವರ ವಿನೋದಕ್ಕಾಗಿ ಮನೆಗಳನ್ನೂ ಅಣಿಮಾಡಿದನು. ಹೀಗೆ ಭವ್ಯವಾದ ಭವನವೊಂದನ್ನು ಮಗಳಿಗೆ ರಚಿಸಿದನು. ೩೬. ಮಾಯಾದೇವಿ ತನ್ನ ಕನ್ಯಾಭವನದಲ್ಲಿ ನಾನಾ ಬಗೆಯ ಕುಶಲಶಾಸ್ತ್ರಗಳನ್ನೂ ಎಲ್ಲ ವಿದ್ಯೆಗಳನ್ನೂ ಅಭ್ಯಾಸಮಾಡಿ ಅವುಗಳಲ್ಲಿ ಪರಿಣತಳಾಗಿ ಸುಖದಿಂದ ಇರುತ್ತಿರಲು ಬಳಿಕ ಕಲಾನಿಧಿಯಾದ ಮಮಕಾರಭೂಪಾಲನು ತನ್ನ ಮನಸ್ಸಿನಲ್ಲಿ ಮಾಯಾದೇವಿಗೆ ಮದುವೆ ಮಾಡಬೇಕೆಂದು ಆಲೋಚಿಸಿದನು.

ಲಾಳ ಗುಜ್ಜರ ಬೋಟ ಕರಹಟ
ಚೋಳ ಪಾಂಡ್ಯ ಕಳಿಂಗ ಚೀನ ಕ
ರಾಳ ಕೊಂಕಣ ಮಲಯ ಮಗಧ ಮರಾಟ ನೇಪಾಳ
ಮಾಳವರು ಮೊದಲಾದ ಭೂಮೀ
ಪಾಲರೊಳುಯೆನ್ನಯ ಕುಮಾರಿಯ
ತೋಳದೊಡವಿನ್ನಾರೆನುತೆ ಚಿಂತಿಸಿದನವನೀಶ ೩೭

ಇರುತಿರಲು ಮಮಕಾರಭೂಮೀ
ಶ್ವರನ ವಿಮಲಾನ್ವಯಕೆ ನೆಟ್ಟನೆ
ಗುರುವೆನಿಪಹಂಕಾರನೆಂಬಾಚಾರ್ಯನೈತಂದು
ಅರಸು ಮಾಡುವ ವಂದನೆಯನಾ
ದರಣೆಯನು ಕೈಕೊಳುತೆ ಕೇಳಿದ
ಕರುಣದಿಂದಲಿ ಭೂಮಿಪನ ಸುಕ್ಷೇಮಕುಶಲವನು ೩೮

ಕೇಳಿ ಹರುಷಿತನಾದನಾ ಭೂ
ಪಾಲಕನ ಸುಕ್ಷೇಮಕುಶಲವ
ನಾಲಿಸುತಲವನಿಪನ ಕೆಲದ ಕುಮಾರಿಯನು ಕಂಡು
ಆ ಲತಾಂಗಿಯ ರೂಪರೇಖಾ
ಜಾಲವನು ಚೆನ್ನಾಗಿ ತಿಳಿದು ಕೃ
ಪಾಳು ನಿಶ್ಚೈಸಿದನು ಕಾರಣಕನ್ನೆಯಿವಳೆಂದು ೩೯

ಇನಿತು ನೆಯ್ದಿಲುಗಣ್ಣ ಕೋಕ
ಸ್ತನದ ತೊಳಪ ಮೃಣಾಳನಾಳದ
ತನುಲತೆಯ ಮಿಸುಗುವ ತರಂಗದ ನಿಜೆಯ ನಿಜೆಗೆಗಳ
ಇನಿತು ಚೆಲುವಿನಲಿಪ್ಪ ಮಾಯಾಂ
ಗನೆಯ ಲಾವಣ್ಯಾಂಬುಸರಸಿಯ
ಲನುಚರಿಸುವಂತಪ್ಪ ಹಂಸನ ಕೇಳ್ದನಾಚಾರ್ಯ ೪೦

೩೭. ಲಾಳ, ಗುಜ್ಜರ, ಬೋಟ, ಕರಹಟ, ಚೋಳ, ಪಾಂಡ್ಯ, ಕಳಿಂಗ, ಚೀನ, ಕರಾಳ, ಕೊಂಕಣ, ಮಲಯ, ಮಗಧ, ಮರಾಠ, ನೇಪಾಳ, ಮಾಳವ ಮೊದಲಾದ ದೇಶದ ಅರಸರಲ್ಲಿ ತನ್ನ ಕುಮಾರಿಯ ತೋಳಿನ ಆಭರಣ ಯಾರಾಗುವರು ಎಂದು ಮಮಕಾರ ಚಿಂತಿಸಿದನು. ೩೮. ಹೀಗಿರಲು, ಮಮಕಾರ ಮಹಾರಾಜನ ಪವಿತ್ರವಾದ ವಂಶಕ್ಕೆ ನೇರ ಗುರುವಾದ ಅಹಂಕಾರನೆಂಬ ಆಚಾರ್ಯನು ಆಗಮಿಸಿ, ಅರಸನು ಮಾಡಿದ ನಮಸ್ಕಾರವನ್ನು, ಗೌರವವನ್ನು ಸ್ವೀಕರಿಸುತ್ತಾ ಮಹಾರಾಜನ ಕ್ಷೇಮ ಸೌಖ್ಯಗಳನ್ನು ಕರುಣೆಯಿಂದ ಕೇಳಿದನು. ೩೯. ಕೃಪಾಮೂರ್ತಿಯಾದ ಅಹಂಕಾರಾಚಾರ್ಯನು ಮಮಕಾರಮಹಾರಾಜನ ಕ್ಷೇಮಸಮಾಚಾರವನ್ನು ಕೇಳಿ ಸಂತೋಷಗೊಂಡು ಪಕ್ಕದಲ್ಲಿದ್ದ ಕುಮಾರಿ ಮಾಯಾದೇವಿಯನ್ನು ನೋಡಿ ಲತೆಯಂತೆ ಬಳುಕುವ ಶರೀರವುಳ್ಳ ಆ ಕನ್ನೆಯ ರೂಪ ರೇಖಾಜಾಲವನ್ನು ಚೆನ್ನಾಗಿ ಪರಿಶೀಲಿಸಿ ಇವಳು ಕಾರಣಕನ್ಯೆಯೆಂದು ಮನದಲ್ಲಿ ನಿಶ್ಚಯಿಸಿದನು. ೪೦. ಅಹಂಕಾರಾಚಾರ್ಯನು ಕಮಲದಂತಹ ಕಣ್ಣು, ಚಕ್ರವಾಕ ಪಕ್ಷಿಗಳಂತಹ ಮೊಲೆ, ಕಮಲದ ದಂಟಿನಂತೆ ಕೋಮಲವಾದ ಬಳ್ಳಿಯಂತಹ ದೇಹ, ಅಲುಗಾಡುವ ತೆರೆಗಳಂತಹ ನಿರಿಯ ಮಡಿಕೆ ಇಷ್ಟು ಚೆಲುವಿಕೆಯಿಂದ ಕೂಡಿರುವ

ಕೇಳಲಾಚಾರ್ಯಂಗೆ ಧರಣೀ
ಪಾಲ ಬಿನ್ನೈಸಿದನು ನೀವೇ
ಹೇಳಬೇಹುದು ದೇವ ವರನಾರೀ ಕುಮಾರಿತಿಗೆ
ಲಾಲಿಸುವುದುರಗೇಂದ್ರಸುರನರ
ಜಾಲದೊಳು ಸಾದೃಶ್ಯ ಸದ್ಗುಣ
ಶೀಲರಾರೆನಲರಸಗೊಲಿದಾಚಾರ್ಯನಿಂತೆಂದ ೪೧

ಫಲಿತಚೂತದ ಮರನ ಸಿರಿ ಕೋ
ಗಿಲೆಗೆ ನೆಟ್ಟನೆ ಹಾಲು ಹಂಸೆಗೆ
ಲಲಿತಕುಸುಮದ ಕಂಪು ತುಂಬಿಗೆ ಸವಿಯನೀವಂತೆ
ಉಳಿದ ಖಗ ಕಡುದುಜುಗಳಿಗೆ ಸುಖ
ವಳವಡುವುದೆ ಸದಾಶಿವಂಗೀ
ಲಲನೆಯಲ್ಲದೆ ನರರಿಗುಚಿತವೆ ಭೂಪ ಕೇಳೆಂದ ೪೨

ಶಿವನೆ ಪತಿಯಹನೆಂದು ನೀವ್ ಚಿ
ತ್ತವಿಸಿದಿರಿಯಾ ಶಿವನು ದಿಟ ಮಾ
ನವಶರೀರಿಗಳಿಗೆ ಸುಸಾಧ್ಯನೆ ದೇವ ಪೇಳೆನಲು
ಶಿವನು ಶಿವಭಕ್ತಿಯನು ಮಿಗೆ ಮಾ
ಡುವರಿಗವರವರಿಚ್ಛೆಯನು ಸಲಿ
ಸುವನು ಸತ್ಯವಿದೆಂದನೊಲಿದಾಚಾರ್ಯನರಸಿಂಗೆ ೪೩

ಮಾಯಾದೇವಿಯ ಲಾವಣ್ಯವೆನ್ನುವ ಕೊಳದಲ್ಲಿ ಅನುಸರಿಸಿ ಹೋಗುವಂತಹ ಹಂಸನಾರೆಂದು ರಾಜನನ್ನು ಕೇಳಿದನು. ೪೧. (ಹೀಗೆ) ಕೇಳಿದ ಆಚಾರ್ಯನಿಗೆ ಮಮಕಾರನು "ಈ ಕುಮಾರಿಗೆ ಶ್ರೇಷ್ಠವರನಾರೆಂಬುದನ್ನು ದೇವಾ, ನೀವೇ ಹೇಳಬೇಕು; ನಾಗೇಂದ್ರ, ಸುರ, ನರ ಲೋಕಗಳಲ್ಲಿ ಈಕೆಗೆ ಸಮಾನರೂ, ಸದ್ಗುಣಶೀಲರೂ ಯಾರಿರುವರು?" ಎಂದು ಪ್ರಾರ್ಥಿಸಲು, ಅರಸನಿಗೆ ಒಲಿದ ಆಚಾರ್ಯನು ಹೀಗೆಂದನು. ೪೨. "ಭೂಪ ಕೇಳು, ಚಿಗುರುಬಿಟ್ಟ ಮಾವಿನ ಮರದ ಸಂಪತ್ತು ಕೋಗಿಲೆಗೆ, ಹಾಲು ಹಂಸಪಕ್ಷಿಗೆ, ಮನೋಹರವಾದ ಹೂವಿನ ಕಂಪು ತುಂಬಿಗೆ ನೇರವಾಗಿ ಸವಿಯನ್ನು ಉಂಟುಮಾಡುವಂತೆ ಇನ್ನುಳಿದ ಹಕ್ಕಿಗಳಿಗೆ, ಕಡಜೀರಿಗೆಯ ಹುಳುಗಳಿಗೆ ಆ ಸವಿಯು ಹೊಂದಿಕೆಯಾಗುವುದೆ? ಈ ಕನ್ಯೆ ಸದಾಶಿವನಿಗಲ್ಲದೆ ಮನುಷ್ಯರಿಗೆ ವಿವಾಹಯೋಗ್ಯಳೆ?" ಎಂದನು. ೪೩. "ಶಿವನೇ ಈಕೆಗೆ ಗಂಡನಾಗುವನೆಂದು ನೀವು ಹೇಳಿದಿರಿ. ಆ ಶಿವನು ಮಾನವದೇಹಿಗಳಿಗೆ ನಿಲುಕುವನೆ? ದೇವಾ ಹೇಳು" ಎನ್ನಲು, "ಶಿವಭಕ್ತಿಯನ್ನು ವಿಶೇಷವಾಗಿ ಆಚರಿಸುವವರಿಗೆ ಅವರವರ ಇಚ್ಛೆಯನ್ನು ಶಿವನು ಸಲಿಸುವನು. ಇದು ಸತ್ಯ" ಎಂದು ಆಚಾರ್ಯನು ಪ್ರೀತಿಯಿಂದ ಅರಸನಿಗೆ ಹೇಳಿದನು.

ಎನುತೆ ಸಂಭ್ರಮದಿಂದೆ ಮಾಯಾಂ
ಗನೆಗೆಯುಪದೇಶವನು ಮಾಡಿದೊ
ಡನುಕರಿಸಿ ಮಾಡುತ್ತಲಿರ್ದಳು ಭಕ್ತಿಯನು ಬಳಿಕ
ಜನಪತಿಯೆ ಸುಖದಿಂದಲಿರಿಯೆಂ
ದೆನುತಹಂಕಾರಾರ್ಯ ಬೀಳ್ಕೊ
ಟ್ಟನುಗತಿಯಲೈದಿದನು ತನ್ನಯ ನಿಜನಿವಾಸವನು ೪೪

ಧರಣಿಪಾಲಕನಿತ್ತ ಸುಖದಿಂ
ದಿರುತಲಿರ್ದನು ಈ ಕುಮಾರಿತಿ
ಹರುಷದಿಂದಲಿ ನಿತ್ಯನೇಮವ ಹಿಡಿದು ಛಲದಿಂದೆ
ಪುರಕೆ ಘಟಿಕಾಸ್ಥಾನವೆನಿಸುವ
ಪರಮಸಿದ್ಧಿಯನೀವ ಮಧುಕೇ
ಶ್ವರನ ಪೂಜಿಸುತಿರ್ದಳಿನಿಯನ ಬಯಸಿ ಭಕ್ತಿಯಲಿ ೪೫

ಅಷ್ಟವಿಧದರ್ಚನೆಗಳಿಂದುಭ
ಯಾಷ್ಟವಿಧದುಪಚಾರದಿಂದಲ
ಭೀಷ್ಟವೆನಿಸುವ ನಿಜಮನೋವಲ್ಲಭನ ಬಯಕೆಯಲಿ
ಶ್ರೇಷ್ಠನೆನಿಸುವ ಮಧುಕನಾಥನ
ತುಷ್ಟಿಪಡುವಂತರ್ಚಿಸಿದಳೀ
ಸೃಷ್ಟಿಯೊಳು ಸಾಂಗದಲಿ ಮಾಯಾದೇವಿ ಮನವೊಲಿದು ೪೬

ಅಂತು ಗತಿ ೩ಕ್ಕಂ ಪದ ೧೧೯ಕ್ಕಂ ಮಂಗಳಂ

೪೪. ಹೀಗೆಂದು ಹೇಳಿ, ಸಂಭ್ರಮದಿಂದ ಮಾಯಾದೇವಿಗೆ ಅಹಂಕಾರಾಚಾರ್ಯನು ಉಪದೇಶವನ್ನೀಯಲು ಅದನ್ನನುಕರಿಸಿ ಭಕ್ತಿಯನ್ನು ಮಾಯಾದೇವಿ ಮಾಡುತ್ತಲಿದ್ದಳು. ಅನಂತರ 'ಜನಪತಿಯೆ ಸುಖದಿಂದ ಇರುವವನಾಗು' ಎಂದು ಹೇಳಿ ಅಹಂಕಾರಾರ್ಯ ಅರಸನಿಂದ ಬೀಳ್ಕೊಂಡು ತನ್ನ ಮನೆಯ ದಾರಿ ಹಿಡಿದು ಸ್ವಸ್ಥಾನವನ್ನು ಸೇರಿದನು. ೪೫. ಇತ್ತ ಮಮಕಾರನು ಸುಖದಿಂದಿದ್ದನು. ಮಾಯಾದೇವಿ ಹರುಷದಿಂದ ನಿತ್ಯವೂ ನೇಮವನ್ನು ಛಲದಿಂದ ನಡೆಸುತ್ತಾ ಬನವಸೆ ಪಟ್ಟಣಕ್ಕೆ ಪ್ರೌಢ ವಿದ್ಯಾಕೇಂದ್ರವೆನ್ನಿಸಿದ, ಪರಮಸಿದ್ಧಿಯನ್ನು ಅನುಗ್ರಹಿಸುವ ಮಧುಕೇಶ್ವರನನ್ನು ಗಂಡನಿಗಾಗಿ ಬೇಡಿ ಭಕ್ತಿಯಿಂದ ಪೂಜಿಸುತ್ತಿದ್ದಳು. ೪೬. ಮಾಯಾದೇವಿಯು ಪತಿಯನ್ನು ಪಡೆಯುವ ಇಚ್ಛೆಯಿಂದ ಶ್ರೇಷ್ಠನಾದ ಮಧುಕೇಶ್ವರನು ತೃಪ್ತಿಪಡುವಂತೆ ಈ ಮಾನವಜನ್ಮದಲ್ಲಿ ಅಷ್ಟವಿಧಾರ್ಚನೆ ಹಾಗೂ ಷೋಡಶೋಪಚಾರಗಳಿಂದ ಕ್ರಮವಾಗಿ ಮನಃಪೂರ್ವಕವಾಗಿ ಅರ್ಚಿಸಿದಳು.

# ೪. ಮಾಯೆ ಮಧುಕನಾಥನ ಪೂಜಿಸಿದುದು

ಗತಿ ೪

ಸೂಚನೆ : ಮಾಯೆ ಮನದೊಳು ತನಗೆ ಪ್ರಾಣ
ಪ್ರಿಯನನು ಮಿಗೆ ಬಯಸಿ ಭಜಿಸಿದ
ಆಯತಿಕೆಯಲಿ ಮಧುಕನಾಥನ ಪಾದಪಂಕಜವ

ಧರಣಿಯೊಳು ಮಮಕಾರಭೂಮೀ
ಶ್ವರ ತನೂಭವೆ ನಿಚ್ಚನಿಚ್ಚಲು
ವಿರಚಿಸುವ ತೆಱನಂತಿರೊಂದಾನೊಂದು ದಿವಸದಲಿ
ಹರುಷದಿಂದಾ ಮಾಯೆ ತಾನಾ
ದರಿಸಿ ಮಾಡಿದ ನಿತ್ಯಪೂಜೆಯ
ಪರಿಯ ಪೇಳುವೆನೆಲ್ಲರಱಿವಂದದಲಿ ವಿಸ್ತರಿಸಿ ೧

ಮಿಸುಗುವರುಣೋದಯದಲುಪ್ಪವ
ಡಿಸುತೆ ನಿಜಕರತಳವನಾಲೋ
ಕಿಸುತೆ ನಿರ್ಮಳತರದ ಮಣಿದರ್ಪಣವನೀಕ್ಷಿಸುತೆ
ಶಶಿಮುಖಿಯರೊಗ್ಗಾಗಿ ಮಿಗೆ ರಾ
ಗಿಸುವ ಮಂಗಳಗೀತಗಳನಾ
ಲಿಸುತೆ ಮಾಯಾದೇವಿ ಮಂಚವನಿಳಿದಳೊಲವಿನಲಿ ೨

ವಿನುತಭೂಷಣ ಗಂಧವಸ್ತ್ರದ
ಕನಕದರ್ಪಣ ಚಾಮರಂಗಳ
ಘನತರದ ವಿನಿಯೋಗಭಾರದ ಜಾತಿಬಾಲೆಯರು
ತನತನಗೆ ನೆಱೆದುದು ವಿಳಾಸಿನಿ
ಜನವು ತಂತಮ್ಮೂಳಿಗಂಗಳ
ನನುವ ಮಾಡಿಕೊಳುತ್ತೆ ಮಾಯೆಯ ಕನ್ನೆಮಾಡದಲಿ ೩

ಸೂ: ಮಾಯೆ ಪ್ರಾಣಕಾಂತನನ್ನು ಮನದಲ್ಲಿ ವಿಶೇಷವಾಗಿ ಬಯಸಿ ವೈಭವದಿಂದ ಮಧುಕೇಶ್ವರನ ಪಾದಕಮಲವನ್ನು ಪೂಜೆಮಾಡಿದಳು. ೧. ಮಮಕಾರಮಹಾರಾಜನ ಮಗಳು ಭೂಮಿಯಲ್ಲಿ ಹಾಗೆ ಪ್ರತಿದಿನವೂ ಪೂಜೆ ಮಾಡುತ್ತಿದ್ದಳು. ಆಕೆ ಪ್ರೀತಿಯಿಂದ ನಿತ್ಯವೂ ಮಾಡುತ್ತಿದ್ದ ಆ ಪೂಜೆಯ ಒಂದು ದಿನದ ಕ್ರಮವನ್ನು ಎಲ್ಲರಿಗೂ ತಿಳಿಯುವಂತೆ ವಿಸ್ತಾರವಾಗಿ ಹೇಳುವೆನು. ೨. ಮಾಯಾದೇವಿ ಬೆಳಗುವ ಸೂರ್ಯೋದಯದಲ್ಲಿ ಮೇಲೆದ್ದು ತನ್ನ ಅಂಗೈ ಹಾಗೂ ನಿರ್ಮಲವಾದ ಮಣಿಖಚಿತ ಕನ್ನಡಿ ಇವುಗಳನ್ನು ನೋಡಿ, ಚಂದ್ರಮುಖಿಯರು ಗುಂಪುಗೂಡಿ ಹೆಚ್ಚು ಉಲ್ಲಾಸಗೊಳ್ಳುವಂತೆ ಹಾಡುವ ಮಂಗಳಗೀತೆಗಳನ್ನು ಕೇಳುತ್ತಾ ಪ್ರೀತಿಯಿಂದ ಮಂಚದಿಂದ ಇಳಿದಳು. ೩. ಮಾಯೆಯ ಕನ್ಯಾಗೃಹದಲ್ಲಿ ವಿಶೇಷವಾಗಿ ಹೊಗಳಲ್ಪಡುವ ಅಲಂಕಾರಗಳಿಂದ ಕೂಡಿ ಸುಗಂಧದ್ರವ್ಯ, ವಸ್ತ್ರ, ಚಿನ್ನದ ಕನ್ನಡಿ, ಚಾಮರಗಳ ಹಿರಿತನದ ಊಳಿಗವನ್ನು ಹೊಂದಿರುವ ವಿಳಾಸಿನಿಯರು

ವೇದಿಸಿಯೆ ಮಘಮಘಿಸುತಿಪ್ಪ ಜ
ವಾದಿಯಲಿ ಮುದಿಹೂಸಿ ವರಗಂ
ಧೋದಕಂಗಳಲೊಲಿದು ಮಜ್ಜನಕೆಱೆದು ಮಡಿಯುಡಿಸಿ
ಆದರಿಸೆ ಕೆಳದಿಯರು ಕನಕದ
ಪಾದುಕೆಯಲಾ ಮಾಯೆ ಬಂದು ವಿ
ನೋದದಲಿ ಮಂಡಿಸಿದಳಾ ಮಣಿಮಯದ ಪೀಠದಲಿ ೪

ಸಸಿನೆ ಮುಡಿಯನು ಬಿಚ್ಚಿಬಿಟ್ಟಾ
ಱೆಸಿಯನೇಕಕದಂಬ ಪರಿಮಳ
ಕುಸುಮಗಳನಳವಡಿಸಿ ಹೆಣಿಲಿಱೆಯಲು ನಿತಂಬಿನಿಗೆ
ಕುಸುಮಶರಭಂಡಾರವನು ಕಾ
ದೆಸವ ಕಾಳೋರಗನಿದೆಂಬಪ್ರೊ
ಲೆಸೆದುದಾ ಮಾಯಾಂಗನೆಯ ನಿಡುಜೆಡೆ ವಿರಾಜಿಸುತೆ ೫

ಬಗೆಗೆ ಸರಿಯೋ ಭಾವಿಸಲು ಮೇಣ್
ಮಿಗಿಲೊ ರಾಣಿಯ ಚಾರುಚರಣಗ
ಳುಗುರ ಕಾಂತಿಯ ನೋಡಬೇಕೆನುತೊಬ್ಬಳರ್ತಿಯಲಿ
ನಗುತಲೊಯ್ಯನೆ ತಂದು ಚೆಲುವಿಕೆ
ಮಿಗಲು ಮಾಯಾದೇವಿಯರ ಪಾ
ದಗಳ ಬೆರಳಿಗೆ ತೊಡಿಸಿದಳು ಮಣಿಮುದ್ರಿಕಾವಳಿಯ ೬

ತಾವು ತಾವೇ ಬಂದು ಗುಂಪುಗೂಡಿ ತಾವು ಮಾಡಬೇಕಾದ ಸೇವೆಗಳಿಗೆ ಸಿದ್ಧರಾಗುತ್ತಿದ್ದರು. ೪. ಎಲ್ಲೆಡೆ ಹರಡುವ ಮಧುರವಾದ ಸುವಾಸನೆಯನ್ನು ಬೀರುವ ಜವ್ವಾದಿಯನ್ನು ಪ್ರೀತಿಯಿಂದ ತಲೆಗೂದಲಿಗೆ ಹಚ್ಚಿ, ಶ್ರೇಷ್ಠವಾದ ಗಂಧದ ನೀರಿನಿಂದ ಸ್ನಾನ ಮಾಡಿಸಿ, ಮಡಿವಸ್ತ್ರವನ್ನು ಉಡಿಸಿ ಆದರಿಸಲು ಚಿನ್ನದ ಪಾದರಕ್ಷೆಯನ್ನು ಧರಿಸಿ ಮಾಯೆ ಬಂದು ವಿನೋದದಿಂದ (ಕೂಡಿ) ಮಣಿಖಚಿತವಾದ ಆಸನದಲ್ಲಿ ಕುಳಿತಳು. ೫. ಚೆನ್ನಾಗಿ ಮುಡಿಯನ್ನು ಬಿಚ್ಚಿಬಿಟ್ಟು ತೇವವನ್ನು ಆರಿಸಿ, ಅನೇಕ ಪರಿಮಳದ್ರವ್ಯಗಳನ್ನೂ, ಸುವಾಸನೆಯ ಹೂವುಗಳನ್ನೂ ಜಡೆ ಭಾರವಾಗುವಂತೆ ಆ ನಿತಂಬಿನಿಗೆ ತೊಡಿಸಲು ಇದು ಮನ್ಮಥನ ಭಂಡಾರವನ್ನು ರಕ್ಷಿಸುವ ಕಾಳಿಂಗನೋ ಎನ್ನುವಂತೆ ಆ ಮಾಯಾಂಗನೆಯ ಉದ್ದವಾದ ಜಡೆ ಹೊಳೆಯುತ್ತಾ ಶೋಭಿಸಿತು. ೬. ನನ್ನ ಎಣಿಕೆ ಸರಿಯೊ ಇಲ್ಲವೇ ಭಾವಿಸಲು ಮಿಗಿಲೋ, ರಾಣಿಯ ಮನೋಹರವಾದ ಪಾದಗಳ ಉಗುರಿನ ಕಾಂತಿಯನ್ನು ಹೋಲಿಸಿ ನೋಡಬೇಕು ಎನ್ನುತ್ತ ಒಬ್ಬಳು ಪ್ರೀತಿಯಿಂದ ನಗುತ್ತಾ ಮೆಲ್ಲನೆ ಮಣಿಮುದ್ರಿಕೆಗಳನ್ನು ತಂದು ಚೆಲುವಿಕೆಯ ಅಧಿಕ್ಯದಿಂದ ಕೂಡಿರುವ ಮಾಯಾದೇವಿಯ ಪಾದಗಳ ಬೆರಳಿಗೆ ತೊಡಿಸಿದಳು.

ಕಾಮನಜೀವ ರಹಸ್ಯ ಶಾಸ್ತ್ರ
ಸ್ತೋಮಗತಿಯನು ನುಡಿದು ತೋಱುವ
ರಾಮಣೀಯದ ನೇವುರವನಿಕ್ಕಿದರು ಚರಣದಲಿ
ಸೀಮೆಯಿದಲಾ ಮದನತತ್ವ
ಪ್ರೇಮಿಗಳಿಗೆನುತಳವಡಿಸಿದರು
ಕಾಮಿನಿಯ ಕಾಲಿಂಗೆ ಕೆಲಬರು ಪಾಡುವಟ್ಟವನು ೭

ಕಾಮಕರ್ಮದ ಕಾಮಭೋಗದ
ಭೂಮಿಗಿಂತಿದೆ ಭುವನಕೋಶದ
ಸೀಮೆಯೆಂದಱಿಯಲಿಕೆ ಕುರುಹಿನ ಕಲ್ಲಸೋಳಿಯಲಿ
ನೇಮಿಸಿದದೆಂಬಂತೆ ಕಟಿಯಲಿ
ಕಾಮಿನಿಗೆ ಮಣಿಮಯದ ಕಾಂಚೀ
ದಾಮವನು ಕಟ್ಟಿದಳದೊಬ್ಬಳು ಚಪಳೆ ಚದುರಿನಲಿ ೮

ತೆಳುವಸುಱ ಕೊಬ್ಬಿದ ಕುಚಂಗಳ
ಲಲಿತಕಂಬುಗ್ರೀವವನು ಕಂ
ಡಲಸದೀಕ್ಷಿಸುವವರ ಕಂಗಳ ಕಾಂತಿ ಕರುಗಟ್ಟಿ
ಬಳಸಿನಲಿ ನೆಲಸಿರ್ದುವೆನೆ ಕೋ
ಮಳೆಯ ಕೊರಳಿನೊಳೊಬ್ಬಳಿಕ್ಕಿದ
ಳೊಲಿದು ಬೆಳಗುವ ತೊಳಪ ಮುತ್ತಿನ ತೋರ ಹಾರವನು ೯

ದರಹಸಿತ ಸಹವಾದ ಮುಖರಸ
ಪರಿದು ಬರುತೆ ಕುಚಾದ್ರಿ ತಡೆಯಲು
ತಿರುಗಿ ಬರುತಿಕ್ಕೆಲನ ಪರಿವೇಷ್ಟಿಸಿದುದೆಂಬಂತೆ
ತರುಣಿಯೊಬ್ಬಳು ಹತ್ತೆಗಟ್ಟಿದ
ಕೊರಳೊಳೊಪ್ಪುವ ತೋರಮುತ್ತಿನ
ಸರದ ಸಮುದಯ ಸೊಗಸುತಿರ್ದುವು ಮಾಯೆಗತಿ ಮೆಱೆದು ೧೦

೭. ಕಾಮನು ತಿಳಿದ ರಹಸ್ಯಶಾಸ್ತ್ರಗಳ ಮೊತ್ತದ ನಡಿಗೆಯನ್ನು ಧ್ವನಿಸಿ ತೋರಿಸುವ ನೇವುರವನ್ನು ಮನೋಹರವಾದ ಪಾದಗಳಿಗೆ ತೊಡಿಸಿದರು. ಇನ್ನು ಕೆಲವರು ಕಾಮತತ್ವಪ್ರೇಮಿಗಳಿಗೆ ಇದು ಗಡಿಯಲ್ಲವೇ ಎನ್ನುತ್ತಾ ಆ ಸುಂದರಿಯ ಕಾಲಿಗೆ ಬಿರುದಿನ ಬಳೆಯನ್ನು ತೊಡಿಸಿದರು. ೮. ಈ ಬ್ರಹ್ಮಾಂಡದಲ್ಲಿ ಎಲ್ಲರೂ ಮಾಡುವ ಕರ್ಮ ಮತ್ತು ಭೋಗಗಳ ಗಡಿ ಎಂದು ತಿಳಿಯಲಿಕ್ಕೆ ಗುರುತಿನ ಕಲ್ಲನ್ನು ಸಾಲಾಗಿ ನಿಲ್ಲಿಸಿದರು ಎಂಬಂತೆ ಕಾಮಿನಿಗೆ ಚಪಳೆಯೋರ್ವಳು ಜಾಣತನದಿಂದ ಮಣಿಖಚಿತವಾದ ಡಾಬನ್ನು ಸೊಂಟದಲ್ಲಿ ಕಟ್ಟಿದಳು. ೯. ಒಬ್ಬಳು ತೆಳುವಾದ ಹೊಟ್ಟೆ, ಕೊಬ್ಬಿದ ಮೊಲೆಗಳು, ಮನೋಹರವಾದ ಕುತ್ತಿಗೆ ಇವುಗಳನ್ನು ಕಂಡು ಆಯಾಸಗೊಳ್ಳದೆ ನೋಡುವವರ ಕಣ್ಣುಗಳ ಕಾಂತಿ ಎರಕ ಹೊಯ್ದಂತೆ ಸುತ್ತಲೂ ನೆಲಸಿದ್ದುವು ಎನ್ನುವಂತೆ ಆ ಕೋಮಲೆಯ ಕೊರಳಿಗೆ ಪ್ರಖರವಾಗಿ ಬೆಳಗುವ ದುಂಡಾದ ಮುತ್ತಿನ ಹಾರವನ್ನು ತೊಡಿಸಿದಳು. ೧೦. ಮುಗುಳ್ನಗೆಯಿಂದ ಕೂಡಿದ ಮುಖದ ಕಾಂತಿರಸವು ಹರಿದು ಬರಲು ಅದನ್ನು ಮೊಲೆಗಳೆಂಬ ಪರ್ವತ

ಸರಳುಗಳು ಚೆಲುವಾಗಿ ಬಲುಹಾ
ಗಿರಲುಬೇಕೆಂದಂಗಜನು ವಿ
ಸ್ತರಿಸಿದಡೆಯಣಸುಗಳೊ ಪೇಳೆಂಬಂತೆ ಸೊಗಸಾಗೆ
ಕರಯುಗಾಂಗುಲಿಗಳಿಗೆ ಶೋಭಾ
ಕರವೆನಿಸಿ ಮಣಿಮುದ್ರಿಕಾಳಿಯ
ತರುಣಿಯೊಬ್ಬಳು ತೊಡಿಸಿದಳು ಮಾಯೆಗೆ ವಿಳಾಸದಲಿ ೧೧

ಅಡಕಿಲಡಕಿಲುಗೊಂಡ ಭುವನದ
ಗಡಣದಲಿ ಸಂಸಾರಸಂಗವ
ಜಡಿದು ಜಜೆವ ವಿರಕ್ತವೃತ್ತಿಯ ಸಿದ್ಧಸಾದಕರ
ಮೃಡ ಹರಿಬ್ರಹ್ಮಾದ್ಯರನು ಕೆಡೆ
ಬಡಿದು ಕಟ್ಟುವ ಕಾಮಪಾಶದ
ತೊಡರಿದೆನಲಿಕ್ಕಿದಳು ಮಾಯೆಗೆ ತೋಳ ತೊಡಿಗೆಗಳ ೧೨

ಮದನನೊಂದು ನವೀನವಹ ತು
ಬ್ಬದ ಸುರಂಗ ಭ್ರಮರವನು ರಚಿ
ಸಿದನೊ ಕನ್ನೆಯ ನಾಸಿಕದ ನಱುಗಂಪಿನಿಂಪಿಂಗೆ
ಇದುವೆ ಸೋಜಿಗವೆನಲು ತಂದಿ
ಕ್ಕಿದಳದೊಬ್ಬಳು ತರುಣಿ ಮಾಯಾ
ಸುದತಿಗೊಪ್ಪಿರೆ ತೊಳಪ ಮುತ್ತಿನ ತೋರಮೂಕುತಿಯ ೧೩

ತಡೆಯಲು ಅದು ತಿರುಗಿ ಬರುತ್ತಾ ಎರಡೂ ಪಕ್ಕಗಳನ್ನು ಸುತ್ತುವರಿದುದು ಎನ್ನುವಂತೆ ದಪ್ಪಮುತ್ತಿನ ಸರಗಳನ್ನು ಮಾಯಾದೇವಿಯ ಕೊರಳಲ್ಲಿ ತೊಡಿಸಲು ಅವು ಸ್ತನಗಳ ಎರಡೂ ಪಕ್ಕಗಳಲ್ಲಿ ಚೆನ್ನಾಗಿ ಒಪ್ಪುತ್ತಿದ್ದುವು. ೧೧. ಬಾಣಗಳು ಸೊಗಸಾಗಿ ಹಾಗೂ ಬಲವಾಗಿರಬೇಕೆಂದು ಮನ್ಮಥನು ವಿಸ್ತರಿಸಿ ಬಾಣದಲ್ಲಿ ಸೇರಿಸಿದ ಅಣಸುಗಳೊ, ಹೇಳು ಎನ್ನುವಂತೆ ಸೊಗಸಾಗಿರಲು ಎರಡೂ ಕೈಗಳ ಬೆರಳುಗಳಿಗೆ ಶೋಭೆಯಿಂದ ಕೂಡಿದ ಮಣಿಮುದ್ರಿಕೆಗಳನ್ನು ಒಬ್ಬ ತರುಣಿಯು ಮಾಯಾದೇವಿಗೆ ವಿಲಾಸದಿಂದ ತೊಡಿಸಿದಳು. ೧೨. ಒಂದರ ಮೇಲೊಂದಾಗಿ ಪೇರಿಸಿದ ಬ್ರಹ್ಮಾಂಡಗಳ ಸಮೂಹದಲ್ಲಿ ಸಂಸಾರಸಂಗವನ್ನು ಬೆದರಿಸಿ ನಿಂದಿಸುವ ವಿರಕ್ತವೃತ್ತಿಯ ಸಿದ್ಧಸಾಧಕರನ್ನು ; ಶಿವ, ಹರಿ, ಬ್ರಹ್ಮ ಇವರೇ ಮೊದಲಾದವರನ್ನು ಕೆಳಗೆ ಬೀಳುವಂತೆ ಬಡಿದು ಕಟ್ಟುವ ಕಾಮಪಾಶದ ಬಂಧನವಿದು ಎನ್ನುವಂತೆ (ಓರ್ವಳು) ಮಾಯೆಗೆ ತೋಳಿನ ಆಭರಣಗಳನ್ನು ತೊಡಿಸಿದಳು. ೧೩. ಕನ್ಯೆ ಮಾಯಾದೇವಿಯ ಮೂಗಿನ ಸುವಾಸನೆಯ ಇಂಪಿಗೆ ಮನ್ಮಥನು ಒಂದು ಹೊಸದಾದ ನಿರ್ಮಲವಾದ ಕೊರೆದು ತೂತುಮಾಡುವ ದುಂಬಿಯನ್ನು ನಿರ್ಮಿಸಿದನೊ! ಇದು ಆಶ್ಚರ್ಯವೆನ್ನುವಂತೆ ಒಬ್ಬ ತರುಣಿ ಮಾಯಾದೇವಿಗೆ ಒಪ್ಪುವ ಮುತ್ತಿನ ದಪ್ಪ ಮೂಕುತಿಯೊಂದನ್ನು ತಂದು ತೊಡಿಸಿದಳು.

ಕೀಳುಮಾಡುವೆನಿನ್ನು ನೋಡಾ
ಭಾಳನೇತ್ರನ ಬಲುಹನೆನುತಲಿ
ಗಾಲಿಗಳ ಕಂದರ್ಪ ಜೋಡಿಸುವಂತೆ ನಿಜರಥಕೆ
ಮೇಳವಿಸಿ ನವರತ್ನತೆತ್ತಿಸಿ
ದೋಲೆಗಳ ತಂದಿಟ್ಟಳೊಬ್ಬಳು
ಬಾಲೆ ಮಾಯಾದೇವಿಗೊಪ್ಪುವ ಚೆಲುವ ಕಿವಿಗಳಿಗೆ ೧೪

ಸಡಗರಿಸಿ ಪರಿದೈದಿ ಸರಿದಿ
ಕ್ಕಡೆಗಳಲಿ ಸೇರಿದವೊ ಕನ್ನೆಯ
ನಿಡಿದುಗೊಂಡ ಕಟಾಕ್ಷಕಾಂತಿಯ ಮಡುಗಳೆಂಬಂತೆ
ತೊಡಿಸಿದಳು ತಂದೊಬ್ಬಳಾಕೆಯ
ಕೊಡಕೆಯಲಿ ಹೊಸತಪ್ಪ ಮುತ್ತಿನ
ತೊಡಿಗೆಯನು ಮಾಯಾಂಗನೆಗೆ ಶೃಂಗಾರಶಾಲೆಯಲಿ ೧೫

ಸುತ್ತುವಳಯವ ತೊಳಗಿ ಬೆಳಗುವ
ಮುತ್ತು ವಜ್ರದ ನಡುವೆ ಮಾಣಿಕ
ತೆತ್ತಿಸಿದ ಬೊಟ್ಟೊಂದ ಮಾಯಾಂಗನೆಯ ನೊಸಲಿನಲಿ
ಕತ್ತುರಿಯ ವರತಿಲಕಮಧ್ಯದೊ
ಳೊತ್ತಿ ನಿಲಿಸಲು ಮೆಱೆಯುತಿರ್ದುದು
ಚಿತ್ತಜಾತನ ವೀರಲಕ್ಷ್ಮಿಯ ನೊಸಲ ಕಣ್ಣಂತೆ ೧೬

ನಭದೊಳೊಪ್ಪುವ ತಾರಕಾವಳಿ
ವಿಭವದಲಿ ಸಂಪೂರ್ಣಚಂದ್ರನ
ಸಭೆಯಲೊಲೀಯಲೋಲಗಿಸ ನೆರೆದಿರ್ದುವೆಂಬಂತೆ
ಅಭಿನವದ ಮುತ್ತುಗಳ ಪಣೆಗ
ಟ್ಟುಭಯಕರ್ಣಾಗ್ರದಲಿ ಸೇರಲು
ಶುಭತೆಯಾಗಿ ವಿರಾಜಿಸಿತು ಮಾಯಾಂಗನೆಯ ಮುಖಕೆ ೧೭

೧೪. ಶಿವನ ಶಕ್ತಿಯನ್ನು ಇನ್ನು ಕೀಳುಮಾಡುವೆನು ನೋಡು, ಎನ್ನುತ್ತಾ ಮನ್ಮಥ ತನ್ನ ರಥಕ್ಕೆ ಚಕ್ರಗಳನ್ನು ಜೋಡಿಸುವಂತೆ ನವರತ್ನಗಳನ್ನು ಕೂಡಿಸಿದ ಓಲೆಗಳನ್ನು ಓರ್ವಳು ತಂದು ಬಾಲೆ ಮಾಯಾದೇವಿಯ ಒಪ್ಪುವ ಚೆಲುವಿಕೆಯಿಂದ ಕೂಡಿದ ಕಿವಿಗಳಿಗೆ ತೊಡಿಸಿದಳು. ೧೫. ಕನ್ನೆ ಮಾಯಾದೇವಿಯ ವಿಸ್ತಾರವಾದ ಕಡೆಗಣ್ಣೋಟದ ಕಾಂತಿಯ ಮಡುಗಳು ಸಡಗರದಿಂದ ಕೂಡಿ ಹರಿಯುತ್ತಾ ಓಡಿ ಎರಡೂ ಕಡೆಗಳಲ್ಲಿ ಸೇರಿದುವೋ ಎಂಬಂತೆ ಹೊಸದಾದ ಮುತ್ತಿನ ಆಭರಣವನ್ನು ತಂದು ಒಬ್ಬಳು ಮಾಯಾದೇವಿಯ ಸಿಂಗಾರದ ಕೋಣೆಯಲ್ಲಿ ಅದನ್ನು ಆಕೆಯ ಕಿವಿಗಳಿಗೆ ತೊಡಿಸಿದಳು. ೧೬. ಸುತ್ತಲೂ ತೊಳಗಿ ಬೆಳಗುವ ಮುತ್ತು ವಜ್ರಗಳ ನಡುವೆ ಮಾಣಿಕವನ್ನು ಕೂಡಿಸಿದ ಬೊಟ್ಟೊಂದನ್ನು ಮಾಯಾದೇವಿಯ ಹಣೆಯ ಕಸ್ತೂರಿಯ ಶ್ರೇಷ್ಠ ತಿಲಕದ ಮಧ್ಯದಲ್ಲಿ ಒತ್ತಿ ನಿಲ್ಲಿಸಲು ಅದು ಮನ್ಮಥನ ವೀರಲಕ್ಷ್ಮಿಯ ಹಣೆಗಣ್ಣಿನಂತೆ ಶೋಭಿಸುತ್ತಿದ್ದಿತು. ೧೭. ಆಕಾಶದಲ್ಲಿ ಶೋಭಿಸುವ ನಕ್ಷತ್ರಗಳ ಮೊತ್ತವು ವೈಭವದಿಂದ ಪೂರ್ಣಚಂದ್ರನ ಸಭೆಯಲ್ಲಿ ಸಾಲಾಗಿ

ಒಸೆದು ಕಾಮನ ಬಾಣದಲಿ ಲೇ
ಪಿಸುವ ಸಮ್ಮೋಹನದ ಬಾಷ್ಪದ
ಮಸಿಯೊ ಪೇಳೆನೆ ಕೋಮಳೆಯ ತೊಳತೊಳಪ ಕಂಗಳಿಗೆ
ಎಸಳುಗಾಡಿಗೆ ರೇಖೆಯನು ಚಿ
ತ್ರಿಸಿದಳೊಬ್ಬಳು ಕಾಮುಕರ ಮೋ
ಹಿಸುವ ಮೋಹನಯಂತ್ರರೇಖೆಗಳಂತೆ ಚೆಲ್ವಾಗೆ ೧೮

ನೋಡುವರ ಕಣ್ಣಾಕ್ಕಜಂಗಳು
ಕಾಡದಂತಿರೆ ಬರೆದರೆಂದೆನೆ
ನೋಡಿ ಕುಚಮೂಲದೆ ಕಪೋಲಸ್ಥಲದೊಳಂಗನೆಗೆ
ಕೂಡೆ ಕುಂಕುಮ ಮೃಗಮದಂಗಳ
ಗಾಢಗಂಧದ ಪಂಕದಲಿ ಕೈ
ಗೂಡಿ ಚಿತ್ರಿಸಿ ಮಕರಿಕಾಪತ್ರವನು ರಚಿಸಿದರು ೧೯

ಮಿಸುಪ ಕೆಂಪಿನ ಪದ್ಮರಾಗದ
ರಸದ ರೇಖೆಯ ದಡಿಗಳಲಿ ಚಿ
ತ್ರಿಸಿಯೆ ಸೆಜಿಗಿಗೆ ಕುಮುದಕುಸುಮದ ಬಣ್ಣವನೆ ರಚಿಸಿ
ಪಸರಿಸಿದ ಬೆಳುದಿಂಗಳಿನ ಶೋ
ಧಿಸಿದ ರಸದಲಿ ತೊಳೆದರೆನೆ ರಂ
ಜಿಸುವ ವಿಮಲಾಂಬರವನಾಯತಮಾಡಿದರು ಬಳಿಕೆ ೨೦

ಓಲಗಿಸಲು ಗುಂಪುಗೂಡಿದ್ದುವು ಎಂಬಂತೆ ಹೊಸದಾಗಿ ಮುತ್ತುಗಳ ಹಣೆಗಟ್ಟು ಎರಡೂ ಕಿವಿಗಳ ಅಗ್ರಭಾಗದಲ್ಲಿ ಬಂದು ಸೇರಲು ಮಾಯಾದೇವಿಯ ಮುಖಕ್ಕೆ ಸುಲಕ್ಷಣವಾಗಿ ಶೋಭಿಸಿತು. ೧೮. ಕಾಮನ ಬಾಣದಲ್ಲಿ ಪ್ರೀತಿಯಿಂದ ಲೇಪಿಸುವ ಸಮ್ಮೋಹನ ಕಾಡಿಗೆಯೋ ಹೇಳು ಎನ್ನುವಂತೆ ಕೋಮಲೆಯ ಬೆಳಗುವ ಕಣ್ಣುಗಳಿಗೆ ಎಸಳಾದ ಕಾಡಿಗೆಯ ರೇಖೆಯನ್ನು, ಕಾಮುಕರನ್ನು ಮೋಹಿಸುವ ಮೋಹನಯಂತ್ರ ರೇಖೆಗಳಂತೆ ಚೆಲ್ವಾಗಿ ಓರ್ವಳು ಚಿತ್ರಿಸಿದಳು. ೧೯. ನೋಡುವವರ ಕಣ್ಣಿನ ದೃಷ್ಟಿಗಳು ಕಾಡದಂತಿರಲು ಬರೆದರೊ ಎನ್ನುವಂತೆ ಕುಚದ ತುದಿ ಹಾಗೂ ಕೆನ್ನೆಗಳ ಮೇಲೆ ಕುಂಕುಮ ಕಸ್ತೂರಿಗಳ ತೀವ್ರವಾದ ಸುವಾಸನೆಯ ಲೇಪದಲ್ಲಿ ಅದ್ದಿದ ಬೆರಳಿನಿಂದ ಚಿತ್ರಾವಳಿಗಳನ್ನು ಚಿತ್ರಿಸಿದರು. ೨೦. ಅನಂತರ ಹೊಳೆಯುವ ಕೆಂಪಿನ ಪದ್ಮರಾಗದ ರಸದ ರೇಖೆಯನ್ನು ಸೀರೆಯ ದಡಿಗಳಲ್ಲಿ ಚಿತ್ರಿಸಿ, ಸೆರಗಿಗೆ ನೈದಿಲೆಹೂವಿನ ಬಣ್ಣವನ್ನು ಕಟ್ಟಿ, ಹರಡಿದ ಬೆಳುದಿಂಗಳಿನ ಶೋಧಿಸಿದ ರಸದಲ್ಲಿ ತೊಳೆದರು ಎನ್ನುವಂತೆ ರಂಜಿಸುವ ಪರಿಶುದ್ಧವಾದ ವಸ್ತ್ರವನ್ನು

ಪರಿವಿಡಿಯ ನಿಱಿವಿಡಿದು ನಾಭಿಯ
ಸರಿಸದಲಿ ಪಸರಿಸುತೆ ಜಘನಕೆ
ಪರುಠವಿಸಿ ನಸುದೋಱುವಂತಿರಲಂಗವಟ್ಟವನು
ವಿರಚಿಸಿದಳುಡಿಗೆಯನು ಮಾಯಾ
ತರುಣಿ ತಾನಳವಡಿಸಿ ಕಾಮನ
ಬಿರುದ ಹಳವಿಗೆಯಂತೆ ನಟನೆಯ ಜಾತಿಜಾಣಿನಲಿ ೨೧

ಚೆನ್ನೆ ನೀನಲ್ಲದೆ ಬಳಿಕ್ಕಾ
ರಿನ್ನು ದಿಟವಿದಿರಿಟ್ಟು ತೋಱಿಸ
ಲನ್ಯರುಂಟೇ ರೂಪಿಡಲು ನೆಱೆನೋಡು ನೀನೆನುತೆ
ಕನ್ನಡಿಯ ತೋಱಿದಳದೊಬ್ಬಳು
ಕನ್ಯೆ ಕಾಮಿನಿಗಳ್ತಿಯಿಂಬವೆ
ಕಣ್ಣುಗಳನಿದ್ದೆಸೆಗೆ ಸೂಸುತೆ ಮಾಯೆ ನೋಡಿದಳು ೨೨

ಮನಸಿಜನ ಮನೆದೇವಿ ಕುಸುಮಾ
ಸ್ತ್ರನ ಕುಲೋತ್ತಮೆ ರಾಜಗುರು ಕಾ
ಮನ ಭುಜಾಗ್ರದ ವಿಜಯಲಕ್ಷ್ಮಿಯನಂಗನಧಿದೈವ
ವಿನಯಚಿತ್ತ ಜಯಂತು ಚೇಷ್ಟಾ
ವಿನುತ ಚೇತನಮೂರ್ತಿ ಕಂದ
ರ್ಪನ ಕರಾಸಿಯ ಬೀರಸಿರಿಯೆನೆ ಮೆಱೆದಳಾ ದೇವಿ ೨೩

ತರುಣಿ ನಡೆಯೌ ಮಧುಕನಾಥೇ
ಶ್ವರನ ಪೂಜೆಯ ಮಾಡಲಿಕೆ ಸಂ
ವರಿಸಿ ಬಂದೆವು ಸಕಲವಸ್ತುಗಳೆನುತಲಂದಣವ
ತರಿಸಿದರು ಹೆಗ್ಗಡಿತಿಯರು ಸಾ
ದರದಲುತ್ಸಾಹಿಸುತೆ ರತ್ನೋ
ತ್ಕರದ ಗದ್ದುಗೆಯಿಂದಲೆದ್ದಳು ಮಾಯೆ ರಚನೆಯಲಿ ೨೪

ಉಡಿಸಿದರು. ೨೧. ಕ್ರಮವಾಗಿ ನಿರಿ ಹಿಡಿದು ಹೊಕ್ಕುಳ ಸಮೀಪದಲ್ಲಿ ಹರಡುತ್ತಾ ನಡುವಿಗೆ ಸರಿಯಾಗಿ ಜೋಡಿಸಿ ಅಂಗಸೌಷ್ಠವವು ಸ್ವಲ್ಪ ಕಾಣುವಂತೆ ಮಾಯಾದೇವಿ ಹೊಂದಿಸಿ ಕಾಮನ ಬಿರುದಿನ ಬಾವುಟದಂತೆ ನಟಿಸಿ ತೋರುವ ಉಡುಗೆಯನ್ನು ಸಹಜವಾದ ಜಾಣತನದಿಂದ ಸಿದ್ಧಗೊಳಿಸಿ ಧರಿಸಿದಳು. ೨೨. ಸುಂದರಿ, ನಿಜವಾಗಿ ಎದುರಿಗೆ ತಂದು ರೂಪುದೋರಿಸಲು ನೀನಲ್ಲದೆ ಅನ್ಯರುಂಟೆ? ಚೆನ್ನಾಗಿ ನೋಡು ಎಂದು ಓರ್ವಳು ಮಾಯೆಗೆ ಕನ್ನಡಿ ತೋರಲು ಕನ್ಯೆ ಮಾಯಾದೇವಿ ಎರಡೂ ಕಡೆಗೆ ದೃಷ್ಟಿಯನ್ನು ಚೆಲ್ಲುತ್ತಾ ಕನ್ನಡಿಯನ್ನು ನೋಡಿದಳು. ೨೩. ಆ ದೇವಿಯು ಮನ್ಮಥನ ಮನೆಯೊಡತಿ, ಕುಸುಮಾಸ್ತ್ರನ ಕುಲೋತ್ತಮೆ, ರಾಜಶ್ರೇಷ್ಠನಾದ ಕಾಮನ ಭುಜದ ತುದಿಯ ವಿಜಯಲಕ್ಷ್ಮಿ, ಅನಂಗನ ಮುಖ್ಯದೇವತೆ, ವಿನಯಿಯಾದ ಮನ್ಮಥದಲ್ಲಿ ವಿಲಾಸವನ್ನುಂಟುಮಾಡುವ ವಿಶೇಷ ಹೊಗಳಿಕೆಗೆ ಪಾತ್ರಳಾದ ಚೈತನ್ಯಮೂರ್ತಿ, ಕಂದರ್ಪನ ಕೈಗತ್ತಿಯ ವೀರಶ್ರೀ ಎನ್ನುವಂತೆ ಶೋಭಿಸಿದಳು. ೨೪. "ತರುಣಿ, ಮಧುಕನಾಥನ ಪೂಜೆಯನ್ನು ಮಾಡಲಿಕ್ಕೆ ನಡೆಯವ್ವಾ, ಸರ್ವವಸ್ತುಗಳನ್ನು ಸಿದ್ಧಪಡಿಸಿ ಬಂದಿರುವೆವು" ಎನ್ನುತ್ತಾ ಹೆಗ್ಗಡಿತಿಯರು ಪಲ್ಲಕ್ಕಿಯನ್ನು

ಎತ್ತಿ ನೆಗಹಿದ ತೊಳಪ ಮುತ್ತಿನ
ಸತ್ತಿಗೆಯ ಸಡಗರದ ಸರಿಸದೆ
ಸುತ್ತಿನಲಿ ಬಲನೆಡಕೆ ಚಿಮ್ಮುವ ಧವಳಚಾಮರದ
ಚಿತ್ತಪಾಯವಧಾರು ಎನುತವೆ
ಹತ್ತಿರುಗ್ಘಡಿಸುವ ಸಗಾಢದ
ತೆತ್ತಿಗರ ಸಂಭ್ರಮದಲಂದಣವೇಱಿದಳು ಮಾಯೆ ೨೫

ಕಾಮರೇಖೆ ಕಳಾವಿಳಾಸಿನಿ
ಪ್ರೇಮಕಾರಿಣಿ ರಾಗಿ ಲೋಭಿಣಿ
ನಾಮನಿರ್ಮಿತೆ ಸಕಳಸಂಪದೆ ಭೋಗಿ ಮದಮಾನಿ
ಹೇಮೆ ಹೆಕ್ಕಳೆಯೆನಿಪ ನಾನಾ
ನಾಮಗಳ ಹೆಗ್ಗಡಿತಿ ದಾದಿಯ
ರಾ ಮಹಾವಿನಿಯೋಗದಬಲೆಯರೈದಿದರು ಕೂಡೆ ೨೬

ಹಡಪ ಬೊಕ್ಕಸ ಛತ್ರಚಾಮರ
ಕುಡಿಯುದಕ ಬೀಸಣಿಗೆ ಹೊಂಗ
ನ್ನಡಿ ಸುಗಂಧವಿಲೇಪ ಹೂ ಹಾವಿಗೆಗಳೂಳಿಗವ
ನಡೆಸುವವರೈದಿದರು ಮಿಗೆ ಮುಂ
ಗುಡಿಯಲಣಿವರಿದೊಕ್ಕಲಿಕ್ಕುತೆ
ಮಡದಿಯರು ಮಾಯಾಂಗನೆಯ ದಂಡಿಗೆಯ ಬಳಸಿನಲಿ ೨೭

ಹೂವಿನಗ್ಗವಣಿಯ ಸುಗಂಧದ
ತೀವಿದುತ್ತಮ ಧೂಪ ವಸ್ತ್ರದ
ಪಾವನದ ಪರಿಕರದ ಗೀತದ ನೃತ್ಯವಾದ್ಯಗಳ
ದೇವಪೂಜಾರ್ಥಕ್ಕೆ ಸಾಧನ
ಸೇವಕಾಂಗಿಯರೊಲಿದು ಬಂದರು
ಭಾವೆ ಮಾಯಾಮಾನಿನಿಯ ದಂಡಿಗೆಯ ಬಳಸಿನಲಿ ೨೮

ತರಿಸಲು ಮಾಯಾದೇವಿಯು ಪ್ರೀತಿಯಿಂದಲೂ ಉತ್ಸಾಹದಿಂದಲೂ ಕೂಡಿದವಳಾಗಿ ರತ್ನಗಳಿಂದ ನಿರ್ಮಾಣಗೊಂಡ ಗದ್ದುಗೆಯಿಂದ ಮೇಲೆದ್ದಳು. ೨೫. ಮೇಲಕ್ಕೆತ್ತಿದ ಹೊಳೆಯುವ ಮುತ್ತಿನ ಸತ್ತಿಗೆಯ ಸಡಗರ, ಸಮೀಪದಲ್ಲಿ ಸುತ್ತಲೂ ಎಡಬಲ ಭಾಗಗಳಲ್ಲಿ ಅಲ್ಲಾಡುವ ಬಿಳಿಯ ಚಾಮರ, ಮನ ಎಚ್ಚರದಿಂದಿರಲಿ ಎನ್ನುತ್ತ ಹತ್ತಿರದಲ್ಲೇ ಗಟ್ಟಿಯಾಗಿ ಕೂಗಿ ಹೇಳುವ ಹೆಚ್ಚಿನ ಸಂಖ್ಯೆಯ ಸೇವಕಿಯರ ಸಂಭ್ರಮ ಇವುಗಳಿಂದ ಕೂಡಿ ಮಾಯೆಯು ಪಲ್ಲಕ್ಕಿಯನ್ನು ಏರಿದಳು. ೨೬. ಕಾಮರೇಖೆ, ಕಳಾವಿಳಾಸಿನಿ, ಪ್ರೇಮಕಾರಿಣಿ, ರಾಗಿ, ಲೋಭಿಣಿ, ನಾಮನಿರ್ಮಿತೆ, ಸಕಳಸಂಪದೆ, ಭೋಗಿ, ಮದಮಾನಿ, ಹೇಮೆ, ಹೆಕ್ಕಳೆ ಎನ್ನುವ ನಾನಾ ಹೆಸರುಗಳ ಹೆಗ್ಗಡಿತಿ ದಾದಿಯರು, ಆ ಹಿರಿಯ ಊಳಿಗದ ಸ್ತ್ರೀಯರು ಜೊತೆಯಲ್ಲಿ ಸೇರಿದರು. ೨೭. ತಾಂಬೂಲದ ಪೆಟ್ಟಿಗೆ, ಭಂಡಾರ, ಬೆಳ್ಗೊಡೆ, ಚಾಮರ, ಕುಡಿಯುವ ನೀರು, ಬೀಸಣಿಗೆ, ಹೊನ್ನಿನ ಕನ್ನಡಿ, ಸುಗಂಧ, ವಿಲೇಪ, ಹೂ, ಪಾದುಕೆ ಇವುಗಳ ಸೇವೆಯನ್ನು ಮಾಡುವವರು ಹೆಚ್ಚಿನ ಸಂಖ್ಯೆಯಲ್ಲಿ ಮುಂಭಾಗದಲ್ಲಿ ಸೇರಿ ಸಾಲಾಗಿ ಮಾಯಾದೇವಿಯ ಪಲ್ಲಕ್ಕಿಯ ಸುತ್ತಲಿನಲ್ಲಿ ನೋಡುವವರ ಮನಸ್ಸನ್ನು ಅಸ್ತವ್ಯಸ್ತಗೊಳಿಸುತ್ತಾ ನಡೆದರು. ೨೮. ಮಾಯಾದೇವಿಯ ಪಲ್ಲಕ್ಕಿಯ ಸುತ್ತಲೂ ಹೂವಿನ, ಪವಿತ್ರೋದಕದ, ಸುಗಂಧದ, ಉತ್ತಮವಾದ ಧೂಪದ, ವಸ್ತ್ರಗಳನ್ನು ತುಂಬಿದ,

ಉಲಿವ ನೇವುರ ಪಾಯವಟ್ಟದ
ಲಲಿತಕಂಕಣ ತೋಳುಬಂದಿಯ
ಲುಳಿಯ ಪದಕದ ತೋರಮುತ್ತಿನ ಸರದ ಮೂಕುತಿಯ
ತಳಿತ ಹೂವಿನ ಮುಡಿಯ ಪಟ್ಟಾ
ವಳಿಯ ಸೀರೆಯ ಚಲ್ಲಣದ ಕೋ
ಮಳೆಯರೈದಿದರಂದು ಮಾಯಾಂಗನೆಯ ಬಳಸಿನಲಿ ೨೯

ಮುತ್ತಿನೋಲೆಯ ಸುತ್ತುಸರಿಗೆಯ
ಪತ್ತೆಗಟ್ಟಿನ ಬಣ್ಣಸರಗಳ
ತೆತ್ತಿಸಿದ ನವರತ್ನಖಚಿತದ ಕಟಿಯ ಸೂತ್ರಗಳ
ಉತ್ತಮದ ಚಿತ್ರಾಂಬರಂಗಳ
ಕತ್ತುರಿಯ ಹೆಜ್ಜೆಸೊಸಲ ತಿಲಕದ
ಮತ್ತಗಜಗಮನೆಯರು ಬರುತಿರ್ದರು ವಿಳಾಸದಲಿ ೩೦

ವೀರಮುದ್ರೆಯ ಮೆಂಟಿಕೆಯ ವಿ
ಸ್ತಾರದಂಗುಲಿಯುಂಗುರಂಗಳ
ದೋರೆಗಡಗದ ಹೊನ್ನಬಳೆಗಳ ಶಂಖದೋಲೆಗಳ
ತೋರಮುತ್ತಿನ ಹಾರಗಳ ಕೇ
ಯೂರಗಳ ಧವಳಾಂಬರಂಗಳ
ನಾರಿಯರು ನಡೆತಂದರಾ ಮಾಯಾಂಗನೆಯ ಕೂಡೆ ೩೧

ಪವಿತ್ರವಾದ ಪೂಜಾಸಾಮಗ್ರಿಗಳ, ಗೀತ ನೃತ್ಯ ವಾದ್ಯಗಳ, ದೇವಪೂಜೆಗೆ ಬೇಕಾದ ಉಪಕರಣಗಳ ಊಳಿಗದ ಸ್ತ್ರೀಯರು ಪ್ರೀತಿಯಿಂದ ನಡೆದುಬಂದರು. ೨೯. ಶಬ್ದ ಮಾಡುವ ಕಾಲ ಗೆಜ್ಜೆ, ಬಿರುದಿನ ಕಾಲ ಬಳೆ, ಮನೋಹರವಾದ ಕೈಬಳೆ, ತೋಳಬಂದಿ, ಕಾಂತಿಯುಕ್ತವಾದ ಪದಕ, ದಪ್ಪ ಮುತ್ತಿನ ಸರ, ಮೂಗುತಿ, ಅರಳಿದ ಹೂವನ್ನು ಧರಿಸಿರುವ ತುರುಬು, ರೇಷ್ಮೆಯ ಸೀರೆ, ಇಜಾರ-ಇವುಗಳನ್ನು ಧರಿಸಿದ ಕೋಮಲಾಂಗಿಯರು ಮಾಯಾಂಗನೆಯ ಸುತ್ತ ನಡೆದು ಬಂದರು. ೩೦. ಮುತ್ತಿನ ಓಲೆಯ, ಸುತ್ತಲೂ ಜೋಡಿಸಿ ಬಣ್ಣದ ಸರಗಳನ್ನು ಪಕ್ಕದಲ್ಲಿ ಅಳವಡಿಸಿದ ನವರತ್ನಖಚಿತವಾದ ಸೊಂಟ ಪಟ್ಟಿಯ, ಶ್ರೇಷ್ಠವಾದ ಹಾಗೂ ರಮಣೀಯವಾದ ವಸ್ತ್ರಗಳ, ಚಂದಿರನಂತೆ ಹಣೆಯ ಮೇಲೆ ಕಸ್ತೂರಿತಿಲಕವುಳ್ಳ ಮದಿಸಿದ ಆನೆಯ ನಡಿಗೆಯನ್ನು ಅನುಕರಿಸುವ ಸುಂದರಾಂಗಿಯರು ವಿಲಾಸದಿಂದ ಬರುತ್ತಿದ್ದರು. ೩೧. ವೀರಮುದ್ರೆ, ಮೆಂಟಿಕೆ, ಉದ್ದವಾದ ಬೆರಳುಗಳಲ್ಲಿ ಧರಿಸಿದ ಉಂಗುರ, ದಪ್ಪ ಕಡಗ, ಚಿನ್ನದ ಬಳೆ, ಶಂಖದಾಕಾರದ ಓಲೆ, ದಪ್ಪ ಮುತ್ತಿನ ಹಾರ, ತೋಳಬಂದಿ, ಬಿಳಿಯ ಸೀರೆ-ಇವುಗಳನ್ನು ಧರಿಸಿದ ನಾರಿಯರು ಮಾಯಾಂಗನೆಯ ಜೊತೆಯಲ್ಲಿ ನಡೆದುಬಂದರು.

ನಿಱಿಯನಳವಡಿಸುತ್ತೆ ಮೇಲುದ
ಸೆಱಗ ಸಂವರಿಸುತ್ತೆ ಬಳಲುವ
ತುಱುಬ ತಿದ್ದುತೆ ಚಪಳತೆಯ ಕಡೆಗಣ್ಣ ನೋಟದಲಿ
ಸೆಱೆವಿಡಿದು ಕುಸುಮಾಸ್ತ್ರನಿದಿರಿನ
ಕುಱಿಗಳೆನಿಸುವ ನೋಟಕರನೀ
ತೆಱದಲೈದಿದರೊಡತಿಯೊಡನೆ ವಿಳಾಸಿನೀನಿಕರ ೩೨

ಗತಿಯ ಗಮಕದಲಿಂದ್ರನನು ವಾಕ್
ಚತುರತೆಯಲಿ ವಿರಂಚಿಯನು ಪೂ
ರಿತ ಕಟಿ ಸ್ತನದುಬ್ಬಿನಲಿ ಖಗರಾಜವಾಹನನ
ನುತ ಕಟಾಕ್ಷಕಳಾವಿಳಾಸೋ
ನ್ನತಿಯಲೀಶನ ಮರುಳುಮಾಡುವ
ಸತಿಯರೈದಿದರಂದು ಮಾಯಾಂಗನೆಯ ಬಳಸಿನಲಿ ೩೩

ತರುಣಿಯರ ಮೈ ಸುಯ್ಯ ಕಂಪಿಗೆ
ಹರಿದು ಕವಿತಹ ತುಂಬಿಗಳ ವಿ
ಸ್ತರದ ಗಿಲಿಕಿನ ಭೂಷಣಂಗಳ ನೆಲನನುಗ್ಘಡಿಪ
ನೆರೆದ ಸದಮಳಕಾಂತೆಯರ ಸಡ
ಗರದ ಕೈವಾರಿಗಳ ಧ್ವನಿಗಳ
ಭರದ ಕಳಕಳ ಕೇಳಲಾದುದು ಪುರದ ಬೀದಿಯಲಿ ೩೪

ಇದು ಮನೋಜಬ್ರಹ್ಮ ತಾ ಮಾ
ಡಿದ ನವೀನದ ಸೃಷ್ಟಿಯೋ ಮೇ
ಣಿದುವೆ ರತಿವಲ್ಲಭನ ಜಂಗಮಲತೆಗಳೋ ಬಗೆಗೆ
ಇದು ವಿಚಿತ್ರವೆನಲ್ಕೆ ರೂಪಿನ
ಚದುರತನದ ವಿಳಾಸವೃತ್ತಿಯ
ಸುದತಿಯರು ನಡೆತಂದರಾ ಮಾಯಾಂಗನೆಯ ಕೂಡೆ ೩೫

೩೨. ನಿರಿಗೆಯನ್ನು ಸೇರಿಸುತ್ತ, ಮೇಲುವಸ್ತ್ರದ ಸೆರಗನ್ನು ಸರಿಗೊಳಿಸುತ್ತ, ಜೋಲಾಡುವ ತುರುಬನ್ನು ತಿದ್ದುತ್ತ, ಮನ್ಮಥನ ಇದಿರಿನಲ್ಲಿ ಕುರಿಗಳು ಎನ್ನಿಸುವ ಪ್ರೇಕ್ಷಕರನ್ನು ತಮ್ಮ ಚಾಂಚಲ್ಯವಾದ ಕಡೆಗಣ್ಣ ನೋಟದಲ್ಲಿ ಸೆರೆಹಿಡಿಯುತ್ತಾ ವಿಳಾಸಿನಿಯರ ಗುಂಪು ಒಡತಿ ಮಾಯಾದೇವಿಯ ಜೊತೆಯಲ್ಲಿ ನಡೆದರು. ೩೩. ನಡೆಯುವ ಉತ್ಸಾಹದಲ್ಲಿ ಇಂದ್ರನನ್ನು, ವಾಕ್‌ಚತುರತೆಯಲ್ಲಿ ಬ್ರಹ್ಮನನ್ನು, ತುಂಬಿದ ಸೊಂಟ ಹಾಗೂ ಸ್ತನಗಳ ಉಬ್ಬಿನಲ್ಲಿ ಗರುಡವಾಹನನಾದ ವಿಷ್ಣುವನ್ನು, ಹೊಗಳಲ್ಪಟ್ಟ ಕಡೆಗಣ್ಣೋಟ ಹಾಗೂ ಕಳಾ ವಿಳಾಸೋನ್ನತಿಯಲ್ಲಿ ಶಿವನನ್ನು ಮರುಳು ಮಾಡುವ ಸ್ತ್ರೀಯರು ಮಾಯಾಂಗನೆಯ ಸುತ್ತಿನಲ್ಲಿ ನಡೆದುಬಂದರು. ೩೪. ತರುಣಿಯರ ದೇಹದ ಮತ್ತು ಉಸಿರಿನ ಕಂಪಿಗೆ ಸುತ್ತಿ ಮುತ್ತುವ ತುಂಬಿಗಳ, ಭೂಷಣಗಳ ಸಮೂಹದ ಮಧುರನಾದ, ಗುಂಪುಗೂಡಿ ನೆಲವನ್ನು ಸಪ್ಪಳಿಸುವ ಪರಿಶುದ್ಧ ಸ್ತ್ರೀಯರ, ಹೊಗಳುಭಟ್ಟರ ಧ್ವನಿ-ಇವುಗಳಿಂದ ಉಂಟಾದ ಅತಿಶಯವಾದ ಕಳಕಳನಾದ ಪುರದ ಬೀದಿಯಲ್ಲಿ ಕೇಳಲಾಯಿತು. ೩೫. ಇದು ಮನ್ಮಥಬ್ರಹ್ಮನು ತಾನೇ ಮಾಡಿದ ಹೊಸಬಗೆಯ ಸೃಷ್ಟಿಯೊ ಅಥವಾ ಇದು ರತಿಯ ವಲ್ಲಭನಾದ ಕಾಮನ

ಇದುವೆ ಕೈಲಾಸಾದ್ರಿಯೋ ಮೇ
ಣಿದು ಶಶಾಂಕನ ತಗಡಿನಲಿ ಹೊಂದಿ
ಸಿದ ವಿನೂತನ ಪುಷ್ಪಕವೊ ಪೇಳೆನಲು ತೊಳಗುತಲಿ
ಪುದಿದು ಗುಡಿ ತೋರಣ ಪತಾಕೆಗ
ಳೊದವಿನಲಿ ಹೊಂಗಳಸದಲಿ ತೋ
ಱಿದುದು ಮಾಯೆಗೆ ಮಧುಕನಾಥೇಶ್ವರನ ವರಭವನ ೩೬

ಬಂದಳಾ ದೇಗುಲಕೆ ಭರವಸ
ದಿಂದೆ ಬಳಿಕಾ ಮಾಯೆ ವಿಭವದ
ಲಂದಣವನೊಲಿದಿಳಿದು ಕರಪದವದನವನು ತೊಳೆದು
ಇಂದುವದನೆ ವಿಲಾಸದಲಿ ಬಲ
ವಂದು ನಡೆದೊಳಪೊಕ್ಕು ಲಿಂಗದ
ಮುಂದೆ ಮೈಯಿಕ್ಕಿದಳು ಪುಷ್ಪಾಂಜಲಿಯ ಪಸರಿಸುತೆ ೩೭

ಕರವ ಮುಗಿಯುತೆ ಮಧುಕನಾಥೇ
ಶ್ವರನೆ ಶರಣೆನುತೆದ್ದು ಕುಳ್ಳಿತು
ವಿರಚಿಸುತಲಂದರ್ಘ್ಯಪಾದ್ಯಾರ್ಚನವಿಧಾನಗಳ
ಪರುಠವಿಸಿ ಪಂಚಾಮೃತಂಗಳ
ನೆರೆದು ಪ್ರತ್ಯೇಕವಲಿ ಮಿಗೆ ವಿ
ಸ್ತರಿಸುತಿರ್ದಳು ಮಾಯೆ ಮುದದಲಿ ಮಧುಕನಾಥಂಗೆ ೩೮

ಚಲಿಸುವ ಲತೆಗಳೊ ಮನಸ್ಸಿಗೆ ಇದು ವಿಚಿತ್ರವೆನ್ನುವಂತಿ ರೂಪು, ಚದುರತನ, ವಿಲಾಸವೃತ್ತಿ, ಕಾಂತಿಯುಕ್ತ ಹಲ್ಲುಗಳು-ಇವುಗಳನ್ನೊಳಗೊಂಡ ಸ್ತ್ರೀಯರು ಮಾಯಾಂಗನೆಯ ಜೊತೆಯಲ್ಲಿ ನಡೆದು ಬಂದರು. ೩೬. ಇದು ಕೈಲಾಸಪರ್ವತವೊ ಅಥವಾ ಚಂದ್ರನ ತಗಡಿನಲ್ಲಿ ಹೊದಿಸಿದ ವಿನೂತನವಾದ ಪುಷ್ಪಕವೊ ಹೇಳು ಎನ್ನುವಂತೆ ಪ್ರಕಾಶಿಸುತ್ತ, ಗುಡಿ ತೋರಣ ಪತಾಕೆ ಹೊಂಗಳಸಗಳಿಂದ ಕೂಡಿದ ಮಧುಕೇಶ್ವರನ ಶ್ರೇಷ್ಠವಾದ ಆಲಯವು ಮಾಯೆಗೆ ಕಾಣಿಸಿತು. ೩೭. ಅನಂತರ ಬೇಗನೆ ದೇಗುಲದ ಸಮೀಪಕ್ಕೆ ಬಂದ ಚಂದ್ರವದನೆಯಾದ ಮಾಯೆಯು ಘನತೆ ಹಾಗೂ ಪ್ರೀತಿಯಿಂದ ಪಲ್ಲಕ್ಕಿಯಿಂದಿಳಿದು ಕೈಕಾಲು ಮುಖಗಳನ್ನು ತೊಳೆದು ವಿಲಾಸದಿಂದ ದೇವಾಲಯದ ಪ್ರದಕ್ಷಿಣೆಮಾಡಿ ಒಳಗೆ ನಡೆದು ಲಿಂಗದ ಮುಂದೆ ಪುಷ್ಪಾಂಜಲಿಯನ್ನು ಹರಡುತ್ತಾ ಅಡ್ಡಬಿದ್ದಳು. ೩೮. ಆಮೇಲೆ 'ಮಧುಕನಾಥೇಶ್ವರನೆ ಶರಣು' ಎನ್ನುತ್ತ ಕೈಮುಗಿದು ಕುಳಿತು ಅರ್ಘ್ಯ, ಪಾದ್ಯ, ಅರ್ಚನಕ್ರಮಗಳನ್ನು ಮಾಡುತ್ತಾ ಸಿದ್ಧಗೊಳಿಸಿದ ಪಂಚಾಮೃತಗಳನ್ನು ಲಿಂಗಕ್ಕೆ ಪ್ರತ್ಯೇಕ ಪ್ರತ್ಯೇಕವಾಗಿ ಎರೆದು, ಮಾಯೆ ಸಂತೋಷ ದಿಂದ ಕೂಡಿ ಮಧುಕನಾಥನಿಗೆ ಸಾವಕಾಶವಾಗಿ ಅಭಿಷೇಕ ಮಾಡಿದಳು.

ಸಾರಗಟ್ಟಯೆ ನೀಡಿಹರು ಪ
ನ್ನೀರ ಹೊಂಗರಗದಲಿ ನಲಿದಾ
ನಾರಿಯರು ವಿರಚಿಸಿದರಭಿಷೇಕವನು ದೇವರಿಗೆ
ಸಾರದಿವ್ಯಾಂಬರವನರ್ಪಿಸಿ
ಹಾರವಿಸುತಲಿ ಕುಂಕುಮದ ಕ
ರ್ಪೂರ ಮೊದಲಾದಷ್ಟಗಂಧವನೊಟ್ಟಿದಳು ಮಾಯೆ ೩೯

ಇಂದುಕಳೆಯದ ಮುತ್ತುಗಳಲಾ
ನಂದದಿಂದಕ್ಷತೆಯನಿಟ್ಟಳು
ತಂದು ತರುಣಿಯರೀವ ಹೂವಿನ ದಂಡೆಯಿಂಡೆಯನು
ಸಂದಿಸುತ ನಾನಾಪ್ರಕಾರದ
ಚಂದಚಂದದ ಪತ್ರೆ ದೂರ್ವೆಗ
ಳಿಂದೆ ಮಾಯಾದೇವಿ ಮಾಡಿದಳಭವಪೂಜೆಯನು ೪೦

ಹಿಡಿದು ಬಾಜಿಸೆ ಘಂಟೆ ಶಂಖದ
ಗಡಣ ಜಾಗಟೆ ಜಗಳೆ ಮದ್ದಳೆ
ಜಡಿವ ಕಹಳೆ ಮೃದಂಗವಾವುಜ ಭೇರಿ ಕಂಸಾಳ
ನುಡಿವ ಗಂಭೀರಧ್ವನಿಯಲತಿ
ಸಡಗರಿಸಿದುದು ನಗರ ಮಾಯಾ
ಮಡದಿ ಮಾಡುವ ದೇವಪೂಜೆಯ ರಭಸರಚನೆಯಲಿ ೪೧

ಹಲವುಪರಿಯ ಸುಗಂಧಧೂಪಂ
ಗಳನು ಧೂಪಿಸಿ ಬೆಂಬಳಿಯ ಮಂ
ಗಳಪದಂಗಳ ಹಾಡುತಾರತಿಗಳನನೇಕವನು
ತೊಳಗಿ ಬೆಳಗುತಲೆತ್ತಿದಳು ಕೋ
ಮಳೆಯರುಘೆಯುಘೆ ಜಯತು ಜಯತೆಂ
ದುಲಿಯುತಿರಲಾ ಮಧುಕನಾಥಗೆ ಮಾಯೆ ಭಕ್ತಿಯಲಿ ೪೨

೩೯. ಎತ್ತರದಲ್ಲಿ ನಿಂತು ಅಭಿಷೇಕ ಮಾಡಲು ಬರುವಂತೆ ಅಟ್ಟವನ್ನು ಕಟ್ಟಿ, ಪನ್ನೀರನ್ನು ಹೊನ್ನಿನ ಪಾತ್ರೆಯಲ್ಲಿ ತುಂಬಿ ಸಂತೋಷದಿಂದ ನಾರಿಯರು ಕೊಟ್ಟರು. ಅಭಿಷೇಕವನ್ನು ಮಾಡಿ ದೇವರಿಗೆ ಶ್ರೇಷ್ಠವಾದ ದಿವ್ಯಾಂಬರವನ್ನು ಅರ್ಪಿಸಿ, ಕುಂಕುಮ, ಕರ್ಪೂರ ಮೊದಲಾದ ಅಷ್ಟಗಂಧಗಳನ್ನು (ಮನದಲ್ಲಿ ಮಧುಕನಾಥನನ್ನು ಪ್ರಾರ್ಥಿಸುತ್ತಾ) ಮಾಯಾದೇವಿ ಹಚ್ಚಿದಳು. ೪೦. ಮಾಯಾದೇವಿ ಆನಂದದಿಂದ ಚಂದ್ರಕಳೆಯನ್ನುಳ್ಳ ಮುತ್ತುಗಳ ಅಕ್ಷತೆಯನ್ನಿಟ್ಟಳು; ತರುಣಿಯರು ತಂದುಕೊಡುವ ಹೂವಿನಮಾಲೆ ಹೂವಿನರಾಶಿಯನ್ನು ಮಧುಕನಾಥನಿಗೆ ಏರಿಸುತ್ತಾ ನಾನಾ ಬಗೆಯ ಚೆಂದಚೆಂದದ ಪತ್ರೆ, ಗರಿಕೆಗಳಿಂದ ಶಿವನ ಪೂಜೆಯನ್ನು ಮಾಡಿದಳು. ೪೧. ಘಂಟೆ, ಶಂಖ, ಜಾಗಟೆ, ಜಗಳೆ, ಮದ್ದಳೆ, ಕಹಳೆ, ಮೃದಂಗ, ಆವುಜ, ಭೇರಿ, ಕಂಸಾಳೆಗಳನ್ನು ನುಡಿಸುತ್ತಲಿರಲು, ಆ ಗಂಭೀರಧ್ವನಿಯಿಂದ ಹಾಗೂ ಮಾಯಾದೇವಿ ಮಾಡುವ ವೈಭವಪೂರ್ಣವಾದ ದೇವಪೂಜೆಯ ಸಡಗರದಿಂದ ಬನವಸೆ ಪಟ್ಟಣವು ವಿಶೇಷವಾಗಿ ಸಂಭ್ರಮಗೊಂಡಿತು. ೪೨. ಕೋಮಲಾಂಗಿಯರು 'ಉಘೇ ಉಘೇ ಜಯತು ಜಯತು' ಎಂದು ಘೋಷಿಸುತ್ತಿರಲು ಹಲವು ಬಗೆಯ ಸುಗಂಧ, ಧೂಪಗಳನ್ನು ಧೂಪಿಸಿ, ಅದರ ಹಿಂದೆಯೇ

ಸರಸ ಮಿಗೆ ತಾರಕೆಯ ನಿಗುಚಿದ
ಪರಿಯಲೋಗರ ಪುಷ್ಪರಾಗದ
ಸುರಸದಂತಿರೆ ತುಪ್ಪ ಚಂದ್ರಮನಂತೆ ಪಾಯಸವು
ಥರಥರಂಗಳ ಮುಗಿಲ ಬಣ್ಣದ
ಪರಿಯಲೊಪ್ಪುವ ಭಕ್ಷ್ಯರಾಶಿಯ
ನಿರಿಸುತಿರ್ದರು ಹೊನ್ನ ಹರಿಯಾಣದಲಿ ಬೋನವನು ೪೩

ವರವಿನೂತನ ರತ್ನಗಳ ಮೃದು
ಕರಣೆಯಂಗವನಜೆದು ಮಾಡಿದ
ಪರಿಯ ಬಾಳುಕ ಹಪ್ಪಳಂಗಳ ಪಲವು ಶಾಖಗಳ
ಸುರುಚಿಯಾದ ಪಳಿದ್ಯ ಪಾನೀ
ತ್ಕರವನುಪ್ಪಿನಕಾಯಿ ಪಣ್ಗಳ
ವಿರಚಿಸುತೆ ದಧಿತಕ್ರಗಳ ಬಡಿಸಿದು ಭಕ್ತಿಯಲಿ ೪೪

ಪರಿಮಳಂಗಳ ಪಸರಿಸುವ ಕ
ಚ್ಚರಿಯ ಪಚ್ಚಡಿಗಳ ಸುಸಾರೋ
ತ್ಕರದ ಸಾಜಿನ ಸೀಕರಣೆಯನುಪಮ ಪಸುಂಬರಿಯ
ಪರಿಪರಿಯ ಚಿನಿಪಾಲುಗಳು ಸ
ಕ್ಕರೆಗಳನು ನಾನಾ ಪದಾರ್ಥವ
ತರುಣಿಯರು ನೈವೇದ್ಯವನು ಬಡಿಸಿದರು ಭಕುತಿಯಲಿ ೪೫

ಮಂಗಳಗೀತೆಗಳನ್ನು ಹಾಡುತ್ತಾ ಮಧುಕನಾಥನಿಗೆ ಮಾಯೆ ಭಕ್ತಿಯಿಂದ ಅನೇಕ ಬಗೆಯ ಆರತಿಗಳನ್ನು ತೊಳಗಿ ಬೆಳಗುತ್ತ ಎತ್ತಿದಳು. ೪೩. ಸಂತೋಷಾಧಿಕ್ಯದಿಂದ ನಕ್ಷತ್ರಗಳನ್ನು ಮೀಟಿದ ರೀತಿಯಲ್ಲಿರುವ ಅನ್ನ, ಪುಷ್ಪರಾಗದ ರಸದಂತಿರುವ ತುಪ್ಪ, ಚಂದ್ರಮನಂತಿರುವ ಪಾಯಸ, ಮುಗಿಲಿನ ನಾನಾ ರೀತಿಯ ಬಣ್ಣಗಳಂತೆ ಶೋಭಿಸುವ ಭಕ್ಷ್ಯ ರಾಶಿ-ಇವುಗಳನ್ನು ಹೊನ್ನಿನ ತಟ್ಟೆಯಲ್ಲಿ ಇರಿಸುತ್ತಿದ್ದರು. ೪೪. ಶ್ರೇಷ್ಠವಾದ ವಿನೂತನರತ್ನಗಳನ್ನು ಕೂಡಿಸಿದ ರೀತಿಯಲ್ಲಿ ಮಾಡಿದ ಬಾಳಕ ಹಪ್ಪಳಗಳನ್ನು, ಹಲವಾರು ಬಗೆಯ ಪಲ್ಯಗಳನ್ನು, ರುಚಿಕರವಾದ ಕಾಯಿಹುಳಿಗಳನ್ನು, ಶ್ರೇಷ್ಠವಾದ ಪಾನೀಯಗಳನ್ನು, ಉಪ್ಪಿನಕಾಯಿ ಹಣ್ಣುಗಳನ್ನು ಮೊಸರು ಮಜ್ಜಿಗೆಗಳನ್ನು ಅಣಿಗೊಳಿಸಿ ಭಕ್ತಿಯಿಂದ ಬಡಿಸಿದರು. ೪೫. ಘಮಘಮಿಸುವ ಚಕ್ಕುಲಿ, ಪಚಡಿ, ರುಚಿಕರವಾದ ಸಾರು, ರಸಾಯನ, ಶ್ರೇಷ್ಠವಾದ ಪಸುಂಬರಿ, ನಾನಾ ಬಗೆಯ ಕೆನೆಗಟ್ಟಿದ ಹಾಲು, ಸಕ್ಕರೆ ನಾನಾ ಪದಾರ್ಥಗಳನ್ನು ನೈವೇದ್ಯಕ್ಕಾಗಿ ತರುಣಿಯರು ಭಕ್ತಿಯಿಂದ ಬಡಿಸಿದರು.

ಲಿಂಗವವಧಾರೆನುತಲುಪಹಾ
ರಂಗಳನು ನೆಱೆ ಮಧುಕನಾಥೇ
ಶಂಗೆ ಪುಷ್ಪಾಂಜಲಿಸಮೇತಾರ್ಪಣವ ಮಾಡುತಲಿ
ಮಂಗಳ ಶ್ರೀಹಸ್ತಜಲವನು
ಸಂಗಳಿಸಿ ಕೈಗಟ್ಟಿಸಹಿತವೆ
ಸಾಂಗದಲಿ ಮಾಡಿದಳು ಮಾಯಾದೇವಿ ಪೂಜೆಯನು ೪೬

ಹೋಳಿಸಿದ್ದಡಕೆಗಳ ಭಾಗವ
ಮೇಳವಿಸಿ ಕಪ್ಪುರದ ಬೆಳ್ಳಿಲೆ
ಯೋಳಿಗವಳಿಗೆಗಳನು ಶುಭ್ರದ ಸುಣ್ಣ ಸಹಿತವಾಗಿ
ವೀಳೆಯವನಿತ್ತಳ್ತಿಯಿಂದಾ
ಬಾಲೆ ಮಾಯಾದೇವಿ ಮನದೊಂ
ದೇಳಿಗೆಯ ಭಾವನೆಯುಳುಪ್ಪಾರತಿಯನೆತ್ತಿದಳು ೪೭

ಹಿಡಿದು ನವರತ್ನಂಗಳೊಪ್ಪುವ
ಕೊಡಕೆ ಕಂಗಳ ಕಾಂತಿಯನೆ ಬಲ
ನೆಡಕೆ ಸೂಸುತೆ ಧವಳಚಾಮರವನು ವಿಲಾಸದಲಿ
ಮಡದಿಯರು ತಂದಿತ್ತುವಾರತಿ
ಗಡಣವೆಲ್ಲವನರ್ಪಿಸುತೆ ನಲಿ
ದೊಡನೊಡನೆ ವ್ಯೆಯಿಕ್ಕುತಿರ್ದಳು ಮಾಯೆ ಭಕುತಿಯಲಿ ೪೮

ದಣಿಯೆ ಪೂಜೆಯ ಮಾಡಿ ಮಣಿದ
ರ್ಪಣವ ತೋಱಿಸಿ ಕೆಳದಿಯರ ಸಂ
ದಣಿಯ ತೊಲಗಿಸಿ ಲಿಂಗವನು ಬಲವಂಬು ಭಕ್ತಿಯಲಿ
ಮಣಿದು ಗರ್ಭಗೃಹವನು ಹೊಱಿವ
ಟ್ಟಣಿವರಿದು ಕೈಗೊಡುವರೊಲಿದಿ
ಟ್ಟಣಿಸೆ ಬಂದಳು ಮಾಯೆ ವಿಭವದೆ ರಂಗಮಂಟಪಕೆ ೪೯

೪೬. 'ಲಿಂಗವೇ ಸ್ವೀಕರಿಸು' ಎನ್ನುತ್ತ ಉಪಹಾರಗಳನ್ನು ಅತಿಶಯವಾಗಿ ಮಧುಕನಾಥೇಶ್ವರನಿಗೆ ಪುಷ್ಪಾಂಜಲಿಸಮೇತ ಅರ್ಪಣಮಾಡುತ್ತ, ಮಂಗಳವಾದ ಸಂಪದ್ಭರಿತ ಹಸ್ತದಿಂದ ತೀರ್ಥವನ್ನು ಧೂಪದ ಗಟ್ಟಿಯೊಂದಿಗೆ ಕೊಟ್ಟು ಮಾಯಾದೇವಿ ಪೂಜೆಯನ್ನು ಸಾಂಗವಾಗಿ ಮಾಡಿದಳು. ೪೭. ಹೋಳು ಮಾಡಿದ ಅಡಕೆಗಳ ಭಾಗವನ್ನು, ಕರ್ಪೂರದ ಬೆಳ್ಳನೆಯ ಎಲೆಯ ಕವಳಿಗೆಗಳನ್ನು ಶುಚಿಯಾದ ಸುಣ್ಣದೊಂದಿಗೆ ಸೇರಿಸಿ ವೀಳಯವನ್ನಿತ್ತು ಪ್ರೀತಿಯಿಂದ ಆ ಬಾಲೆ ಮಾಯಾದೇವಿ ಮನಸ್ಸಿನ ಒಂದು ಉನ್ನತಭಾವನೆಯಿಂದ ದೃಷ್ಟಿಪರಿಹಾರದ ಆರತಿಯನ್ನು ಬೆಳಗಿದಳು. ೪೮. ಬಿಳಿಯ ಚಾಮರವನ್ನು ವಿಲಾಸದಿಂದ ಬೀಸುತ್ತಾ, ಕರ್ಣಾಭರಣ ಹಾಗೂ ನಯನಕಾಂತಿಗಳನ್ನು ಬಲ ಎಡಭಾಗಗಳಿಗೆ ಚೆಲ್ಲುತ್ತಾ, ಸ್ತ್ರೀಯರು ತಂದಿತ್ತ ಆರತಿಗಳನ್ನು ಅರ್ಪಿಸುತ್ತಾ ಸಂತೋಷಗೊಂಡು ಮತ್ತೆ ಮತ್ತೆ ಮಾಯೆ ಭಕ್ತಿಯಿಂದ ನಮಸ್ಕರಿಸುತ್ತಿದ್ದಳು. ೪೯. ದಣಿಯುವಂತೆ ಪೂಜೆಯನ್ನು ಮಾಡಿ, ಮಣಿಖಚಿತವಾದ ಕನ್ನಡಿಯನ್ನು ಲಿಂಗಕ್ಕೆ ತೋರಿಸಿ, ಗೆಳತಿಯರ ಸಮೂಹವನ್ನು ಹೊರಗೆ ಕಳುಹಿಸಿ ಲಿಂಗವನ್ನು ಪ್ರದಕ್ಷಿಣೆ ಮಾಡಿ ಭಕ್ತಿಯಿಂದ ಬಾಗಿ ಗರ್ಭಗೃಹದಿಂದ ಹೊರಬಂದು

ಮಿಸುಪ ಧೂಪದ ಧೂಮದಲಿ ಕೆಂ
ಪೆಸೆವ ಲೋಚನವಾನತಿಯ ಭರ
ವಸಕೆ ಸೂಸಿದ ಸುಳಿಗುರುಳ ದೀಪಂಗಳುಬ್ಬೆಯಲಿ
ಕುಸರಿ ಬೆಮರಿಡುವಂಗ ಮಿಗೆ ರಂ
ಜಿಸಲು ಮಧುಕೇಶ್ವರನ ಸಂಭೋ
ಗಿಸಿಯೆ ಬಂದಳೊ ಪೇಳೆನಲ್ ಮೆಱೆದಿರ್ದಳಾ ಮಾಯೆ ೫೦

ನಿಲಿಸಿದರು ಗಡಬಡೆಯ ವಾದ್ಯದ
ಗಲಭೆಯನು ತರುಣಿಯರ ತಂಡಗ
ಳುಲುಹುಗಳನಲ್ಲಲ್ಲಿಗಾಗಳೆ ಕಂಬಕಾರ್ತಿಯರು
ಬಳಿಕ ಚಲ್ಲಣವುಡಿಸಿ ನೆಱೆ ಪರಿ
ಮಳದ ತುಱುಬನು ಬಲಿದು ಬಂಧಿಸಿ
ಲಲನೆಯರು ಲಾಸ್ಯಕ್ಕೆ ಮಾಯಾಂಗನೆಯ ರಚಿಸಿದರು ೫೧

ವಾಸಗಳವಾವುಜದ ಕಹಳೆಯ
ಲೇಸೆನಿಪ ಮದ್ದಳೆಯ ತಾಳದ
ಭಾಸುರದ ಗಾಯಕಿಯರೊಗ್ಗಿನ ವಿವಿಧವೀಣೆಗಳ
ಹೂಸಿಹೊಮ್ಮುವ ಸರದುಪಾಂಗಾ
ವಾಸಮೇಳಾಪಗಳಲೊಯ್ಯನೆ
ದೇಸಿರಾಗವ ಮಾಯೆಯಾಳಾಪಿಸಿದಳೊಲವಿನಲಿ ೫೨

ಸಾಲಾಗಿ ನಿಂತು ಕೈಗೊಟ್ಟು ನಡೆವವರು ಪ್ರೀತಿಯಿಂದ ಗುಂಪುಗೂಡಲು ಮಾಯೆ ವೈಭವದಿಂದ ರಂಗಮಂಟಪಕ್ಕೆ ಬಂದಳು. ೫೦. ಪ್ರಕಾಶಿಸುವ ಧೂಪದ ಹೊಗೆಯಲ್ಲಿ ಕೆಂಪಾದ ಕಣ್ಣುಗಳು, ತ್ವರಿತವಾಗಿ ನಮಸ್ಕರಿಸುವಲ್ಲಿ ಸುಳಿದಾಡುವ ಮುಂಗುರುಳು, ದೀಪಗಳ ಬೇಗೆಯಲ್ಲಿ ಬೆಂದು ಬೆವರಿಡುವ ದೇಹ-ಇವು ಅತಿಶಯವಾಗಿ ರಂಜಿಸಲು ಮಧುಕೇಶ್ವರನನ್ನು ಸಂಭೋಗಿಸಿಯೇ ಮಾಯೆ ಬಂದಳೊ ಹೇಳು ಎನ್ನುವಂತೆ ಶೋಭಿಸಿದ್ದಳು. ೫೧. ದಂಡಧಾರಿಣಿಯರು ದೊಡ್ಡ ದನಿಯ ವಾದ್ಯದ ಗಲಭೆಯನ್ನು, ತರುಣಿಯರ ಸಮೂಹದಲ್ಲಿ ಅಲ್ಲಲ್ಲಿ ಉಂಟಾದ ಶಬ್ದವನ್ನು ಆ ಕ್ಷಣವೆ ನಿಲ್ಲಿಸಿದರು. ಅನಂತರ ಚಲ್ಲಣವನ್ನು ಉಡಿಸಿ ವಿಶೇಷ ಪರಿಮಳಯುಕ್ತವಾದ ತುರುಬನ್ನು ಚೆನ್ನಾಗಿ ಗಂಟು ಹಾಕಿ ಲಲನೆಯರು ಮಾಯಾದೇವಿಯನ್ನು ನೃತ್ಯಕ್ಕೆ ಅಣಿಗೊಳಿಸಿದರು. ೫೨. ಕೊಳಲುಗಳ, ಆವುಜದ, ಕಹಳೆಯ, ಒಳ್ಳೆಯದಾದ ಮದ್ದಳೆಯ, ತಾಳದ, ತೇಜೋಭರಿತರಾದ ಗಾಯಕಿಯರ ಸಮೂಹದಲ್ಲಿ, ವಿವಿಧ ವೀಣೆಗಳ ನುಡಿಸುವಿಕೆಯಿಂದ ಹೊಮ್ಮುವ ನಾದ, ಉಪಾಂಗ, ಕೊಳಲುಗಳ ಸೇರಿಕೆಯಿಂದ ಮೆಲ್ಲನೆ ಮಾಯಾದೇವಿ ದೇಸಿರಾಗವನ್ನು ಪ್ರೀತಿಯಿಂದ ಆಲಾಪಿಸಿದಳು.

ಹಾಡುತಿರ್ದಳು ಹಾರವಿಸಿ ನೆಱೆ
ನೋಡುತಿರ್ದಳು ಮಿಕ್ಕು ಮೋಹಿಸಿ
ಬೇಡುತಿರ್ದಳು ಮಾಯೆ ಮನದೊಳಗಿಷ್ಟಸಿದ್ಧಿಯನು
ಕೂಡುತಿರ್ದಳು ನೆಱೆದು ನಿಂದಿತು
ಕೂಡೆ ಕೇಳುವ ನೋಟಕರ ಮೈ
ಗೂಡಿನಲಿ ಕಾಮಾಗ್ನಿಯನು ಸಂಗೀತಕೇಳಿಯಲಿ ೫೩

ಬಳಿಕಲೊಯ್ಯನೆ ಚರಣ ಚಾರಣ
ಚಳತೆಯಲಿ ನಿಜಹಸ್ತವಿಸ್ತರ
ದಳತೆಯಲಿ ಝಳಪಿಸುವ ಬೆರಳಿನ ಉಳಿಯ ಹವಣಿನಲಿ
ಘಲಿಘಲಿಸುವಂದುಗೆಯ ಕಂಕಣ
ಗಳ ಝಣತ್ಕಾರದಲಿ ಮಾಯಾ
ಲಲನೆ ರಂಗಂಬೊಕ್ಕು ನಿಂದಳು ನಿಜದ ನಿಱುಗೆಯಲಿ ೫೪

ಪಸರಿಸಿದ ನಿಱಿ ಪಾದಗಳು ಸಂ
ದಿಸಿದ ಮಡ ಸಮಲಾಗಿನಲಿ ಮೋ
ಹಿಸಿಯಗಲ್ದಿಹ ಜಾನು ತೋಱುವ ಜಘನ ಕುಚಕಳಶ
ಕುಸಿದು ಕೆಲವಿಂಬಾದ ಕಾಲಿನ
ಲೆಸೆವ ನಳಿತೋಳುಗಳ ಭಾವದ
ಸಸಿನದಲಿ ಸಮನಿಸಿದ ಕಣ್ಣೊಪ್ಪಿದವು ಮಾಯೆಯಲಿ ೫೫

ತಾಳದಲಿ ತರಹರಿಸಿ ಮೆಲ್ಲನೆ
ಮೇಳದಲಿ ಮೈನಿಗುರಿ ಕರಸಂ
ಚಾಳಿಯಲಿ ಚಳಬಳಸಿ ತಿರುಪಿನ ಮಡುಪಿನಲಿ ಮಣಿದು
ತೋಳ ಮೈಯಲಿ ತೊನೆದ ನೋಟದ
ಥಾಳದಲಿ ಥವಳಿಸಿಯೆ ವಿನುತ ಮ
ರಾಳಗತಿಯಲಿ ಗಮಕಿಸುತುಮೊಪ್ಪಿರ್ದಳಾ ಮಾಯೆ ೫೬

೫೩. ಮಾಯೆ ಹಾಡುತ್ತಿದ್ದಳು; (ಮಧುಕೇಶ್ವರನನ್ನು) ಬಯಸಿ ವಿಶೇಷವಾಗಿ ನೋಡುತ್ತಿದ್ದಳು; ಅತಿಯಾಗಿ ಮೋಹಿಸಿ ತನ್ನ ಮನದೊಳಗಿನ ಇಷ್ಟಸಿದ್ಧಿಗಾಗಿ ಬೇಡುತ್ತಿದ್ದಳು; ಮನದಲ್ಲಿ ಮಧುಕನಾಥನನ್ನು ಸೇರುತ್ತಿದ್ದಳು. ಪ್ರೇಕ್ಷಕರ ದೇಹದಲ್ಲಿ ಕಾಮಾಗ್ನಿಯನ್ನು ಉಂಟುಮಾಡುವ ರೀತಿಯಲ್ಲಿ ಸಂಗೀತಕೇಳಿಯು ನೆಲಸಿತು. ೫೪. ಅನಂತರ ಮಾಯಾದೇವಿಯು ರಂಗಪ್ರವೇಶ ಮಾಡಿ ನಿಧಾನವಾಗಿ ನರ್ತನದಲ್ಲಿ ಪಾದಗಳನ್ನು ಚಲಿಸುತ್ತಾ, ತನ್ನ ಹಸ್ತಗಳನ್ನು ನಿರ್ದಿಷ್ಟ ಪ್ರಮಾಣದಲ್ಲಿ ಅಲುಗಾಡಿಸುತ್ತಾ, ಬೆರಳುಗಳನ್ನು ಪ್ರಮಾಣಕ್ಕನುಗುಣವಾಗಿ ಚುರುಕಾಗಿ ಚಲಿಸುತ್ತಾ, ಘಲಿರುಘಲಿರೆನ್ನುವ ನೂಪುರ, ಕಂಕಣಗಳ ಝಣತ್ಕಾರ ಮಾಡುತ್ತಾ ಶೋಭಿಸುತ್ತ ನಿಂತಳು. ೫೫. ಹರಡಿದ ನಿರಿ ಹಾಗೂ ಪಾದಗಳು, ಕೂಡಿಸಿದ ಹಿಮ್ಮಡಿ, ಸಮನಾದ ಚಲನೆಯಲ್ಲಿ ಇಚ್ಛೆಪಟ್ಟು ಅಗಲಿಸಿದ ಮೊಣಕಾಲು, ನೋಟಕರಿಗೆ ತೋರುವ ನಡು, ಕುಚಕಳಶ, ಬಾಗಿ ಕಾಲಿನ ಪಕ್ಕದಲ್ಲಿ ನೆಲೆಯಾಗಿ ಶೋಭಿಸುವ ನಳಿತೋಳುಗಳು, ಭಾವಕ್ಕೆ ತಕ್ಕ ಕಣ್ಣುಗಳ ಚಲನೆ ಮಾಯೆಯಲ್ಲಿ ಒಪ್ಪಿದುವು. ೫೬. ತಾಳದಲ್ಲಿ ನೆಟ್ಟ ಮನಸ್ಸುಳ್ಳವಳಾಗಿ ಸಂಗೀತಕ್ಕೆ ಅನುಸರಿಸಿ ದೇಹವನ್ನು ಮೆಲ್ಲನೆ ನೆಟ್ಟಗೆ ಮಾಡಿ, ಕೈಗಳನ್ನು

ನೇಮ ನೆಲೆ ಪಯಪಾಡು ಪಲ್ಲಟ
ಸೀಮೆ ಸೊಗಸತಿ ಬೆಡಗು ಬಿನ್ನಣ
ಕಾಮಣೀಯತೆ ರೇಖೆಯಂತರಕರಣ ತಿರುಪಿನಲಿ
ಕಾಮಿನಿಯೊ ತಾ ಭರತಸಂಭವ
ಭೂಮಿಯೋ ಪೇಳೆನಲು ಮೆಱೆದಾ
ಶ್ಯಾಮೆ ಮಾಯಾದೇವಿ ಮೋಹಿಸಿ ಪಾತ್ರವಾಡಿದಳು ೫೭

ಸುಳಿವ ಹಸ್ತದ ಜಾತಿಭಾವದ
ಬಳಿಯಲಾಡುವ ನೋಟ ನೋಟದ
ಲುಳಿಯವೊಲು ತೆಗೆದತ್ತ ತಿರುಗುವ ಕೊರಳು ಕೊರಳಂತೆ
ಬಳುಕುತಿಹ ನಡು ನಡುವಿನಂದಕೆ
ಹೊಳೆವ ಪಾದದ ಪಾಡು ಪಾಡಿನ
ನಿಲುಕಡೆಯ ನಿಱುಗೆಯಲಿ ಮೆಱೆದಳು ಮಾಯೆ ಲಾಸ್ಯದಲಿ ೫೮

ರತಿಯ ನೀತಿಯ ದಿವಿಜರಾಜನ
ಸತಿಯ ಸರಣಿಯ ಕಮಲಜನ ಭಾ
ರತಿಯ ಭಾವವನಾದಿನಾರಾಯಣಿಯ ನಟಣೆಯನು
ಅತಿಶಯದ ಪಾರ್ವತಿಯ ಪಾವನ
ಗತಿಯನೆಲ್ಲವ ತೋಱುತಿರ್ದಳು
ಚತುರೆ ಮಾಯಾದೇವಿ ತನ್ನಯ ಲಾಸ್ಯಲೀಲೆಯಲಿ ೫೯

ತ್ವರಿತವಾಗಿ ತಿರುಗಿಸಿ, ಸುತ್ತುವ ಭಂಗಿಯಲ್ಲಿ ಬಗ್ಗಿ, ತೋಳು ಮೈಗಳನ್ನು ಅಲುಗಾಡಿಸಿ, ನೋಟದ ಕಾಂತಿಯಲ್ಲಿ ಶೋಭಿಸುತ್ತಾ ಹೊಗಳಲ್ಪಟ್ಟ ಹಂಸದ ನಡಿಗೆಯಲ್ಲಿ ಹಾಡುತ್ತಾ ಮಾಯೆ ಮೆರೆದಳು. ೫೭. ನಿಯಮವನ್ನು ಅನುಸರಿಸಿ ನಾಟ್ಯದಲ್ಲಿ ಪಾದವಿನ್ಯಾಸ, ಬದಲಾವಣೆಯ ಸಂದರ್ಭಗಳಲ್ಲಿ ಸೊಗಸು, ಬೆಡಗು, ಬಿನ್ನಾಣ, ಮನೋಹರತ್ವ, ನಿರ್ದಿಷ್ಟ ಅಂತರ ಇವುಗಳಿಂದ ಕೂಡಿ ನರ್ತನಭಂಗಿಯಲ್ಲಿ ಇವಳು ಮಾಯಾದೇವಿಯೊ ನಾಟ್ಯ ಶಾಸ್ತ್ರದ ಕರ್ತನಾದ ಭರತ[೧] ವಂಶಜಳೊ ಹೇಳು ಎನ್ನುವಂತೆ ಶ್ಯಾಮಲವರ್ಣಳಾದ ಮಾಯಾದೇವಿ ಎಲ್ಲರಿಗೂ ಮೋಹವನ್ನುಂಟುಮಾಡಿ ನರ್ತನ ಮಾಡಿದಳು. ೫೮. ಚಲಿಸುವ ಹಸ್ತ, ಸಹಜ ಭಾವಾನುಗುಣವಾದ ನೋಟ, ಕಾಂತಿಯುಕ್ತವಾದ ನೋಟವನ್ನು ಅನುಸರಿಸಿ ತಿರುಗುವ ಕತ್ತು, ಅದಕ್ಕನುಸಾರವಾಗಿ ಅಲುಗಾಡುವ ನಡು, ನಡುವನ್ನನುಸರಿಸುವ ಚೆಲುವಾದ ಪಾದವಿನ್ಯಾಸ, ಇವುಗಳ ರೀತಿಯನ್ನನುಸರಿಸಿ ಆಡುವ ನರ್ತನದ ಶೋಭೆಯಿಂದ ಮೆರೆದಳು. ೫೯. ಚತುರೆಯಾದ ಮಾಯಾದೇವಿಯು ತನ್ನ ನೃತ್ಯಲೀಲೆಯಲ್ಲಿ ರತಿಯ ನೀತಿಯನ್ನೂ, ದೇವೇಂದ್ರನ ಹೆಂಡತಿಯ ಪಥವನ್ನೂ, ಬ್ರಹ್ಮನ ರಾಣಿ ಭಾರತಿಯ ಭಾವವನ್ನೂ, ನಾರಾಯಣನ ಪತ್ನಿ ಲಕ್ಷ್ಮಿಯ ನಟನೆಯನ್ನೂ, ಅತಿಶಯದಿಂದ ಕೂಡಿದ ಪಾರ್ವತಿಯ ಪಾವನಸ್ಥಿತಿಯನ್ನೂ ತೋರುತ್ತಿದ್ದಳು.

---

೧. ಭರತಾಚಾರ್ಯನಿಗೆ ಜನ್ಮವನ್ನಿತ್ತವಳೊ (ರಂ)

ಮೃತ್ತಿಕೆಯ ಮಾಟಕದ ರೂಹಿನ
ಪುತ್ತಳಿಗಳನು ದೇಗುಲಕೆ ನೆಱೆ
ತೆತ್ತಿಸಿದರೆಂಬಂತೆ ಮಾಯೆಯ ನೋಡುವಳ್ಕೆಯಲಿ
ಸುತ್ತಿಮುತ್ತಿ ಗವಾಕ್ಷರಂಧ್ರದ
ಭಿತ್ತಿಯಲಿ ನೆಱೆ ಕೀಲಿಸಿರ್ದರು
ಚಿತ್ತಜಗ್ರಹ ಸೋಂಕಿದಂತಿರೆ ಕೂಡೆ ನೋಟಕರು ೬೦

ಮೇಳಗಾನಧ್ವಾನದಿನಿದನು
ಕೇಳಿ ಸಿಕ್ಕದರಾರು ಪಾತ್ರದ
ಚಾಳಿಯಲಿ ಹೊಳೆವಂಗಭಂಗಿಯ ಕಂಡು ಮನಸಿಜಗೆ
ಕೋಳುವೋಗದರಾರು ನರಸುರ
ಜಾಳದೊಳಗೆಂದೆನಲು ರಂಜಿಸಿ
ಬಾಲೆ ಮಾಯಾದೇವಿ ಮೆಱೆದಳು ಲಾಸ್ಯಕೇಳಿಯಲಿ ೬೧

ಹಲವು ಪರಿಗಳಲೀ ಪ್ರಕಾರದೊ
ಲೊಲವಿನಲಿ ಸರ್ವೋಪಚಾರಂ
ಗಳನು ವಿಸ್ತರವಾಗಿ ಮಾಡಿದ ಮಾಯೆಗುಚಿತದಲಿ
ಬಳಿಕ ಶಿವಲಿಂಗಪ್ರಸಾದದ
ತಳಿತ ಹೂವಿನ ದಂಡೆಯನು ಕೋ
ಮಳೆಗೆ ಕೊಟ್ಟನು ಹರಸುತಲಿ ಪೂಜಾರಿಪುಂಗವನು ೬೨

೬೦. ಮಣ್ಣಿನ ಮಾಟವಾದ ರೂಪುಳ್ಳ ಗೊಂಬೆಗಳನ್ನು ದೇವಾಲಯಕ್ಕೆ ಚೆನ್ನಾಗಿ ಜೋಡಿಸಿದರೆನ್ನುವಂತೆ ಮಾಯೆಯನ್ನು ನೋಡುವ ಆಸೆಯಿಂದ ಸುತ್ತಿಮುತ್ತಿ ಕಿಟಕಿ ಗೋಡೆಯ ರಂಧ್ರಗಳಲ್ಲಿ ಮನ್ಮಥನೆನ್ನುವ ಗ್ರಹ ಬಡಿದವರಂತೆ ನೋಟಕರು ತಮ್ಮ ದೃಷ್ಟಿಯನ್ನು ಅವಳಲ್ಲಿ ಚೆನ್ನಾಗಿ ನೆಟ್ಟಿದ್ದರು. ೬೧. ಮೇಳಗಾನದ ಇನಿದಾದ ಸ್ವರವನ್ನು ಕೇಳಿ ನರ ಸುರರ ಸಮೂಹದಲ್ಲಿ ಸೆರೆವೋಗದವರಾರು? ನೃತ್ಯದ ಅಂಗಾಂಗಗಳ ಚಲನವಲನದಲ್ಲಿ ಹೊಳೆಯುವ ದೇಹದ ನಿಲುವನ್ನು ಕಂಡು ಮನ್ಮಥನ ಬಲೆಗೆ ಸಿಕ್ಕದವರಾರು? ಎನ್ನುವಂತೆ ರಂಜಿಸಿ ಬಾಲೆ ಮಾಯಾದೇವಿ ನೃತ್ಯಕೇಳಿಯಲ್ಲಿ ಶೋಭಿಸಿದಳು. ೬೨. ನಾನಾ ರೀತಿಯಲ್ಲಿ ಹೀಗೆ ಪ್ರೀತಿಯಿಂದ ಸಮಸ್ತ ಉಪಚಾರಗಳನ್ನು, ಸಾಂಗವಾಗಿ ಮಾಡಲು ಅನಂತರ ಯೋಗ್ಯ ರೀತಿಯಲ್ಲಿ ಅರ್ಚಕಶ್ರೇಷ್ಠನು ಆ ಮಾಯಾದೇವಿಗೆ ಅರಳಿದ ಹೂವಿನ ಮಾಲೆಯನ್ನು ಶಿವಲಿಂಗಪ್ರಸಾದವಾಗಿ ಕೊಟ್ಟನು.

**ತರುಣಿ ಶಿವಲಿಂಗಪ್ರಸಾದಕೆ**
**ಶರಣೆನುತೆ ಕೈಕೊಂಡು ನಲಿದಾ**
**ದರಿಸಿ ವಿರಚಿಸಿ ದೇವರೋಲಗವಾಗಿ ಕುಳ್ಳಿರ್ದು**
**ಇರುತಲಿರ್ದಳು ಬಳಿಕ ಸಚರಾ**
**ಚರರೊಳಂತರಯಾಮಿಯೆನಿಸಿದ**
**ಗುರು ಗುಹೇಶ್ವರನಱಿದನಾಕೆಯ ಭಕ್ತಿಯನುಮತವ** ೬೩

**ಅಂತು ಗತಿ ೪ಕ್ಕಂ ಪದ ೧೭೩ಕ್ಕಂ ಮಂಗಳಂ**

೬೩. ತರುಣಿ ಮಾಯಾದೇವಿ ಶಿವಲಿಂಗಪ್ರಸಾದಕ್ಕೆ ಶರಣೆನ್ನುತ್ತಾ, ಅದನ್ನು ಸ್ವೀಕರಿಸಿ ನಲಿದು, ಬಳಿಕ ಪ್ರೀತಿಯಿಂದ ದೇವರ ಮುಂದೆ ಓಲಗಗೊಟ್ಟು ಕುಳಿತಳು. ಸಚರಾಚರರಲ್ಲಿ ಅಂತರ್ಯಾಮಿಯೆನ್ನಿಸಿದ ಗುರು ಗುಹೇಶ್ವರನು ಅವಳ ಭಕ್ತಿಯ ಇಚ್ಛೆಯನ್ನು ಅರಿತನು.

# ೫. ಪ್ರಭು ಮದ್ದಳೆಯ ಬಾರಿಸಿದುದು

ಗತಿ ೫

ಸೂಚನೆ : ಬಯಸಿ ಮಾಡಲು ಮಾಯೆ ಬಱುಭ
ಕ್ತಿಯನು ನಟಿಸಿದನಾಕೆಯಲಿ ಸಂ
ಶಯದ ಸಂಗವನಲ್ಲಮಪ್ರಭು ಮನುಜವೇಷದಲಿ

ಲಿಂಗಭಕ್ತರು ತಿಳಿವುದಿದನಾ
ವಂಗದಲಿ ಶರಣರುಗಳಾದವ
ರಂಗನೆಯರಳುಪಿಂಗೆ ನೆಱೆ ನಿರ್ಲೇಪವೃತ್ತಿಯಲಿ
ಸಂಗಿಯಂತಿರೆ ನಟಿಸಿ ತಾ ನಿ
ಸ್ಸಂಗಿಯಾಗಿಹ ಪರಿಯನೀ ಪ್ರಭು
ಲಿಂಗಲೀಲೆಯೊಳಾ ಸ್ವತಂತ್ರನ ಚಾರುಚರಿತೆಯಲಿ ೧

ಇರಲು ಮಾಯಾದೇವಿ ಮಧುಕೇ
ಶ್ವರನನೋಲಗಿಸುತ್ತೆ ಕಾಮಿಸಿ
ವರವಿಧಾವಂತರ ಕಳಾಕೇಳೀವಿನೋದದಲಿ
ಪರಮಂತರ್ಯಾಮಿ ಕರುಣಾ
ಕರನು ಸದಮಲ ಸಗುಣ ನಿರ್ಗುಣ
ಭರಿತನಲ್ಲಮಲಿಂಗನಱಿದಿಂತೆಂದ ತನ್ನೊಳಗೆ ೨

ಕಾಮಿತಾರ್ಥವನೀಯಬೇಹುದು
ಕಾಮಿನಿಗೆ ತಾನವಳು ಕಾಮ
ಪ್ರೇಮಭಕ್ತಿಯ ಮಾಡಿದುದು ಕಾರಣದಲೆಂದೆನುತೆ
ಆ ಮಹಾಮಹಿಮಸ್ವರೂಪ ಸ
ನಾಮವನು ಮಱೆಮಾಡಿಯಭಿನವ
ಕಾಮರೂಪಿನ ಪರಿಯನಲ್ಲಮಲಿಂಗ ಧರಿಸಿದನು ೩

ಸೂ : ಮಾಯೆಯು ಮಧುಕೇಶ್ವರನನ್ನು ಬಯಸಿ ವ್ಯರ್ಥವಾದ ಭಕ್ತಿಯನ್ನು ಆಚರಿಸಲು ಮನುಷ್ಯವೇಷದ ಅಲ್ಲಮಪ್ರಭುವು ಸಂಶಯವನ್ನುಂಟುಮಾಡುವ ಸಂಗವನ್ನು ಅವಳಲ್ಲಿ ನಟಿಸಿದನು. ೧. ಈ ಪ್ರಭುಲಿಂಗಲೀಲೆಯಲ್ಲಿ ಬರುವ ಸ್ವತಂತ್ರವ್ಯಕ್ತಿಯಾದ ಅಲ್ಲಮಪ್ರಭುವಿನ ಮನೋಹರವಾದ ಚರಿತ್ರೆಯಲ್ಲಿ ಯಾವ ರೀತಿಯಲ್ಲಿ ಸ್ತ್ರೀಯರ ಅಪೇಕ್ಷೆಗೆ ವಶವಾಗದೆ ಶರಣರು ಸಂಗಿಗಳಾದರೂ ನಿಸ್ಸಂಗಿಗಳಾಗಿರುತ್ತಾರೆ ಎಂಬುದನ್ನು ಲಿಂಗಭಕ್ತರು ತಿಳಿಯುವುದು. ೨. ಬಾಡಿಗೆಯ ಹಣಕ್ಕಾಗಿ ದುಡಿಯುವವರಂತೆ ಮಾಯಾದೇವಿಯು ಮಧುಕೇಶ್ವರನನ್ನು ಶ್ರೇಷ್ಠವಾದ ಕಲಾಕೇಳಿಯ ವಿನೋದದಲ್ಲಿ ಓಲಗಿಸುತ್ತಿರಲು ಪರಮನೂ ಅಂತರ್ಯಾಮಿಯೂ ಕರುಣಾಕರನೂ ಸದಮಲನೂ ಸಗುಣ ನಿರ್ಗುಣಭರಿತನೂ ಆದ ಅಲ್ಲಮಲಿಂಗನು ಅದನ್ನು ತನ್ನಲ್ಲಿಯೇ ಅರಿತು ಹೀಗೆಂದನು : ೩. "ಮಾಯಾದೇವಿಯು ಕಾಮಿಸಿ ಪ್ರೇಮಭಕ್ತಿಯನ್ನು ಮಾಡಿದ ಕಾರಣದಿಂದ ತಾನು ಅವಳ ಬಯಕೆಯನ್ನು ಈಡೇರಿಸಬೇಕು" ಎಂದು ಆಲೋಚಿಸಿ ಆ ಮಹಾಮಹಿಮ ಸ್ವರೂಪನಾದ ಅಲ್ಲಮಲಿಂಗನು

ಕಂಗಳಲಿ ನಡೆ ನೋಡಿದೊಡೆ ಹೆಱ
ಹಿಂಗಬಾರದ ಚೆಲುವ ಮುಖದ ಸು
ರಂಗ ಸೂಸುವ ದಂತಪಂಕ್ತಿಯ ತೊಳಪ ಕಣ್ಣುಗಳ
ಅಂಗವಟ್ಟದ ಸರಳಿಕೆಯ ಹ
ಸ್ತಂಗಳಂಘ್ರಿಯ ಕೋಮಳದ ಸ
ರ್ವಾಂಗಭಂಗಿ ಸೌಮ್ಯತೆಯ ಧರಿಸಿದನು ಪ್ರಭುರಾಯ ೪

ತೊಸಿದಂತಿರೆ ತೊಡೆಹ ತುಪ್ಪುಳು
ಮೀಸೆ ಮಿಂಚಿರಲುಟ್ಟ ಪಟ್ಟೆಯ
ಕಾಸೆ ತೋಱುವ ಕನಕದುಡಿನೇವಳ ವಿರಾಜಿಸಲು
ಲೇಸೆನಿಪ ಹದಿನಾಱು ಹದಿನೆಂ
ಟೈಸು ವರುಷದ ಹರಯವೆಂಬ ವಿ
ಳಾಸವೇಷವನಲ್ಲಮಪ್ರಭುಲಿಂಗ ನಟಿಸಿದನು ೫

ತುಱುಬು ಚಿಮ್ಮುರಿ ಚಂದಿ ಕಾಸೆಯ
ಸೆಱಗು ನಸುಹೊದೆದೊಲ್ಲಿ ಮಿಂಚುವ
ಮಿಱುಪ ಸುಲಿಪಲ್ಲಸಿಯ ಸೆಳ್ಳುಗುರುಲಿವ ಹೊಂದೊಡರು
ಉಱುವ ಗಂಧದ ಲೇಪ ಬೆನ್ನೊಳು
ಮೆಱೆವ ಮದ್ದಳೆಸಹಿತ ಬಂದೀ
ತೆಱನನಲ್ಲಮ ನಟಿಸಿ ನಿಂದನು ವಿಕೃತವೇಷದಲಿ ೬

ತನ್ನ ಹೆಸರನ್ನು ಮರೆಮಾಡಿ ಅಭಿನವ ಕಾಮನ ರೂಪನ್ನು ಧರಿಸಿದನು. ೪. ಕಣ್ಣುಗಳಿಂದ ದಿಟ್ಟಿಸಿ ನೋಡಿದರೆ ಚಂದ್ರನಂತೆ ಕುಂದದ ಕಾಂತಿಯುಳ್ಳ ಚೆಲುವಾದ ಮುಖ, ಕೊರೆದು ಮಾಡಿದಂತಹ ಪ್ರಕಾಶವನ್ನು ಹೊರ ಚೆಲ್ಲುವ ಹಲ್ಲುಗಳ ಸಾಲು, ಹೊಳೆಯುವ ಕಣ್ಣುಗಳು, ಸರಳವಾದ ಅಂಗಸೌಷ್ಠವ, ಕೋಮಲವಾದ ಕೈ ಕಾಲುಗಳು, ಶಾಂತವಾದ ಸರ್ವಾಂಗ ಭಂಗಿ-ಇವುಗಳನ್ನು ಪ್ರಭುರಾಯ ಧರಿಸಿದನು. ೫. ಆಭರಣಗಳನ್ನು ಧರಿಸಿದಂತೆ ರೋಮದ ಮೀಸೆ ಹೊಳೆಯುತ್ತಿರಲು, ನಡುವಿನಲ್ಲಿ ಕಟ್ಟಿದ ರೇಶ್ಮೆಯ ವಸ್ತ್ರ ಮಿಂಚುತ್ತಿರಲು, ಎದ್ದು ಕಾಣುವ ಚಿನ್ನದ ಉಡಿದಾರ ಶೋಭಿಸುತ್ತಿರಲು ಹದಿನಾರು ಹದಿನೆಂಟು ವರುಷಗಳ ಪ್ರಾಯವೆಂಬಂತೆ ವಿನೋದದ ವೇಷವನ್ನು ಅಲ್ಲಮಪ್ರಭುಲಿಂಗನು ತಾಳಿದನು. ೬. ತುರುಬುಕಟ್ಟಿ, ಬೆನ್ನಿನ ಹಿಂದೆ ಕೈಕಟ್ಟಿ, ತುಂಡು ಕಾಸೆಯ ಮೇಲುವಸ್ತ್ರವನ್ನು ಒಲ್ಲಿಯಾಗಿ ಸ್ವಲ್ಪವೇ ಸ್ವಲ್ಪ ಹೊದೆದು, ಹೊಳೆಯುವ ಸ್ವಚ್ಛ ಮಾಡಿದ ಹಲ್ಲುಗಳು, ತೆಳುವಾದ ಹರಿತವಾದ ಉಗುರುಗಳು, ದನಿಯನ್ನುಂಟುಮಾಡುವ ಹೊನ್ನಿನ ಆಭರಣಗಳು, ಶ್ರೇಷ್ಠವಾದ ಗಂಧದ ಲೇಪ, ಬೆನ್ನಿನಲ್ಲಿ ಶೋಭಿಸುವ ಮದ್ದಳೆ-ಇವುಗಳಿಂದ ಕೂಡಿದ ವಿಕೃತವೇಷದಿಂದ ಅಲ್ಲಮ ನಟಿಸಿ ನಿಂತನು.

---

ಸುರಂಗ ಸೂಸುವ-ಕಾಂತಿಯನ್ನು ಹರಡುವ (ರಂ)

ಎಡದ ಕಿವಿಯಲಿ ಮೆಱೆವ ರತ್ನದ
ಕಡುಕು ತಾಯಿತ ಮಣಿಯ ಸರ ಹೆ
ದ್ದೊಡರ ಸರಪಳಿಗಳಲಿ ನೇಲುವ ಬಾವುಲಿಯ ಬೊಂಬೆ
ಮುಡಿಯ ಹೂಸರ ಚುಕ್ಕಿಬೊಟ್ಟಿನ
ಬೆಡಗುಸಹಿತವೆ ಧೂರ್ತವೇಷದ
ತೊಡಹವನು ತೊಟ್ಟಲ್ಲಮಪ್ರಭು ಬಂದು ನಿಂದಿರ್ದ ೭

ಕೊರಳ ಮುತ್ತಿನ ಕಂಠಮಾಲೆಯ
ವಿರಚಿಸುತ್ತಿಹ ಬಾಹುಪೂರದ
ಬೆರಳಿನುಂಗುರಗಳ ವಿಳಾಸದ ಮಡಿಲ ವೀಳೆಯದ
ಧರಣಿಯೊಳು ಚೆಲುವಿಂಗೆ ತಾನೇ
ಬಿರುದ ಕಟ್ಟಿದನೆಂಬ ಸೊಬಗಿನ
ಪುರುಷವೇಷದಲಲ್ಲಮಪ್ರಭುರಾಯನೆಸೆದಿರ್ದ ೮

ನಿಂದು ನಾನಾಪರಿಯ ವಹಣಿಗ
ಳಿಂದ ತಾಳ ಸಮೇಳ ಸದ್ಗತಿ
ಯಿಂದಲುಗ್ಗಡಣೆಯ ಗಡಾವಣೆಯಿಂದಲಲ್ಲಮನು
ಅಂದು ಮಧುಕೇಶ್ವರನ ಬಾಗಿಲ
ಮುಂದೆ ಬಾಜಿಸುತಿರ್ದನೈ ಹಲ
ವಂದದಲಿ ಮದ್ದಳೆಯ ಕೇಳುವರೆಲ್ಲ ಬೆಱಗಾಗೆ ೯

ಕಾರ ಮುಗಿಲಿನ ಗರ್ಜನೆಯ ಕಿವಿ
ಯಾರೆ ಕೇಳುವ ಸೋಗೆಯಂತಿರೆ
ಹಾರಯಿಸುತಲಿಯಲ್ಲಮನ ಮದ್ದಳೆಯ ದನಿಗೇಳ್ದು
ನಾರಿ ಮಾಯಾದೇವಿ ನಲಿಯುತ
ದಾರು ಹೊಱಗೆಡೆಯಲ್ಲಿ ತೂರ್ಯೋ
ದ್ಧಾರವನು ಮಾಡುವರೆನುತೆ ಕೇಳಿದಳು ಕೆಳದಿಯರ ೧೦

೭. ಎಡದ ಕಿವಿಯಲ್ಲಿ ಶೋಭಿಸುವ ರತ್ನದ ಕರ್ಣಾಭರಣ, ತಾಲಿ, ಮಣಿಯ ಸರ, ದಪ್ಪ ಸರಪಣಿಯಿಂದ ಸುತ್ತಲ್ಪಟ್ಟು ಜೋಲಾಡುವ ಬಾವುಲಿಯ ಬೊಂಬೆ, ಮುಡಿಯ ಹೂವಿನ ಸರ, ಹಣೆಯ ಚುಕ್ಕಿಬೊಟ್ಟು ಈ ವಿಲಾಸದಿಂದ ಕೂಡಿದ ಧೂರ್ತವೇಷದ ಆಭರಣಗಳನ್ನು ಧರಿಸಿ ಅಲ್ಲಮಪ್ರಭು ಬಂದು ನಿಂತಿದ್ದನು. ೮. ಕೊರಳಲ್ಲಿನ ಮುತ್ತಿನ ಕಂಠಮಾಲೆ, ತೋಳ ಬಂದಿ, ಬೆರಳಿನ ಉಂಗುರುಗಳು, ಉಡಿಯಲ್ಲಿನ ವೀಳಯ-ಇವುಗಳ ವಿಲಾಸದಿಂದ ಭೂಮಿಯಲ್ಲಿ ಚೆಲುವಿಕೆಗೆ ತಾನೇ ಬಿರುದು ಕಟ್ಟಿದನೆಂಬ ಸೊಬಗಿನ ಪುರುಷವೇಷದಲ್ಲಿ ಅಲ್ಲಮಪ್ರಭುರಾಯ ಶೋಭಿಸುತ್ತಿದ್ದನು. ೯. ಮಧುಕೇಶ್ವರ ದೇವಾಲಯದ ಬಾಗಿಲ ಮುಂದೆ ನಿಂತು ನಾನಾ ಬಗೆಯ ಸಂಭ್ರಮಗಳಿಂದ ತಾಳ, ಮೇಳ ಹಾಗೂ ಸೊಗಸಾದ ಗತಿಯಿಂದ ಮಂದ ಮತ್ತು ತಾರಕ ಧ್ವನಿಗಳಿಂದ ಹಲವು ಬಗೆಯಲ್ಲಿ ಕೇಳುವವರು ಬೆರಗಾಗುವಂತೆ ಮದ್ದಳೆಯನ್ನು ಬಾರಿಸುತ್ತಿದ್ದನು. ೧೦. ಮಳೆಗಾಲದಲ್ಲಿ ಆಕಾಶದಲ್ಲಿ ಕವಿದ ಮೋಡಗಳ ಗುಡುಗನ್ನು ಕಿವಿ ತೃಪ್ತಿಗೊಳ್ಳುವಂತೆ ಕೇಳುವ ನವಿಲಿನಂತೆ (ಶಿವನನ್ನೇ ಪತಿಯಾಗಿ ಪಡೆಯಬೇಕೆಂದು) ಬಯಸಿದ್ದ ಮಾಯಾದೇವಿ

ಕೆಳದಿಯರು ತಾವಜೆದು ಬಂದಾ
ಗಳೆ ವಿಚಾರಿಸಿ ಹೇಳಿದೊಡೆ ಕೋ
ಮಳೆ ಮನೋಮುದದಿಂದ ಕರೆಯಿಸಿ ಕಂಡಳಲ್ಲಮನ
ಮೊಳೆತುವಾಕ್ಷಣ ಕಾಮಬಾಣದ
ಹಿಳುಕುಗಳು ಹಿರಿದಾಗಿ ಚಿತ್ತಜ
ನಳವಿಯಲಿ ಸಿಲ್ಕಿದಳು ಮಾಯೆ ಮಹಾನುರಾಗದಲಿ ೧೧

ಆವ ದೇಶದ ಪುರುಷನೈ ನಿನ
ಗಾವ ಹೆಸರೈ ನೀನು ನೆಲೆಗೊಂ
ಡಾವ ಠಾವಿನಲಿಪ್ಪೆಯೈಯೆಂದೆನುತ ವಿನಯದಲಿ
ಭಾವೆಯರು ಬಳಿಕಾತನನು ಸಂ
ಭಾವಿಸುತೆ ಕೇಳಿದೊಡೆಯಲ್ಲಮ
ದೇವನೊಲಿದಾ ಸತಿಯರಿಗೆ ನಸುನಗುತಲಿಂತೆಂದ ೧೨

ದೇಶವೆಮ್ಮದು ಹೇಳುವೊಡೆ ಪರ[೧]
ದೇಶ ಬಿರುದಿನ ಬಿಂಕಕಾಜಿರ
ವಾಸಿಗರನಲ್ಲೆನಿಸುವಲ್ಲಮನೆಂಬ ಪೆಸರೆನಗೆ
ಲೇಸುಮಾಡುವ ಠಾವುಗಳಲಭಿ
ಲಾಷೆಯಿಲ್ಲದೆ ಹೊದ್ದುವೆವು ಸುಖ
ವಾಸಿಗಳು ನಾವೆಂದನಲ್ಲಮನೊಲಿದು ಸತಿಯರಿಗೆ ೧೩

ಅಲ್ಲಮನ ಮದ್ದಳೆಯ ದನಿಗೇಳಿ ಸಂತೋಷಗೊಂಡು "ಹೊರಗಡೆಯಲ್ಲಿ ವಾದ್ಯದ ಧ್ವನಿ ಮಾಡುತ್ತಿರುವವರು ಅದಾರು?" ಎಂದು ಕೆಳದಿಯರನ್ನು ಕೇಳಿದಳು. ೧೧. ಕೆಳದಿಯರು ವಿಚಾರಿಸಿ ತಿಳಿದುಬಂದು ಅದನ್ನು ಆಗಲೇ ಹೇಳಲು, ಕೋಮಲೆ ಮಾಯಾದೇವಿ ತನ್ನ ಮನದಲ್ಲಾದ ಸಂತೋಷದಿಂದ ಮದ್ದಳೆ ಬಾರಿಸುತ್ತಿದ್ದ ಅಲ್ಲಮನನ್ನು ಕರೆಯಿಸಿ ನೋಡಿದಳು. (ಹಾಗೆ ನೋಡಿದ) ಕ್ಷಣದಲ್ಲೇ ಕಾಮನ ಬಾಣದ ತುದಿ ಆಳವಾಗಿ ನಾಟಿದುವು. ಮಾಯೆ ಮಹಾನುರಾಗದಿಂದ ಮನಥನ ಪ್ರಭಾವಕ್ಕೆ ಒಳಗಾದಳು. ೧೨. "ನೀನು ಯಾವ ದೇಶದ ಪುರುಷನಾಗಿದ್ದೀಯೆ? ನಿನ್ನ ಹೆಸರೇನು? ನೀನು ಯಾವ ಸ್ಥಳದಲ್ಲಿ ನೆಲೆಗೊಂಡು ಇರುತ್ತಲಿರುವೆ?" ಎಂದು ವಿನಯ ದಿಂದ ಸ್ತ್ರೀಯರು ಆತನನ್ನು ಗೌರವಪೂರ್ವಕವಾಗಿ ಕೇಳಲು ಅಲ್ಲಮದೇವನು ಆ ಸ್ತ್ರೀಯರಿಗೆ ಅನುಗ್ರಹಿಸಿ ನಸುನಗುತ್ತಾ ಹೀಗೆಂದನು. ೧೩. "ಹೇಳುವುದಾದರೆ ನಮ್ಮ ದೇಶವು ಪರದೇಶ. ಬಿರುದಿನ ಗರ್ವಿಗಳನ್ನು, ಕೀರ್ತಿಶಾಲಿ ಗಳನ್ನು ಅಲ್ಲವೆನಿಸುವ ಅಲ್ಲಮನೆಂಬ ಹೆಸರು ನನ್ನದು. ಒಳ್ಳೆಯದನ್ನುಂಟು ಮಾಡುವ ಸ್ಥಳಗಳನ್ನು ಆಸೆಯಿಲ್ಲದೆ ನಾವು ಸೇರುವೆವು. ಸುಖಜೀವಿಗಳು ನಾವು" ಎಂದು ಅಲ್ಲಮ

---

೧. ಪರದೇಶ = ಉತ್ಕೃಷ್ಟವಾದ ಕೈಲಾಸ. ಅಭಿಲಾಷೆಯಿಲ್ಲದೆ ಹೊದ್ದುವೆವು = ನಿಷ್ಕಾಮರು. ಸುಖವಾಸಿಗಳು = ಪರಮಾನಂದದಲ್ಲಿ ನೆಲೆಸಿರತಕ್ಕವರು ಎಂದು ಗೂಢಾರ್ಥ (ರಂ)

ಒಳ್ಳಿತಾಯಿತು ಕಾರ್ಯ ನೀನಿ
ನ್ನಲ್ಲಿಗಲ್ಲಿಗೆ ಹೋಹ ಬುದ್ಧಿಯ
ನಲ್ಲವಿಡು ಸುಖದಿಂದವೆಮ್ಮೊಡತಿಯ ಸಮೀಪದಲಿ
ಬಲ್ಲ ವಿದ್ಯಾವಸ್ತುಗಳೊಳೆ
ಮ್ಮೆಲ್ಲರೋಪಾದಿಯಲಿ ಮನಬಂ
ದಲ್ಲಿ ನೀನಿಹುದೆಂದರಾ ಕಾಮಿನಿಯರಲ್ಲಮಗೆ ೧೪

ಮನದ ಗಂದೆಯ ತುಱಿಸಿದಂತಿರೆ
ಮನಕೆ ಸಂತಸವಾದುದರಸನ
ತನುಜೆಗದ ತಾನಱಿದು ಹಡಪದ ಭೋಗಿಯೆಂಬವಳು
ವಿನಯದಿಂದಲ್ಲಮಗೆ ಬಳಿಕಲಿ
ವಿನುತ ಹೊಂಬಟ್ಟಲಲಿ ಮಾಯಾಂ
ಗನೆಯ ಕೈಯಲಿ ಕೊಡಿಸಿದಳು ಸಲೆ ಸಂತ ವೀಳೆಯವ ೧೫

ಆತನದ ಕೈಕೊಂಡು ನೋಡುವೆ
ವೀ ತರುಣಿ ತಾನೇನ ಮಾಡುವ
ಕೌತುಕವನೆಂದೆನುತೆ ವಿದ್ಯಾವಸ್ತು ತಾನಾಗಿ
ಪ್ರೀತಿವಟ್ಟವನಂತೆ ನಟ್ಟುವ
ಜಾತಿರೀತಿಯ ನಟಿಸುತಿರ್ದನು
ಭೂತಳದೊಳೆಮ್ಮಲ್ಲಮಪ್ರಭು ತನ್ನ ಲೀಲೆಯಲಿ ೧೬

ಆ ಸತಿಯರಿಗೆ ಒಲಿದು ತಿಳಿಸಿದನು. ೧೪. "ಬಂದ ಕಾರ್ಯ ಒಳ್ಳೆಯದೇ ಆಯಿತು. ನೀನು ಇನ್ನು ಅಲ್ಲಿ ಇಲ್ಲಿ ಹೋಗುವ ಬುದ್ಧಿಯನ್ನು ಬಿಟ್ಟು ಸುಖದಿಂದ ನಮ್ಮ ಒಡತಿಯ ಸಮೀಪದಲ್ಲಿ ನಮ್ಮೆಲ್ಲರಂತೆ ನೀನು ನಿನಗೆ ತಿಳಿದ ವಿದ್ಯಾವಸ್ತುಗಳೊಂದಿಗೆ ಮನಬಂದ ಎಡೆಯಲ್ಲಿ ಇರುವುದು" ಎಂದು ಅಲ್ಲಮನಿಗೆ ಕಾಮಿನಿಯರೆಲ್ಲ ತಿಳಿಸಿದರು. ೧೫. ರಾಜ ಕುಮಾರಿಯ ಮನಸ್ಸಿಗೆ ಬಾವುಗಂಟು[1] ತುರಿಸಿದರೆ ಆಗುವಂತೆ ಸಂತೋಷವಾಗಲು ವೀಳಯದ ಪೆಟ್ಟಿಗೆ ಹಿಡಿಯುವ ಭೋಗಿ ಎನ್ನುವವಳು ಅದನ್ನು ಅರಿತು ಬಳಿಕ ಅಲ್ಲಮನನ್ನು ವಿನಯದಿಂದ ಹೊಗಳುತ್ತ ಮಾಯಾಂಗನೆಯ ಕೈಯಿಂದ ಹೊಂಬಟ್ಟಲಿನಲ್ಲಿ ಸಂತಸದಿಂದ ವೀಳಯವನ್ನು ಕೊಡಿಸಿದಳು. ೧೬. ಪ್ರಭು ಅದನ್ನು ಸ್ವೀಕರಿಸಿ, "ಈ ತರುಣಿ ಏನು ಕೌತುಕ ಮಾಡುವಳೊ ನೋಡುವ ಎಂದು (ಮನದಲ್ಲಿ ಆಲೋಚಿಸಿ) ವಿದ್ಯಾವಸ್ತು ತಾನಾಗಿ, ಅವಳಲ್ಲಿ ಪ್ರೀತಿಗೊಂಡವನಂತೆ ನಮ್ಮ ಅಲ್ಲಮಪ್ರಭು ತನ್ನ ಲೀಲೆಯಿಂದ ಭೂಲೋಕದಲ್ಲಿ ನಟುವ ರೀತಿಯಲ್ಲಿ ನಟಿಸುತ್ತಿದ್ದನು.

---

೧. ತುರಿಕೆಯನ್ನೀಯುವ ಚರ್ಮರೋಗ

ಶರಣೆನುತಲಾ ಮಾಯೆ ಮಧುಕೇ
ಶ್ವರನ ಬೀಳ್ಕೊಂಡಾಗಳಾತನ
ಕರೆದುಕೊಳುತೈತಂದು ತಂದೆಯ ಸಮ್ಮುಖವ ಮಾಡಿ
ಅರಸನಱಿಕೆಯ ಮಾಡಿ ಮಿಗೆ ಬಳಿ
ಕಿರಿಸಿಕೊಂಡಳು ನಾಗವಾಸದ
ನೆರವಿ ಬಿಂದದ ಬೋವಗಾಱಿಕೆನುತದಲಲ್ಲಮನ ೧೭

ಹರುಷದಿಂದಲಿ ಕನ್ನೆಮಾಡದೆ
ಪಿರಿಯ ಚೌಮಾಳಿಗೆಯಲತಿವಿ
ಸ್ತರದಲೋಲಗಗೊಟ್ಟು ಕುಳ್ಳಿತು ಸಕಲ ವಿಭವದಲಿ
ಭರತವಿದ್ಯಾದ್ಯಖಿಲಕಳೆಗಳ
ಪರಿಚರಿಯ ನೆವದಿಂದೆ ಮಾಯಾ
ತರುಣಿ ಮನದೊಳು ಸೊಗಸಿ ಮಾತಾಡಿಸಿದಳಲ್ಲಮನ ೧೮

ಮನದಲಾತುರವಿಹುದು ಬುದ್ಧಿಯ
ಮೊನೆಗೆ ನಾಚಿಕೆ ಬಹುದು ನಗೆಗ
ಣ್ಣಿನಲಿ ಕಳವಳವಿಹುದು ಕಾಯದಲಿಹುದು ನಸುಭೀತಿ
ವಿನಯವಿಹುದೆಱಕದಲಿ ಜಿಹ್ವೆಯ
ಕೊನೆಯಲಿಹುದನ್ಯ ಪ್ರಸಂಗತೆ
ಯಿನಿತು ಮಾಯೆಯಲಿರ್ದುದಂದಲ್ಲಮನ ಬೇಟದಲಿ ೧೯

ಸುಧೆಯ ಸೋನೆಯ ಸುರಿಯುತಿಹ ಕಾ
ಲದಲಿ ತೃಪ್ತಿಯನೈದಲಱಿಯದೆ
ಕ್ಷುಧೆಗೆ ತೃಷೆಗಳ ಮಾಡಿ ಕೋಟಲೆಗೊಂಬ ಮರುಳಂತೆ
ಮುದವನಲ್ಲಮ ಕರುಣಿಸಿದ ಕಾ
ಲದಲಿ ನಿತ್ಯವನಱಿಯಲಱಿಯದೆ
ಕುದಿದು ಕೋಟಲೆಗೊಳುತಲಿರ್ದಳು ಮಾಯೆ ಬೇಟದಲಿ ೨೦

೧೭. ಶರಣೆಂದು ಆ ಮಾಯೆ ಮಧುಕೇಶ್ವರನನ್ನು ಬೀಳ್ಕೊಂಡು ಅಲ್ಲಮನನ್ನು ಕರೆದುತಂದು ತಂದೆಯ ಇದಿರಿಗೆ ನಿಲ್ಲಿಸಿ, ಅರಸನಿಗೆ ಎಲ್ಲವನ್ನೂ ವಿಶದವಾಗಿ ಅರಿಕೆಮಾಡಿ ಬಳಿಕ ಅಲ್ಲಮನನ್ನು ನಾಟ್ಯಗೃಹದವರ ಸಮೂಹಕ್ಕೆ ಮುಖ್ಯಸ್ಥನನ್ನಾಗಿ ಮಾಡಿ ತನ್ನ ಹತ್ತಿರವೇ ಇರಿಸಿಕೊಂಡಳು. ೧೮. ಮಾಯಾದೇವಿ ಹರುಷದಿಂದ ಕನ್ನೆಮಾಡದ ಮೇಲಂತಸ್ತಿನ ಚಚ್ಚೌಕವಾದ ಮಂಟಪದಲ್ಲಿ ಸಕಲ ವೈಭವಗಳಿಂದ ಓಲಗಗೊಟ್ಟು ಕುಳಿತು ಭರತನಾಟ್ಯವೇ ಮೊದಲಾದ ಸರ್ವ ಕಲೆಗಳ ವ್ಯಾಸಂಗಮಾಡುವ ನೆವದಿಂದ ಮನದಲ್ಲಿ ಉಲ್ಲಾಸಗೊಂಡು ಅಲ್ಲಮನನ್ನು ಮಾತನಾಡಿಸಿದಳು. ೧೯. ಮನದಲ್ಲಿ (ಕೂಡುವ) ಆತುರವಿದೆ. ಬುದ್ಧಿಯ ತುದಿಗೆ ನಾಚಿಕೆ ಬರುವುದು. ಉಲ್ಲಾಸಗೊಂಡ ಕಣ್ಣಿನಲ್ಲಿ ಕಳವಳವಿದೆ. ದೇಹದಲ್ಲಿ ಕಿರು ಭಯವಿದೆ. ಪ್ರೇಮದಲ್ಲಿ ವಿನಯವಿದೆ. ನಾಲಿಗೆಯ ತುದಿಯಲ್ಲಿ ಅನ್ಯಪ್ರಸಂಗತೆಯಿದೆ. ಅಲ್ಲಮನಲ್ಲಿ ಅನುರಾಗಗೊಂಡ ಮಾಯೆಯ ಮನದಲ್ಲಿ ಇವಿಷ್ಟೂ ಇದ್ದವು. ೨೦ ಅಮೃತದ ಮಳೆ ಸುರಿಯುತ್ತಿರುವ ಕಾಲದಲ್ಲಿ ತೃಪ್ತಿ ಹೊಂದಲು ತಿಳಿಯದೆ, ಹಸಿವೆಗೆ ಬಾಯಾರಿಕೆಯ ಮಾಡಿ ಚಿಂತೆಗೊಳ್ಳುವ ಹುಚ್ಚನಂತೆ ಸಂತೋಷವನ್ನು ಅಲ್ಲಮ ಕರುಣಿಸಿದ ಕಾಲದಲ್ಲಿ

ಕಿಬ್ಬದಿಯ ಕೀಲಿಸಿದ ಕಾಮನ
ನಿಬ್ಬರದ ಕೂರಂಬಿನಲಿ ತನು
ವಿಬ್ಬಿರಿದವೊಲು ನಿಮಿಷ ಕುಳ್ಳಿರಲಾಱದಳವಳಿದು
ಉಬ್ಬರದ ಮದನಾಗ್ನಿ ಮೈಯನು
ಹಬ್ಬಲೇಕಾಂತಕ್ಕೆ ಬಳಿಕೊ
ಬ್ಬಬ್ಬರಾಪ್ತರು ಸಹಿತ ಹೊಕ್ಕಳು ಮಾಯೆ ಮನಸೋತು ೨೧

ಮಲಗ ನೆಮ್ಮುತೆ ಗದ್ದುಗೆಯ ಮೇ
ಲೊಲಿದು ಕುಳ್ಳಿತು ತನ್ನ ಮನದಳ
ಬಳವನೊಯ್ಯನೆ ಸೂಚಿಸುವೆನಿನ್ನೋಜೆಯಿಂದೆನುತೆ
ಕಳವಳಿಸಿ ತರಹರಿಸಲಾಱದೆ
ಬಳಿಕಲಲ್ಲಮಗಾವ ಬೀಡಿನ
ನೆಲೆಯ ಮಾಡಿದಿರೆನುತೆ ಸಖಿಯರ ಕೇಳಿದಳು ಮಾಯೆ ೨೨

ಮಡದಿ ಮದನನ ಬಲೆಯ ಬಾಯಲಿ
ತೊಡಕಿ ಬಿರ್ದುದನಜಿದರಾಗಳೆ
ಯೊಡತಿ ನಿಮ್ಮಯ ಬಗೆಯ ಬಯಕೆಯ ನಾಚದೆಮ್ಮೊಡನೆ
ನುಡಿವೆಯಾದೊಡೆ ಬಳಿಕಲಲ್ಲಮ
ಗೆಡೆಗುಡುವೆವೊಂದೆಡೆಯ ಬೀಡಿನ
ಗುಡಿಯನೆನುತಾ ಮಾಯೆಗಿಂತೆಂದರು ವಿದಗ್ಧೆಯರು ೨೩

ಮೋಕ್ಷಮಾರ್ಗವನ್ನರಿಯಲು ತಿಳಿಯದೆ ಮಾಯೆ ವಿರಹದಲ್ಲಿ ಬೆಂದು ಚಿಂತೆಗೊಳುತ ಲಿದ್ದಳು. ೨೧. ಕಾಮನು ತನ್ನ ವಿಶೇಷವಾದ ಕೂರಂಬಿನಿಂದ ದೇಹ ಇಬ್ಭಾಗವಾಗುವಂತೆ ಪಕ್ಕೆಗೆ ನಾಟಿಸಿದುದರಿಂದ ಕುಳ್ಳಿರಲಾಗದೆ, ಶಕ್ತಿಗುಂದಿ ಉಬ್ಬರದ ಕಾಮಗಿಚ್ಚು ದೇಹವನ್ನೆಲ್ಲಾ ಆವರಿಸಲು, ಮಾಯೆ ಅಲ್ಲಮನಿಗೆ ಮನಸೋತು ಅನಂತರ ಒಬ್ಬಿಬ್ಬರು ಆಪ್ತರೊಡನೆ ಏಕಾಂತಗೃಹಕ್ಕೆ ನಡೆದಳು. ೨೨. ದಿಂಬನ್ನು ಆತುಕೊಂಡು ಗದ್ದುಗೆಯ ಮೇಲೆ ಸಂತೋಷದಿಂದ ಕುಳಿತು ತನ್ನ ಮನಸ್ಸಿನ ಇಚ್ಛೆಯನ್ನು ಮೆಲ್ಲನೆ ಕ್ರಮವಾಗಿ ಸೂಚಿಸುವೆನೆನ್ನುತ ಕಳವಳಿಸಿ ಶಾಂತಿಯಿಲ್ಲದವಳಾಗಿ ಅನಂತರ "ಅಲ್ಲಮನಿಗೆ ಯಾವ ಬೀಡಿನಲ್ಲಿ ವಾಸಕ್ಕೆ ಏರ್ಪಾಡುಮಾಡಿದಿರಿ?" ಎಂದು ಮಾಯೆ ಸಖಿಯರನ್ನು ಕೇಳಿದಳು. ೨೩. ಮಾಯೆ ಮದನನ ಬಲೆಯ ಬಾಯಲ್ಲಿ ಸಿಕ್ಕಿಬಿದ್ದುದನ್ನು ಸಖಿಯರು ಆಕ್ಷಣ ಅರಿತರು. "ಒಡತಿ, ನಿಮ್ಮ ಅಂತರಂಗದ ಬಯಕೆಯನ್ನು ನಾಚದೆ ನಮ್ಮಲ್ಲಿ ತಿಳಿಸುವೆಯಾದರೆ ಅನಂತರ ಅಲ್ಲಮನಿಗೆ ಬೀಡಿನ ಮನೆಯಲ್ಲಿ ಒಂದು ಭಾಗವನ್ನು ತೆರವು ಮಾಡಿಕೊಡುವೆವು" ಎಂದು ಚತುರೆಯರಾದ ಸಖಿಯರು ಹೇಳಿದರು.

ದೇವಿ ನಿಮ್ಮಯ ತನು ಮನೋಮಯ
ಭಾವ ಕಾಮನ ಕೈಯ ಭಾರಿಯ
ಹೂವಿನಂಬುಗಳಿಂದೆ ಮೂರ್ಮೊನೆಗೊಂಡ ತೆಱನಂತೆ
ತೀವಿಕೊಂಡಿವೆ ಬಱಿಯ ಬೇಟದ
ಬೇವಸದಲೆಮ್ಮೊಡನೆ ನಾಚದೆ
ಭಾವೆ ಹೇಳೆನುತೊಡತಿಯನು ಕೇಳಿದರು ಕೆಳದಿಯರು ೨೪

ಎನಲು ಕನ್ಯಾಭಾವಭಂಗಿಯನು
ಮನದ ನಾಚಿಕೆಯೊಂದು ನೆಟ್ಟನೆ
ಜನಪತಿಯ ಮಗಳೆಂಬ ಹೆಕ್ಕಳ ಹೆಮ್ಮೆ ತಾನೆರಡು
ತನಗೆ ಸಮ ಸಂಪ್ರಾಪ್ತನಲ್ಲದ
ಮನುಜಗಳುಪಿದೆನೆಂಬ ಮಱವೆಯು
ಘನತೆ ಮೂಱವಕಳುಕಿ ನಾಚುತಲಿರ್ದಳಾ ಮಾಯೆ ೨೫

ಒಡತಿ ನುಡಿಯದೆ ನಾಚಿರಲು ಹೆ
ಗ್ಗಡಿತಿ ಸಕಳೆಯಿದೇನು ರಾಣಿಯ
ನಡೆವ ನೋಡುವ ಹಾಡುವಾಡುವ ರೀತಿ ಹೊಸತಾಗಿ
ಬೆಡಗು ಬಿನ್ನಾಣಿಸಿತಿದೆತ್ತಣ
ಗೊಡವೆಗೊಳಗಾಗಿದ್ದಳೆನುತಲಿ
ಮಡದಿಯೊಲಿದು ಕಳಾವಿಳಾಸಿಯ ಕೇಳಿದಳು ಬಳಿಕ ೨೬

ಹಲವು ಮಾತೇನೀಕೆ ಕಾಮನ
ಬಲೆಗೆ ಬಿದ್ದುದು ಸತ್ಯವಲ್ಲದು
ಗಳುಪಿದುದು ದಿಟವವರಿವರನಿನ್ನೇನ ಕೇಳುವಿರಿ
ಹೊಲಬಿದಾದೊಡೆ ತಪ್ಪದೆನುತಲಿ
ತಿಳಿಯೆ ನುಡಿದಳು ಸಕಳೆಗೊಡತಿಯು
ನೆಲೆಯನಱಿದು ಕಳಾವಿಳಾಸಿನಿ ತನ್ನ ಸನುಮತವ ೨೭

೨೪. "ಕಾಮನ ಕೈಯಲ್ಲಿನ ಮಹತ್ತಾದ ಹೂಬಾಣಗಳು ಆಳವಾಗಿ ನಾಟಿ ತುದಿಗಾಣಿಸಿದ ರೀತಿಯಲ್ಲಿ ದೇವಿ, ನಿಮ್ಮ ತನು ಮನಗಳನ್ನು ಆವರಿಸಿರುವ ಭಾವವು ವ್ಯರ್ಥವಾದ ವಿರಹಚಿಂತೆಯಿಂದ ಕೂಡಿದೆ. ನಮ್ಮೊಡನೆ ನಾಚದೆ ಹೇಳು" ಎಂದು ಕೆಳದಿಯರು ತಮ್ಮ ಒಡತಿಯನ್ನು ಕೇಳಿದರು. ೨೫. ಹೀಗೆ ಕೇಳಲು ಕನ್ಯೆ ಮಾಯಾದೇವಿಯ ಚಿತ್ತಸ್ಥಿತಿಯಲ್ಲಿ ಮನದ ನಾಚಿಕೆ ಒಂದು ; ನೇರವಾಗಿ ತಾನು ಮಹಾರಾಜನ ಮಗಳೆಂಬ ಹೆಚ್ಚಳದ ಹೆಮ್ಮೆ ಎರಡು; ತನಗೆ ಸರಿಸಾಟಿಯಲ್ಲದ ಮನುಷ್ಯನನ್ನು ಬಯಸಿದೆನೆಂಬ ಅಜ್ಞಾನದ ಹಿರಿತನ ಮೂರು ಇವುಗಳಿಗೆ ಅಂಜಿ ನಾಚುತಲಿದ್ದಳು. ೨೬. ಒಡತಿ ನುಡಿಯದೆ ನಾಚಿ ಇರಲು, ಹೆಗ್ಗಡಿತಿಯಾದ ಸಕಳೆ ಎನ್ನುವವಳು "ಇದೇನು ರಾಣಿಯು ನಡೆವ, ನೋಡುವ, ಹಾಡುವ, ಆಡುವ ರೀತಿ ಹೊಸತಾಗಿ ವಿಲಾಸಹೀನವಾಯಿತು. ಇದೆಲ್ಲಿಯ ಚಿಂತೆಗೆ ಒಳಹಾಡುವ, ಆಡುವ ರೀತಿ ಹೊಸತಾಗಿ ವಿಲಾಸಹೀನವಾಯಿತು. ಇದೆಲ್ಲಿಯ ಚಿಂತೆಗೆ ಒಳಗಾಗಿರುವಳು" ಎನ್ನುತ್ತ ಕಳಾವಿಳಾಸಿ ಎಂಬ ಹೆಣ್ಣನ್ನು ಬಳಿಕ ಪ್ರೀತಿಯಿಂದ ಕೇಳಿದಳು. ೨೭. ಒಡತಿಯ ಸ್ಥಿತಿಯರಿತ ಕಳಾವಿಳಾಸಿ ತನ್ನ ಸದಭಿಪ್ರಾಯವು ಸಕಳೆಗೆ ತಿಳಿಯುವಂತೆ

ಆ ನುಡಿಯನಾಲಿಸುತೆ ಮಾಯಾ
ಮಾನಿನಿಯ ಮೊಗವಲರಿ ಸಲೆ ಸು
ಮ್ಮಾನದಲಿ ನಸುನಗುತೆ ನಾಚುವ ಭಾವಭಂಗಿಯನು
ಆ ನಿತಂಬಿನಿಯರು ನಿಧಾನಿಸು
ತೇನು ಹುಸಿಯಲ್ಲೆನುತೆ ಶ್ರುತದೃ
ಷ್ಟಾನುಮಾನದಲಱಿದರಲ್ಲಮುಗಾಕೆಯೊಲಿದುದನು ೨೮

ಈ ಕುಮಾರಿಯ ತಿಳಿಪೆವೆಂಬುದ
ದೇಕೆ ಕಾಣಲು ಬಂದ ಕಾರಿಯ
ವಾ ಕಳಾವಿದನನು ವಿಚಾರಿಸಬೇಕು ನಾವೆನುತೆ
ಆಕೆಯರು ಮದಮಾನಿಯೆಂಬ ವಿ
ವೇಕಿಯನು ಕಳುಹಿದಡೆ ಬಂದಳ
ನೇಕ ಚದುರಿನ ಚಪಳತನದಲಿಯಲ್ಲಮನ ಬಳಿಗೆ ೨೯

ನಾರಿ ಬಂದುದನಱಿದು ಮೊದಲೇ
ದಾರಿದೋಱುವೆ ನಾನೆನುತೆ ಬೀ
ಡಾರಕಿನ್ನಾವೈದಬೇಹುದು ನಮ್ಮನಱಸಿದೊಡೆ
ನಾರಿ ನೀನೀ ಹದನ ಹೇಳು ಕು
ಮಾರಿಗೆನುತವೆ ನಿಜವಿನೋದವಿ
ಚಾರದಿಂದಲಿ ನುಡಿದನಾ ಮದಮಾನಿಗಲ್ಲಮನು ೩೦

"ಹೆಚ್ಚಿನ ಮಾತೇನು, ಈಕೆ ಕಾಮನ ಬಲೆಗೆ ಬಿದ್ದುದು ಸತ್ಯ. ಅಲ್ಲಮನಲ್ಲಿ ಅನುರಾಗ ಗೊಂಡುದು ನಿಜ. ಅವರಿವರನ್ನು ಇನ್ನೇನ ಕೇಳುವಿರಿ? ಮಾರ್ಗವಿದಾದರೆ ತಪ್ಪಲ್ಲ" ಎಂದಳು. ೨೮. ಆ ಮಾತನ್ನು ಕೇಳುತ್ತ ಮಾಯಾದೇವಿಯ ಮುಖ ಅರಳಿತು. ಹೆಚ್ಚಿನ ಆನಂದದಿಂದ ನಸುನಗುತ್ತಾ ನಾಚುವ (ಒಡತಿಯ) ಭಾವಭಂಗಿಯನ್ನು ಆ ಸ್ತ್ರೀಯರು ಸಾವಕಾಶವಾಗಿ ಕೇಳಿ ಕಂಡ ಶಂಕೆಯಿಂದ ಅಲ್ಲಮನಿಗೆ ಆಕೆ ಒಲಿದುದು ಸುಳ್ಳೇನೂ ಅಲ್ಲವೆಂಬುದನ್ನು ಅರಿತರು. ೨೯. "ಈ ಕುಮಾರಿಯ (ಅಂತರಂಗವನ್ನು) ಅರಿಯೋಣ ವೆಂಬುದೇಕೆ? ಮಾಯೆಯನ್ನು ನೋಡಲು ಬಂದ ಕಾರ್ಯವೇನೆಂದು ಆ ಕಳಾವಿದನನ್ನು ನಾವು ವಿಚಾರಿಸಬೇಕು" ಎಂದು ಅವರುಗಳು ಮದಮಾನಿ ಎಂಬ ಚತುರೆಯನ್ನು (ಅಲ್ಲಮನಲ್ಲಿಗೆ) ಕಳುಹಿಸಲು (ಆಕೆ) ಅನೇಕ ನೈಪುಣ್ಯದ ಚಪಲತನದಿಂದ ಅಲ್ಲಮನ ಬಳಿಗೆ ಬಂದಳು. ೩೦. ಆ ಸ್ತ್ರೀ (ತನ್ನಲ್ಲಿಗೆ) ಬಂದುದನ್ನು ಅರಿತ ಅಲ್ಲಮ ತಾನೇ ಅವಳಿಗೆ ಮಾರ್ಗದೋರುವೆನೆಂದು 'ನಾವಿನ್ನು ಬೀಡಾರಕ್ಕೆ ಹೋಗಬೇಕು. ನಮ್ಮನ್ನು ಹುಡುಕಿದರೆ ನೀನು ಈ ಸುದ್ದಿಯನ್ನು ರಾಜಕುಮಾರಿಗೆ ಹೇಳು' ಎಂದು ವಿನೋದವಾಗಿ ಮದಮಾನಿಗೆ

ನಿನಗೆ ಸಾಕಿನ್ನೇಕೆ ಬೀಡಿನ
ಮನೆ ವೃಥಾ ಬೇಱೊಂದು ಸಂಕ
ಲ್ಪನೆಯ ಬಿಡು ನಮ್ಮೊಡತಿಯಾದೊಡೆ ಮುಟ್ಟಿ ಮೋಹದಲಿ
ನನಗೆ ಕೃಪೆಯಾಗಿರ್ದಳೆಮ್ಮರ
ಮನೆಯೊಳಿರು ಸುಖಿಯಾಗಿ ನೀನೆಂ
ದೆನುತೆ ನಯದಲಿ ನುಡಿದಳಾ ಮದನಮಾನಿಯಲ್ಲಮಗೆ ೩೧

ನಾವು ಪರದೇಶಿಗಳು ಬಡವರು
ನೀವು ದೊರೆಗಳು ಮೇಲೆ ನಿಮ್ಮಯ
ದೇವಿ ರಾಜಕುಮಾರಿ ನಾವೇ ಪುರುಷವೇಷಿಗಳು
ನೀವು ಸತಿಯರು ನಿಮ್ಮೊಳಿಹುದೆಮ
ಗಾವ ಮರ್ಯಾದೆಗಳು ದೂರದ
ಸೇವೆ ತಾನೆಮಗುಚಿತವೆಂದನು ನಗುತಲಲ್ಲಮನು ೩೨

ಕೂಡೆ ತಾ ಪತಿಕರಿಸಿ ಮರಳಿದು
ಮಾಡಬಲ್ಲಳೆ ಮಾಯೆ ಭೇದವ
ನೋಡು ನೀನೀಗಿರುತಿರುತಲಿನ್ನಾಕೆಯುಂಗವನು
ಆಡಿ ತೋಱಲದೇಕೆ ನೀ ಕೈ
ಗೂಡಿ ಕಾಂಬುದು ನಿನಗೆ ನೀನೆನು
ತಾಡುತಿರ್ದಳು ಹಲವು ಬಿನ್ನಣವಾತನಲ್ಲಮಗೆ ೩೩

ಆದೊಡೇನೌ ನಿನ್ನ ಮಾತಿನ
ಭೇದ ಬೇಱೊಂದಾಗಿಯೆನ್ನೊಳು
ವೇದಿಸುತ್ತಿದೆ ನುಡಿಯಲಮ್ಮೆವು ನಿನಗೆ ಮನದೆಱೆದು
ಆದರಿಸುವೊಡೆ ಕೇಳು ವೊಡತಿಯ
ರಾದವರ ದೂರದಲಿ ಸೇವಿಸಿ
ಹೋದೊಡೆಮಗದು ಸೌಖ್ಯವೆಂದನು ನಗುತಲಲ್ಲಮನು ೩೪

ನುಡಿದನು. ೩೧. "ನಿನಗೆ ಇನ್ನು ಬೀಡಿನ ಮನೆ ಸಾಕು. ಇನ್ನೇಕೆ ಬೀಡಿನ ಮನೆ? ಪ್ರಯೋಜನವಿಲ್ಲದ ಬೇರೊಂದು ಇಚ್ಛೆಯನ್ನು ಬಿಡು, ನಮ್ಮ ಒಡತಿಯಾದರೊ ಮೋಹದಿಂದ ಬಂಧಿತಳಾಗಿ ನಿನಗೆ ಕೃಪೆಮಾಡಿರುವಳು. ನೀನಿನ್ನು ಸುಖಿಯಾಗಿ ನಮ್ಮ ಅರಮನೆಯಲ್ಲಿರು" ಎಂದು ನಯವಾಗಿ ಮದಮಾನಿ ಅಲ್ಲಮನಿಗೆ ಹೇಳಿದಳು. ೩೨. "(ಆ ಮಾತಿಗೆ) ಅಲ್ಲಮ ನಗುತ್ತಾ ನಾವು ಪರದೇಶಿಗಳು, ಬಡವರು. ನೀವು ದೊರೆಗಳು. ಮೇಲಾಗಿ ನಿಮ್ಮಯ ದೇವಿ ರಾಜಕುಮಾರಿ. ನಾವಾದರೊ ಪುರುಷವೇಷಿಗಳು. ನೀವು ಸ್ತ್ರೀಯರು. ನಿಮ್ಮಲ್ಲಿ ಇರುವುದು ನಮಗೆ ಗೌರವವೇ? ದೂರದ ಸೇವೆ ತಾನೇ ನಮಗೆ ಯೋಗ್ಯ" ಎಂದನು. ೩೩. "ಮಾಯೆ ನಿನ್ನನ್ನು ಸ್ವೀಕರಿಸಿ ಮತ್ತೆ ನಿನ್ನಲ್ಲಿ ಭೇದವನ್ನು ಮಾಡಬಲ್ಲಳೆ? ನೋಡು, ನೀನು ಇಲ್ಲಿ ಇರಲು ಅವಳ ಅಭಿಪ್ರಾಯವನ್ನು ಆಡಿ ತೋರುವುದೇಕೆ? ನೀನೇ ಸೇರಿ ತಿಳಿಯುವುದು?" ಎಂದು ಹಲವು ಬಿನ್ನಾಣದ ನುಡಿಗಳನ್ನು (ಮದಮಾನಿ) ಅಲ್ಲಮನೊಂದಿಗೆ ಆಡುತ್ತಿದ್ದಳು. ೩೪. "ಆದರೇನು, ನಿನ್ನ ಮಾತಿನ ಅಂತರಾರ್ಥ ಬೇರೊಂದಾಗಿ ನನಗೆ ತೋರುತ್ತಿದೆ. ಮನಬಿಚ್ಚಿ ನಿನ್ನೊಂದಿಗೆ ನಾನು

ನಗೆಯ ಮಾತಲ್ಲಣ್ಣ ಮಾಯೆಯ
ಬಗೆಗೆ ನಿನ್ನನು ಸೇವಕಾವೃ
ತ್ತಿಗಳೊಳೆಣಿಸುವ ಪರಿಯ ಕಾಣೆನು ನಿನ್ನ ತನ್ನಿಂದೆ
ಮಿಗಿಲು ಮಾಡುವ ಪರಿಯಲಿರ್ದಳು
ಹಗಲಿರುಳು ಹಂಬಲಿಸಿ ಕೇಳೈ
ಬೆಗಡುಗೊಳ್ಳದಿರೆನುತೆ ಬೋಳೈಸಿದಳು ಮದಮಾನಿ ೩೫

ಸೇವಕರ ಮೇಲೆಱಕವಿದ್ದೊಡೆ
ಭಾವೆ ತಪ್ಪೇನೊಡತಿಯಾದವ
ರೋವಿ ಸಲಹುವ ಮೋಹ ಮಾಡುವರವಱಿಗದು ಸಹಜ
ನಾವು ನಮ್ಮಯ ಸೇವಕಾಂಗದ
ಭಾವದಿಂದಿರಬೇಕೆನುತೆ ನಾ
ನಾವಿಧದ ಥಾಳಕತನಂಗಳ ನುಡಿದನಲ್ಲಮನು ೩೬

ಸಾಕು ಜಾಣಿನ ಮಾತು ಮಱೆಯಿ
ನ್ನೇಕೆ ನಿನ್ನೊಳು ಮಾಯೆ ಕಾಮೋ
ದ್ರೇಕದಲಿ ನೆಱೆ ನಿನಗೆ ಸೋತಳು ಹಲವು ಮಾತೇನು
ಲೋಕದೊಳು ನರ ದಿವಿಜ ಜನುಜರ
ನೇಕರನು ಬಗೆಗೊಂಡು ಲೆಕ್ಕಿಸ
ದಾಕೆ ತಾನೇ ಸೋತಳೈ ನಿಸಗೆಂದಳಲ್ಲಮಗೆ ೩೭

ನೀವೆ ಬಲ್ಲಿರಿ ನಿಮ್ಮ ಮಾಯಾ
ದೇವಿಯಂತಸ್ಥವನು ಹೊಸಬರು
ನಾವು ಬಲ್ಲೆವೆಯಂತುಕಾರಣ ಮನಸು ಬಂದಂತೆ
ನೀವೆ ಮಾಡುವುದೆಮ್ಮ ಕೇಳುವು
ಬಾವುದುಂಟೆಂದೆನುತಲಲ್ಲಮ
ದೇವನಾ ಮಾದಮಾನಿಗೆಂದನು ಬಳಿಕ ನಸುನಗುತೆ ೩೮

ನುಡಿಯಲು ಅಸಮರ್ಥ. ಆದರಿಸುವುದಾದರೆ ಕೇಳು, ಒಡತಿಯರಾದವರನ್ನು ದೂರದಲ್ಲೇ ಸೇವಿಸಿ ಹೋದರೆ ಅದರಿಂದ ನಮಗೆ ಸೌಖ್ಯ" ಎಂದು ನಗುತ್ತ ಅಲ್ಲಮ ನುಡಿದನು. ೩೫. "ನಗೆಯ ಮಾತಲ್ಲಣ್ಣ, ಮಾಯೆಯ ಅಂತರಂಗದಲ್ಲಿ ನಿನ್ನನ್ನು ಸೇವಕಾವೃತ್ತಿಗಳಲ್ಲಿ ಭಾವಿಸುವ ರೀತಿಯನ್ನು ಕಾಣೆನು ಕೇಳು, ನಿನಗಾಗಿ ಹಗಲಿರುಳು ಹಂಬಲಿಸಿ ನಿನ್ನನ್ನು ತನಗಿಂತ ಹೆಚ್ಚೆಂದು ಭಾವಿಸುವ ರೀತಿಯಲ್ಲಿದ್ದಳು, ಭಯಗೊಳ್ಳದಿರು" ಎಂದು ಮದಮಾನಿ ಸಮಾಧಾನ ಮಾಡಿದಳು. ೩೬. "ಸೇವಕರ ಮೇಲೆ ಪ್ರೀತಿಯಿದ್ದರೆ ತಪ್ಪೇನು? ಒಡತಿಯಾದವರು ಕರುಣಿಸಿ ಸಲಹುವರು, ಮೋಹ ಮಾಡುವರು. ಅವರಿಗೆ ಅದು ಸಹಜ. ನಾವು ನಮ್ಮ ಸೇವಕಾಂಗದ ಭಾವದಿಂದ ಇರಬೇಕು" ಎಂದು ನಾನಾ ವಿಧದ ಬಣ್ಣನೆಯ ಮಾತುಗಳನ್ನು ಅಲ್ಲಮ ನುಡಿದನು. ೩೭. "ಜಾಣತನದ ಮಾತು ಸಾಕು (ಸೇವಕನೆನ್ನುವುದನ್ನು) ಇನ್ನೇಕೆ ನೆನೆಯುವೆ? ಮರೆತುಬಿಡು. ಕಾಮೋದ್ರೇಕದಿಂದ ಮಾಯೆ ನಿನಗೆ ಹೆಚ್ಚಾಗಿ ಸೋತಿರುವಳು. ಹಲವು ಮಾತೇನು? ಲೋಕದಲ್ಲಿ ಮನುಷ್ಯರು, ದೇವತೆಗಳು, ದಾನವರನೇಕರನ್ನು ಮನಸ್ಸಿನಲ್ಲಿ ಎಣಿಕೆಗೆ ತಾರದ ಆಕೆ ತಾನೇ ನಿನಗೆ ಸೋತಿರುವಳು" ಎಂದು ಅಲ್ಲಮನಿಗೆ ಹೇಳಿದಳು. ೩೮. "ನಿಮ್ಮ ಮಾಯಾದೇವಿಯ

ಆವ ಶಕುನವ ತಿದ್ದಿ ಕೊಂಡೆಲೆ
ಭಾವ ಬಂದೆಯೊ ಅಲ್ಲದಿರ್ದೊಡ
ದಾವ ಮೋಹನವಶ್ಯವಿದ್ಯೆಯ ಕಲಿತೆಯೋ ದಿಟಕೆ
ದೇವಿಯನು ನೀ ಮರುಳುಮಾಡಿದೆ
ಜಾವಳಿಗನಲ್ಲೆನುತೆ ಬಂದಳು
ಭಾವೆ ನಗುತಲ್ಲಮನ ಬಳಿಯಿಂದೊಡತಿಯಿದ್ದೆಡೆಗೆ ೩೯

ಇತ್ತಲಾಗಳೆ ತೋಳು ತೊಡೆ ತುಟಿ
ವೃತ್ತ ಕುಚ ಕೊರಳರಳುಗಂಗಳು
ಕೆತ್ತುತಿದ್ದುವು ಮಾಯೆಗಿಚ್ಚೆಯ ಫಲವ ಸೂಚಿಸುತೆ
ಚಿತ್ತದಲಿ ಹಾರೈಸಿ ನಗುತಲಿ
ಮತ್ತೆ ಸುಮ್ಮಾನದಲಿ ಬಂದಳು
ಮತ್ತಗಜಗತಿಯಿಂದಲಾ ಸಮಯದಲಿ ಮದಮಾನಿ ೪೦

ಏನು ನಿನ್ನಯ ಮುಸುಡ ಚೇಷ್ಟೆ ಸು
ಮಾನವನು ಸೂಚಿಸುತಲಿದೆ ಬಳಿ
ಕೇನ ಮಾಡಿದೆ ಹೇಳು ಕಾರ್ಯದ ಹದನ ನೀನೆನಲು
ಆ ನಿತಂಬನಿಯಲ್ಲಮನ ಮಿಗೆ
ತಾನೊಡಂಬಡಿಸಿದುದನೆಲ್ಲವ
ನೂನವಿಲ್ಲದೆ ಹೇಳಿದಳು ಮದಮಾನಿ ವಿಸ್ತರಿಸಿ ೪೧

ನೀನಹುದು ಸಂಮೋಹನದ ಸಂ
ಧಾನವಿದ್ಯಾಜಾಣೆಯೆನುತಾ
ಮಾನಿನಿಯರುಗಳೊಲಿದು ಮಾಯಾಂಗನೆಯ ಕೈಯಿಂದೆ
ಆ ನಿತಂಬನಿ ದಣಿವವೊಲ್ ಸ
ನ್ಮಾನಿಸುತೆ ಸಂತೋಷದಲಿ ಮದ
ಮಾನಿಗುಚಿತದಲೀಸಿ ಕೊಡಿಸಿದರಂಗಚಿತ್ತವನು ೪೨

ಅಂತರಂಗವನ್ನು ನೀವೇ ಬಲ್ಲಿರಿ, ಹೊಸಬರಾದ ನಾವು ಬಲ್ಲೆವೆ? ಆದಕಾರಣ ಮನ ಬಂದಂತೆ ನೀವೇ ಮಾಡುವುದು. ನಮ್ಮನ್ನು ಕೇಳುವುದೇನಿದೆ?" ಎಂದು ಅಲ್ಲಮದೇವನು ನಸುನಗುತ್ತಾ ಆ ಮದಮಾನಿಗೆ ಹೇಳಿದನು. ೩೯. "ಎಲೆ ಭಾವ, ನೀನಾವ ಶಕುನವ ನೋಡಿ ಬಂದೆಯೊ! ಇಲ್ಲವೇ ಮೊಹಿಸಿ ವಶಪಡಿಸಿಕೊಳ್ಳುವ ಯಾವ ವಿದ್ಯೆಯನ್ನು ಕಲಿತೆಯೋ! ನಿಜಕ್ಕೂ ದೇವಿಯನ್ನು ನೀನು ಮರಳುಮಾಡಿದೆ, ಸಾಮಾನ್ಯನಲ್ಲ ನೀನು" ಎನ್ನುತ್ತ ಮದಮಾನಿ ಅಲ್ಲಮನ ಬಳಿಯಿಂದ ಒಡತಿಯಿದ್ದ ಸ್ಥಳಕ್ಕೆ ನಗುತ್ತ ಬಂದಳು. ೪೦. ಇತ್ತ ಮಾಯೆಗೆ ಅವಳ ಮನದ ಬಯಕೆಯ ಫಲವನ್ನು ಸೂಚಿಸುವಂತೆ ತೋಳು, ತೊಡೆ, ತುಟಿ, ಬಟ್ಟಕುಚಗಳು ಕೊರಳು, ಹೂವಿನಂತಹ ಕಣ್ಣುಗಳು ಅದುರಿದುವು. ಆ ಸಮಯಕ್ಕೆ ಮನದಲ್ಲಿ ಹಾರೈಸಿ ನಗುತ್ತಾ ಮದಮಾನಿ ಮದಿಸಿದ ಆನೆಯ ನಡಿಗೆಯಲ್ಲಿ ಆನಂದದಿಂದ ಒಡತಿಯಲ್ಲಿಗೆ ಬಂದಳು. ೪೧. "ಏನು ನಿನ್ನ ಮುಖದ ವಿಲಾಸ ಸಂತೋಷವನ್ನು ಸೂಚಿಸುತ್ತಲಿದೆ. ಆ ಬಳಿಕ ನೀನು ಏನುಮಾಡಿದೆ? ಕಾರ್ಯದ ಸುದ್ದಿ ತಿಳಿಸು" ಎಂದು ಕೇಳಲು, ಮದಮಾನಿ ತಾನು ಅಲ್ಲಮನನ್ನು ಕಷ್ಟಪಟ್ಟು ಒಪ್ಪಿಸಿದುದ ನೆಲ್ಲವನ್ನು ಕೊರತೆಯಾಗದಂತೆ ವಿಸ್ತರಿಸಿ ಹೇಳಿದಳು. ೪೨. "ಸಂಮೋಹನದ ಸಂಧಾನ

ಕಱುಬರಾದ ಕನಿಷ್ಠರಿಂತಿದ
ನಱಿದರಾದೊಡೆ ಭೂಮಿಪಾಲಂ
ಗಱುಹುವರು ಬಳಿಕರಸನೀ ಸೋಹೆಯನು ಕೇಳಿದೊಡೆ
ಅಱಿಯಬಾರದು ಮತ್ತೆ ಕಾರ್ಯದ
ತೆಱನು ಹೇಗಹುದೆಂದೆನುತ್ತಲಿ
ನೆಱೆ ವಿಚಾರಿಸಿ ಗುಪ್ತವನು ಮಾಡಿದರು ಕೆಳದಿಯರು ೪೩

ಅಂದಿನಿಂದಿರುಳಿನಲಾರುವಱಿಯದ
ಛಂದದಿಂದಲಿ ಬಳಿಕ ಸಜ್ಜಾ
ಮಂದಿರಕೆ ಸಡಗರಿಸಿ ಮಾಯೆಯನಲ್ಲಮನನೊಲಿಸಿ
ತಂದು ಬಿಜಯಂಗೈಸಿದರು ಬಳಿ
ಇಂದುಮುಖಿಯರು ತನುವ ತರುಣಿಯ
ನೊಂದು ಮಾಡುವೆವೆಂಬ ಭಾವಭ್ರಮಿತಬುದ್ಧಿಯಲಿ ೪೪

ನೆಲಸಿ ಮಿಂಚಿನ ಮಿಡುಕಿನೊಲು ಕಂ
ಗಳಿಗೆ ತೋಱುವನಲ್ಲದಪ್ಪಿಗೆ
ನಿಲುಕನಂಬರದಂತೆ ಸೋಂಕಿಹನಲ್ಲದನುರತಿಗೆ
ಉಲುಕನಕ್ಷರದಂತೆ ಬಾಯೊಳು
ನಲಿವನಲ್ಲದೆ ಚುಂಬನಕೆ ತಾ
ಸಿಲುಕನಲ್ಲಮನೀ ಪರಿಯ ನಟಿಸಿದನು ಮಾಯೆಯಲಿ ೪೫

ವಿದ್ಯಾಜಾಣೆ ನೀನಾಗಿರುವೆ" ಎಂದು ಹೇಳಿದ ಮಾನಿನಿಯರು ಮಾಯಾಂಗನೆಯ ಕೈಯಿಂದ ಮದಮಾನಿ ದಣಿಯುವಂತೆ ಸಂಮಾನಿಸುತ್ತಾ ಸಂತೋಷದಿಂದ ಅವಳಿಗೆ ಯೋಗ್ಯವಾದ ಬಹುಮಾನವನ್ನು ಕೊಡಿಸಿದರು. ೪೩. 'ಅಸೂಯಾಪರರಾದ ನೀಚರು ಇದನ್ನು ತಿಳಿದರಾದರೆ ಮಹಾರಾಜನಿಗೆ ತಿಳಿಸುವರು. ಬಳಿಕ ಅರಸನಿಗೆ ಈ ವಿಚಾರ ತಿಳಿದರೆ ಅವನೇನು ಮಾಡುವನೆಂಬುದನ್ನು ಊಹಿಸಲಾಗದು. ನಮ್ಮ ಕಾರ್ಯ ನೆರವೇರುವುದು ಹೇಗೆ' ಎಂದು ಈ ವಿಚಾರಮಾಡಿ ಗೆಳತಿಯರು ಅದನ್ನು ಗುಟ್ಟುಮಾಡಿದರು. ೪೪. ಬಳಿಕ ಚಂದ್ರಮುಖಿಯರು ಅಂದಿನ ರಾತ್ರಿ ಯಾರಿಗೂ ತಿಳಿಯದ ರೀತಿಯಲ್ಲಿ ಸಡಗರದಿಂದ ಕತ್ತಲೆ ಸೂರ್ಯರನ್ನು ಒಂದುಮಾಡುವೆವು ಎಂಬ ಮಂಕುಹಿಡಿದ ಭಾವ-ಬುದ್ಧಿಗಳಿಂದ ಕೂಡಿ ಮಾಯೆ-ಅಲ್ಲಮರನ್ನು ಒಲಿಸಿ ಮಲಗುಮನೆಗೆ ಕರೆದುತಂದು ಒಳಹೊಗಿಸಿದರು. ೪೫. ಮಲಗುಮನೆಯಲ್ಲಿ ನೆಲಸಿ ಮಿಂಚಿನ ಹೊಳಪಿನಂತೆ ಕಣ್ಣುಗಳಿಗೆ ಗೋಚರಿಸುವನಲ್ಲದೆ ಅಪ್ಪುಗೆಗೆ ಒಳಗಾಗನು. ಬಯಲಿನಂತೆ ಸೋಂಕಿದರೂ ಸಂಭೋಗಕ್ಕೆ ಸಿಕ್ಕನು. ಅಕ್ಷರದಂತೆ ಬಾಯಲ್ಲಿ ನಲಿದರೂ ಚುಂಬನಕ್ಕೆ ಸಿಗುವವನಲ್ಲ. ಅಲ್ಲಮ ಮಾಯೆಯೊಂದಿಗೆ ಈ

ಬಯಲ ಚಪ್ಪರಿಪಂತೆ ಚುಂಬನ
ಬಯಲನಪ್ಪುವವೊಲು ಸಮಪ್ಪಿಕೆ
ಬಯಲನೀಕ್ಷಿಸುವಂತೆ ನೋಟದ ಕೂಟದನುಭವಣೆ
ಬಯಲುಗೊಂಡವು ಭಾವಿಸಲು ನಿ
ರ್ವಯಲಿನಲ್ಲಮಗೋತ ಕಾರಣ
ಬಯಲ ಬಿಹ್ವದ ಬಲೆಗೆ ಬಿದ್ದಳು ಮಾಯೆ ಸುರತದಲಿ ೪೬

ಮಳೆಗೆ ನೆನೆವುದೆ ಗಾಳಿ ಬೀಸಿದೊ
ಡೊಲೆವುದೇ ಬಲುಗಿಚ್ಚಿನುರಿಯಿಂ
ದಳಿವುದೇ ನಭವಾ ಪರಿಯ ಬಯಲುಗನು ತಾನಾಗಿ
ಕಳವಳದ ವಿಷಯಗಳ ವ್ಯಸನಗ
ಳೊಳಗೆ ಸಿಕ್ಕುವನಲ್ಲವಾತನ
ಹೊಲಬು ತಾ ಬೇಱೊಂದು ಪರಿಯೇನೆಂಬೆನಲ್ಲಮನ ೪೭

ಜಗವನೇಡಿಸಿ ಕಾಡುವಾ ಮಾ
ಯೆಗೆ ನವೀನವೆನಿಪ್ಪ ಮಾಯಾ
ವಿಗನು ತಾನೆಂಬಂತಿರಿಲ್ಲದ ಬಯಲ ಬಗೆಗೊಳಿಸಿ
ಅಗಲದಂತಿರಲಿದ್ದು ಸುರತದ
ಸೊಗಸಿಗಿಲ್ಲದೆ ಸುಳಿದನಾತನ
ಬಗೆಯನಂತಿಂತೆಂದು ಬಲ್ಲವರಿಲ್ಲವಲ್ಲಮನ ೪೮

ಅಕ್ಕಟಕ್ಕಟ ಈತಗಳುಪಿದ
ಕಕ್ಕುಲತೆ ಕೈಸಾರಿತಲ್ಲದೆ
ಹೊಕ್ಕು ಮೈ ಕೈಗೂಡಿ ಸುರತಸುಖಾತಿರೇಕದಲಿ
ಒಕ್ಕಲಿಕ್ಕಿ ಸಮಸ್ತಭೋಗವ
ಮಿಕ್ಕು ಸವಿಯದೆಯೆನ್ನ ಭಾವನೆ
ಮುಕ್ಕು ಹೋದುದೆ ಎನುತೆ ಮನದೊಳು ಮಱುಗಿದಳು ಮಾಯೆ ೪೯

ರೀತಿಯಲ್ಲಿ ನಟನೆ ಮಾಡಿದನು. ೪೬. ಬಯಲನ್ನು ಚಪ್ಪರಿಸುವಂತೆ ಚುಂಬನ, ಬಯಲನ್ನು ಅಪ್ಪುವಂತೆ ಆಲಿಂಗನ, ಬಯಲನ್ನು ನೋಡುವಂತೆ ನೋಟ ಕೂಟದನುಭವ. ನಿರಾಕಾರನಾದ ಅಲ್ಲಮನನ್ನು ಪ್ರೀತಿಸಿದ ಕಾರಣ ಮಾಯೆ ಸಂಭೋಗದಲ್ಲಿ ಬಯಲ ಬಿಗಿಯಾದ ಬಲೆಗೆ ಸಿಕ್ಕಿಬಿದ್ದಳು. ೪೭. ಆಕಾಶವು, ಮಳೆಗೆ ಒದ್ದೆಯಾಗುವುದೆ? ಗಾಳಿ ಬೀಸಿದರೆ ತೂಗಾಡುವುದೇ? ಘನವಾದ ಬೆಂಕಿಯ ಉರಿಯಿಂದ ನಾಶವಾಗುವುದೇ? ಈ ರೀತಿಯ ನಿರ್ದೇಹಿ ತಾನಾದ ಅಲ್ಲಮನು ಇಂದ್ರಿಯಗಳ ಆಸಕ್ತಿಗೆ ಸಿಕ್ಕುವವನಲ್ಲ. ಏನು ಹೇಳಲಿ, ಆತನ ಮಾರ್ಗವೇ ಬೇರೊಂದು ರೀತಿಯದು. ೪೮. ಜಗತ್ತನ್ನು ಹೀಯಾಳಿಸಿ ಕಾಡುವ ಆ ಮಾಯೆಗೆ ಹೊಸತೆನ್ನುವ ಮಾಯಾವಿ ತಾನೆಂಬಂತೆ ಇಲ್ಲದ ಬಯಲನ್ನೇ ಭಾವನೆಗೆ ಒಳಗು ಮಾಡಿ ಅಗಲದಂತೆ ಇದ್ದೂ ಸುರತದ ಸೊಗಸು ಆಗದಂತೆ ಕಾಣಿಸಿಕೊಂಡ ಅಲ್ಲಮನ ಅಂತರಂಗವನ್ನು ಹಾಗೆ ಹೀಗೆ ಎಂದು ತಿಳಿದವರಿಲ್ಲ. ೪೯. "ಅಯ್ಯಯ್ಯೋ, ಈತನನ್ನು ಪ್ರೀತಿಸಿದ್ದಕ್ಕೆ ಚಿಂತೆ ಪ್ರಾಪ್ತವಾಯಿತು. ಸುರತ ಸುಖಾತಿರೇಕದಲ್ಲಿ ಮೈ ಕೈ ಕೊಡುವಂತೆ ಅಪ್ಪಿ ಸರ್ವಸುಖಗಳನ್ನು ಮೀರಿದ

ವನಿತೆ ಬೆಱಗಾಗಿರ್ದಳಲ್ಲಮ
ತನಗೆ ರೂಹಿಸಿ ಸುರತಸುಖಭಾ
ವನೆಗೆ ಬಾರದೆ ಬಯಲುಗೊಂಡಿರೆ ಸುಯ್ದು ಮಱೆದೊಱಗಿ
ಕನಸ ಕಂಡಂತಾಗಿ ಬಳಿಕಾ
ದಿನದ ಮಱುದಿವಸದಲಿ ತನ್ನಯ
ಮನವೊಲಿದ ನಿಜಸಖಿಯರೊಳಗಿಂತೆಂದಳಾ ಮಾಯೆ ೫೦

ನೋಡಿದೊಡೆ ರೂಪಾಗಿರಲು ಮೈ
ಗೂಡಲಿಕೆ ಸೋಂಕಿಲ್ಲದಿರ್ದೊಡೆ
ನೋಡಿ ನಾ ಬೆಱಗಾಗಿ ಮಱೆದೊಱಗಿರಲು ಮನದೊಳಗೆ
ಕೂಡುವಂತಿರಲೆನಗೆ ಮೋಹವ
ಮಾಡುವಂತಿರೆ ಕಂಡೆ ಕನಸನು
ನೋಡಿದಿರೆಯಲ್ಲಮನ ನಟಣೆಯನೆಂದಳಾ ಮಾಯೆ ೫೧

ಮರುಳುಗೊಂಡಂತೆನಗೆ ಮೋಹದಿ
ಬೆರಳುಗಳನೊಲಿದಿತ್ತು ಕೀಲಿಸಿ
ಯಿರುಳು ಹಗಲೆಡೆವಿಡದೆ ಕಾದಿರುತಿರ್ದನೆಂಬಂತೆ
ಹಿರಿಯ ಕನಸನು ಕಂಡೆ ನಾನಿ
ನ್ನಿರುಳೊಳೀ ಪರಿಯೆನುತೆ ಮಾಯಾ
ತರುಣಿ ವಿಸ್ತರಿಸಿದಳು ತನ್ನಯ ಕೆಳದಿಯರ ಕೂಡೆ ೫೨

ಸುರತಮುಖದಲಿ ಮುಂದುಗೆಡದಿಹ
ಪುರುಷನಿವನಿನ್ನಾರೊ ಸತಿಯರ
ಸರಸಪಾಶಕೆ ತೊಡಕಿ ಬೀಳದ ಮಹಿಮನಿವನಾರೊ
ಪರಿಕಿಸುವೊಡಲ್ಲಮನ ಭೇದಿಸ
ಲರಿದಲಾ ಎಂದೆನುತೆ ಮಾಯಾ
ತರುಣಿಗಾ ಕೆಳದಿಯರು ಬಳಿಕಿಂತೆಂದರೊಲವಿನಲಿ ೫೩

ಅತಿಶಯವಾದ (ಸುರತ ಸುಖದ) ರುಚಿ ನೋಡದೆ ನನ್ನ ಎಣಿಕೆಯೆಲ್ಲಾ ಚೂರು ಚೂರಾಯಿತೇ" ಎಂದು ಮಾಯೆ ಮನದಲ್ಲಿ ದುಃಖಿಸಿದಳು. ೫೦. ತನಗೆ ಕಾಣಿಸಿ ಕೊಂಡರೂ ಸುರತಸುಖಭಾವನೆಗೆ ಸಿಗದೆ ನಿರ್ದೇಹಿಯಾಗಿರಲು, ಮಾಯೆ ಆಶ್ಚರ್ಯ ಗೊಂಡಿದ್ದಳು. ನಿಟ್ಟುಸಿರುಬಿಟ್ಟು ಮೈಮರೆತು ಮಲಗಿ, ಕನಸು ಕಂಡಂತಾಗಿ, ಮರುದಿವಸ ತನ್ನ ಮನಮೆಚ್ಚಿದ ಸಖಿಯರೊಂದಿಗೆ ಮಾಯೆ ಹೀಗೆಂದಳು. ೫೧. "ನೋಡಲು ಆಕಾರ ಹೊಂದಿದ್ದು, ಮೈಗೂಡಲು (ನಿರಾಕಾರನಾಗಿ) ನನಗೆ ಅವನ ಸ್ಪರ್ಶವಾಗದೇ ಇರಲು, ಅದನ್ನು ನಾನು ನೋಡಿ ಬೆರಗಾಗಿ ಮೈಮರೆತು ಮಲಗಿರಲು ಮನದಲ್ಲಿ ನನ್ನನ್ನು (ಅಲ್ಲಮ) ಸೇರಿದಂತೆ, ಮೋಹವ ಮಾಡುವಂತೆ ಕನಸನ್ನು ಕಂಡೆನು ನೋಡಿದಿರಾ, ಅಲ್ಲಮನ ನಟನೆಯನ್ನು!" ಎಂದು ಮಾಯೆ (ಕೆಳದಿಯರಿಗೆ) ಹೇಳಿದಳು. ೫೨. "ಹುಚ್ಚುಹಿಡಿದವನಂತೆ ನನಗೆ ಕೈನೀಡಿ ಬಾಗಿ ಹಿಡಿದು ರಾತ್ರಿ ಬೆಳಗೂ ಎಡೆಬಿಡದೆ ಕಾದಿರುತ್ತಿದ್ದನೆಂಬಂತೆ ರಾತ್ರಿಯಲ್ಲಿ ಈ ರೀತಿ ದೊಡ್ಡ ಕನಸನ್ನು ಕಂಡೆನು" ಎಂದು ತನ್ನ ಗೆಳತಿಯರ ಜೊತೆಯಲ್ಲಿ ಮಾಯಾದೇವಿ ವಿವರವಾಗಿ ಹೇಳಿದಳು. ೫೩. "ಸಂಭೋಗದ ಮುಂದೆ ಮನ ಸಡಿಲವಾಗದ ಪುರುಷನಿವನಾರೊ! ಹೆಣ್ಣುಗಳ ಸರಸಪಾಶಕ್ಕೆ ಸಿಕ್ಕಿ ಬೀಳದ

ಇದಿರುಗನಸಿದು ಲೇಸು ನಿನಗ
ಭ್ಯುದಯವನು ಸೂಚಿಸುವುದೆನುತಲಿ
ಸುದತಿಯರು ಮಿಗೆ ಕನಸ ಮುಱಿದರು ಮನಸುಬಂದಂತೆ
ಅದನು ಕೇಳುತೆ ಮತ್ತೆ ಮಱುಕಳಿ
ಸಿದುದು ನೆಱೆಯಲ್ಲಮನ ಬೇಟದ
ಕುದಿಹ ಮಾಯೆಯ ತನು – ಮನಂಗಳ ಕಂದೆ ಕುಂದಿಸುತೆ ೫೪

ಅಂದು ಬಳಿಕಾ ಹದನನಾಗಳೆ
ತಂದು ಹರಹಲು ಕೆಲರು ಭರವಸ
ದಿಂದೆ ಮೋಹಿನಿದೇವಿ ತನ್ನಯ ಮಗಳ ಮಂದಿರಕೆ
ಬಂದು ತಾನೇಕಾಂತದಲಿ ನಿಜ
ನಂದನೆಯನಾಪ್ತೆಯರ ಕರೆದಿಂ
ತೆಂದು ನುಡಿದಳು ತಾನು ಕೇಳಿದ ಗುಪ್ತವಾರ್ತೆಯನು ೫೫

ಮಗಳೆ ನೀ ನಿನಗಲ್ಲದಿರ್ದೋ
ಜೆಗಳ ನಡೆವರೆ ರಾಜಕುಲದಲಿ
ನಗೆಗೆಡೆಯ ಮಾಡುವರೆ ನಿಮ್ಮಯ ತಂದೆ ಕೇಳಿದೊಡೆ
ಸೊಗಸುವನೆ ಮಿಗೆ ಮುನಿವವರ ಮಾ
ತುಗಳಿಗಾಸ್ಪದವಹರೆ ಅಕಟಾ
ನೆಗಳಲಹುದೇ ಪುರುಷಸಂಗವನೆಂದಳಾ ಜನನಿ ೫೬

ಮಹಿಮನಿವನಾರೊ! ಆಲೋಚಿಸುವುದಾದರೆ, ಅಲ್ಲಮನನ್ನು ಭೇದಿಸುವುದು ಅಸಾಧ್ಯವಲ್ಲವೆ?'' ಎಂದು ಮಾಯಾದೇವಿಗೆ ಆ ಕೆಳದಿಯರು ಹೇಳಿ ಮತ್ತೆ ಒಲವಿನಿಂದ ಹೀಗೆ ಹೇಳಿದರು. ೫೪. "ಇದು ವಿರುದ್ಧವಾದ ಕನಸು. ಒಳ್ಳೆಯದು ನಿನಗೆ ಅಭ್ಯುದಯವನ್ನು ಸೂಚಿಸುವುದು'' ಎಂದು ಆ ಚೆಲುವೆಯರು ಅತಿಶಯವಾದ ಕನಸನ್ನು ಮನಬಂದಂತೆ ಅರ್ಥೈಸಿದರು. ಅದನ್ನು ಕೇಳುತ್ತಾ ಅಲ್ಲಮನ ಮೇಲಿನ ಕಾಮಾನುರಾಗದ ಒಳಗುದಿ ಮಾಯೆಯ ತನು ಮನಗಳು ಬಾಡುವಂತೆ ಮಾಡಿ ಶಕ್ತಿಗುಂದಿಸುತ್ತಾ ಮರುಕಳಿಸಿತು. ೫೫. ಮರುದಿನ ಆ ಸುದ್ದಿಯನ್ನು ಆಗಲೇ ತಂದು ಕೆಲವರು ಹರಡಲು ತ್ವರಿತವಾಗಿ ಮೋಹಿನಿದೇವಿ ತನ್ನ ಮಗಳ ಮಂದಿರಕ್ಕೆ ಬಂದು ಏಕಾಂತದಲ್ಲಿ ತನ್ನ ಮಗಳನ್ನು ಹಾಗೂ ಅವಳ ಆಪ್ತ ಗೆಳತಿಯರನ್ನು ಕರೆದು ತಾನು ಕೇಳಿದ ಗುಟ್ಟಿನ ಸುದ್ದಿಯನ್ನು ಹೀಗೆಂದು ಹೇಳಿದಳು. ೫೬. "ಮಗಳೆ, ನೀನು ನಿನಗೆ ಸಲ್ಲದ ಕ್ರಮವನ್ನು ಅನುಸರಿಸುವುದೆ? ರಾಜಕುಲದಲ್ಲಿ ನಗೆಗೆ ಎಡೆಮಾಡಿಕೊಡುವುದೆ? ನಿನ್ನ ತಂದೆ ಕೇಳಿದರೆ ಮೆಚ್ಚುವರೆ? ನಮ್ಮ ಮೇಲೆ ವಿಶೇಷವಾಗಿ ಮುನಿಸುಗೊಂಡಿರುವವರ ಮಾತುಗಳಿಗೆ ಅವಕಾಶ ಮಾಡಿ ಕೊಡುವುದೆ? ಅಯ್ಯೋ, (ಪರ) ಪುರುಷರ ಸಂಗವನ್ನು ಮಾಡಬಹುದೇ?'' ಎಂದು ಮೋಹಿನಿದೇವಿ ಮಗಳನ್ನು ಆಕ್ಷೇಪಿಸಿದಳು.

ನೀತಿಯಱಿಯದೆಯಾನು ಮೊದಲಲಿ
ಕಾತರಿಸಿದುದದೊಂದು ಭಾವಿಸ
ಲಾತ ಸುರತದಲಂಗಸಂಗಕೆ ಸಿಕ್ಕದಿಹುದೊಂದು
ಮಾತೆ ಕೇಳಿದುದೊಂದು ನಮಗಿ
ನ್ನೇತಱಿದು ನುಡಿಯೆನುತೆ ಲಜ್ಜೆಯ
ಭೀತಿಯಲಿ ಬೆಂಬಿದ್ದು ಮೌನದೊಳಿರ್ದಳಾ ಮಾಯೆ ೫೭

ತರಳೆ ನೀನಕಟೇನ ಮಾಡುವೆ
ದುರುಳರಿವದಿರು ನಿನ್ನ ತೊತ್ತಿರು
ಮರುಳು ಮಾಡಿದೊಡೊಲಿದೆಯ್ಯೆಸಲೆ ಎನುತೆ ನಿಜಸುತೆಯ
ಕರುಣದಲಿ ಮೋಹದಲುಪೇಕ್ಷೆಯ
ಭರದಲಾಕೆಯನೇನುವೆನ್ನದೆ
ಮುರಿದು ಮೋಹಿನಿದೇವಿ ನೆಱಿ ನೋಡಿದಳು ಕೆಳದಿಯರ ೫೮

ಅರಸಿ ನುಡಿದೊಡೆ ನಾವು ಪ್ರತ್ಯು
ತ್ತರವ ಬಿನ್ನಹ ಮಾಡಬಾರದು
ತರುಣಿ ತಾನಲ್ಲಮನ ಕಾಣುತೆ ಕಾಮತಾಪದಲಿ
ಮರುಳುಗೊಂಡಾತಂಗೆ ಮೋಹಿಸಿ
ಹರಣಮಾತ್ರವನುಳುಹಿಕೊಂಡಳು
ಹಿರಿದು ಮಾತಿನ್ನೇತಕೆಂದರು ಕೂಡೆ ಕೆಳದಿಯರು ೫೯

ಅಕಟ ಮಗಳಿಗಿದಾವ ದೆಸೆಯಲಿ
ವಿಕಳ ಬಂದುದೊ ಬಱಿದೆ ಬಹುಸೇ
ವಕರಿರಲು ಸಲೆ ಸಂತವಿಟ್ಟರಿದೆತ್ತಣಲ್ಲಮನ
ಸಕಳೆ ಬುದ್ಧಿಯ ಬಲ್ಲೆ ನೀನೇ
ತಕೆ ವಿಚಾರಿಸದಾದೆಯೆನುತಾ
ಸಕಳೆಯನು ಮರುಳಾಡುತಿರ್ದಳು ಮೋಹಿನೀದೇವಿ ೬೦

೫೭. ನೀತಿಯರಿಯದೆ ನಾನು ಮೊದಲಿಗೆ (ಅಲ್ಲಮನ ಕೂಟಕ್ಕಾಗಿ) ಕಾತರಿಸಿದುದು ಒಂದು; ಮನದಲ್ಲಿ ಬಯಸಲು ಆತ ಸುರತದಲ್ಲಿ ಅಂಗಸಂಗಕ್ಕೆ ಸಿಕ್ಕದಿದ್ದುದು ಇನ್ನೊಂದು; ಮಾತೆ ಕೇಳಿದುದು ಮತ್ತೊಂದು; ನಾನು ಮಾತನಾಡುವುದೇನಿದೆ? - ಎಂದು ಲಜ್ಜೆಯ ಭೀತಿಯನ್ನು ಮರೆಹೊಕ್ಕು ಮಾಯೆ ಮೌನದಿಂದಿದ್ದಳು. ೫೮. "ಬಾಲೆ, ಅಯ್ಯೋ ನೀನೇನು ಮಾಡುವೆ, ದುಷ್ಟೆಯರಾದ ನಿನ್ನ ಸೇವಕಿಯರು ನಿನ್ನ ಬುದ್ಧಿಗೆಡಿಸಲು ನೀನು (ಅಲ್ಲಮನಿಗೆ) ಒಲಿದೆಯಷ್ಟೆ" ಎಂದು ತನ್ನ ಮಗಳನ್ನು ಕರುಣೆಯಿಂದ, ಮೋಹದಿಂದ, ಉದಾಸೀನದ ಹೆಚ್ಚಳದಿಂದ ಏನೂ ಹೇಳದೆ ಮೋಹಿನಿದೇವಿ ಮಗಳ ಗೆಳತಿಯರನ್ನು ಕೆಂಗಣ್ಣಿನಿಂದ ದೃಷ್ಟಿಸಿ ನೋಡಿದಳು. ೫೯. "ಮಹಾರಾಣಿಯವರು ನುಡಿದಾಗ ನಾವು ಎದುರುತ್ತರವನ್ನು ಕೊಡಬಾರದು. ತರುಣಿ ಮಾಯಾದೇವಿ ಅಲ್ಲಮನನ್ನು ಕಂಡು ಕಾಮತಾಪದಿಂದ ಆತನಿಗೆ ಮರುಳುಗೊಂಡು ಮೋಹಿಸಿ ಪ್ರಾಣವನ್ನು ಮಾತ್ರ ಉಳಿಸಿಕೊಂಡಳು. ಇನ್ನು ಹೆಚ್ಚಿನ ಮಾತೇಕೆ?" ಎಂದು ಗೆಳತಿಯರೆಲ್ಲ ಒಟ್ಟುಗೂಡಿ ನುಡಿದರು. ೬೦. "ಅಯ್ಯೋ, ಮಗಳಿಗೆ ಇದಾವ ದಿಕ್ಕಿನಿಂದ ವ್ಯರ್ಥವಾದ ಚಿಂತೆ ಬಂದುದೊ! ಬಹುಮಂದಿ ಸೇವಕಿಯರಿದ್ದು

ಮನುಜದೇಹವಪೂರ್ವವದಱೊಳು
ಜನಪತಿಯ ಸುತೆಯಹುದಪೂರ್ವತೆ
ಯಿನಿತಱೊಳು ಪಟುವಾಗಿ ಸಕಲಸುಖಂಗಳನು ತಿಳಿದು
ಅನುಭವಿಸುವುದಪೂರ್ವವದಱಿಂ
ಮನಸು ಬಂದಂತಿರಲಿ ಮಾಯಾಂ
ಗನೆಯದೇತಕೆ ಕಾಹು ಕಟ್ಟಳೆಯೆಂದಳಾ ಸಕಳೆ ೬೧

ಆಹುದು ತನುವುಳ್ಳಲ್ಲಿ ಸುಖದಿಂ
ದಿಹುದು ಬಳಿಕಲಿ ಬಯಸಿ ಬಾತೊಡೆ
ಬಹವೆಯದುಕಾರಣದಲಾತ್ಮಜೆ ಮನಸು ಬಂದಂತೆ
ಬಹಳ ಭೋಗವ ಕೊಳಲಿಯೆನುತಾ
ಗ್ರಹವನೀಡಾಡಿದಳು ನೀವೇ
ಸಹಿತರೇ ಎನುತವರನುಪಚರಿಸಿದಳು ನೃಪರಾಣಿ ೬೨

ಅರಸನಱಿಯದ ತೆಱದಲಿದನಾ
ಚರಿಸುವುದು ನೀವೆನುತೆ ಭಾವಿಸೆ
ಮರುಳರೇ ನಿಮ್ಮಿಂದೆ ಬಲ್ಲವರಾರು ಧಾತ್ರಿಯಲಿ
ಇರುತಲಿರಿ ನಿಮ್ಮಿಚ್ಛೆ ಬಂದಾ
ಪರಿಯಲೆನುತಾ ರಾಣಿ ತಾ ತ
ನ್ನರಮನೆಗೆ ಹೋದಳು ಕುಮಾರಿಯನೊಲಿದು ಮನ್ನಿಸುತೆ ೬೩

ಸಮಾಧಾನಗೊಳಿಸಿದಿರಿ. ಇದೆಲ್ಲಿಯ ಅಲ್ಲಮ! ಸಕಳೆ ನೀನು ತಿಳುವಳಿಕೆಯುಳ್ಳವಳು. ನೀನೇಕೆ ವಿಚಾರಿಸಲಿಲ್ಲ?" ಎನ್ನುತ್ತ ಮೋಹಿನಿದೇವಿ ಸಕಳೆಯನ್ನು ನಿಂದಿಸುತ್ತಿದ್ದಳು. ೬೧. "ಮನುಷ್ಯದೇಹವು ಅಪೂರ್ವವು. ಅದರಲ್ಲೂ ಮಹಾರಾಜನ ಮಗಳಾಗುವುದು ಅಪೂರ್ವವು. ಎಲ್ಲದರಲ್ಲೂ ಚಟುವಟಿಕೆಯಿಂದ ಕೂಡಿ ಸರ್ವ ಸುಖಗಳನ್ನು ತಿಳಿದು ಮತ್ತೂ ಅನುಭವಿಸುವುದು ಅದಕ್ಕಿಂತ ಅಪೂರ್ವವು. ಮನಬಂದಂತೆ ಇರಲಿ. ಮಾಯಾದೇವಿಗೇಕೆ ರಕ್ಷಣೆ, ನಿಯಮಗಳು" ಎಂದು ಸಕಳೆ ಉತ್ತರಿಸಿದಳು. ೬೨. "ಅದು ಸರಿ, ದೇಹವಿರುವಾಗಲೇ ಸುಖದಿಂದ ಇರಬೇಕು. ಜೀವಹೋದ ನಂತರ ಬಯಸಿ ಪ್ರಯೋಜನವೇನು? ಆ ಸುಖಗಳು ಮರಳಿ ಬರುವವೆ? ಆದಕಾರಣ ನಿನ್ನ ಮಗಳು ಮನಸ್ಸು ಬಂದಂತೆ ಅತಿಯಾಗಿ ಭೋಗವನ್ನು ಹೊಂದಲಿ" ಎನ್ನುತ್ತ (ಮಹಾರಾಣಿಯ) ಕೋಪವನ್ನು ಸಕಳೆ ನಿವಾರಿಸಿದಳು. ಮಹಾರಾಣಿ (ಅನಂತರ ಮಾಯೆಯ ಗೆಳತಿಯರನ್ನು) 'ನೀವೇನು ಅವಳಿಗೆ ವೈರಿಗಳೆ?' ಎನ್ನುತ್ತ ಉಪಚರಿಸಿದಳು. ೬೩. "ಅರಸನಿಗೆ ತಿಳಿಯದ ರೀತಿಯಲ್ಲಿ ನೀವು ಇದನ್ನು ಮಾಡುವುದು. ಭಾವಿಸಲು ನೀವೇನು ಹುಚ್ಚರೆ? ಭೂಮಿಯಲ್ಲಿ ನಿಮಗಿಂತ ಬಲ್ಲವರಾರು? ನಿಮ್ಮ ಇಚ್ಛೆ ಬಂದಂತೆ ಇರುತ್ತಲಿರಿ" ಎಂದು ಹೇಳಿ ಮಗಳನ್ನು ಪ್ರೀತಿಯಿಂದ ಮನ್ನಿಸಿ ರಾಣಿಯು ತನ್ನರಮನೆಗೆ ಹಿಂತಿರುಗಿದಳು.

ನೋಡಿದೌ ಲಾವಕರು ಮಾತೆಯ
ಕೂಡೆಯಾಗಳೆ ಹೋಗಿ ದೊಡ್ಡಿತ
ಮಾಡಿ ಹೇಳಿದರಾದೊಡಂಜಿಕೆಯೇನು ನಮಗಿದಕೆ
ಬೇಡಬೇಕೆಂದೆನಗೆ ಶಿಕ್ಷೆಯ
ಮಾಡುವರೆ ಪರಸತಿಯೆ ಇದನೇ
ಕಾಡಿ ಹೋದಳು ರಾಣಿಯೆಂದಳು ಸಕಳೆಗಾ ಮಾಯೆ ೬೪

ತರುಣಿ ಕೇಳೌ ನಿನಗೆ ಪರಮೇ
ಶ್ವರನೆ ಪತಿಯಹನೆಂದು ನೃಪಕುಲ
ಗುರುವೆನಿಪಹಂಕಾರನಾ ಮಮಕಾರಭೂಪತಿಗೆ
ನಿರುತವಚನವ ನುಡಿದ ನೀನೀ
ಪರಿಯ ಗಾವಳಿಗಂಗೆ ಕೂರ್ತೊಡೆ
ಮರುಳುಗುಟ್ಟದೆ ಮಾಣ್ಬರೇ ಹೇಳೆಂದಳಾ ಸಕಳೆ ೬೫

ನೀಱೆ ಕೇಳಾ ನಾವು ಮಾಡಿದ
ದೂಱನೆಮ್ಮಯ ರಾಣಿ ಕೇಳಿದ
ಕಾರಣದಲಿದು ಜಾಱಿತಲ್ಲದೆ ರಾಯ ಕೇಳಿದೊಡೆ
ಗಾಱಹೆವು ನಾವಿನ್ನು ನೀತಿಯ
ಮೀಱದಿರಬೇಕಂತು ಕಾರಣ
ಬೇಱೆ ಬೀಡಿನಲಿರಲಿಯಲ್ಲಮನೆಂದಳಾ ಸಕಳೆ ೬೬

ಕೆಳದಿಯರು ತಮತಮಗೆ ಬುದ್ಧಿಯ
ಕಲಿಸುತಿರಲಾ ಮಾಯೆ ಚಿಂತಾ
ಕುಲತೆಯಿಂದಲಿ ಬೆಱಗುಹೊಡೆದಿರಲಾಗಳೈತಂದು
ಲಲನೆಗೇತಕೆ ದುಗುಡವಾರು
ಮ್ಮಳಿಕೆಯನು ಮಾಡಿದರು ಹೇಳೆನು
ತೊಲಿದು ಕೇಳಿದನಂದು ಸಕಳೆಯನಲ್ಲಮನು ಬಳಿಕ ೬೭

೬೪. "ನೋಡಿದೆಯಾ, ಚಾಡಿಕೋರರು ಆಗಲೇ ಮಹಾರಾಣಿಯ ಜೊತೆಯಲ್ಲಿ ದೊಡ್ಡದು ಮಾಡಿ ಹೇಳಿದರಾದರೂ ನಮಗೆ ಅಂಜಿಕೆಯೇನು? ಒಳಿತು-ಕೆಡುಕುಗಳನ್ನು ಆಲೋಚಿಸಿ ಶಿಕ್ಷಿಸುವುದಕ್ಕೆ ನಾನೇನು ಪರಸ್ತ್ರೀಯೆ? ಇದನ್ನೇಕೆ ಮಹಾರಾಣಿ ಹೇಳಿ ಹೋದಳು?" ಎಂದು ಮಾಯೆ ಸಕಳೆಗೆ ಹೇಳಿದಳು. ೬೫. "ತರುಣಿ ಕೇಳು, ನಿನಗೆ ಪರಮೇಶ್ವರನೇ ಪತಿಯಾಗುವನೆಂದು ರಾಜಕುಲದ ಗುರುವಾದ ಅಹಂಕಾರನು ಆ ಮಮಕಾರ ಮಹಾರಾಜನಿಗೆ ಸತ್ಯವಚನವನ್ನು ನುಡಿದನು. ನೀನು ಈ ರೀತಿಯಲ್ಲಿ ಗದ್ದಲ ಮಾಡುವವನಾದ ಅಲ್ಲಮನನ್ನು ಪ್ರೇಮಿಸಿದರೆ ನಿಂದಿಸದೆ ಬಿಡುವರೆ? ಹೇಳು" ಎಂದು ಸಕಳೆ ಪ್ರಶ್ನಿಸಿದಳು. ೬೬. "ಸುಂದರಿ, ಕೇಳು. ನಾವು ಮಾಡಿದ ತಪ್ಪನ್ನು ನಮ್ಮ ರಾಣಿ ಕೇಳಿದ ಕಾರಣದಿಂದ ಇದು ಜಾರಿತು. ಹಾಗಲ್ಲದೆ ಮಹಾರಾಜ ಕೇಳಿದ್ದರೆ ನಾವು ಅಪರಾಧಿಗಳಾಗುತ್ತಿದ್ದೆವು. ನಾವಿನ್ನು ನೀತಿಯನ್ನು ಮೀರದೆ ಇರಬೇಕು. ಆದಕಾರಣ ಅಲ್ಲಮ ಇನ್ನು ಬೇರೆಯ ಬೀಡಿನಲ್ಲಿರಲಿ" ಎಂದು ಸಕಳೆ ಸಲಹೆ ಮಾಡಿದಳು. ೬೭. ಗೆಳತಿಯರು ತಮತಮಗೆ ಬುದ್ಧಿಯನ್ನು ಹೇಳಿಕೊಳ್ಳುತ್ತಿರಲು ಮಾಯೆ ಚಿಂತೆ ಹಾಗೂ ಗಲಿಬಿಲಿಗಳಿಂದ

ಅಣ್ಣಾ ಕೇಳುದಕದಲಿ ಮುಳುಗಿದ
ಸುಣ್ಣಕಲ್ಲಂತಾಗಿ ಕುದಿಯುತೆ
ಬಣ್ಣವಳಿದಳು ಮಾಯೆ ಕಾಣುತೆ ನಿನ್ನ ಬೇಟದಲಿ
ಕಣ್ಣುಗಾಣದೆ ಕಾಮನೇಱಿನ
ಹುಣ್ಣಿನಲಿ ಹೊರಳಿದೊಡೆಯಾ ಸ್ಥಿತಿ
ಹಣ್ಣಿ ಹಬ್ಬಿತು ಪುರದೊಳೆಂದಳು ಸಕಳೆಯಲ್ಲಮಗೆ ೬೮

ಒಡತಿ ಮುಂತಾದರಮನೆಯಲಿಹ
ಮಡದಿಯರು ತಾವಱಿದರೊಬ್ಬನೆ
ಪೊಡವಿಪಾಲಕನಱಿಯನಲ್ಲದೆ ನಮ್ಮ ಪುಣ್ಯದಲಿ
ತೊಡಗಿತೀ ಪರಿ ರಟ್ಟು ಸಾಕಿ
ನ್ನೆಡೆಯ ಮಾಡೈ ನಿನಗೆ ಬೀಡಿನ
ಗುಡಿಯ ಹೊಱಗೊಂದೆಡೆಯಲೆಂದಳು ಸಕಳೆಯಲ್ಲಮಗೆ ೬೯

ಮಾಯೆಯಗಲಿದ ಬಳಿಕ ಭಾವಿಸೆ
ಕಾಯವುಂಟೇ ಪ್ರಾಣವಾಗಿಹ
ವಾಯು ನಡೆವುದೆ ಕಾಲು ಕೈ ಕಣ್ಣುಗಳು ಮಿಡುಕುವುವೆ
ಬಾಯ ನುಡಿ ಬೆವಹಾರ ಬೆಸನಗ
ಳಾಯತವು ಬಳಿಕುಂಟೆ ಕೇಳಾ
ಸಾಯದಂತಿರೆ ಸತ್ತೆ ನಾನಕಟೆಂದನಲ್ಲಮನು ೭೦

ದಿಗ್ಭ್ರಮೆ ಹೊಂದಿದಳು. ಆಗ ಅಲ್ಲಮ ಅಲ್ಲಿಗೆ ಬಂದು "ಲಲನೆಗೇತಕೆ ಚಿಂತೆ? ಯಾರು ವ್ಯಥೆಯನ್ನುಂಟು ಮಾಡಿದರು? ಹೇಳು" ಎಂದು ಪ್ರೀತಿಯಿಂದ ಸಕಳೆಯನ್ನು ವಿಚಾರಿಸಿದನು. ೬೮. ಅಲ್ಲಮನಿಗೆ ಸಕಳೆ "ನೀರಿನಲ್ಲಿ ಮುಳುಗಿದ ಸುಣ್ಣದ ಕಲ್ಲಿನಂತಾಗಿ ನಿನ್ನನ್ನು ಕಂಡ ಮಾಯೆ ಕಾಂತಿಗುಂದಿದಳು. ವಿರಹಾಂಧಳಾಗಿ ಕಾಮನು ಬಿಟ್ಟ ಬಾಣದಿಂದಾದ ಗಾಯದಲ್ಲಿ ಹೊರಳಾಡಲು ಆಕೆಯ ಆ ಸ್ಥಿತಿ ಪುರದಲ್ಲೆಲ್ಲಾ ಚೆನ್ನಾಗಿ ಹಬ್ಬಿತು" ಎಂದಳು. ೬೯. ಮಹಾರಾಣಿಯೇ ಮೊದಲಾಗಿ ಅರಮನೆಯಲ್ಲಿರುವ ಸ್ತ್ರೀಯರೆಲ್ಲಾ ಈ ಸುದ್ದಿ ತಿಳಿದರು. ಮಹಾರಾಜನೊಬ್ಬನಿಗೆ ಮಾತ್ರ ತಿಳಿದಿಲ್ಲ. ನಮ್ಮ ಪುಣ್ಯದಿಂದ ಈ ರೀತಿ ರಹಸ್ಯ ಬಯಲಾಯಿತು. ಸಾಕು, ಇನ್ನು ಈ ಸ್ಥಳವನ್ನು ತೆರವು ಮಾಡು. ನಿನಗ ಬಿಡಾರದ ಮನೆಯ ಹೊರಗೆ ಒಂದೆಡೆಯಲ್ಲಿ (ವ್ಯವಸ್ಥೆ ಮಾಡಲಾಗುವುದು)" ಎಂದು ಅಲ್ಲಮನಿಗೆ ಸಕಳೆ ಹೇಳಿದಳು. ೭೦. "ಮಾಯೆಯಗಲಿದ ಬಳಿಕ ಭಾವಿಸಲು ದೇಹವುಂಟೆ? ಪ್ರಾಣವಾಗಿರುವ ವಾಯು ಅಗಲಿದ ಬಳಿಕ ದೇಹ ನಡೆಯುವುದೆ? ಕಾಲು, ಕೈ, ಕಣ್ಣುಗಳು ಚಲಿಸುವುವೆ? ಬಾಯಿಮಾತು, ವ್ಯವಹಾರ, ಕಾರ್ಯಗಳ ಸರಿಯಾದ ಕ್ರಮವು ಬಳಿಕ ಉಂಟೆ? ಅಯ್ಯೋ ಕೇಳು, ಬದುಕಿಯೂ

ಎಂದ ಮಾತಿನ ಮಱೆಯ ಬೆಡಗಿನ
ಸಂದಿಯಲಿ ಶಿವಕಾಮತತ್ತ್ವ
ದ್ವಂದ್ವವಿಪ್ಪುದನಱಿಯಲಱಿಯದೆ ಯೀಗಳೇನಾಯ್ತು
ಮುಂದೆ ಮಾಯೆಯ ನಿನ್ನ ರಿಣಸಂ
ಬಂಧವುಳ್ಳೊಡೆ ತಾನೆ ಕೂಡುವು
ದೆಂದು ಮೆಲ್ಲನೆ ಜಾಱಿ ನುಡಿದಳು ಸಕಳೆಯಲ್ಲಮಗೆ ೭೧

ಆಗಲೆನುತ ಬಳಿಕ ಪಾತ್ರದ
ಭೋಗದವರೊಳು ಮಧುಕನಾಥಗೆ
ಹೋಗಿ ಮಾಯಾಂಗನೆಯ ಲಾಸ್ಯದ ಕೇಳಿಯೂಳಿಗವ
ಜೋಗಯಿಸುತಿರುತಿರ್ದ ಭಕ್ತಿಯ
ಭಾಗೆಯಲಿ ತಾನೊಲಿದ ಕಾರಣ
ವಾ ಗರುವ ನಮ್ಮಲ್ಲಮಪ್ರಭು ಲಿಂಗಲೀಲೆಯಲಿ ೭೨

ಅಂತು ಗತಿ ೫ಕ್ಕಂ ಪದ ೨೪೪ಕ್ಕಂ ಮಂಗಳಂ

ನಾನು ಸತ್ತೆ" ಎಂದು ಅಲ್ಲಮ ಹೇಳಿದನು. ೭೧. ಹೀಗೆಂದು ಹೇಳಿದ ಅಲ್ಲಮನ ಮಾತಿನ ಮರೆಯ ಬೆಡಗಿನ ವಿಶೇಷಾರ್ಥದಲ್ಲಿ ಶಿವಕಾಮತತ್ವದ ದ್ವಂದ್ವಾರ್ಥವಿರುವುದನ್ನು ಅರ್ಥೈಸಿ ತಿಳಿಯಲಾಗದೆ ಸಕಳೆ ಅಲ್ಲಮನಿಗೆ "ಈಗಲೇನಾಯ್ತು? ಮುಂದೆ ನಿನ್ನ ಹಾಗೂ ಮಾಯೆಯ ಋಣಸಂಬಂಧವಿದ್ದರೆ ಅದು ನಿಮ್ಮನ್ನು ಕೂಡಿಸುವುದು" ಎಂದು ಮೆಲ್ಲನೆ ತೇಲಿಸಿ ನುಡಿದಳು. ೭೨. ಆ ನಮ್ಮ ಗುರುಮೂರ್ತಿಯಾದ ಅಲ್ಲಮಪ್ರಭುವು ಭಕ್ತಿಯ ಕರ್ತವ್ಯಕ್ಕೆ ತಾನು ಒಲಿದ ಕಾರಣ ಆಗಲಿ ಎಂದು ಹೇಳಿ, ಅನಂತರ ನಟುವ ಮೇಳದವರೊಂದಿಗೆ ಮಧುಕನಾಥನಲ್ಲಿಗೆ ಹೋಗಿ ಮಾಯಾದೇವಿಯ ನೃತ್ಯಕೇಳಿಯ ಸೇವೆಯನ್ನು (ಮಾಡುತ್ತಾ) ಲಿಂಗಲೀಲೆಯಲ್ಲಿದ್ದನು.

# ೬. ವಿಮಳೆ ಬಂದುದು

**ಗತಿ ೬**

ಸೂಚನೆ : ಉಮೆಯ ನೇಮದಲಿಳೆಗೆ ಬಂದಾ
ವಿಮಳೆ ಪೇಳಲು ವಿಸ್ತರಿಸಿಯ
ಲ್ಲಮನ ಪರಿಯನು ಕೇಳುತಿರ್ದಳು ಮಾಯೆ ಮನವೊಲಿದು

ಸದಮಲಜ್ಞಾನಿಗಳು ಶಾಶ್ವತ
ಪದದಲನುಭಾವಿಗಳು ಕೇಳುವು
ದಿದಱೊಳಗೆ ಮೇಲೆನಿಸಿ ನಡೆವ ಕಥಾಕುತೂಹಲವ
ಮಧುಕನಾಥನ ವಾದ್ಯಮೇಳಾ
ಪದಲಿ ಮೆಱೆವಲ್ಲಮನ ಮಹಿಮೆಯ
ಹದನನಾದರದಿಂದಲೀ ಪ್ರಭುಲಿಂಗಲೀಲೆಯಲಿ ೧

ಧರಣಿತಳದೊಳು ನಿಚ್ಚ ಮಧುಕೇ
ಶ್ವರನನಭಿವಂದಿಸುತೆ ಕಾಮಾ
ತುರದಲಲ್ಲಮಗೋತು ಮಾಯಾದೇವಿಯಿರುತಿರಲು
ಹಿರಿದು ದಿನಗಳು ಹೋದುವೆನುತಲಿ
ಗಿರಿಜೆ ಮಾಯೆಯ ಹದನನಾಲಿಸಿ
ಕರೆದುತರಲಿಕೆ ಕಳುಹಿದಳು ಬೆಸನಿತ್ತು ವಿಮಳೆಯನು ೨

ತೊಳಪ ಕಂಗಳ ಕಾಂತಿ ಮಿಂಚಿನ
ಬಳಗವನು ಬೆಸಲಾಗುತಿರೆ ಕೋ
ಮಳದ ತನುವಿನ ಸಾರಸೌರಭವಿಡಿಯೆ ದೆಸೆಗಳಲಿ
ಸೆಳೆನಡುವಿನುನ್ನತಕುಚಂಗಳ
ಚೆಲುವಿಕೆಯ ದಿವ್ಯಾಂಗತೇಜದ
ಬಳವಿಯಿಂದಲಿ ಬಂದಳವನಿಗೆ ವಿಮಳೆ ವಿನಯದಲಿ ೩

ಸೂ : ಉಮೆಯ ಆಜ್ಞೆಯಂತೆ ಭುವಿಗೆ ಬಂದ ವಿಮಳೆ ಅಲ್ಲಮನ ರೀತಿಯನ್ನು ವಿಸ್ತರಿಸಿ ಹೇಳಲು ಮಾಯೆ ಮನವೊಲಿದು ಕೇಳುತ್ತಿದ್ದಳು. ೧. ಪರಿಶುದ್ಧಜ್ಞಾನಿಗಳು, ಮುಕ್ತಿಸ್ಥಿತಿಯ ಅನುಭಾವಿಗಳು ಇದರೊಳಗೆ ಮೇಲು ಎನ್ನಿಸಿ ನಡೆವ ಕಥೆಯ ಕುತೂಹಲವನ್ನು, ಮಧುಕನಾಥನ ವಾದ್ಯಗೋಷ್ಠಿಯಲ್ಲಿ ಶೋಭಿಸುವ ಅಲ್ಲಮನ ಮಹಿಮೆಯ ರೀತಿಯನ್ನು ಆದರದಿಂದ ಈ ಪ್ರಭುಲಿಂಗಲೀಲೆಯಲ್ಲಿ ಕೇಳುವುದು. ೨. ಭೂತಳದಲ್ಲಿ ನಿತ್ಯವೂ ಮಧುಕೇಶ್ವರನಿಗೆ ನಮಸ್ಕರಿಸುತ್ತ, ಕಾಮಾತುರದಿಂದ ಅಲ್ಲಮನಿಗೆ ಒಲಿದು ಮಾಯಾದೇವಿ ಇರುತ್ತಿರಲು ಬಹಳ ದಿನಗಳು ಕಳೆದವು ಎಂದು ಗಿರಿಜೆ ಮಾಯೆಯ ಸುದ್ದಿಯನ್ನು ತಿಳಿದು (ಕೈಲಾಸಕ್ಕೆ) ಕರೆದುತರಲು ವಿಮಳೆಗೆ ಅಪ್ಪಣೆಮಾಡಿ ಕಳುಹಿಸಿದಳು. ೩. ಹೊಳೆಯುವ ಕಣ್ಣುಗಳ ಕಾಂತಿ ಮಿಂಚಿನ ಬಳಗವನ್ನು ಹಡೆಯುತ್ತಿರಲು, ಕೋಮಲವಾದ ದೇಹದ ಸಾರಸೌರಭವು ದಿಕ್ಕು ದಿಕ್ಕುಗಳಲ್ಲಿ ವ್ಯಾಪಿಸಲು ಬಡನಡುವಿನ, ಉನ್ನತ ಕುಚಗಳ, ಚೆಲುವಾದ ದಿವ್ಯದೇಹದ ತೇಜಸ್ಸಿನ ಹೆಚ್ಚಳದಿಂದ ಭೂಮಿಗೆ

ಬಂದು ಭರವಸದಿಂದೆ ಕನ್ನೆಯ
ಮಂದಿರವನೊಳಹೊಕ್ಕು ಭೋಂಕನೆ
ಮುಂದೆ ನಿಂದಿರೆ ಕಾಣುತವೆ ಸತ್ಕರಿಸಿ ಕುಳ್ಳಿರಿಸಿ
ಇಂದುಮುಖಿ ನೀನೆತ್ತಣಿಂದಲಿ
ಬಂದೆಯೇತಕೆ ನಿನ್ನ ಹೆಸರೇ
ನೆಂದು ಮಾಯಾದೇವಿ ಕೇಳಿದಳೊಲಿದು ವಿಮಳೆಯನು ೪

ಕೆಳದಿ ನಿನ್ನನು ನೋಡಲಂಬಿಕೆ
ಕಳುಹಿದರೆ ರಜತಾದ್ರಿಯಿಂದಾ
ನಿಳಿದು ಬಂದೆನು ವಿಮಳೆಯೆಂಬವಳಾನು ನೀನೀಗ
ಇಳೆಯೊಳುದಯಿಸಿ ಮಱೆದೆಯಾದೊಡೆ
ತಿಳುಹುವೆನು ನಾ ನಿನಗದೆಲ್ಲವ
ನೊಲಿದು ಕಾರಣಕಥನವನು ಕೇಳೆಂದಳಾ ವಿಮಳೆ ೫

ಏನು ಕಾರಣ ನಾನು ಹುಟ್ಟಿದೆ
ನೇನು ಕಾರಣ ನೀನು ಬಂದೆಯಿ
ದೇನು ಕಾರಣ ಗಿರಿಜೆ ಮಾಡಿದಳೆನಗೆ ಕರುಣವನು
ತಾನು ದೇವತೆಯಾನು ಮಾನಸಿ
ಯೇನು ಸಂಭಾವನೆಗೆ ಕಾರಣ
ಮಾನಿನಿಯೆ ಹೇಳೆನುತಲಿದ್ದಳು ವಿಮಳೆಗಾ ಮಾಯೆ ೬

ಹರನ ನಿಷ್ಕಳರೂಪನಲ್ಲಮ
ನಿರವನಿಂದಲು ತಾನು ತಿಳಿವಾ
ತುರಕೆ ತನ್ನ ಗುಣಸ್ವರೂಪದ ಮಾಯೆ ನಿನ್ನನು
ಧರೆಗೆ ಕಳುಹಲು ನೀನು ತಡೆದಿರು
ತಿರಲು ನಿನ್ನನು ತಿಳುಹಿ ತರಲಿಕೆ
ಗಿರಿಜೆ ಬಳಿಕಿಂತೆನ್ನ ಕಳುಹಿದಳೆಂದಳಾ ವಿಮಳೆ ೭

ವಿನಯದಿಂದ ವಿಮಳೆ ಬಂದಳು. ೪. ತೀವ್ರಗತಿಯಿಂದ ಬಂದ ವಿಮಳೆ ಕನ್ಯಾಮಂದಿರವನ್ನು ಪ್ರವೇಶಿಸಿ ತಟ್ಟನೆ ಮುಂದೆ ನಿಂದಿರಲು, ಅವಳನ್ನು ಕಾಣುತ್ತಲೇ ಸತ್ಕರಿಸಿ ಕುಳ್ಳಿರಿಸಿ "ಚಂದ್ರಮುಖಿ, ನೀನು ಎಲ್ಲಿಂದ ಬಂದೆ? ಏತಕ್ಕೆ ಬಂದೆ? ನಿನ್ನ ಹೆಸರೇನು?" ಎಂದು ಮಾಯಾದೇವಿ ಪ್ರೀತಿಯಿಂದ ಪ್ರಶ್ನಿಸಿದಳು. ೫. "ಗೆಳತಿ, ನಿನ್ನನ್ನು ನೋಡಿ ಬರಲು ಅಂಬಿಕೆ ಕಳುಹಲು ನಾನು ರಜತಾದ್ರಿಯಿಂದ ಇಳಿದು ಬಂದೆನು. ನಾನು ವಿಮಳೆ. ನೀನು ಈಗ ಭೂಮಿಯಲ್ಲಿ ಜನಿಸಿ ಹಿಂದಿನದನ್ನೆಲ್ಲಾ ಮರೆತಿರುವೆ. ನೀನು ಅವತರಿಸಬಂದ ಕಾರಣಕಥನವನ್ನೆಲ್ಲಾ ಪ್ರೀತಿಯಿಂದ ನಾನು ನಿನಗೆ ತಿಳಿಸುವೆನು ಕೇಳು" ಎಂದು ವಿಮಳೆ ಹೇಳಿದಳು. ೬. ಮಾಯೆ ವಿಮಳೆಯನ್ನು ಕುರಿತು "ನಾನು ಏನು ಕಾರಣ ಹುಟ್ಟಿದೆ? (ಇಲ್ಲಿಗೆ) ನೀನು ಏನು ಕಾರಣ ಬಂದೆ? ಇದೇನು ಕಾರಣ ಗಿರಿಜೆ ನನ್ನ ಮೇಲೆ ಕರುಣೆ ಮಾಡಿದಳು? ಆಕೆಯಾದರೂ ದೇವತೆ, ನಾನಾದರೊ ಮನುಷ್ಯವರ್ಗದವಳು. ಈ ಗೌರವಕ್ಕೆ ಕಾರಣವೇನು? ಮಾನಿನಿ ಹೇಳು" ಎಂದು ಮಾಯೆ ಕೇಳಿದಳು. ೭. "ಶಿವನ ಸಾತ್ವಿಕರೂಪನಾದ ಅಲ್ಲಮನ ನೆಲೆಯನ್ನು ತಾನು ತಿಳಿಯುವ ಆತುರದಿಂದ ತನ್ನ (ತಾಮಸ) ಗುಣಸ್ವರೂಪದ ಮಾಯೆಯಾದ ನಿನ್ನನ್ನು ಭೂಮಿಗೆ ಕಳುಹಿಸಿದಳು. ನೀನು ಬಂದ ಕಾರ್ಯ

ಬಳಿಕ ಮಾಯಾಂಗನೆಯ ಮನಸಿಗೆ
ತಿಳಿವು ತಿಣ್ಣನೆ ತಿಟ್ಟವಿಟ್ಟಿತು
ಹೊಳಹು ಹೊಮ್ಮಿತು ತನ್ನ ಪೂರ್ವದ ಕಥನಕಾರಣದ
ಬೆಳವಿಗೆಗೆ ಬೆದೆಯಾಯ್ತು ನೆನಹಿನ
ನೆಳಲು ಮಿಂಚಿದುದೊಳಗೊಳಗೆ ನಿ
ರ್ಮಳೆಯ ಸಂಗವು ಕಳೆಯದಿಹುದೇ ಮನದ ಮೈಲಿಗೆಯ ೮

ಹರಿಹರಬ್ರಹ್ಮಾದಿ ದೇವಾ
ಸುರರು ಜನನಕೆ ಬರಲು ಜಾತಿ
ಸ್ಮರಣೆಯಿಲ್ಲೆನಲಾವು ಸತಿಯರು ನಮ್ಮ ಪಾಡೇನು
ಪಿರಿದು ಪೂರ್ವಸ್ಥಿತಿಯ ಭಾವಿಸ
ಲರಿದು ನೀನವಜೆಂದಲಲ್ಲಮ
ನಿರವನೆಲ್ಲವ ವಿರಚಿಸೆಂದಳು ವಿಮಳೆಗಾ ಮಾಯೆ ೯

ಆದೊಡಾಲಿಸುವುದೊಂದು ಬುದ್ಧಿಯ
ಲಾದರಿಸಿ ಕೇಳಭವ ತನ್ನ ವಿ
ನೋದದಿಂದಾ ಗಿರಿಜೆಗಱುಹಿದ ಕಥನಕೌತುಕವ
ಆದಿಯಲಿ ಸಾಕ್ಷಾತುವಾಗಿಯೆ
ಮೇದಿನಿಯಲಿರುತಿರ್ದರಮಲ ಗು
ಣಾಧಿಕದ ಸುಜ್ಞಾನಿ ನಿರಹಂಕಾರರೆಂಬವರು ೧೦

ಮರೆತು ಸಾವಕಾಶವಾಗಿ ಇರುತ್ತಿರಲು, ಬಳಿಕ ನಿನಗೆ ತಿಳುಹಿ ಕರೆದುತರಲಿಕ್ಕೆ ಗಿರಿಜೆ ನನ್ನನ್ನು ಕಳುಹಿಸಿದಳು" ಎಂದು ವಿಮಳೆ ಹೇಳಿದಳು. ೮. ಅನಂತರ ಮಾಯಾಂಗನೆಯ ಮನಸ್ಸಿನಲ್ಲಿ ಜ್ಞಾನವು ತಟ್ಟನೆ ರೂಪುಗೊಂಡಿತು. ಕಾಂತಿ ಹೊಮ್ಮಿತು. ತನ್ನ ಹಿಂದಣ ಕಾರಣಕಥನದ ಬೆಳಸಿಗೆ ಬೆದೆಯಾಯ್ತು. ಅಂತರಂಗದೊಳಗೆ ನೆನಪಿನ ನೆಳಲು ಮಿಂಚಿತು. ಪರಿಶುದ್ಧವಾದವರ ಸಂಗದಿಂದ ಮನಸ್ಸಿನ ಮೈಲಿಗೆ ನಿವಾರಣೆಯಾಗುವುದಿಲ್ಲವೆ! (ಹಾಗೆ ವಿಮಳೆಯ ಸಂಗದಿಂದ ಮಾಯೆಯ ಅಂತರಂಗದ ಮೈಲಿಗೆ ನಿವಾರಣೆಯಾಯಿತು). ೯. "ಹರಿ ಹರ ಬ್ರಹ್ಮಾದಿ ದೇವಾಸುರರು ಹುಟ್ಟಿ ಬಂದಾಗ ತಮ್ಮ ಹುಟ್ಟಿನ ನೆನಪೇ ಇಲ್ಲ ಎನ್ನುವಲ್ಲಿ ಇನ್ನು ಸ್ತ್ರೀಯರಾದ ನಮ್ಮ ಪಾಡೇನು? ಹಿರಿದಾದ ಪೂರ್ವಸ್ಥಿತಿಯನ್ನು ತಿಳಿಯಲು ನನಗೆ ಅಸಾಧ್ಯ. ಆದಕಾರಣ ನೀನು ಅಲ್ಲಮನ ಸ್ಥಿತಿಯನ್ನೆಲ್ಲಾ ವಿವರಿಸು" ಎಂದು ಮಾಯೆ ವಿಮಳೆಯನ್ನು ಕೇಳಿದಳು. ೧೦. ಹಾಗಿದ್ದರೆ ಶಿವ ತನ್ನ ವಿನೋದದಿಂದ ಆ ಗಿರಿಜೆಗೆ ತಿಳಿಸಿದ ಕೌತುಕಪೂರ್ಣವಾದ ಕಥೆಯನ್ನು ಒಂದೆ ಬುದ್ಧಿಯಿಂದ ಆದರಿಸಿ ಕೇಳು : "ಹಿಂದೆ ಭೂಮಿಯಲ್ಲಿ ಪರಿಶುದ್ಧ ಗುಣಗಳ ಆಧಿಕ್ಯದಿಂದ ಕೂಡಿದ್ದ ಸುಜ್ಞಾನಿ-ನಿರಹಂಕಾರರೆಂಬ ದಂಪತಿಗಳಿದ್ದರು"

ಒಳ್ಳಿತಾಗಿಯೆ ಚೆಲುವ ಬನವಸೆ
ಬಳ್ಳಿಗಾವಿಯ ಭಕ್ತಿಭಾವುಕ
ರೆಲ್ಲರೊಳಗಭಿವಂದ್ಯನಾಗಿ ಸಮಸ್ತ ಭಾಗ್ಯದಲಿ
ಬಲ್ಲಿದನು ತಾನೆನಿಸಿ ತನಗೊಂ
ದಿಲ್ಲವೆನುತಲಿ ಪುತ್ರಕಾಮ್ಯದ
ಭುಲ್ಲವಣೆಯಲಿ ಬಳಿಕ ನಿರಹಂಕಾರನಿಂತೆಂದ ೧೧

ದಾನವಿಲ್ಲದ ಧರ್ಮ ವಿಷಯ
ಧ್ಯಾನವಿಲ್ಲದ ತಪವು ಜೀವ
ಸ್ಥಾನದನುಸಂಧಾನವಿಲ್ಲದ ಯೋಗದಭ್ಯಾಸ
ಜ್ಞಾನವಿಲ್ಲದ ಸಿದ್ಧಿ ವರಸಂ
ತಾನವಿಲ್ಲದ ಬಾಳ್ಕೆಯಲಿ ಸುಖ
ವೇನು ದೊರಕುವುದೆನುತೆ ನಿರಹಂಕಾರ ಚಿಂತಿಸಿದ ೧೨

ಲೌಕಿಕರು ಕಾಮಿಸುವರಿಹಪರ
ಲೋಕವನು ತಮಗೀವ ಪುತ್ರನ
ನೇಕೆಯಾ ಮಾಯಾಪ್ರಪಂಚಿನ ಬಳಕೆಗಳು ನಮಗೆ
ಏಕವೆನಿಸುವ ನಿಜವನೀವ ನಿ
ರಾಕುಳದ ಸುಕುಮಾರನಾಗಲಿ
ಬೇಕು ನಮಗೆಂದೆನುತೆ ನಿರಹಂಕಾರ ಚಿಂತಿಸಿದ ೧೩

ಉಪಮಿಸಲು ಸತಿಸಂಗರಸದಲಿ
ಜಪದ ಜಂಜಡ ಜೋಕೆಯಲಿ ಮೇಣ್
ತಪದ ತಾಮಸಭಾವದಲಿ ಮಾಯಾಪ್ರಪಂಚಿನಲಿ
ವಿಪುಲ ವಿಜ್ಞಾನಾಕೃತಿಯ ನಿ
ಶ್ಚಪಳನಾದ ಕುಮಾರನಿಲ್ಲೆನು
ತ ಪರಿಮಿತದೆಣಿಕೆಗಳ ನಿರಹಂಕಾರ ಚಿಂತಿಸಿದ ೧೪

೧೧. ಒಳ್ಳೆಯ ಚೆಲುವಾದ ಬನವಸೆ ನಾಡಿನ ಬಳ್ಳಿಗಾವೆಯ ಭಕ್ತಿಭಾವುಕರೆಲ್ಲರಿಂದ ನಮಸ್ಕರಿಸಲ್ಪಟ್ಟವನಾಗಿ, ಸಮಸ್ತ ಸಂಪತ್ತುಗಳಿಂದ ಕೂಡಿ, ಎಲ್ಲರಿಂದ ಅಭಿನಂದನೆಗೆ ಪಾತ್ರನಾಗಿ, ತನಗೆ ಸಂತಾನಭಾಗ್ಯವೊಂದು ಇಲ್ಲವೇ ಎನ್ನುತ್ತಾ ಪುತ್ರಬಯಕೆಯ ಹೆಚ್ಚುಗೆಯಿಂದ ನಿರಹಂಕಾರ ಹೀಗೆಂದ : ೧೨. "ದಾನವಿಲ್ಲದ ಧರ್ಮ, ವಿಷಯಗಳ ಮೇಲಿನ ಹಿಡಿತವಿಲ್ಲದ ತಪ, ಜೀವಾತ್ಮ-ಪರಮಾತ್ಮ ಇವರ ನಡುವೆ ಅನುಸಂಧಾನವಿಲ್ಲದ ಯೋಗದ ಅಭ್ಯಾಸ ; ಜ್ಞಾನವಿಲ್ಲದ ಸಿದ್ಧಿ; ಶ್ರೇಷ್ಠ ಸಂತಾನವಿಲ್ಲದ ಬದುಕು-ಇವುಗಳಿಂದ ಸುಖವೇನು ದೊರಕುವುದು?" ಎಂದು ನಿರಹಂಕಾರ ಚಿಂತಿಸಿದನು. ೧೩. ಲೌಕಿಕರು ಇಹ-ಪರಲೋಕಗಳಲ್ಲಿ ತಮಗೆ ಸುಖವನ್ನೀವ ಮಗನನ್ನು ಬಯಸುವರು. ನಮಗೇಕೆ ಮಾಯೆಯಿಂದ ಆವೃತವಾದ ಪ್ರಪಂಚದ ದಾರಿ? ನಮಗೆ ಮುಕ್ತಿಯೊಂದನ್ನೇ ಕೊಡುವ ಶಾಂತಸ್ವರೂಪಿ ಮಗನಾಗಬೇಕು ಎಂದು ನಿರಹಂಕಾರ ಚಿಂತಿಸಿದನು. ೧೪. ಮಾಯಾ ಪ್ರಪಂಚದಲ್ಲಿ ಲಭಿಸುವ ಸತಿ ಸಂಭೋಗ ಸುಖ, ಜಪದ ಚಿಂತೆಯಲ್ಲಿ ನಿರತನಾಗಿ ಇರುವಿಕೆ ಮತ್ತು ತಪಸ್ಸಿನ ತಾಮಸ ಭಾವ-ಇವುಗಳೊಡನೆ ಹೋಲಿಸಲು ಅತಿ ಹೆಚ್ಚಿನ

ಆದೊಡಂತಃಕರಣವೃತ್ತಿಯ
ಹಾದಿಯನು ಪಲ್ಲಟಿಸಿ ಮೆಲ್ಲನೆ
ನಾದ-ಬಿಂದು-ಕಳಾಪ್ರಬಂಧದ ಬಲೆಗಳಲಿ ನುಸುಳಿ
ಆದರಿಸಿಯೆನಗಚಲಪದವನು
ವೇದಿಸುವ ಸತ್ಪುತ್ರನೊಬ್ಬನ
ಸಾಧಿಸುವೆನೆಂದೆನುತೆ ನಿರಹಂಕಾರನನುಗೆಯ್ದ ೧೫

ಸತಿಸಹಿತ ಸಂಕಲ್ಪಸಾಧನ
ಗತಿಯ ಮೇಳಾಪದಲಿ ನೆಱೆ ನಿ
ಶ್ಚಿತವ ಮಾಡಿ ಮನಸ್ಸಿನೇಕೋಭಾವನಿಷ್ಠೆಯಲಿ
ಪ್ರತಿಯಿಡುವ ಪಂಚೇಂದ್ರಿಯಂಗಳ
ನತಿಗಳೆವ ನಂದನನ ಬಯಕೆಯ
ಮತಿಗಳಲಿ ಸುಜ್ಞಾನಿ - ನಿರಹಂಕಾರರೊಪ್ಪಿದರು ೧೬

ಸಂತೆಯೊಳಗುಂಟೇ ಸಮಾಧಿಯ
ಸಂತತಾನಂದದ ಸುಖೋದಯ
ವೆಂತು ದೊರಕುವುದೆನುತೆ ಮಂದಿಯ ಕಳವಳವ ತೊಲಗಿ
ಸಂತತಿಯ ಸಂಕಲ್ಪದಿಂದೇ
ಕಾಂತವಾಸವ ಹೊಕ್ಕು ಮಿಗೆ ವಿ
ಶ್ರಾಂತಿಯಲಿ ಸುಜ್ಞಾನಿ-ನಿರಹಂಕಾರರೊಪ್ಪಿದರು ೧೭

ಜ್ಞಾನ ಸ್ವರೂಪಿಯೂ, ಚಾಂಚಲ್ಯವಿಲ್ಲದವನೂ ಆದ ಕುಮಾರನಿಲ್ಲವಲ್ಲಾ ಎಂದು ಅತಿಯಾಗಿ ಲೆಕ್ಕಾಚಾರ ಮಾಡುತ್ತಾ ನಿರಹಂಕಾರ ಚಿಂತಿಸಿದನು. ೧೫. ಆದಾಗ್ಯೂ ಚಿತ್ತವೃತ್ತಿಯ ದಾರಿಯನ್ನು ಬದಲಿಸಿ ಮೆಲ್ಲನೆ ನಾದ-ಬಿಂದು-ಕಳೆಗಳ ಸಂಬಂಧದ ಬಲೆಗಳಲ್ಲಿ ನುಸುಳಿ ಪ್ರೀತಿಯಿಂದ ನನಗೆ ಪರಮಪದವನ್ನು ಉಂಟುಮಾಡುವ ಸತ್ಪುತ್ರನೊಬ್ಬನನ್ನು ಪಡೆಯುವೆನೆಂದು ನಿರಹಂಕಾರ ಸಿದ್ಧನಾದನು. ೧೬. ಇಷ್ಟಾರ್ಥಸಿದ್ಧಿಯ ಮಾರ್ಗವನ್ನು ಸೇರುವ ಬಗೆಯನ್ನು ಸಂಪೂರ್ಣವಾಗಿ ಹೆಂಡತಿಯೊಡನೆ ನಿಶ್ಚಯಿಸಿ, ಮನಸ್ಸಿನ ಏಕೋಭಾವ ನಿಷ್ಠೆಯಲ್ಲಿ ಅಡ್ಡಬರುವ ಪಂಚೇಂದ್ರಿಯಗಳನ್ನು ತಿರಸ್ಕರಿಸುವ ಮಗನನ್ನು ಹಂಬಲಿಸುವ ಬುದ್ಧಿಯಿಂದ ಸುಜ್ಞಾನಿ ನಿರಹಂಕಾರರು ಶೋಭಿಸಿದರು. ೧೭. ಶಿವಯೋಗದಲ್ಲಿ ಮೈಮರೆಯುವುದರಿಂದ ಉಂಟಾಗುವ ಸದಾನಂದದ ಸುಖೋದಯವು ಗಡಿಬಿಡಿಯಿಂದ ಕೂಡಿದ ಸಂತೆಯೊಳಗೆ ಹೇಗೆ ದೊರೆಯಲು ಸಾಧ್ಯ? ಎಂಬ ಜನರ ಚಿಂತೆಯನ್ನು ನಿವಾರಿಸಿ ಸಂತತಿಯ ಸಂಕಲ್ಪದಿಂದ ಏಕಾಂತವಾಸಕ್ಕೆ ನಡೆದು ಹೆಚ್ಚಿನ ವಿಶ್ರಾಂತಿಯಿಂದ ಸುಜ್ಞಾನಿ-ನಿರಹಂಕಾರರು ಶೋಭಿಸಿದರು.

ಅನುಗೊಳಿಸಲಳವಟ್ಟ ಪದ್ಮಾ
ಸನದ ಹಸ್ತನ್ಯಸ್ತಲಿಂಗದ
ನೆನಹು ನೆಜಿಕೆ ಕರಿಗಟ್ಟಿದಂಗದ ನಟ್ಟ ದೃಷ್ಟಿಗಳ
ಮನದ ಮೇಳಗಳೊಳಗೆ ಸಿಕ್ಕದ
ಘನತರ ಪ್ರಾಣಾನಿಲನ ಸಾ
ಧನಸಮಾಧಿವಿಳಾಸದಲಿ ದಂಪತಿಗಳೊಪ್ಪಿದರು ೧೮

ಹೂಳಿಹೋಯಿತ್ತನ್ನಪಾನದ
ಮೇಲಣಿಚ್ಛೆಯನೇಕ ಪಜೆಯಲಿ
ಹಾಳುಬಿದ್ದುವು ಜಾಗ್ರ-ಸ್ವಪ್ನ-ಸುಷುಪ್ತಿಗಳ ಬಲುಹು
ಕೋಳುಹೋಯಿತು ಕರಣಗಳ ಕಾ
ಲಾಳು ಬೆಂಬಟ್ಟೆಯ ಸುಷುಮ್ನಾ
ನಾಳದಲಿ ದಂಪತಿಗಳನುಭವವಿರೆ ಸಮಾಧಿಯಲಿ ೧೯

ಆ ಸಮಾಧಿಯ ಭಾವದಲಿ ನವ
ಮಾಸ ಪೂರಿತವಾಗಿ ನೆನಹಿನ
ನೇಸಜಿನ ಬಲುಬಿಸಿಲು ಬೆಳಗಿದುದಂತರಂಗದಲಿ
ಲೇಸೆನಿಸಿ ಕಾಣಿಸುದುದೊಯ್ಯನೆ
ಬಾಸುರಶ್ರೀಮೂರ್ತಿಯೊಂದು ವಿ
ಳಾಸ ನಿರಹಂಕಾರ-ಸುಜ್ಞಾನಿಗಳ ಮನದೊಳಗೆ ೨೦

ಕಂಡರೇಕೋಭಾವದಲಿ ನಿಷ್
ಖಂಡ ಮಹಿಮನನಖಿಳ ಭವಭಯ
ಖಂಡನನಾದ್ಯಂತರಹಿತನನಪ್ರಮೇಯನನು
ಚಂಡಕರಕೋಟಿ ಪ್ರಕಾಶೋ
ದ್ದಂಡಮಯನ ಸುಹೃನ್ಮನೋಂಬುಜ
ಮಂಡಿತನನಾ ದಂಪತಿಗಳೊಲಿದಂತರಂಗದಲಿ ೨೧

೧೮. ಸರಿಯಾಗಿ ಹಾಕಿದ ಪದ್ಮಾಸನ, ಅಂಗೈಯಲ್ಲಿ ಇಡಲ್ಪಟ್ಟ ಲಿಂಗದ ನೆನಹು, ಚೆನ್ನಾಗಿ ಗಟ್ಟಿಗೊಂಡ ಅಂಗ, ಲಿಂಗದಲ್ಲಿ ಕೀಲಿಸಿದ ದೃಷ್ಟಿ, ಮನಸ್ಸಿನ ಚಾಂಚಲ್ಯಗಳಿಗೆ ವಶವಾಗದ ಘನತರವಾದ ಪ್ರಾಣವಾಯುವಿನ ಸಾಧನೆಯ ಯೋಗ-ಇವುಗಳ ಸೊಗಸಿನಿಂದ ದಂಪತಿಗಳು ಶೋಭಿಸಿದರು. ೧೯. ಯೋಗದಲ್ಲಿ ಸುಷುಮ್ನಾನಾಳದಲ್ಲಿ ದಂಪತಿಗಳ ಅನುಭವವಿರಲು ಅನ್ನ ಪಾನದ ಮೇಲಿನ ಬಯಕೆ ನಾಶವಾದುವು. ಅನೇಕ ರೀತಿಯಲ್ಲಿ ಜಾಗ್ರತ್-ಸ್ವಪ್ನ-ಸುಷುಪ್ತಿಗಳೆಂಬ ಮನದ ಅವಸ್ಥೆಗಳ ಸಾಮರ್ಥ್ಯ ಹಾಳಾದುವು. ೨೦. ಯೋಗದಲ್ಲಿ ಮೈಮರೆತ ಆ ಭಾವದಲ್ಲಿ ಒಂಬತ್ತು ತಿಂಗಳು ಕಳೆದು ಜ್ಞಾನವೆಂಬ ಸೂರ್ಯನ ಹಿರಿದಾದ ಬಿಸಿಲು ಅಂತರಂಗದಲ್ಲಿ ಬೆಳಗಿತು. ಒಳಿತಾಗಿ, ಮೆಲ್ಲನೆ ನಿರಹಂಕಾರ- ಸುಜ್ಞಾನಿಗಳ ಮನದೊಳಗೆ ಅತ್ಯಂತ ಪ್ರಕಾಶಭರಿತವಾದ ಶ್ರೀಮೂರ್ತಿಯೊಂದು ಕಾಣಿಸಿತು. ೨೧. ನಿರಾಕಾರಿಯಾದ ಮಹಿಮನನ್ನು, ಎಲ್ಲ ಭವಗಳ ಭಯವನ್ನು ನಿವಾರಿಸುವವನನ್ನು, ಆದಿ-ಅಂತ್ಯಗಳಿಲ್ಲದವನನ್ನು, ಅಳೆಯಲಾಗದವನನ್ನು, ಪ್ರಖರವಾದ ಕೋಟಿಸಂಖ್ಯೆಯ

ಕರಣಗಳು ಕಾಲಿಡಲು ನೇತ್ರದ
ಬರಿಮುಗುಳು ಬಿಚ್ಚಿದುವು ನಾಡಿಯ
ಹೊರಳಿ ಹುರಿಗೊಳಿಸಿದುವು ಚೇಷ್ಟಿಸಿ ಬಾಹಿರಂಗದಲಿ
ಅರಳಿದುದು ಮನದಜಿಕೆ ಭೋಂಕನೆ
ಹೊರೆಯಲಿಹ ಬಾಲಕನ ಕಂಡರು
ಪರಮ ನಿರಹಂಕಾರ-ಸುಜ್ಞಾನಿಗಳು ಹರುಷದಲಿ ೨೨

ಬಿಸಿಲ ಬೇಜಿಟ್ಟಳೆಗಿಳಿದು ಶೋ
ಭಿಸುವ ಸೂರ್ಯನೊ ಹಿಮವನತಿಗಳೆ
ದೆಸೆವ ಚಂದ್ರನೊ ನೆಟ್ಟನಾಶ್ರಿತಭಕ್ಷಗುಣವಳಿದು
ಮಿಸುಗುವಗ್ನಿಯೊ ಪೇಳೆನಲು ರಂ
ಜಿಸುವ ತೇಜೋಮಯದ ಬಾಲಕ
ನೆಸೆದನಾ ಸುಜ್ಞಾನಿ ನಿರಹಂಕಾರರಿದಿರಿನಲಿ ೨೩

ಹೊಗಳಿ ಹೋರುವ ವೇದಶಾಸ್ತ್ರದ
ಬಗೆಗೆ ಬಾರದ ಹರಿವಿರಿಂಚಾ
ದಿಗಳು ಸಾಧಿಸಿ ಕಾಣಲಜೆಯದ ಪರಮಮುನಿನಿಕರ
ಮೊಗಸಿ ಮಾಡುವ ತಪಕೆ ನಿಲುಕದ
ಸಗುಣ ನಿರ್ಗುಣಮೂರ್ತಿಯಲ್ಲದ
ವಿಗಡಶಿಶುವನು ಕಂಡರಾ ದಂಪತಿಗಳಳ್ತಿಯಲಿ ೨೪

ಕಿರಣಗಳಿಂದ ಅತ್ಯಂತ ಪ್ರಕಾಶಭರಿತನಾಗಿರುವವನನ್ನು, ಭಕ್ತರ ಹೃದಯಕಮಲದಲ್ಲಿ ನೆಲಸಿರುವವನನ್ನು ಆ ದಂಪತಿಗಳು ತಮ್ಮ ಅಂತರಂಗದಲ್ಲಿ (ಕಂಡು) ಪ್ರೀತಿಸಿದರು. ೨೨. ಇಂದ್ರಿಯಗಳು ಪ್ರವೇಶಿಸಲು ಕಣ್ಣುಗಳೆಂಬ ಹೂಮೊಗ್ಗು ಅರಳಿತು; ನಾಡಿಯನ್ನು ಹೊರಳಿಸಿ ಹಗ್ಗದಂತೆ ಹೆಣೆದುವು! ಮನಸ್ಸಿನ ಬಯಕೆ ಬಹಿರಂಗದಲ್ಲಿ ವಿಲಾಸಯುಕ್ತವಾಗಿ ಅರಳಿತು. ತಕ್ಷಣ ತಮ್ಮ ಪಕ್ಕದಲ್ಲಿರುವ ಬಾಲಕನನ್ನು ಶ್ರೇಷ್ಠ ದಂಪತಿಗಳಾದ ನಿರಹಂಕಾರ-ಸುಜ್ಞಾನಿಗಳು ಸಂತೋಷದಿಂದ ಕಂಡರು. ೨೩. ಬಿಸಿಲೇ ಬೇರು ಬಿಟ್ಟು ಭೂಮಿಗಿಳಿದು ಶೋಭಿಸುವ ಸೂರ್ಯನೊ, ಹಿಮವನ್ನು ತಿರಸ್ಕರಿಸಿ ಶೋಭಿಸುವ ಚಂದ್ರನೊ, ನೇರವಾಗಿ ತನ್ನಲ್ಲಿ ಆಶ್ರಯಿಸಲು ಬಂದದ್ದನ್ನು ಭಕ್ಷಿಸುವ ತನ್ನ ಸ್ವಭಾವಸಹಜಗುಣವನ್ನು ಬಿಟ್ಟು ಪ್ರಕಾಶಿಸುವ ಅಗ್ನಿಯೊ ಹೇಳು ಎನ್ನುವಂತೆ ಬೆಳಗುವ ತೇಜೋಭರಿತ ಬಾಲಕನು ಸುಜ್ಞಾನಿ ನಿರಹಂಕಾರರ ಇದಿರಿನಲ್ಲಿ ಶೋಭಿಸಿದನು. ೨೪. ಹೊಗಳಿ ಕಾದಾಡುವ ವೇದಶಾಸ್ತ್ರಗಳ, ತಿಳುವಳಿಕೆಗೆ ಬಾರದ ವಿಷ್ಣು, ಬ್ರಹ್ಮ ಮೊದಲಾದವರು ಸಾಧಿಸಿ ಕಾಣಲಾಗದ, ಶ್ರೇಷ್ಠರಾದ ಮುನಿಗಳ ಸಮೂಹವು ಶ್ರಮವಹಿಸಿ ಮಾಡುವ ತಪಸ್ಸಿಗೆ ನಿಲುಕದ, ಸಗುಣ ನಿರ್ಗುಣ ಮೂರ್ತಿಯಲ್ಲದ ವಿಚಿತ್ರ ಶಿಶುವನ್ನು ಆ ದಂಪತಿಗಳು ಪ್ರೀತಿಯಿಂದ ಕಂಡರು.

ಸುರರು ಹೂಮಳೆಗಱೆದರಾಗಳು
ನೆರೆದು ನುಡಿದುವು ದೇವದುಂದುಭಿ
ಪರಮ ಮುನಿಜನದಂತರಂಗದಲಾದುದುತ್ಸಾಹ
ಕೊರಡುಗಳು ಕೊನರಿದುವು ಕಱೆಯದ
ಬರಡುಗಳು ಪಯನಾದವೆಮ್ಮಯ
ಗುರು ಗುಹೇಶ್ವರನಿಳೆಗೆ ಮೆಱೆವ ಕತದಿಂದೆ ೨೫

ಭಾಪು ಘನಗುರುಲಿಂಗಮೂರ್ತಿಯೆ
ಭಾಪು ಜಂಗಮಲಿಂಗಮೂರ್ತಿಯೆ
ಭಾಪು ಶಿವಲಿಂಗಪ್ರಕಾಶ ವ್ಯೋಮಮೂರುತಿಯೆ
ಭಾಪುರೇ ಎಂದೆನುತಲಾ ಚಿ
ದ್ರೂಪಶಿಶುವನು ಕಂಡು ಹಿಗ್ಗಿದ
ನಾ ಪುರಾತನನೆನಿಪ ನಿರಹಂಕಾರನಳ್ತಿಯಲಿ ೨೬

ಹಾರವಿಸಿ ನಲಿದೆತ್ತೆ ಕಿಂಚಿತು
ಭಾರವಿಲ್ಲದೆ ಕೈಗೆ ಸೋಂಕದೆ
ಸಾರತೇಜಃಪುಂಜತನು ಶಿಶು ತನ್ನ ಕೈಯೊಳಗೆ
ಪೂರವಿಸಿಕೊಂಡಿರಲು ಬಳಿಕಾ
ನಾರಿ ವಿಸ್ಮಯವಾಗಿ ನಿರಹಂ
ಕಾರನನು ಕೇಳಿದಳಿದೇನೆನುತಾತ್ಮಜನ ಪರಿಯ ೨೭

ಈತನಾರೆಂಬೊಡೆ ಸದಾ ಸಾ
ಕ್ಷಾತವವನಿಜಲಾನಲಾನಿಲ
ಭೂತತತ್ವವಿದೂರ ಪರಮಾನಂದರಸಭರಿತ
ಜಾತನಲ್ಲ ವಿಚಾರಿಸುವೊಡೆಯ
ಜಾತನಲ್ಲೆಂದೆನುತಲುಪಮಾ
ತೀತನೀ ಶಿಶುವೆಂದ ನಿರಹಂಕಾರ ನಿಜಸತಿಗೆ ೨೮

೨೫. ನಮ್ಮ ಗುರುವಾದ ಗುಹೇಶ್ವರನು ಭೂಮಿಯಲ್ಲಿ ರೂಪುಗೊಂಡು ಶೋಭಿಸಿದ ಕಾರಣದಿಂದ ದೇವತೆಗಳು ಹೂಮಳೆ ಸುರಿಸಿದರು. ಆಗಲೇ ದೇವದುಂದುಭಿ ಮೊಳಗಿತು. ಶ್ರೇಷ್ಠ ಮುನಿಜನಗಳ ಮನದಲ್ಲಿ ಉತ್ಸಾಹ ಉಂಟಾಯಿತು, ಕೊರಡುಗಳು ಚಿಗುರಿದುವು. ಗೊಡ್ಡಾಕಳು ಹಾಲು ಕರೆಯಿತು. ೨೬. ಭಳಿರೆ ಘನ ಗುರುಲಿಂಗಮೂರ್ತಿಯೆ; ಭಳಿರೆ ಜಂಗಮ ಲಿಂಗಮೂರ್ತಿಯೆ; ಭಳಿರೆ ಪ್ರಕಾಶಭರಿತನಾದ ಆಕಾಶವೇ ರೂಪುಗೊಂಡ ಶಿವಲಿಂಗವೆ ಎಂದು ಹೇಳುತ್ತಾ ಆ ಸುಜ್ಞಾನ ಶಿಶುವನ್ನು ಕಂಡು ಪುರಾತನನಾದ ನಿರಹಂಕಾರನು ಪ್ರೀತಿಯಿಂದ ಹಿಗ್ಗಿದನು. ೨೭. ಆಶಿಸಿ ಸಂತೋಷದಿಂದ ಮಗುವನ್ನು ಮೇಲೆತ್ತಲು ಸ್ವಲ್ಪವೂ ಭಾರವಿಲ್ಲದೆ, ಕೈಗೆ ಸೋಕದೆ ಕಾಂತಿಯ ಮೊತ್ತವಾದ ಶಿಶು ತನ್ನ ಕೈಯಲ್ಲಿ ತುಂಬಿ ಇರಲು ಆಶ್ಚರ್ಯಗೊಂಡ ಸುಜ್ಞಾನಿ ನಿರಹಂಕಾರನನ್ನು ಕುರಿತು ಮಗನ ರೀತಿ ಇದೇನೆಂದು ಕೇಳಿದಳು. ೨೮. ನಿರಹಂಕಾರ ತನ್ನ ಹೆಂಡತಿಗೆ "ಈತನಾರೆಂದರೆ ಯಾವಾಗಲೂ ಶಿವಜ್ಞಾನಿಗಳಿಗೆ ಗೋಚರನು; ಭೂಮಿ, ಜಲ, ಅಗ್ನಿ, ವಾಯು (ಆಕಾಶ) ಎಂಬ ಪಂಚಭೂತಾತ್ಮಕನು; ದೇಹವಿಲ್ಲದವನು; ಪರಮಾನಂದರಸಭರಿತನು; ಹಿಂದೆ

ಬಲ್ಲೊಡೀ ಶಿಶುವೇತಱೊಳಗಿಹ
ನಲ್ಲ ಹೊರಗಹನಲ್ಲ ಭಾವಿಸ
ಲಲ್ಲದಿರುತಿಹನಲ್ಲವೆನುತಾ ತಂದೆತಾಯಿಗಳು
ಎಲ್ಲ ಜಾಡ್ಯದ ಜಂಜಡಂಗಳ
ನಲ್ಲವೆನಿಸುವ ಬಾಲಕಗೆ ಬಳಿ
ಕಲ್ಲಮಪ್ರಭುವೆಂದು ಹೆಸರನು ಕೊಟ್ಟರರ್ತಿಯಲಿ ೨೯

ಗಳಿಗೆ ಸಂಖ್ಯೆಗೆ ನುಡಿಯ ಕಲಿತನು
ಗಳಿಗೆ ಸಂಖ್ಯೆಗೆ ನಡೆಯ ಕಲಿತನು
ಗಳಿಗೆ ಸಂಖ್ಯೆಗೆ ಬಳೆದನವರ ಮನೋರಥದ ಕೂಡೆ
ಗಳಿಗೆ ಸಂಖ್ಯೆಗೆ ಬಾಲಲೀಲೆಯ
ನಳವಡಿಸಿ ಕೊಂಡಾಡುತಿಹ ಮ
ಕ್ಕಳಲಿ ಮೆಱೆವುತಲಿರ್ದನಲ್ಲಮ ತನ್ನ ಲೀಲೆಯಲಿ ೩೦

ಚಂಡ ಭವದಲಿ ಬಗೆದು ಭಾವಿಸಿ
ಖಂಡ ವಿಧಿಯಲಿ ಸುಖವ ಬಯಸುವ
ಭಂಡ ಭವಿ ಭರದಿಂದ ಭೂಮಿ ಸ್ವರ್ಗವನು ತಾಗಿ
ಕಂಡು ಉಂಡೆಡೆಯಾಡುವನು ಮೂ
ಚಂಡಿಯೀಪರಿಯೆನುತಲಾ ಹೊಡೆ
ಚಂಡನಲ್ಲಮನಾಡುತಿರ್ದನು ಬಾಲಲೀಲೆಯಲಿ ೩೧

ಇಲ್ಲದೆ ಈಗ ಹೊಸದಾಗಿ ಹುಟ್ಟಿದವನಲ್ಲ; ವಿಚಾರಮಾಡಲು ಹುಟ್ಟದೇ ಇರುವವನೂ ಅಲ್ಲ (ಅಂದರೆ ಚಿಚ್ಛಕ್ತಿ ಸಮೇತನಾಗಿ ಸಕಲನಾಗದೇ ಇರತಕ್ಕವನಲ್ಲ); ಹೋಲಿಕೆಗೆ ಮೀರಿದವನು; ಪರಬ್ರಹ್ಮವೇ ಈ ಶಿಶು" ಎಂದನು. ೨೯. ತಿಳಿವುದಾದರೆ, ಈ ಶಿಶು ಎಲ್ಲದರಲ್ಲೂ ಕಾಣಿಸಿಕೊಳ್ಳುವುದರಿಂದ ಇದ್ದಾನೆ ಎಂಬ ಭಾವನೆಗೂ ಮೀರಿದವನು; ಕಾಣಿಸಿಕೊಳ್ಳದೆ ಇರುವುದರಿಂದ ಇಲ್ಲ ಎಂಬ ಭಾವನೆಗೂ ಮೀರಿದವನು. ವಿಚಾರ ಮಾಡಲು ಈತ ಇಲ್ಲದೆ ಇರುತ್ತಿರುವನು. ಈತ ಮೊದಲು ಇಲ್ಲದೆ ಹೊಸದಾಗಿ ಬಂದು ಸೇರಿಕೊಂಡವನೂ ಅಲ್ಲ (ಅನಾದಿ) ಎಂದು ತಂದೆ ತಾಯಿಗಳು (ತಿಳಿದು) ಎಲ್ಲ (ಬಗೆಯ) ಬೇನೆ, ಚಿಂತೆಗಳನ್ನು ತಿರಸ್ಕರಿಸುವ ಬಾಲಕನಿಗೆ ಬಳಿಕ ಪ್ರೀತಿಯಿಂದ ಅಲ್ಲಮಪ್ರಭುವೆಂಬ ಹೆಸರನ್ನು ಇಟ್ಟರು. ೩೦. ಅವರ ಇಚ್ಛೆಯೊಂದಿಗೆ ಕೆಲವು ಗಳಿಗೆಗಳಲ್ಲೇ ನುಡಿಯಲು ಕಲಿತನು; ಕೆಲವು ಗಳಿಗೆಗಳಲ್ಲೇ ನಡೆಯಲು ಕಲಿತನು; ಕೆಲವು ಗಳಿಗೆಗಳಲ್ಲೇ ಬೆಳೆದನು; ಕೆಲವು ಗಳಿಗೆಗಳಲ್ಲೇ ಬಾಲಲೀಲೆಯನ್ನು ಹೊಂದಿಸಿಕೊಂಡು ಜೊತೆಯಲ್ಲಿ ಆಡುವ ಮಕ್ಕಳ ನಡುವೆ ತನ್ನ ಲೀಲೆಗಳಿಂದ ಶೋಭಿಸುತ್ತಲಿದ್ದನು. ೩೧. ಅಲ್ಲಮನು ಬಾಲಲೀಲೆಯಿಂದ ಹೊಡೆಚೆಂಡಾಟವಾಡುತ್ತಿದ್ದನು. ಆ ಚೆಂಡು ಮೇಲಕ್ಕೆ ಹೋಗುವುದು ಮತ್ತೆ ಕೆಳಕ್ಕೆ ಬರುವುದು ಪೂರ್ವಜನ್ಮದ ದುಷ್ಕರ್ಮದಿಂದ ಭೂಮಿಗೆ ಬಂದು ಭಂಡಭವಿಯಾದ ಮೂಚಂಡಿಯು (= ವ್ಯಕ್ತಿಯು) ಊಟ-ಒಡನಾಟಗಳಲ್ಲಿ ತೊಡಗಿ ಪುಣ್ಯಾಂಶದಿಂದ ಸ್ವರ್ಗಕ್ಕೆ ಹೋಗುವುದು, ಪುಣ್ಯಫಲ

ವಾಯುಸೂತ್ರದಲಿಂದು ರವಿ ಚ
ಕ್ರಾಯುಧಂಗಳು ತಿರುಗುತಿರ್ದೊಡೆ
ಬೀಯವಹವವ ನಿಲಿಸಲರಿಯದ ಭವಿಗಳಾಯುಷ್ಯ
ಈಯವಸ್ಥೆಯುಲೆನುತ ಶಿಕ್ಷೋ
ಪಾಯದಿಂದಿಕ್ಕಯ್ಯಲಾ ಪ್ರಭು
ರಾಯ ಚಕ್ರವ ತಿರುಹುತಿರ್ದನು ಬಾಲಲೀಲೆಯಲಿ ೩೨

ಆತನೋದದ ವೇದಶಾಸ್ತ್ರಸ
ಮೇತವಾತನ ನಾಲಗೆಯ ತುದಿ
ಗಾತು ಬೆಸನನು ಬೇಡುತಿಹವಾತನ ಪದಾಬ್ಜದಲಿ
ಓತು ಸತ್ಕೃತಿನಿಕರಗಳು ಕ
ಯ್ಯಾತು ನೇಮವ ಹಾರುತಿಪ್ಪುವು
ಭೂತಳದೊಳಲ್ಲಮನ ಬೆಳವಿಗೆ ಬೆಳಸಿತಚ್ಚರಿಯ ೩೩

ಜೋಡಿಗಚ್ಚರಿಯಾದ ಬಾಲ
ಕ್ರೀಡೆಗಕ್ಕಜಗೊಂಡು ಕಂಡವ
ರಾಡಿಕೊಳುತಿರೆ ಕಣ್ಣುಗಿಸುಅಹುದೆಂದು ಮೋಹದಲಿ
ನೋಡಿ ತೂಪಿಜೆದಕ್ಕಜಿಲಿ ಕೊಂ
ಡಾಡಿ ಕರಸಂತೋಷದಲಿ ಕೈ
ಗೂಡಿ ಬಣ್ಣಿಸಿ ಜನನಿ ಜನಕರು ಕರೆದರಲ್ಲಮನ ೩೪

ತೀರಿದ ಮೇಲೆ ಮರಳಿ ಭೂಮಿಗೆ ಬರುವುದು-ಇದನ್ನು ತೋರಿಸುತ್ತಿತ್ತು. ೩೨. ವಾಯುಮಂಡಲದಲ್ಲಿ ಚಂದ್ರಸೂರ್ಯರು ಒಂದು ಗೊತ್ತಾದ ಕ್ರಮದಲ್ಲಿ ಚಕ್ರಾಕಾರದಲ್ಲಿ ಸುತ್ತುತ್ತಿರುವುವು. ಅವನ್ನು ನಿಲ್ಲಿಸಲಾಗದ ಮನುಷ್ಯರ ಆಯಸ್ಸು ವ್ಯರ್ಥ. ಈ ಅವಸ್ಥೆಯಲ್ಲಿ ಜನರಿಗೆ ಯೋಗ್ಯ ಶಿಕ್ಷಣವನ್ನು ಕೊಡುತ್ತಿರುವನೋ ಎಂಬಂತೆ ಅಲ್ಲಮನ ಬಾಲಲೀಲೆಯಿಂದ ಎರಡೂ ಕೈಗಳಿಂದ ಚಕ್ರವನ್ನು ತಿರುಗಿಸುತ್ತಿದ್ದನು ೩೩. ಆತ ಓದದ ವೇದಶಾಸ್ತ್ರಗಳೆಲ್ಲವೂ ಅವನ ನಾಲಗೆಯ ತುದಿ ಸೇರಿ ಆಜ್ಞೆಯನ್ನು ಬೇಡುತ್ತಿರುವುವು. ಒಳ್ಳೆಯ ಕಾರ್ಯಗಳು ಅವನ ಪಾದಕಮಲಗಳಲ್ಲಿ ಪ್ರೀತಿಯಿಂದ ಆಜ್ಞೆಯನ್ನು ನಿರೀಕ್ಷಿಸುತ್ತಿರುವುವು. ಹೀಗೆ ಭೂಮಂಡಲದಲ್ಲಿ ಅಲ್ಲಮನ ಬೆಳವಣಿಗೆ ಅಚ್ಚರಿಯನ್ನು ಹೆಚ್ಚಿಸಿತು. ೩೪. ವಾಡಿಕೆಗೆ ಅಚ್ಚರಿಯಾದ ಬಾಲಲೀಲೆಗಳಿಗೆ ಆಶ್ಚರ್ಯಗೊಂಡು ಅದನ್ನು ನೋಡಿದವರು ಆಡಿಕೊಳ್ಳುತ್ತಿರಲು, ದೃಷ್ಟಿತಾಗುವುದೆಂದು ಮೋಹದಿಂದ ನೋಡಿ, ಉಃಪ್ ಎಂದು ಊದಿ, ಪ್ರೀತಿಯಿಂದ ಹೊಗಳಿ, ಅತ್ಯಾನಂದ ದಿಂದ ಕೈಕೊಡಿಸಿ, ಬಣ್ಣಿಸಿ ತಂದೆ ತಾಯಿಯರು ಮಗನಾದ ಅಲ್ಲಮನನ್ನು ಕರೆದರು.

ವಿಮಲಮುನಿಗಳ ವರಸಮಾಧಿಗೆ
ಸಮಯವಿಲ್ಲದ ದೇವ ಬಾರೈ
ದ್ಯುಮಣಿಶಿಖಿ ಶಶಿಕೋಟಿತೇಜೋಮೂರ್ತಿಮಯ ಬಾರೈ
ಕಮಲಸಂಭವ ವಿಷ್ಣು ಮೊದಲಾ
ದಮರರಜೆವಿಗೆ ನಿಲುಕದಿಹ ನಿರು
ಪಮನೆ ಬಾರೆನುತವರು ಬಣ್ಣಿಸಿ ಕರೆದರಲ್ಲಮನ ೩೫

ಹರುಷದಿಂದಲಿ ಜನನಿಜನಕರು
ಕರೆಯುತಿರಲಾ ಬಾಲಭಾವದ
ಪರಿಯನಾಗಳೆ ಬಿಸುಟು ಸಾಕಿನ್ನೆನುತ ನಡೆತಂದು
ವರಗುರು ಶ್ರೀಮೂರ್ತಿಯಾಗಿಯೆ
ಪರಮ ತತ್ವನಿರೂಪಣೆಯ ವಿ
ಸ್ತರಿಸಲುದ್ಯೋಗಿಸಿದನಲ್ಲಮ ತನ್ನ ಲೀಲೆಯಲಿ ೩೬

ಕೇಳಿರೇ ನಿಮ್ಮಯ ಸಮಾಧಿಯ
ಕೇಳಿಗೋಸುಗವಾನು ರೂಪಿಸಿ
ಬಾಲಭಾವಚ್ಛವಿಯ ತೋಱಿದೆನಿನ್ನು ಸಾಕೆನಗೆ
ಲೀಲೆಯಿಂದಲಿಯೆನ್ನ ನಿಜದ ನಿ
ರಾಳ ನಿಶ್ಚಲ ನಿತ್ಯಸುಖಿಸ
ಮ್ಮೇಳದಲಿ ನಾನಾಡುತಿಹೆನೆನುತಿರ್ದನಲ್ಲಮನು ೩೭

ಆವ ತೆಱದಿಂದಾದೊಡೆಯು ಮ
ತ್ಸೇವೆಗೊಲಿದೀ ಪರಿಯಲಾ ಪರ
ದೈವವೇ ಪ್ರತ್ಯಕ್ಷವಾಗಿಯೆ ತೋಱಿಯಗಲಿದೊಡೆ
ನಾವು ನಮ್ಮಯ ಸದುಗತಿಯ ಸಂ
ಭಾವಿಸುವೆವೆಂದೆನುತಲಲ್ಲಮ
ದೇವಗೊಲಿದಾ ಜನನಿ ಜನಕರು ನುಡಿದರಭಿಮತವ ೩೮

೩೫. ಪರಿಶುದ್ಧವಾದ ಮುನಿಗಳ ಶ್ರೇಷ್ಠವಾದ ಯೋಗಕ್ಕೆ (ಒಲಿದು ದರುಶನವೀಯಲು) ಸಮಯವಿಲ್ಲದ ದೇವ ಬಾರಾ ; ಕೋಟಿ ಸೂರ್ಯ ಅಗ್ನಿ ಚಂದ್ರರ ತೇಜೋ ಮೂರ್ತಿಯಾಗಿರುವವನೇ ಬಾರಾ; ಬ್ರಹ್ಮ ವಿಷ್ಣು ಮೊದಲಾದ ದೇವತೆಗಳ ಜ್ಞಾನಕ್ಕೆ ನಿಲುಕದಿರುವ ಉಪಮಾತೀತನೇ ಬಾರಾ ಎನ್ನುತ್ತ ಅವರು ಅಲ್ಲಮನನ್ನು ಕರೆದರು. ೩೬. (ಹೀಗೆ) ಹರುಷದಿಂದ ತಂದೆ ತಾಯಿಯರು ಕರೆಯುತ್ತಿರಲು ಇದು ಇನ್ನು ಸಾಕು ಎಂದು ಆಗಲೇ ಆ ಬಾಲಭಾವವನ್ನು ತೊರೆದು ಪರಮಗುರು ಅಲ್ಲಮನು ಶ್ರೀಮೂರ್ತಿಯಾಗಿ ನಡೆದು ಬಂದು ಶ್ರೇಷ್ಠವಾದ ತತ್ವನಿರೂಪಣೆಯನ್ನು ತನ್ನ ಲೀಲೆಯಲ್ಲಿ ವಿಸ್ತರಿಸಿ ಹೇಳಲು ತೊಡಗಿದನು. ೩೭. "ಕೇಳಿರೇ, ನಿಮ್ಮ ಧ್ಯಾನಸಮಾಧಿಯ ಆಟಕ್ಕೆ ಒಲಿದು ಲೀಲೆಯಿಂದ ರೂಪುಧರಿಸಿ ನಾನು ಬಾಲಭಾವದ ಕಾಂತಿಯನ್ನು ತೋರಿದೆನು. ಇನ್ನು ಇದು ನನಗೆ ಸಾಕು. ವಿಲಾಸದಿಂದ ನಾನು ನನ್ನ ನಿತ್ಯ ನಿಶ್ಚಿಂತ ನಿಶ್ಚಲ ಪರಮಸುಖದ ಕೂಡಿಕೆಯಲ್ಲಿ ಆಡುತ್ತಿರುವೆನು ಎಂದು ಅಲ್ಲಮ ಹೇಳುತ್ತಿದ್ದನು. ೩೮. ಯಾವ ರೀತಿಯಲ್ಲಾದರೂ ನಮ್ಮ ಸೇವೆಗೆ ಒಲಿದು ಈ ಪರಿಯಲ್ಲಿ ಆ ಪರಮಾತ್ಮನೇ ಪ್ರತ್ಯಕ್ಷವಾಗಿ

ಬಗೆಯೆ ನಿರಹಂಕಾರ ಸುಜ್ಞಾ
ನಿಗಳ ಮೇಳವನೊಲ್ಲದಾ ಪ್ರಭು
ವಗಲಿ ತಾನಿರಬಲ್ಲನೇ ಬೇಕಾದೊಡೀ ಹದನ
ನಿಗಮದಲಿ ಶಾಸ್ತ್ರದಲಿಯನುಭಾ
ವಿಗಳ ನುಡಿಯಲಿ ಕೇಳುವುದು ನಾ
ನಗಲೆ ನಿಮ್ಮುವನೆಂದನಲ್ಲಮ ಜನನಿಜನಕರಿಗೆ ೩೯

ಬಳಿಕ ತತ್ವವಿವೇಕವೆಲ್ಲವ
ನಳವಡಿಸಿ ಕೊಟ್ಟೈಕ್ಯಭಾವ
ಸ್ಥಳವ ಕಾಣಿಸಿ ದೃಷ್ಟದಲಿ ಪರಿಪೂರ್ಣಮಯರೆನಿಸಿ
ಇಳೆಯೊಳಾ ಸುಜ್ಞಾನಿದೇವಿಗೆ
ನಲಿದು ನಿರಹಂಕಾರದೇವಗೆ
ತಿಳಿಹಿ ನಿತ್ಯವನಿತ್ತನಲ್ಲಮಲಿಂಗ ಲೀಲೆಯಲಿ ೪೦

ಪಡೆವೊಡೀಪರಿ ಬೇಹ ಮಕ್ಕಳ
ಪಡೆದು ಪರಿಣಮಿಸುವುದು ತಪದಲಿ
ನಡೆವುದೀ ಪರಿ ನಿಜ ಸಮಾಧಿಯ ನಿಲವ ನಿಲುಕುವುದು
ಹಿಡಿವೊಡೀಪರಿ ವಾಯುಮನಗಳ
ಹಿಡಿದು ಸುಖದಲಿ ಸುಳಿವುದೆನುತಲಿ
ಪೊಡವಿ ನಿರಹಂಕಾರ ಸುಜ್ಞಾನಿಗಳ ಪೊಗಳಿದರು ೪೧

ತನ್ನ ಲೀಲೆಯನ್ನು ತೋರಿ ಅಗಲಿದರೆ ನಾವು ನಮ್ಮ ಸದ್ಗತಿಯನ್ನು ಆಶಿಸಬಲ್ಲೆವೆ? ಎಂದೆನ್ನುತ ಅಲ್ಲಮದೇವನಿಗೆ ಪ್ರೀತಿಯಿಂದ ತಂದೆ ತಾಯಿಯರು ತಮ್ಮ ಅಭಿಪ್ರಾಯವನ್ನು ತಿಳಿಸಿದರು. ೩೯. ವಿಚಾರಮಾಡಲು ನಿರಹಂಕಾರ-ಸುಜ್ಞಾನಿಗಳ ಕೂಟವನ್ನು ಬಯಸದೆ ಪ್ರಭು (ಅವರನ್ನು) ಆಗಲಿ ಇರಬಲ್ಲನೆ? ಬೇಕಾದರೆ ಈ ವೃತ್ತಾಂತವನ್ನು ವೇದಶಾಸ್ತ್ರಗಳಲ್ಲಿ, ಅನುಭಾವಿಗಳ ನುಡಿಯಲ್ಲಿ ಕೇಳಿ ತಿಳಿಯುವುದು. ನಾನು ನಿಮ್ಮನ್ನು ಅಗಲಲಾರೆ ಎಂದು ತಾಯಿ ತಂದೆಯರಿಗೆ ಅಲ್ಲಮ ನುಡಿದನು. ೪೦. ಅನಂತರ ಅಲ್ಲಮನು 'ನಿರಹಂಕಾರ - ಸುಜ್ಞಾನಿಗಳಿಗೆ ಪ್ರೀತಿಯಿಂದ ತತ್ವವಿವೇಕಗಳೆಲ್ಲವನ್ನು ಅಳವಡಿಸಿಕೊಟ್ಟು, ಐಕ್ಯ ಭಾವಸ್ಥಳಗಳು ಅನುಭವಕ್ಕೆ ಗೋಚರವಾಗಿ, ಪರಿಪೂರ್ಣಮಯರೆನ್ನಿಸುವಂತೆ ಮಾಡಿ (ಮುಕ್ತಿಯ ಪಥವನ್ನು) ತಿಳಿಸಿ ಅವರಿಗೆ ತನ್ನ ಲೀಲೆಯಿಂದ ಸಾಯುಜ್ಯಪದವನ್ನಿತ್ತನು. ೪೧. ಪಡೆಯುವುದಾದರೆ ಈ ರೀತಿ ಬೇಕಾದ ಮಕ್ಕಳನ್ನು ಪಡೆದು ತೃಪ್ತರಾಗುವುದು. ತಪಸ್ಸಿನಲ್ಲಿ ತೊಡಗುವುದು. ಈ ರೀತಿಯ ಯೋಗದ ಸ್ಥಿತಿಗೆ ಮುಟ್ಟುವುದು. ಹಿಡಿಯುವುದಾದರೆ ಈ ರೀತಿ ವಾಯು-ಮನಗಳನ್ನು ಹಿಡಿದು ಸುಖದಲ್ಲಿ ವಿಹರಿಸುವುದು ಎಂದು ಲೋಕದ ಜನರು ನಿರಹಂಕಾರ-ಸುಜ್ಞಾನಿಗಳನ್ನು ಹೊಗಳಿದರು.

ಆದು ನಿಮಿತ್ತದಲಲ್ಲಮನ ಕರು
ಣದಲಿ ಪಡೆವುದು ಸಚ್ಚಿದಾನಂ
ದದ ನಿರಾಕುಳ ನಿತ್ಯಪದವನು ಗಿರಿಜೆ ಕೇಳೆಂದು
ಮುದದಲೀಶ್ವರನೊರೆದನಂದಾ
ನದನು ಕೇಳಿದು ಬಲ್ಲೆನೆಂದಾ
ಹದನ ಮಾಯೆಗೆ ಹೇಳುತಿರ್ದಳು ವಿಮಳೆ ವಿಸ್ತರಿಸಿ ೪೨

ಎಳ್ಳಿನೊಳಗೆಂತೆಣ್ಣೆಯಿಹ ಪರಿ
ಯಲ್ಲಿ ಕಾಷ್ಠದೊಳನಲನಿಹ ಪರಿ
ಯಲ್ಲಿ ಹಾಲೊಳು ಬೆಣ್ಣೆಯೆಂತಿಹುದಂತೆ ಭಾವಿಸಲು
ಬಲ್ಲೊಡೆಮ್ಮಯ ದೇವನಿರುತಿಹ
ನೆಲ್ಲರೆಡೆಗಳಲನುವನರಿದೊಡೆ
ಯಲ್ಲಮಪ್ರಭು ಗುರುಗುಹೇಶ್ವರಲಿಂಗ ಲೀಲೆಯಲಿ ೪೩

ಅಂತು ಗತಿ ೬ಕ್ಕಂ ಪದ ೨೮೬ಕ್ಕಂ ಮಂಗಳಂ

೪೨. ಗಿರಿಜೆ ಕೇಳು, ಅದು ಕಾರಣವಾಗಿ ಅಲ್ಲಮನ ಕರುಣೆಯಿಂದ ಸತ್‌ಚಿತ್ ಆನಂದದ ನಿಶ್ಚಿಂತ ಮೋಕ್ಷಪದವನ್ನು ಪಡೆಯುವುದು ಎಂದು ಪ್ರೀತಿಯಿಂದ ಶಿವನು ಹೇಳಿದನು. ಅಂದು ನಾನು ಅದನ್ನು ಕೇಳಿ ತಿಳಿದಿರುವೆನು ಎಂದು ವಿಮಳೆ ವಿಸ್ತರಿಸಿ ಆ ಸುದ್ದಿಯನ್ನು ಮಾಯೆಗೆ ಹೇಳುತ್ತಿದ್ದಳು. ೪೩. ವಿಚಾರಮಾಡಿದಲ್ಲಿ ಎಳ್ಳಿನಲ್ಲಿ ಎಣ್ಣೆಯಿರುವ ರೀತಿಯಲ್ಲಿ, ಕಟ್ಟಿಗೆಯಲ್ಲಿ ಅಗ್ನಿಯಿರುವ ರೀತಿಯಲ್ಲಿ, ಹಾಲಿನಲ್ಲಿ ಬೆಣ್ಣೆಯಿರುವ ರೀತಿಯಲ್ಲಿ ನಮ್ಮ ದೇವ ಅಲ್ಲಮಪ್ರಭುವಾದ ಗುರುಗುಹೇಶ್ವರಲಿಂಗನು ಲೀಲೆಯಿಂದ ಎಲ್ಲರಲ್ಲಿಯೂ ಇರುವನು.

# ೭. ಪ್ರಭು ಮಾಯೆಗೆ ಸಿಕ್ಕದೇ ಹೋದುದು

## ಗತಿ ೭

ಸೂಚನೆ : ವಿಮಳೆ ವಿಸ್ತರಿಸಿದೊಡೆ ಕಾರ್ಯ
ಕ್ರಮವನಾಲಿಸಿ ಮಾಯೆ ತಾನ
ಲ್ಲಮನನಱಿದಿಹೆನೆನಲು ಹೋದನು ನಿಜವ ತೋಱಿಸದೆ ॥ಪದ॥

ಮಾಯೆಯನು ಮನ್ನಿಸದೆ ನೂಕಿ ನಿ
ರಾಯಸದಲಾನಂದಮೂರ್ತಿ
ಶ್ರೀಯನಾಳುವ ಲಿಂಗಸಂಗಿಗಳೆಲ್ಲ ಕೇಳುವುದು
ಮಾಯೆ ಮೋಹಿಸಿ ಮುಟ್ಟಬಂದ ವಿ
ಡಾಯವನು ಮುಱಿದಲ್ಲಮಪ್ರಭು
ರಾಯನಾಡುತಲಿರ್ದ ಪರಿಯನು ಲಿಂಗಲೀಲೆಯಲಿ ೧

ಗಿರಿಜೆಗೀಶ್ವರನೊರೆದೊಡದನಾ
ದರಿಸಿ ಬಂದಾ ವಿಮಳೆ ನೆಱೆ ವಿ
ಸ್ತರಿಸಿ ಹೇಳಲು ಕೇಳಿಯಲ್ಲಮನಾದೊಡಿನ್ನೆಮಗೆ
ದೊರಕಿ ನಮ್ಮಿಷ್ಟಾರ್ಥವನು ಸ
ತ್ಕರಿಸಿ ಸಲಿಸಲು ಸುಲಭದಲಿ ಗೋ
ಚರವೆನಿಸಿ ಕಾಣಿಸುವನೇ ಹೇಳೆಂದಳಾ ಮಾಯೆ ೨

ಹರನ ಭಕ್ತಿಯ ಮಾಡಿದೊಡೆ ಗೋ
ಚರಿಸಿ ತೋಱುವನಲ್ಲಮಪ್ರಭು
ಕರುಣದಿಂದಲಿ ನೀನು ಬಳಿಕಾತನಲಿ ಬಗೆಬಂದ
ವರ ಮನೋರಥಸಿದ್ಧಿಯನು ಪತಿ
ಕರಿಸಿ ಪಡೆವುದು ಕೇಳೆನುತಲಾ
ದರಿಸಿ ಮಾಯೆಗೆ ಹೇಳುತಿರ್ದಳು ವಿಮಳೆ ವಿನಯದಲಿ ೩

ಸೂ : ವಿಮಳೆ ಮಾಯೆಗೆ ಎಲ್ಲವನ್ನೂ ವಿಸ್ತರಿಸಿ ಹೇಳಲು ಆ ಕಾರ್ಯವ್ಯವಸ್ಥೆಯನ್ನು ಕೇಳಿದ ಮಾಯೆ ತಾನು ಅಲ್ಲಮನನ್ನು ತಿಳಿದಿರುವುದಾಗಿ ಹೇಳಿದಳು. (ಆದರೆ) ಅಲ್ಲಮನು ತನ್ನ ಸಹಜಸ್ವರೂಪವನ್ನು ತೋರಿಸದೆ ಹೋದನು. ೧. ಆಯಾಸವೇ ಇಲ್ಲದೆ ಆನಂದ ಮೂರ್ತಿಯಾದ ಅಲ್ಲಮನು ಮಾಯೆಯನ್ನು ಗೌರವಿಸದೆ ನೂಕಿದನು. ಮಾಯಾದೇವಿ ಮೋಹಿಸಿ ಮುಟ್ಟಲು ಬಂದ ರೀವಿಯನ್ನು ಹಾಳುಗೆಡವಿ ಅಲ್ಲಮಪ್ರಭುರಾಯನು ಆಡುತ್ತಿದ್ದ ಆ ಲಿಂಗಲೀಲೆಯ ರೀತಿಯನ್ನು ಮೋಕ್ಷಲಕ್ಷ್ಮಿಯನ್ನಾಳುವ ಲಿಂಗಸಂಗಿಗಳಾದ ಶಿವಭಕ್ತರು ಕೇಳುವುದು. ೨. ಗಿರಿಜೆಗೆ ಶಿವ ಹೇಳಲು ಅದನ್ನು ಗೌರವಿಸಿ ಮಾಯಾದೇವಿಯಲ್ಲಿಗೆ ಬಂದ ವಿಮಳೆ ಚೆನ್ನಾಗಿ ವಿವರಿಸಿ ಹೇಳಲು (ಅವೆಲ್ಲವನ್ನೂ) ಕೇಳಿದ ಮಾಯೆ ವಿಮಳೆಗೆ, "ಹಾಗಾದರೆ ಅಲ್ಲಮ ಇನ್ನು ನಮಗೆ ಸಿಕ್ಕಿ, ನಮ್ಮ ಬಯಕೆಯನ್ನು ಗೌರವಿಸಿ ನೇರವೇರಿಸಲು ಸುಲಭನಾಗಿ ಸಾಕಾರನಾಗಿ ಕಾಣಿಸುವನೆ? ಹೇಳು" ಎಂದಳು. ೩. "ಕೇಳು, ಶಿವನಲ್ಲಿ ಭಕ್ತಿಯನ್ನು ಮಾಡಿದರೆ ಅಲ್ಲಮಪ್ರಭು ಕರುಣೆಯಿಂದ ನೋಟಕ್ಕೆ ಸಿಗುವಂತೆ

ಸುದತಿ ನೀನಱುಹಿಸಿದ ಮುನ್ನವೆ
ಮುದದಲೀಶ್ವರಭಕ್ತಿಯಿಂದಲಿ
ಮಧುಕನಾಥನ ನಿಚ್ಚ ಪೂಜಿಸುವೆನು ವಿಧಾನದಲಿ
ತುದಿಗೆ ನಾನಿನ್ನೇನ ಮಾಡುವೆ
ನದಱಲಾದೊಡೆ ಕಾಣೆನೇನುವ
ನಿದಕೆ ನಾ ಬೇಸತ್ತೆನೌ ಕೇಳೆಂದಳಾ ಮಾಯೆ ೪

ಶಿವ ಶಿವಾ ನೀಃಪುಣ್ಯವಚನ
ಶ್ರವಣ ಸಂಭಾವಿಸಿತೆಯಾದೊಡೆ
ಶಿವನ ಭಕ್ತಿ ನಿರರ್ಥವೆಂದಾ ಮೂಢೆ ತಿಳಿವಂತೆ
ವಿವರಿಸುವೆನಾ ಶಿವಸದಾಚಾ
ರವನು ನಾ ಬಲ್ಲನಿತನೆನುತಲಿ
ಯುವತಿ ಮಾಯೆಗೆ ಹೇಳಲುದ್ಯೋಗಿಸಿದಳಾ ವಿಮಳೆ ೫

ಆಗಮಂಗಳನೆಲ್ಲವನು ಚೆ
ನ್ನಾಗಿ ಶೋಧಿಸಿ ತಿಳಿದು ಸಲೆ ಶೈ
ವಾಗಮವೆ ಮಿಗಿಲೆಂದು ಭಾವಿಸಿ ಭಕ್ತಿರತನಾದ
ಶ್ರೀಗುರುವಿನುಪದೇಶವಿಲ್ಲದೆ
ಹೋಗಿ ದೇವಾರ್ಚನೆಯ ಮಾಡಿದೊ
ಡೇಗುವುದು ಬಱು ಮಾಟ ನಿಷ್ಫಲವೆಂದಳಾ ವಿಮಳೆ ೬

ಕಾಣಿಸಿಕೊಳ್ಳುವನು ನೀನು ಬಳಿಕ ಅವನನ್ನು ಒಲಿಸಿ ಮನಬಂದಂತೆ ಮನೋರಥ ಸಿದ್ಧಿಯನ್ನು ಈಡೇರಿಸಿಕೊಳ್ಳುವುದು" ಎಂದು ಮಾಯೆಗೆ ವಿಮಳೆಯು ವಿನಯದಿಂದ ನುಡಿಯುತ್ತಿದ್ದಳು. ೪. "ಸುಂದರಿ ಕೇಳು, ನೀನು ತಿಳಿಸುವ ಮುನ್ನವೆ ಪ್ರೀತಿಯಿಂದ ಶಿವನಲ್ಲಿ ಭಕ್ತಿಯಿಟ್ಟು ಮಧುಕನಾಥನನ್ನು ನಿತ್ಯವೂ ಕ್ರಮತಪ್ಪದೆ ಪೂಜೆ ಮಾಡುತ್ತಿರುವೆನು. ನಾನಿನ್ನೇನು ಮಾಡಲಿ? ಅದರಲ್ಲಿ ನಾನೇನೂ ಫಲವನ್ನು ಕಾಣಲಿಲ್ಲ. ಕೊನೆಗೆ ಇದರಿಂದ ನಾನು ಬೇಸತ್ತವಳಾದೆನು" ಎಂದು ಮಾಯೆ ಹೇಳಿದಳು. ೫. 'ಶಿವಶಿವಾ! ಪುಣ್ಯವಿಲ್ಲವೆನ್ನುವ ಮಾತು ಕೇಳುವ ಅವಕಾಶವಾಯಿತೆ! ಆದರೆ ಶಿವನ ಭಕ್ತಿ ವ್ಯರ್ಥವೆಂದು ಹೇಳಿದ ಈ ಮೂರ್ಖಳಿಗೆ ತಿಳಿಯುವಂತೆ ಶಿವಪದ ಆಚಾರವನ್ನು ನನಗೆ ತಿಳಿದಂತೆ ವಿವರಿಸುವೆನು" ಎಂದು ವಿಮಳೆಯು ಯುವತಿ ಮಾಯೆಗೆ ಹೇಳತೊಡಗಿದಳು. ೬. ಆಗಮಗಳನ್ನೆಲ್ಲಾ ಚೆನ್ನಾಗಿ ಶೋಧಿಸಿ ತಿಳಿದು, ಶಿವಾಗಮವೇ ಶ್ರೇಷ್ಠವೆಂದು ಭಾವಿಸಿ ಭಕ್ತಿಯಲ್ಲಿ ಅನುರಕ್ತನಾದ ಶ್ರೀಗುರುವಿನ ಉಪದೇಶವಿಲ್ಲದೆ ಹೋಗಿ ದೇವಾರ್ಚನೆಯನ್ನು ಮಾಡಿದರೆ ಏನಾಗುವುದು? ಸುಮ್ಮನೆ ಕಾರ್ಯವನ್ನು ಮಾಡಿದರೆ ಫಲಪ್ರಾಪ್ತಿಯಾಗದು ಎಂದು ವಿಮಳೆ ಮಾಯೆಗೆ ಹೇಳಿದಳು.

ಕೊಬ್ಬಿ ಕೋಮಲವಾದ ನಿಗುರಿದ
ನಿಬ್ಬರದ ನಿಡುಗಿಣ್ಣುಗಳ ಕಾ
ಗಬ್ಬನಱಿಯದೆ ಕಬ್ಬನಿಚ್ಛೆಗೆ ಮೆಲುವ ಮರುಳಂತೆ
ಮಬ್ಬುದೋಱುವ ಮದದ ಡಂಬಿನ
ಹಬ್ಬುಗೆಯಲಿಹ ಗುರುನಿರೂಪದ
ಉಬ್ಬಿ ಮಾಡುವ ಮಾಟ ನಿಷ್ಫಲವೆಂದಳಾ ವಿಮಳೆ ೭

ಕಣ್ಣುಗಾಣದ ಕುರುಡನೊಳ್ಳಿತ
ಕನ್ನಡಿಯ ಹಿಡಿದಂತೆ ಸಲೆ ಸಂ
ಪನ್ನ ಸದ್ಗುರುದೀಕ್ಷೆ ಕೈಸಾರಿದೊಡೆ ನೋಡುತಲಿ
ಚೆನ್ನ ಚಿತ್ತದ ಕಣ್ಣ ತೆಱೆಯದೆ
ಯನ್ಯವಿಧಿಯಲಿ ಭಜಿಸಿ ಭಾವಿಸಿ
ಬನ್ನಬಟ್ಟರೆ ತುದಿಗೆ ನಿಷ್ಫಲವೆಂದಳಾ ವಿಮಳೆ ೮

ಮೂಗರಾದವರೇನ ನೋಡಿದೊ
ಡೇಗುವರು ದಿಟವಾ ಪ್ರಕಾರದ
ಲಾಗಮಾಚಾರಿಯನ ಮಂತ್ರಗ್ರುಹಣ ನೆಲಸಿದೊಡೆ
ಹೋಗಿ ದೇವಾರ್ಚನೆಯ ಮಾಡಿದೊ
ಡಾಗುದೋಱಿಸಲಱಿಯದಿಚ್ಛಾ
ಭೋಗದವರಿಗೆ ತುದಿಗೆ ನಿಷ್ಫಲವೆಂದಳಾ ವಿಮಳೆ ೯

೭. ದಷ್ಟಪುಷ್ಟವಾದ, ಕೋಮಲವಾದ, ನೀಳವಾದ, ಹೆಚ್ಚಾಗಿ ಉದ್ದುದ್ದಕ್ಕೆ ಗೆಣ್ಣುಗಳುಳ್ಳ (ಆದರೆ ಸವಿಯಾದ ರಸ ಹೆಚ್ಚಿಗೆ ಇಲ್ಲದ) ಕಾಡುಗಬ್ಬನ್ನು ನೋಡಿ ಕಬ್ಬನ್ನು ತಿನ್ನುವ ಬಯಕೆಗೆ ಒಳಗಾಗಿ (ಅದರ ಸ್ಥಿತಿ) ತಿಳಯದೆ ತಿನ್ನುವ ದಡ್ಡನಂತೆ ಅಜ್ಞಾನದ ಗರ್ವದಲ್ಲಿ ಒಣಪ್ರತಿಷ್ಠೆಯ ಹೆಚ್ಚಳಿಕೆಯಲ್ಲಿ ಗುರುವಿನ ಆಜ್ಞೆಯಂತೆ ಮಾಡದ ಕಾರ್ಯ ಫಲ ನೀಡುವುದಿಲ್ಲವೆಂದು ವಿಮಳೆ ಮಾಯೆಗೆ ಹೇಳಿದಳು. ೮. ಬಹು ಯೋಗ್ಯನಾದ ಗುರುವಿನಿಂದ ದೀಕ್ಷೆಯಾಗಿದ್ದರೂ ಪರಿಶುದ್ಧವಾದ ಮನದ ಕಣ್ಣನ್ನು ತೆರೆಯದೆ (ಸುಮ್ಮನೆ) ನೋಡುತ್ತ ಬೇರೆಕ್ರಮದಲ್ಲಿ ಭಜಿಸಿ, ಪೂಜಿಸಿ ಭಂಗಪಟ್ಟರೆ ಕೊನೆಗೆ ಕುರುಡನು ಒಳ್ಳೆಯ ಕನ್ನಡಿಯನ್ನು ಹಿಡಿದಂತೆ ನಿಷ್ಫಲವಾಗುವುದು ಎಂದು ವಿಮಳೆ ಮಾಯೆಗೆ ಹೇಳಿದಳು. ೯. ಮೂಗರಾದವರು ಏನನ್ನು ನೋಡಿದರೂ ಏನು ಪ್ರಯೋಜನ? (ಅದನ್ನು ಹೇಳಲು ಬರುವುದಿಲ್ಲ.) ಇದು ಸತ್ಯ. ಆ ಪ್ರಕಾರದಲ್ಲಿ ಶಿವಾಗಮವನ್ನು ತಿಳಿದ ಆಚಾರ್ಯನ ಮಂತ್ರವು ಮನದಲ್ಲಿ ನೆಲೆಸಿರದೆ ದೇವಾಲಯಕ್ಕೆ ಹೋಗಿ ದೇವಾರ್ಚನೆಯನ್ನು ಮಾಡಿ ಅಪೇಕ್ಷೆ ಈಡೇರಬೇಕು ಎಂದು ಬಯಸಿದರೆ ಕೊನೆಗೆ ಅವರ ಇಚ್ಛೆ ನಿಷ್ಫಲವಾಗುವುದು ಎಂದು ಮಾಯೆಗೆ ವಿಮಳೆ ಹೇಳಿದಳು.

ತಿಳಿಯೆ ಶೋಧಿಸಿ ಹರಗಿ ಹಸನಾ
ದಿಳೆಯೊಳೊಳ್ಳಿಹ ಬೆದೆಯಲೊಯ್ಯನೆ
ಹುಳುಕು ಹುರಿಕರಿಯಾದ ಬೀಜವ ಬಿತ್ತುವವರಂತೆ
ಲಲಿತ ದೇವಾರ್ಚನೆಯ ಕಾಲಂ
ಗಳಲಿ ಮೀಸಲುಗೆಟ್ಟ ಸಾಧನ
ಗಳಲಿ ಪೂಜೆಯ ಮಾಡೆ ನಿಷ್ಫಲವೆಂದಳಾ ವಿಮಳೆ ೧೦

ಕಿವಿಗೆ ಕಂಪನು ಮೈಗೆ ರೂಪನು
ಸವಿಯನಕ್ಷಿಗೆ ನಾಸಿಕಕೆ ಶ
ಬ್ದವನು ಸಲಿಸುವ ಮರುಳತನದಲಿ ದೇವತಾಮುಖದ
ವಿವರಗಳನೇನುವನು ತಿಳಿಯದೆ
ತವಕ ಮಿಗೆಯನ್ಯೋನ್ಯವಸ್ತು
ಪ್ರವರದಲಿ ಪೂಜಿಸಲು ನಿಷ್ಫಲವೆಂದಳಾ ವಿಮಳೆ ೧೧

ಊನವಿಲ್ಲದೆ ತೀವಿ ಚೆಲುವೆನಿ
ತಾನುವಿರುತಿರೆ ಜೀವವೆಂಬ ನಿ
ಧಾನವಿಲ್ಲದಡೊಪ್ಪುವುದೆ ಕೇಳಾ ಪ್ರಕಾರದಲಿ
ಏನು ಮಾಡಿದೊಡೇನು ಮನದವ
ಧಾನಭಕ್ತಿಯಲಿರದೆ ವಿಷಯ
ಸ್ಥಾನಗಳನಪ್ಪಿದೊಡೆ ನಿಷ್ಫಲವೆಂದಳಾ ವಿಮಳೆ ೧೨

ತರುಣಿ ನಿನಗುಪದೇಶವಿಲ್ಲವೊ
ನಿರುತ ಮಂತ್ರವಿಹೀನವೋ ಮೇಣ್
ಪರಮತಂತ್ರ ಕ್ರಿಯೆಕಳಾಪಗಳೂನವೋ ಬಜಿದೆ
ಹರನ ಭಕ್ತಿ ನಿರರ್ಥವೆಂದು
ಚ್ಚರಿಸಲಹುದೇ ಮಾಯೆ ನಿನ್ನಯ
ಮರುಳುತನಗಳ ಮಜಿದು ಕಳೆ ಸಾಕೆಂದಳಾ ವಿಮಳೆ ೧೩

೧೦. ಹಸನಾದ ಭೂಮಿಯನ್ನು ಚೆನ್ನಾಗಿ ಶೋಧಿಸಿ, ಸಮಮಾಡಿ, ಒಳ್ಳೆಯ ಬಿತ್ತನೆ ಕಾಲದಲ್ಲಿ ಹುಳುಕಾದ, ಹುರಿದು ಕರಿಕುಗೊಂಡ ಬೀಜವನ್ನು ಬಿತ್ತುವವರಂತೆ ಮನೋಹರವಾದ ದೇವತಾರ್ಚನೆಯ ಕಾಲದಲ್ಲಿ ಮೀಸಲಲ್ಲದ ಉಪಕರಣಗಳಿಂದ ಪೂಜೆಯನ್ನು ಮಾಡಿದರೆ ನಿಷ್ಫಲವೆಂದು ವಿಮಳೆ ಮಾಯೆಗೆ ಹೇಳಿದಳು. ೧೧. ಕಿವಿಗೆ ಕಂಪು, ಮೈಗೆ ರೂಪು, ಕಣ್ಣಿಗೆ ಸವಿ, ಮೂಗಿಗೆ ಶಬ್ದಗಳನ್ನು ಸಲ್ಲಿಸುವ ಹುಚ್ಚನಂತೆ ದೇವತಾಮುಖದ ವಿವರಗಳಾವುವನ್ನೂ ತಿಳಿಯದೆ ಹೆಚ್ಚಾದ ಆತುರದಿಂದ ಪರಸ್ಪರ ಸಂಬಂಧವಿಲ್ಲದ ವಸ್ತುಗಳಿಂದ ಪೂಜಿಸಿದರೆ ನಿಷ್ಫಲವೆಂದು ವಿಮಳೆ ಮಾಯೆಗೆ ಹೇಳಿದಳು. ೧೨. ಯಾವ ಕೊರತೆಯೂ ಇಲ್ಲದೆ ಮೈಕೆ ತುಂಬಿಕೊಂಡು ಸೌಂದರ್ಯ ಎಷ್ಟಿದ್ದೂ ಜೀವವೆನ್ನುವ ಸಂಪತ್ತು ದೇಹದಲ್ಲಿ ಇಲ್ಲದಿದ್ದರೆ ಶೋಭಿಸುವುದೇ? ಕೇಳು. ಆ ಪ್ರಕಾರದಲ್ಲಿ ಮನದಲ್ಲಿ ನಿಶ್ಚಲ ಭಕ್ತಿಯಿಲ್ಲದಿದ್ದು ಏನು ಮಾಡಿದರೇನು ಫಲ? ಮನಸ್ಸು ಇಂದ್ರಿಯವಿಷಯಗಳನ್ನು ಅಪ್ಪಿದರೆ ನಿಷ್ಫಲವೆಂದು ವಿಮಳೆ ಮಾಯೆಗೆ ಹೇಳಿದಳು. ೧೩. ತರುಣಿ, ನಿನಗೆ (ಸದ್ಗುರುವಿನಿಂದ) ಉಪದೇಶವಿಲ್ಲವೊ, ನಿಜವಾದ ಮಂತ್ರದ ಅರಿವಿಲ್ಲವೊ ಅಥವಾ ಶ್ರೇಷ್ಠವಾದ ತಂತ್ರಕಾರ್ಯಕಲಾಪಗಳ ಕೊರತೆಯೋ ಏನೊ!

ಎನಲದೆಲ್ಲವ ಕೇಳಿ ತನ್ನಯ
ಮನಕೆ ಸೊಗಸದೆ ಬಳಿಕ ನಾನಿ
ನ್ನಿನಿತು ಕುಶಲದ ಗೊಡವೆಗಾರ್ಜಿನು ಬಲ್ಲ ಪರಿಯಿಂದೆ
ನೆನೆದು ನನ್ನಿಚ್ಛೆಯಲಿ ದೇವಾ
ರ್ಚನೆಯ ಮಾಡಿದೆನಿನ್ನು ಸಾಕೆಂ
ದೆನುತ ಬೇಸಜಿಕೆಯಲಿ ನುಡಿದಳು ವಿಮಳೆಗಾ ಮಾಯೆ ೧೪

ಆದೊಡಿವಳಂತಸ್ಥವೇ ವಿಧಿ
ಯಾದುದೋ ನಾನಿವಳನೇ ಪರಿ
ಬೋಧಿಸುವೆನೋ ಶಿವಶಿವಾ ಎಂದೆನುತ ತನ್ನೊಳಗೆ
ಆದರಿಸುತಿವಳೊಳಗಿದೊಂದು ವಿ
ನೋದಗೋಷ್ಠಿಯ ಮಾಡಿ ಮೆಲ್ಲನೆ
ಭೇದದಿಂದಲಿ ಕೇಳಿ ನೋಡುವೆನೆಂದಳಾ ವಿಮಳೆ ೧೫

ವನಿತೆ ನಾನಿನ್ನೊಂದ ಕೇಳುವೆ
ನೆನಗೆ ಮುಚ್ಚದೆ ಹೇಳು ಹುಸಿದೊಡೆ
ನಿನಗೆ ಪಾರ್ವತಿಯಾಣೆ ನಿನ್ನ ಕೋಮಲಾಂಗದಲಿ
ಮನಸಿಜನ ಕೈಮಸಕ ಮಿಗೆ ವೇ
ದನಿಸಿ ನೋಯಿಸುತಿರ್ದುವೆಂದೆಂ
ಬನಿತು ಕುಜುಹಿರಲೇನು ಕಾರಣವೆಂದಳಾ ವಿಮಳೆ ೧೬

ಸುಮ್ಮನೆ ಶಿವಭಕ್ತಿ ನಿಷ್ಫಲವೆಂದು ಹೇಳಬಹುದೆ? ಮಾಯೆ, ಇನ್ನು ಸಾಕು, ನಿನ್ನ ಹುಚ್ಚುತನವನ್ನು ಮರೆತುಬಿಡು ಎಂದು ವಿಮಳೆ ಹೇಳಿದಳು. ೧೪. ವಿಮಳೆ ಹೀಗೆ ಹೇಳಲು, ಅದೆಲ್ಲವನ್ನೂ ಕೇಳಿದ ಮಾಯೆಯು ತನ್ನ ಮನಸ್ಸಿಗೆ ಅವು ಹಿಡಿಸದಿರಲು ಬಳಿಕ, "ನಾನು ಇಷ್ಟೆಲ್ಲಾ ಗೋಜಿಗೆ ಸಮರ್ಥಳಲ್ಲ, ನನಗೆ ತಿಳಿದ ರೀತಿಯಲ್ಲಿ (ಶಿವನನ್ನು) ನೆನೆದು, ನನ್ನ ಇಚ್ಛೆಬಂದಂತೆ ದೇವತಾರ್ಚನೆಯನ್ನು ಮಾಡಿದೆನು. ಇನ್ನು ಸಾಕು ಎಂದು ವಿಮಳೆಗೆ ಬೇಸರದಿಂದ ನುಡಿದಳು. ೧೫. ಇವಳ ಒಳಗಿನದು ಯಾವ ರೀತಿಯಾಯಿತೋ ಶಿವಶಿವಾ! ನಾನಿವಳಿಗೆ ಹೇಗೆ ಚೆನ್ನಾಗಿ ಸದ್‌ಬೋಧೆ ಮಾಡಲಿ-ಎಂದು ತನ್ನೊಳಗೇ ಚಿಂತಿಸಿದ ವಿಮಳೆ, ಇವಳೊಂದಿಗೆ ಒಂದು ವಿನೋದದ ಚರ್ಚೆಯನ್ನು ಮಾಡಿ ಮೆಲ್ಲನೆ ಭೇದೋಪಾಯದಿಂದ ಕೇಳಿ ನೋಡುವೆನು ಎಂದು ಆಲೋಚಿಸಿದಳು. ೧೬. "ಬಾಲೆ, ನಾನು ಇನ್ನೊಂದು ಮಾತು ಕೇಳುವೆ. ನನಗೆ ಮರೆಮಾಚದೆ, ಸುಳ್ಳಾಡದೆ ಹೇಳು. ಪಾರ್ವತಿಯ ಮೇಲಾಣೆ. ನಿನ್ನ ಕೋಮಲಾಂಗದಲ್ಲಿ ಮನ್ಮಥನ ಹಗೆತನ ವಿಶೇಷವಾಗಿ (ನಿನ್ನನ್ನು) ವೇದನೆಗೆ ಒಳಗುಮಾಡಿ ನೋಯಿಸುತ್ತಿರುವುದೆನ್ನುವಷ್ಟು ಚಿಹ್ನೆಯಿರಲೇನು ಕಾರಣ?" ಎಂದು ವಿಮಳೆ ಕೇಳಿದಳು.

ಆಣೆಗಂಜುವೆನವ್ವ ಕಾಮನ
ಬಾಣದಲಿ ಭಯಬಟ್ಟು ಬಳಿಕಾ
ಪ್ರಾಣಪರಿಯಂತರ ದಶಾವಸ್ಥೆಯಲಿ ನೆಱೆ ನೊಂದು
ಮಾಣದುತ್ತಮವಾದ್ಯವಿದ್ಯಾ
ಜಾಣನಲ್ಲಮನೆಂಬ ಚೆಲುವನ
ಕಾಣುತವೆ ಕಂಗೆಟ್ಟು ಕರಗಿದೆನೆಂದಳಾ ಮಾಯೆ ೧೭

ಅಲ್ಲಮನು ತಾನೆಂಬ ಹೆಸರವ
ನಲ್ಲಮಪ್ರಭುವಾಗಲಾಪನು
ಭುಲ್ಲವಣೆಯಲಿ ನಿನ್ನ ಜವ್ವನ ಕೊಬ್ಬಿನಲಿ ಮಱೆದು
ಪಲ್ಲವಿಸಿ ನೀ ಕಾಮಿಸಿರ್ದೊಡೆ
ಖುಲ್ಲತನದಲಿ ವಿಕೃತವೇಷದ
ಅಲ್ಲಮನೆ ತಾ ಬಂದನೈಸಲೆ ಎಂದಳಾ ವಿಮಳೆ ೧೮

ಎಂದೊಡಾನೇನಱಿಯೆನಕಟಾ
ಮಂದಮತಿಯೇ ಅಲ್ಲಮಪ್ರಭು
ವೆಂದೆನಿಸಿಕೊಂಬುವನು ತಾ ಪ್ರತ್ಯಕ್ಷ ಪರಬೊಮ್ಮ
ಎಂದು ಹೇಳುವರೆಲ್ಲರಿವನೇ
ಸಂದ ಮದ್ದಳೆಯಲ್ಲಮನು ಬಿಡು
ಹೊಂದದೌ ನೀ ಹೇಳುವುದು ಹುಸಿಯೆಂದಳಾ ಮಾಯೆ ೧೯

ಅಕಟ ಮರುಳೇ ಅಲ್ಲಮಪ್ರಭು
ಸಕಳರಿಗೆ ಸಾಕಾರವಾಗಿಹ
ಸುಕರ ನಿರ್ಮಳಮತಿಗೆ ನಿರ್ಗುಣರೂಪನಾಗಿಹನು
ಪ್ರಕಟಿಸುವ ನೀ ನಿನ್ನ ವಿಷಯದ
ವಿಕಳತನವನು ಬಿಟ್ಟು ಸಲೆ ಸಾ
ತ್ವಿಕದ ಬುದ್ಧಿಯಲೀಕ್ಷಿಸೆಂದಳು ಮಾಯೆಗಾ ವಿಮಳೆ ೨೦

೧೭. ಅದಕ್ಕೆ ಮಾಯೆ "ತಾಯೀ, ಆಣೆಗೆ ನಾನು ಅಂಜುತ್ತೇನೆ. ಉತ್ತಮ ವಾದ್ಯವಿದ್ಯಾ ಜಾಣನಾದ ಅಲ್ಲಮನೆಂಬ ಚೆಲುವನನ್ನು ಕಾಣುತ್ತಲೇ ಕಾಮನ ಬಾಣದಿಂದ ಭಯಹೊಂದಿದ್ದು ದೇಹದಾದ್ಯಂತ ದಶಾವಸ್ಥೆ*ಯಿಂದ ಹೆಚ್ಚಾಗಿ ನೊಂದು ನಿಲ್ಲದೆ ಕಂಗೆಟ್ಟು ಕರಗಿದೆ" ಎಂದು ಉತ್ತರಿಸಿದಳು. ೧೮. "ಅಲ್ಲಮನೆಂಬ ಹೆಸರಿನವನು ಅಲ್ಲಮಪ್ರಭುವಾಗಿರುವನು. ಹೆಚ್ಚುಗಾರಿಕೆಯ ನಿನ್ನ ಯೌವನದ ಕೊಬ್ಬಿನಲ್ಲಿ ಮೈ ಮರೆತು ಮುಂದುವರಿದು ನೀಚತನದಲ್ಲಿ ನೀನು ಕಾಮಿಸಿರಲು ವಿಕೃತವೇಷದಲ್ಲಿ ಅಲ್ಲಮನು ತಾನೇ ಬಂದಿರುವನಷ್ಟೆ" ಎಂದು ಮಾಯೆಗೆ ವಿಮಳೆ ಹೇಳಿದಳು. ೧೯. ಹಾಗೆಂದು ಹೇಳಲು "ನಾನೇನು ತಿಳಿಯದವಳೆ? ಮಂದಮತಿಯೆ? ಅಲ್ಲಮಪ್ರಭುವೆಂದೆನ್ನಿಸಿಕೊಂಡಿರುವವನು ತಾನೇ ಪ್ರತ್ಯಕ್ಷ ಪರಬ್ರಹ್ಮ ಎಂದು ಎಲ್ಲರೂ ಹೇಳುವರು. ಇವನಾದರೊ ಪ್ರಖ್ಯಾತನಾದ ಮದ್ದಳೆಯ ಅಲ್ಲಮನು. ಬಿಡು, ನೀನು ಹೇಳುವುದು ಸರಿಹೋಗದು" ಎಂದು ಮಾಯೆ [ಮಾರುಲಿದಳು.] ೨೦. "ಅಯ್ಯೋ ಹುಚ್ಚಿ, ಅಲ್ಲಮಪ್ರಭು ದೇಹಧಾರಿಗಳಿಗೆ ಸಾಕಾರ

* ಅನುಬಂಧ ನೋಡಿ

ಆದೊಡದ ನಾನರಿಯೆನೌ ಬೇ
ಕಾದೊಡಾ ಮದ್ದಳಿಗನನು ದಿಟ
ಭೇದಿಸಲು ನೀ ಬಲ್ಲೆಯಾದೊಡೆ ತೋಱಿಸುವೆನವನ
ವಾದವೇತಕೆ ನಿನ್ನ ಮನಸಿಗೆ
ವೇದಿಸುವ ದಿಟವಲ್ಲಮನೆಯವ
ನಾದನಾದೊಡೆ ಬಳಿಕ ನೋಡುವೆನೆಂದಳಾ ಮಾಯೆ ೨೧

ಎನುತೆ ವಿಮಳೆಯ ಕೂಡಿಕೊಳುತಾ
ವನಿತೆ ನಿತ್ಯಸ್ಥಿತಿಯ ದೇವಾ
ರ್ಚನೆಗೆ ದೇವಾಲಯಕೆ ಹೋದಳು ಸಕಲ ವಿಭವದಲಿ
ಮನವೊಲಿದು ಮಧುಕೇಶ್ವರನ ವಂ
ದನೆಯನೆಲ್ಲವ ಮಾಡಿ ಮಾಯಾಂ
ಗನೆ ವಿರಾಜಿಸಿ ಬಂದು ನಿಂದಳು ನೃತ್ಯರಂಗದಲಿ ೨೨

ಹೂಡಿ ಹಣ್ಣಿದ ಜಗದ ಜಂತ್ರವ
ನಾಡಿಸುವ ಮಾಯಾಂಗನೆಯ ತಾ
ನಾಡಿಸುವೆನೆಂಬುದನು ಪ್ರತ್ಯಕ್ಷದಲಿ ತೋರ್ಪಂತೆ
ಆಡಿಸುವ ಮದ್ದಳೆಯ ಜೋಕೆಯ
ಜೋಡಿಸುವನಲ್ಲಮನು ಪಾತ್ರವ
ನಾಡುವವಳಾ ಮಾಯೆ ಲೋಕವ ಮರುಳು ಮಾಡುತಲಿ ೨೩

ನಾಗಿರುವನು. ಶ್ರೇಯಸ್ಸನ್ನುಂಟುಮಾಡುವ ಪರಿಶುದ್ಧ ಬುದ್ಧಿಗೆ ನಿರ್ಗುಣರೂಪನಾಗಿರುವನು. ನೀನು ಪ್ರಕಟಿಸುವ ನಿನ್ನ ಇಂದ್ರಿಯದ ಭ್ರಾಂತತನವನ್ನು ಬಿಟ್ಟು ಅತಿ ಸಾತ್ವಿಕವಾದ ಬುದ್ಧಿಯಿಂದ ನೋಡು" ಎಂದು ಮಾಯೆಗೆ ವಿಮಳೆ ಹೇಳಿದಳು. ೨೧. "ಆದರೆ ಅದನ್ನು ನಾನು ತಿಳಿದಿಲ್ಲ. ಬೇಕಾದರೆ ಹಾಗೂ ನೀನು ಆ ಮದ್ದಳಿಗನನ್ನು ಗೊತ್ತುಹಿಡಿಯಲು ಬಲ್ಲೆಯಾದರೆ ಅವನನ್ನು ನಿನಗೆ ನಾನು ತೋರಿಸುವೆನು. ವಾದವೇತಕ್ಕೆ? ನಿನ್ನ ಮನಸ್ಸಿಗೆ ತಿಳಿದ ನಿಜವಾದ ಅಲ್ಲಮ ಅವನೇ ಆದರೆ ಬಳಿಕ ನೋಡುವ" ಎಂದು ಮಾಯೆ ವಿಮಳೆಗೆ ಹೇಳಿದಳು. ೨೨. ಹೀಗೆ ಹೇಳಿದ ಮಾಯೆ, ವಿಮಳೆಯೊಂದಿಗೆ ಎಂದಿನಂತೆ ಶಿವಾರ್ಚನೆಗೆ ದೇವಾಲಯಕ್ಕೆ ಸಕಲವೈಭವಗಳಿಂದ ಹೋದಳು ಮತ್ತು ಮನಮೆಚ್ಚಿ ಮಧುಕೇಶ್ವರನಿಗೆ ವಂದನಾದಿಗಳನ್ನೆಲ್ಲ ಮಾಡಿ ಬಂದು ನೃತ್ಯರಂಗದಲ್ಲಿ ಶೋಭಿಸಿ ನಿಂತಳು. ೨೩. ಬಂಧಿಸಿ ಸಿದ್ಧಪಡಿಸಿದ ಜಗತ್ತೆಂಬ ಯಂತ್ರವನ್ನು ಆಡಿಸುವ ಮಾಯಾಂಗನೆಯನ್ನು ತಾನು ಆಡಿಸುತ್ತೇನೆಂಬುದನ್ನು ಪ್ರತ್ಯಕ್ಷವಾಗಿ ತೋರಿಸುವಂತೆ ಅಲ್ಲಮನು ಮದ್ದಳೆಯನ್ನು ಎಚ್ಚರಿಕೆಯಿಂದ ಹೊಂದಿಸಿ ನುಡಿಸುವನು; ಮಾಯೆ ಲೋಕವನ್ನು ಮರುಳುಮಾಡುತ್ತಾ ನರ್ತಿಸುವಳು.

ನೋಟವತ್ತಲು ಮನದ ಬೆಸುಗೆಯ
ಬೇಟವಿತ್ತಲು ಕಾಯ ಕರಣಗ
ಳಾಟವತ್ತಲುವಂತರಂಗದ ಬಯಕೆಗಳ ಬಗೆಯ
ಕೂಟವಿತ್ತಲು ಕವಲುಗೊಂಡುದು
ನಾಟಿ ಲಿಂಗದೊಳಲ್ಲಮನೊಳದು
ನೋಟಕರಿಗರಿದಾಯ್ತು ಭಾವಿಸೆ ಬೆಡಗು ಮಾಯದಲಿ ೨೪

ಲಲಿತ ನಿರ್ಮಲ ಚಂದ್ರಕಾಂತದ
ಶಿಲೆಯ ಹತ್ತಿರೆ ಲತೆಯ ದಾವಾ
ನಳನು ಕೊಳಲಾ ಜ್ವಾಲೆಯಾ ಶಿಲೆಯೊಳಗೆ ತೋರ್ಪಂತೆ
ತಿಳಿಯಲಱಿಯದ ಜನಕೆ ಮಾಯೆಯ
ತಳಿತ ಕಾಮಜ್ವಾಲೆಯಲ್ಲಮ
ನೊಳಗೆ ಪ್ರತಿಬಿಂಬಿಸಿದುದಾತನೆ ಕಾಮಿಯೆಂಬಂತೆ ೨೫

ಶೂಲಿಯೊಳು ತಾ ಹೂಣಿಸಿದ ಹೀ
ಞಾಳಿಯನು ಮಱುಕಳಿಸಿ ಕಾಮನ
ದಾಳಿಯಲಿ ತಾ ಸಿಕ್ಕಿದುದ ನೆಱೆ ನೆನೆವ ವೇದೆಯಲಿ
ತಾಳಮೇಳದ ಗತಿಯ ಗಮಕದ
ಕೀಲಣೆಯ ಕಾಲಾಟ ವಿಘಟಿಸಿ
ಚಾಳಿಯಲಿ ತಬ್ಬಿಬ್ಬುವೋಗುತಲಿರ್ದಳಾ ಮಾಯೆ ೨೬

ಈತನೇ ದಿಟದಲ್ಲಮನೊ ಮೇ
ಣೀತ ಮದ್ದಳೆಯಲ್ಲಮನೊ ನಾ
ನೀ ತರುಣಿಗೀತನನು ತೋಱಿಸಿ ತಿಳಿಯಬೇಕೆನುತ
ಪ್ರೀತಿಯಿಂದಲಿ ತನ್ನ ಮನದೊಂ
ದಾತುರತೆಯನು ಸೈರಿಸುತ ಬಳಿ
ಕೋತು ಮಿಗೆ ತನ್ನೊಳಗೆ ತಾನಿಂತೆಂದಳಾ ಮಾಯೆ ೨೭

೨೪. ನೋಟ ಅತ್ತ, ಮನದ ಬೆಸುಗೆಯ ಕಾಮಾನುರಾಗ ಇತ್ತ; ದೇಹ - ಇಂದ್ರಿಯಗಳ ಆಟ ಅತ್ತ, ಮನಸ್ಸಿನ ಬಯಕೆಗಳ ಯೋಚನೆಯ ಕೂಟ ಇತ್ತ; ಈ ಇಬ್ಬಗೆಯ ಭಾವವು ಲಿಂಗದಲ್ಲಿ ಹಾಗೂ ಅಲ್ಲಮನಲ್ಲಿ ಸೇರಿ ಕವಲುಗೊಂಡುದು. ಮಾಯೆಯಲ್ಲಿನ ಬೆಡಗು (ವಿಲಾಸ) ನೋಟಕರಿಗೆ ತಿಳಿಯಲು ಅಸಾಧ್ಯವಾಯಿತು. ೨೫. ಮನೋಹರವೂ ಪರಿಶುದ್ಧವೂ ಆದ ಚಂದ್ರಕಾಂತಶಿಲೆಯ ಹತ್ತಿರವಿರುವ ಬಳ್ಳಿಯನ್ನು ಕಾಳ್ಗಿಚ್ಚು ಆವರಿಸಲು ಆ ಬೆಂಕಿಯ ಜ್ವಾಲೆಯು ಚಂದ್ರಕಾಂತಶಿಲೆಯೊಳಗೆ ಪ್ರತಿಬಿಂಬಿಸಿ ತೋರುವಂತೆ ಸತ್ಯಾಂಶವನ್ನರಿಯದ ಜನರಿಗೆ ಮಾಯೆಯು ಹೊಂದಿದ್ದ ಮದನಾಗ್ನಿಯು ಅಲ್ಲಮನೇ ಕಾಮಿ ಎನ್ನುವಂತೆ (ಅಲ್ಲಮನೊಳಗೆ) ಪ್ರತಿಬಿಂಬಿಸಿತು. ೨೬. ಶಿವನಲ್ಲಿ ತಾನು ಮಾಡಿದ ಪ್ರತಿಜ್ಞೆಯನ್ನು ಮರಳಿ ನೆನಪಿಗೆ ತಂದುಕೊಂಡು ಕಾಮನ ದಾಳಿಗೆ ತಾನು ಸಿಕ್ಕಿದುದನ್ನು ಚೆನ್ನಾಗಿ ನೆನೆಯುತ್ತಾ ಅದರಿಂದಾದ ಸಂಕಟದಲ್ಲಿ ತಾಳ-ಮೇಳ-ಗತಿ-ಗಮಕಗಳ ತಂತ್ರದ ಜೋಡಣೆ ಬೇರೆಯಾಗಿ ಕುಣಿತದಲ್ಲಿ ಮಾಯೆಯು ಭೀತಿಗೊಳ್ಳುತ್ತಿದ್ದಳು. ೨೭. ಈತ ತಾನೇ ನಿಜವಾದ ಅಲ್ಲಮನೋ, ಇಲ್ಲವೇ ಮದ್ದಳೆಯ ಅಲ್ಲಮನೋ? ನಾನೀ ವಿಮಳೆಗೆ

ಸಂದಣಿಸುತಿಟ್ಟಣಿಸಿ ನೆಱೆದಿಹ
ಮಂದಿಯಲಿ ಸಾನಿವನನನುಚಿತ
ದಿಂದಲಿವಳಿಗೆ ನುಡಿದು ತೋಱುವುದೆಗ್ಗತನವೆನುತ
ಅಂದು ವಿಮಳೆಗೆ ಜಾತಿ ಜಾಣಿಕೆ
ಯಿಂದಲಭಿನವ ಪಾಡು ನೋಟಗ
ಳಿಂದ ಬಳಿಕಲ್ಲಮನ ತೋಱೆಸುತಿರ್ದಳಾ ಮಾಯೆ ೨೮

ಆಕೆ ಕಡೆಗಣ್ಣಿನಲಿ ತೋಱೆದ
ಡೀಕೆ ನಡುಗಣ್ಣಿನಲಿ ನೋಡುತ
ಲಾ ಕಳಾವಿದನಾಗಿ ಕಾಣಿಸುವಾತನಿಂಗಿತವ
ಲೋಕದೊಳಗಿಂತಪ್ಪ ಮಾನವ
ರಾಕೃತಿಯ ನಾ ಕಾಣೆನೆನುತಾ
ಳೋಕಿಸಿದಳನಿಮಿಷತೆಯಿಂದಾ ವಿಮಳೆಯಲ್ಲಮನ ೨೯

ಊಹಿಸುವೊಡಾ ದೇವ ಮಾನವ
ಚೋಹವನು ತೊಟ್ಟಿರ್ದನೋ ಮೇಣ್
ಮೋಹದಿಂದಾವೀಕ್ಷಿಸಲು ದಿಟವೆಮ್ಮ ಕಣ್ಣಿಂಗೆ
ರೂಹಿನಂದದೊಳಿರ್ದನೋ ಸಂ
ದೇಹವಾಗಿದೆ ತಿಳಿವೊಡೀತನ
ಗಾಹು ನಮಗರಿದಾದುದೆಂದಳು ವಿಮಳೆ ಮನದೊಳಗೆ ೩೦

ಪ್ರೀತಿಯಿಂದ ಈತನನ್ನು ತೋರಿಸಿ ತಿಳಿಯಬೇಕು ಎಂದು ಮನದಲ್ಲಿ ಆಲೋಚಿಸಿ ತನ್ನ ಮನಸ್ಸಿನ ಒಂದು ಆತುರತೆಯನ್ನು ಸ್ಥೈರಿಸುತ್ತ ಬಳಿಕ ಅತಿಮುದದಿಂದ ಮಾಯೆಯು ತನ್ನಲ್ಲಿಯೇ ಹೀಗೆ ಆಲೋಚಿಸಿದಳು. ೨೮. ಒಟ್ಟಿಗೆ ಗುಂಪು ಸೇರಿ ನೆರೆದಿರುವ ಜನರಲ್ಲಿ ನಾನು ಇವನನ್ನು ಉಚಿತವಾದ ರೀತಿಯಲ್ಲಿ ವಿಮಳೆಗೆ ಹೇಳಿ ತೋರಿಸುವುದು ದಡ್ಡತನವೆಂದು ಮಾಯೆಯು ಭಾವಿಸಿದಳು. ಆಕೆಯು ಸಹಜವಾದ ಜಾಣತನದಿಂದ, ಅಭಿನವ ಹಾಡು, ನೋಟಗಳಿಂದ ವಿಮಳೆಗೆ (ಅಲ್ಲಮನನ್ನು) ತೋರಿಸುತ್ತಿದ್ದಳು. ೨೯. ಮಾಯೆ ಕಡೆಗಣ್ಣಿನಲ್ಲಿ ತೋರಿದರೆ ವಿಮಳೆ ನಡುಗಣ್ಣಿನಲ್ಲಿ ಕಳಾವಿದನಾಗಿ ಕಾಣಿಸುವ ಆತನ ಭಾವವನ್ನು ನೋಡುತ್ತ, ಲೋಕದಲ್ಲಿ ಇಂತಹ ಮಾನವಾಕೃತಿಯನ್ನು ನಾ ಕಾಣೆ ಎಂದು ರೆಪ್ಪೆ ಬಡಿಯದೆ ಅಲ್ಲಮನನ್ನು ದೃಷ್ಟಿಸಿ ನೋಡಿದಳು. ೩೦. ಊಹಿಸುವುದಾದರೆ ಆ ದೇವನು ಮಾನವವೇಷವನ್ನು ಧರಿಸಿರುವನೊ ಅಥವಾ ಮೋಹದಿಂದ ನಾವು ನೋಡಲು ನಿಜವಾಗಿ ನಮ್ಮ ಕಣ್ಣಿಗೆ ಆಕಾರಗೊಂಡಂತೆ ಇರುವನೊ ಸಂದೇಹವಾಗಿದೆ. ಈತನ ಕಪಟ ನಮಗೆ ತಿಳಿಯಲು ಅಸಾಧ್ಯವಾದುದೆಂದು ವಿಮಳೆ ಮನಸ್ಸಿನಲ್ಲಿ ಅಂದುಕೊಂಡಳು.

ದಿಟಕೆ ಭಾವಿಸಲಾರ ಭಾವನೆ
ಘಟಿಸಿದಂತಿರೆ ತನ್ನ ರೂಪನು
ನಟಿಸಿ ತೋಱುವನಾದ ಕಾರಣ ವಿಮಳೆಯಱಿವಿಂಗೆ
ಆಟಮಟದಲಹುದಲ್ಲವೆಂಬೀ
ನಟಣೆಯನು ನೆಲೆಗೊಳಿಸುತಿರ್ದನು
ಪಟುತರಸ್ವಾತಂತ್ರ್ಯಮಹಿಮೆಯ ಮೂರ್ತಿಯಲ್ಲಮನು ೩೧

ತುಡುಕಿ ವಂದಿಸಿ ನೋಡಲಳುಪಿನ
ತೊಡಕು ತೊಲಗಿಸಿ ಬಳಿಕಲೀತನ
ಬೆಡಗು ಬಿನ್ನಾಣವನು ಕಾಣಲಿಬಹುದು ನಾವೆನುತ
ನುಡಿದು ತೋಱದೆ ಕಣ್ಣಕಾಂತಿಯ
ಕಡೆಗಳಲಿ ಕಾಣಿಸುತಲಿರ್ದಳು
ಮಡದಿ ಮಾಯೆಗೆಯಲ್ಲಮನ ವರಮೂರ್ತಿಯನು ವಿಮಳೆ ೩೨

ಕಂಗಳಲಿ ಮಾತುಗಳು ತಿಳಿವೊಡೆ
ಕಂಗಳಲಿ ಮಾಟಗಳು ಬಗೆವೊಡೆ
ಕಂಗಳಲಿ ಸಮ್ಮೋಹಗಳು ಕಂಗಳಲಿ ನೇಹಗಳು
ಕಂಗಳಲಿ ಸರ್ವಪ್ರಪಂಚುಗ
ಳಂಗನೆಯರಿಗೆ ಸಹಜವೆಂದೆನೆ
ಕಂಗಳಿಂದಾ ವಿಮಳೆ ಸೂಚಿಸಲಱಿದಳಾ ಮಾಯೆ ೩೩

ಬಳಿಕಲೊಯ್ಯನೆ ಬಱಿಯ ಬೇಟದ
ಬಳಕೆ ಬಳಲಿತು ತನ್ನ ಪೈಜೆಯ
ನೆಳಲು ನೆಲಸಿತು ಹೇವ ಹೆಚ್ಚಿತು ಕಾಂಕ್ಷೆ ಕವಲಾಯ್ತು
ತಿಳಿವು ತಿರುಗಿತು ಲಾಸ್ಯಲೀಲೆಯ
ಚಳತೆ ಚಂಡಿಸಿ ಹಿಂಗಿ ಹೋಯಿತು
ಹೊಳೆದುದಲ್ಲಮನಳಬಳವನಱಿವಾಸೆ ಮಾಯೆಯಲಿ ೩೪

೩೧. ನಿಜಕ್ಕೂ ಭಾವಿಸಲು ಎಲ್ಲರ ಎಣಿಕೆ ಕೂಡುವಂತೆ ತನ್ನ ರೂಪನ್ನು ನಟಿಸಿ ತೋರುವನಾದ ಕಾರಣ ವಿಮಳೆಯ ತಿಳಿವಿಗೆ ಮೋಸದ ನಟನೆಯನ್ನು ದಕ್ಷನೂ ಸ್ವತಂತ್ರನೂ ಮಹಿಮಾಪೂರ್ಣನೂ ಆದ ಅಲ್ಲಮನು ತಾನು ಅಹುದೋ ಅಲ್ಲವೋ ಎಂಬ ನಟನೆಯನ್ನು ಮಾಡುತ್ತಿದ್ದನು. ೩೨. ಮುಟ್ಟಿ ನಮಸ್ಕರಿಸಿ ನೋಡಲು ಆಸೆಪಡುವ ಮನದ ಭಯವನ್ನು ತೊಲಗಿಸಿ, ಬಳಿಕ ಈತನ ಬೆಡಗು-ಬಿನ್ನಾಣಗಳನ್ನು ನಾವು ಕಾಣಬಹುದೇ ಎಂದು (ಮನದಲ್ಲೇ ಎಣಿಸಿ) ಅಲ್ಲಮನ ದಿವ್ಯಮೂರ್ತಿಯನ್ನು ಬಾಲೆಯಾದ ಮಾಯೆಗೆ ನುಡಿದು ತೋರದೆ ವಿಮಳೆ ತನ್ನ ಕಡೆಗಣ್ಣೋಟದ ಕಾಂತಿಯಲ್ಲಿ ಕಾಣಿಸುತ್ತಿದ್ದಳು. ೩೩. ತಿಳಿವುದಾದರೆ ಕಣ್ಣುಗಳಿಂದಲೇ ಮಾತುಗಳು; ಯೋಚಿಸುವುದಾದರೆ ಕಣ್ಣುಗಳಿಂದಲೇ ಕಾರ್ಯಗಳು; ಕಣ್ಣುಗಳಿಂದಲೇ ಸಮ್ಮೋಹಗಳು; ಕಣ್ಣುಗಳಿಂದಲೇ ಸ್ನೇಹಗಳು; ಕಣ್ಣುಗಳಲ್ಲಿ ಸರ್ವಪ್ರಪಂಚಗಳು ಸಹಜವೆನ್ನುವಂತೆ ವಿಮಳೆ ಕಣ್ಣುಗಳಿಂದ ಸೂಚಿಸಲು ಮಾಯೆ ಅರ್ಥಮಾಡಿಕೊಂಡಳು. ೩೪. ಅನಂತರ ಮಾಯೆಯಲ್ಲಿ ಮೆಲ್ಲನೆ ಮೋಹದ ವ್ಯರ್ಥವಾದ ಪ್ರಯೋಗ ಶಕ್ತಿಗುಂದಿತು; ತನ್ನ ಪ್ರತಿಜ್ಞೆಯ ಛಾಯೆ ಮನಸ್ಸಿನಲ್ಲಿ ನೆಲಸಿತು; ನಾಚಿಕೆ

ಮುರಿದುದಾ ಮನವದಱ ಸಂಗಡ
ಮುರಿದುದಾ ನಸುನೋಟವಾಗಳೆ
ಮುರಿದುದಾ ಮುಖ ಮುತ್ತಿನೋಲೆಯ ಬೆಳಗ ಪಸರಿಸುತ
ತಿರುಗಿ ತೀವಿತು ಲಾಸ್ಯ ಮಧುಕೇ
ಶ್ವರನ ಸಮ್ಮುಖದಿಂದಲೊಯ್ಯನೆ
ಸರಿಸಗೊಂಡಿತು ಮತ್ತೆ ಮಾಯೆಯ ಮಾಟವಲ್ಲಮನ ೩೫

ನೋಟವೆಸೆದುದು ಮುನ್ನ ಮುಟ್ಟಿದ
ಬೇಟಪಲ್ಲಟೆ ಬೇಱೆ ಬುದ್ಧಿಯ
ಕೂಟದಿಂದ ಲತಾಂಗ ಲಂಬಿಸಿತಾನತಸ್ಥಿತಿಯ
ನಾಟಿ ನಲಿದುದು ಚಿತ್ತವೀ ನಟ
ನಾಟಕನ ಸಿಕ್ಕಿಸುವ ಬಗೆಯಲಿ
ಮಾಟ ಮಕರಿಸಿ ಕಾಣಲಾದುದು ಮತ್ತೆ ಮಾಯೆಯಲಿ ೩೬

ಈಕೆಯಂಗವನಱಿದು ನಾವಿ
ನ್ನೇಕೆ ಪದಮಲ ಸಸ್ವರೂಪವ
ಕಾಕರಿಗೆ ಕಾಣಿಸುವುದನುಚಿತವೆನುತೆ ತನ್ನೊಳಗೆ
ನಾಕೆನುತ ನಟ್ಟುವಿಗತನವನು
ನೂಕುತಲಿ ಮದ್ದಳೆಯ ತಾನೊಡ
ಹಾಕಿ ನಗುತಲಿ ಹೋದನಲ್ಲಮನಖಿಳಜಗವಱಿಯೆ ೩೭

ಹೆಚ್ಚಾಯಿತು; ಬಯಕೆ ಬೇರೆಯಾಯಿತು; ಜ್ಞಾನ ಮರಳಿತು; ನಾಟ್ಯಲೀಲೆಯ ಚಾಂಚಲ್ಯ ಹಟಗೊಂಡು ಹಿಂಗಿಹೋಯಿತು. ಅಲ್ಲಮನ ಶಕ್ತಿಯನ್ನು ತಿಳಿಯುವ ಆಸೆ ಅವಳಲ್ಲಿ ಹೊಳೆಯಿತು. ೩೫. ಮಾಯೆಯ ಮನಸ್ಸು ಮುರಿಯಿತು. ಅದರ ಜೊತೆಯಲ್ಲೇ ನಸುನೋಟವು ಆಗಲೇ ಮುರಿಯಿತು. ಮುತ್ತಿನ ಓಲೆಯ ಪ್ರಕಾಶವನ್ನು ಹರಡುತ್ತಾ ಮುಖ ಮುರಿಯಿತು. ಮಧುಕೇಶ್ವರನ ಇದಿರಿನಿಂದ ಮೆಲ್ಲನೆ ನೃತ್ಯವು ತಿರುಗಿ ಅನಂತರ ಆಕೆಯ ಸಂಚು ಅಲ್ಲಮನತ್ತ ಹರಿಯಿತು. ೩೬. ಹಿಂದೆ ಕಾಮಾತುರದಿಂದ ಬಯಸಿದ ಭಾವ ತಪ್ಪಿ ಶಿವತತ್ವವನ್ನು ತಿಳಿಯಬೇಕೆಂಬ ಬೇರೆಯಾದ ಬುದ್ಧಿಯ ಸೇರಿಕೆಯಿಂದ ಲತೆಯಂತೆ ಕೋಮಲವಾದ ಮಾಯೆಯ ಕೈ ಮುಂದುವರಿಯಿತು. ಅಲ್ಲಮಪ್ರಭು ಈಶ್ವರನೆಂಬ ಭಾವದಲ್ಲಿ ಅವಳ ಚಿತ್ತವು ಸಿಕ್ಕಿ ಸಂತೋಷಿಸಿತು. ನಟನಂತೆ ವೇಷ ತಾಳಿ ಬಂದಂಥ ಅಲ್ಲಮಪ್ರಭುವನ್ನು ವಶಪಡಿಸಿಕೊಳ್ಳುವ ರೀತಿಯಲ್ಲಿ ಮನಸ್ಸಿನ ಮತ್ತು ದೇಹದ ವ್ಯಾಪಾರವು ಚಲಗೂಡಿ ಮಾಯೆಯಲ್ಲಿ ಕಾಣಿಸಿಕೊಂಡಿತು. ೩೭. ಈಕೆಯ ರೀತಿಯನ್ನು ತಿಳಿದು ಅಲ್ಲಮನು ನಾವಿನ್ನೇಕೆ ಅತ್ಯಂತ ಪವಿತ್ರವಾದ ಸ್ವರೂಪನ್ನು ಸಾಮಾನ್ಯರಿಗೆ ಕಾಣಿಸುವುದು, ಇದು ಅನುಚಿತವೆಂದು ತನ್ನೊಳಗೇ ಭಾವಿಸಿ ಮದ್ದಳೆ ಬಾರಿಸುವುದನ್ನು ಬಿಟ್ಟು, ಅದನ್ನು ಒಡೆದು ಹಾಕಿ ಸರ್ವಜಗತ್ತಿಗೂ ತಿಳಿಯುವಂತೆ ನಗುತ್ತಾ ನಡೆದನು.

ಹೊಸತಿದೇನಿದ್ದದ್ದು ಸುಮ್ಮನೆ
ಗಸಣೆಯಿಲ್ಲದಿದೇಕೆಯಲ್ಲಮ
ಬಿಸುಟು ಹೋದನು ಮದ್ದಳೆಯನೆಂದೆನುತಲಲ್ಲಿರ್ದ
ಶಶಿಮುಖಿಯರಾ ಮೇಳದವರಾ
ಮುಸುಕಿ ನೋಡುವ ನೋಟಕರು ಕಾ
ಣಿಸದ ಕಾರ್ಯಕೆ ಬೆಗಡುಗೊಂಡರು ಕೂಡೆ ತಮತಮಗೆ ೩೮

ಆಯಿತೇ ಕಡೆಯಾಟ ಹೂಣಿಕೆ
ಹೋಯಿತೇ ಹುಸಿಯಾಗಿ ಕಾಮನ
ಬಾಯ ಬಾರಿಗೆ ಬಿದ್ದೆನೇ ನಗುವವರಿಗೆಡೆಯಾಗಿ
ಹಾಯೆನುತ ಹಮ್ಮೈಸಿ ಹಲುಬುತ
ಬಾಯ ಬಿಡುತಲಿ ಮುಱುಗುತಿರ್ದಳು
ಮಾಯೆ ಮಾಣದೆಯಲ್ಲಮಪ್ರಭುರಾಯನಗಲಿದರೆ ೩೯

ಬಾಲೆ ಹಂಬಲಿಸಿದೊಡೆ ಫಲವೇ
ನೇಳು ತಡೆದಿರದಲ್ಲಮನನೀ
ರೇಳು ಲೋಕದಲಱಸಿ ನೋಡುವೆವೆನುತಲಾ ವಿಮಳೆ
ಹೇಳಿದೊಡೆಯಹುದೆನುತ ಚಿತ್ತವ
ತಾಳಿ ತರಹರಗೊಂಡು ಬಳಿಕಲಿ
ಕಾಲುನಡೆಯಲಿ ಮಾಯೆ ನಡೆದಳು ಕೆಳದಿಯರು ಸಹಿತ ೪೦

೩೮. ಇದು ಹೊಸತು. ಇದ್ದೂ ಇದ್ದು ಸುಮ್ಮನೆ ತೊಂದರೆಯಿಲ್ಲದೆ ಇದೇಕೆ ಅಲ್ಲಮ ಮದ್ದಳೆಯನ್ನು ಬಿಸಾಕಿ ಹೋದನು ಎಂದೆನ್ನುತ್ತಾ ಅಲ್ಲಿ ನೆರೆದಿದ್ದ ಸುಂದರಿಯರು, ಮೇಳದವರು, ಮುತ್ತಿ ನೋಡುವ ನೋಟಕರು ಆ ಕಾರ್ಯಕ್ಕೆ ಸೂಕ್ತ ಕಾರಣ ಕಾಣದೆ ತಮ್ಮ ತಮ್ಮಲ್ಲೇ ಆಶ್ಚರ್ಯಗೊಂಡರು. ೩೯. ಅಲ್ಲಮಪ್ರಭುರಾಯ ಅಗಲಿದಾಗ ಮಾಯೆಯು, ಕೊನೆಯ ಆಟ ಮುಗಿಯಿತೆ, ಪಂಥ ಸುಳ್ಳಾಗಿ ಹೋಯಿತೆ, ನಗುವವರಿಗೆ ಅವಕಾಶವಾಗಿ ಕಾಮನ ಚಮ್ಮಟಿಗೆಯ ಏಟಿಗೆ ಒಳಗಾದೆನೇ ಹಾ ಎಂದು ಮೂರ್ಛೆ ಹೋಗಿ (ಎಚ್ಚತ್ತು) ಬಾಯಿಬಿಟ್ಟು ಪ್ರಲಾಪಿಸುತ್ತಾ ದುಃಖಿಸಿದಳು. ೪೦. "ಬಾಲೆ, ಚಿಂತೆಪಟ್ಟರೆ ಫಲವೇನು? ತಡಮಾಡದೆ ಏಳು, ಅಲ್ಲಮನನ್ನು ಹದಿನಾಲ್ಕು ಲೋಕಗಳಲ್ಲಿ ಹುಡುಕಿ ನೋಡೋಣ" ಎಂದು ವಿಮಳೆ ಹೇಳಲು, ಬಳಿಕ ಆ ಮಾತು ಸರಿಯೆಂದು ಭಾವಿಸಿ, ಅತ್ತ ಮನಸ್ಸುಗೊಟ್ಟು, ಸಮಾಧಾನದಿಂದ ಮಾಯೆಯು ಗೆಳತಿಯರೊಂದಿಗೆ ಕಾಲುನಡಿಗೆಯಲ್ಲಿ ನಡೆದಳು.

ನೆರೆದು ನೆಱೆ ಬೆಱಗಾಗಿ ನೋಡಿರೆ
ಧರಣಿಪತಿಯ ಕುಮಾರಿ ಕಾಮಾ
ತುರದಲಲ್ಲಮನೆಂಬ ಮದ್ದಳಿಗಂಗೆ ಮನಸೋತು
ಮರುಳುಗೊಂಡಕಟವನ ಬೆನ್ನಲಿ
ಹರಿದು ಹೋಗತಲಿಹಳೆಯೆನುತಲಿ
ಪುರದೊಳಗೆ ನೋಟಕರು ಸಂದಣಿಸಿದರು ಬೀದಿಯಲಿ ೪೧

ಹೋಗುತಿರ್ದಳು ಹೊಲಬ ಕೇಳುತ
ಬೇಗಬೇಗದಲಲ್ಲಮನನಾ
ವಾಗ ಕಾಬೆವೊ ಎಂಬ ಮನದಾತುರದ ತವಕದಲಿ
ಆಗಲಡವಿಯ ಬಿದ್ದು ನೆಱೆ ಭೂ
ಭಾಗದಲಿ ವನಚರಿಯರೆಂಬವೊ
ಲಾಗಿ ಮಾಯಾದೇವಿ ವಿಮಳೆ ಸಮಸ್ತ ಸಖಿನಿವಹ ೪೨

ಕಲ್ಲು ಕೊರಡುಗಳುರಿವ ಹುಡಿ ಜಡಿ
ಮುಳ್ಳು ಗಿಡು ಮಡು ತೆವರು ಮೆಳೆಗಳು
ಹಳ್ಳ ಹಾವಸಿ ಹಾವು ಹುಲಿ ಕಾಡಾನೆ ಕೋಣಗಳು
ಕೊಳ್ಳ ಕುತ್ತುಱು ಹೆಮ್ಮರಂಗಳು
ಪಲ್ಲವಿಸಿ ಜೀರೆಂಬ ಕಾನನ
ದಲ್ಲಿಯಱಸುತ ಬರುತಲಿರ್ದಳು ಮಾಯೆಯಲ್ಲಮನ ೪೩

ಬಿಸಿಲು ಸುಟ್ಟುರೆಗಾಳಿ ದೆಸೆಗಳ
ಮುಸುಗುತಿಹ ಕೆಂದೂಳಿ ಕಾಳ್ಗಿ
ಚ್ಚೆಸೆವ ನಟ್ಟಡವಿಯಲಿ ನಡೆವೈತರುತ ಕಾಲೊಡೆದು
ಬಸವಳಿದು ಬೀಳುತ್ತಲೇಳುತ
ಹಸಿವು ತೃಷೆ ಬಳಲಿಕೆಗಳಲಿ ಧೂ
ಪಿಸುತ ಬಂದಳು ಮಾಯೆ ತಾನಲ್ಲಮನನಱಸುತಲಿ ೪೪

೪೧. ರಾಜಕುಮಾರಿಯು ಕಾಮಾತುರದಲ್ಲಿ ಅಲ್ಲಮನೆಂಬ ಮದ್ದಳಿಗನಿಗೆ ಮನಸೋತು ಹುಚ್ಚಾಗಿ, ಅಯ್ಯೋ! ಅವನ ಬೆನ್ನ ಹಿಂದೆ ತನ್ನ ಗೆಳತಿಯರ ಸಮೂಹದೊಂದಿಗೆ ಓಡಿಹೋಗುತ್ತಲಿರುವಳು ಎಂದು ಹೇಳುತ್ತಾ ಪಟ್ಟಣದ ಬೀದಿಯಲ್ಲಿ ನೋಟಕರು ಗುಂಪುಗೂಡಿದರು. ೪೨. ಅಲ್ಲಮನನ್ನು ಯಾವಾಗ ಕಾಣುವೆನೊ ಎಂಬ ಮನದ ಆತುರ ಹಾಗೂ ಆಸೆಯಲ್ಲಿ ದಾರಿ ಕೇಳುತ್ತಾ ಬೇಗಬೇಗನೆ ಮಾಯೆ ಹೆಜ್ಜೆ ಹಾಕುತ್ತಿದ್ದಳು. ಆಗ ಕಾಡನ್ನು ಸೇರಿ ವಿಸ್ತಾರವಾದ ಭೂಭಾಗದಲ್ಲಿ ವನಚರಿಯರೆಂಬಂತೆ ಮಾಯಾದೇವಿ, ವಿಮಳೆ ಹಾಗೂ ಸಮಸ್ತ ಸಖಿಯರು ನಡೆದರು. ೪೩. ಕಲ್ಲು, ಕಾಳ್ಗಿಚ್ಚು, ಧೂಳು, ಚುಚ್ಚುವ ಮುಳ್ಳು, ಗಿಡ, ಮಡು, ತೆವರು, ಮೆಳೆಗಳು; ಹಳ್ಳ ಪಾಚಿಗಳು; ಹಾವು, ಹುಲಿ, ಕಾಡಾನೆ, ಕೋಣಗಳು; ಕೊಳ್ಳ, ಪೊದರು, ಹೆಮ್ಮರಗಳು (ಇವುಗಳಿಂದ ಕೂಡಿ) ಜೀರೆಂದು ಶಬ್ದಮಾಡುವ ಕಾಡಿನಲ್ಲಿ ಅಲ್ಲಮನನ್ನು ಹುಡುಕುತ್ತಾ ಮಾಯೆ ಬರುತ್ತಲಿದ್ದಳು. ೪೪. ಬಿಸಿಲು, ಸುಂಟರಗಾಳಿ, ದಿಕ್ಕು ದಿಕ್ಕುಗಳನ್ನು ಕವಿಯುತ್ತಿರುವ ಕೆಂದೂಳಿ, ಕಾಳ್ಗಿಚ್ಚುಗಳಿಂದ ಕೂಡಿರುವ ಕಾಡಿನ ಮಧ್ಯದಲ್ಲಿ ನಡೆದುಬರುತ್ತಾ, ಕಾಲು ಒಡೆದು ಶಕ್ತಿಗುಂದಿ

ಸೂಡುತಲಿ ಬಿದುಜಡೆಗಳನು ಕೈ
ಗೂಡುತಲಿ ಕಡವಸ ವಿಭೂತಿಯ
ಗೂಡು ಸಂವರಿಸುತ್ತ ಲಾಕುಳ ಯೋಗವಟ್ಟಿಗೆಯು
ಜೋಡಿಸುತ ಜಪ ತಪ ಸಮಾಧಿಯ
ಮಾಡುವವರಾ ಮಾಯೆ ಬರಲೆ
ದ್ದೋಡಿದರು ಹುಲಿಗಂಡ ಹುಲ್ಲೆಗಳಂತೆ ದೆಸೆದೆಸೆಗೆ ೪೫

ಕರುಣಿಗಳ ಬಲ್ಲಹನು ಬೋಳೆಯ
ರರಸ ಭಜಕರ ಬಂಧುವೆನಿಸುವ
ಪರಮಪಾವನನಲ್ಲಮಪ್ರಭು ತಾನೆ ತನ್ನೊಳಗೆ
ವರ ತಪೋಧನರಂಜಿಕೆಯನಾ
ತರುಣಿಯರ ಬಳಲಿಕೆಯ ನಾನೇ
ಪರಿಹರಿಸಬೇಕೆನುತಲಾಕ್ಷಣ ಸುಳುಹು ತೋಜಿದನು ೪೬

ನಿಲಿಸಿ ಭಯ ಬೇಡೆಂದು ತಾಪಸ
ಕುಲಕೆಯಭಯವ ಕೊಟ್ಟು ಕರುಣದ
ಬಳಕೆಯಲಿ ತಾನವರಿಗೊಬ್ಬ ತಪಸ್ವಿಯಂದದಲಿ
ನಲಿದು ಹರಿತಹ ಮಾಯೆಯನು ಮೂ
ದಲಿಸಿ ಮುರಿದೋಡಿಸುವೆನೆನುತಲಿ
ಸುಳುಹುದೋಜಿದನಾಕೆಗಲ್ಲಮ ಮುನ್ನಿನಂದದಲಿ ೪೭

ಬೀಳುತೇಳುತ್ತಾ, ಹಸಿವು, ಬಾಯಾರಿಕೆ, ಆಯಾಸಗಳಿಂದ ಬಳಲುತ್ತಾ ಮಾಯೆಯು ಅಲ್ಲಮನನ್ನು ಹುಡುಕುತ್ತಾ ಬಂದಳು. ೪೫. ಮಾಯೆಯು ಬರಲು ಬಿಟ್ಟ ಜಡೆಗಳನ್ನು ಗಂಟುಕಟ್ಟುತ್ತಾ, ಕೃಷ್ಣಾಜಿನವನ್ನು ಕೈಗೆ ಸೇರಿಸುತ್ತಾ, ವಿಭೂತಿಯ ಪೆಟ್ಟಿಗೆಯ ಗಂಟುಕಟ್ಟುತ್ತಾ, ಯೋಗದಂಡ ಪಟ್ಟಿಕೆಗಳನ್ನು ಜೋಡಿಸುತ್ತಾ, ಜಪ-ತಪ-ಯೋಗ ಮಾಡುವವರು (ಮಾಯೆಯನ್ನು ಕಂಡು) ಹುಲಿಯನ್ನು ಕಂಡ ಜಿಂಕೆಗಳ ರೀತಿಯಲ್ಲಿ ದಿಕ್ಕು ದಿಕ್ಕುಗಳಿಗೆ ಎದ್ದು ಓಡಿದರು. ೪೬. ಕರುಣಿಗಳ ಒಡೆಯ, ದೇವತೆಗಳ ಅರಸ, ಭಜಿಸುವವರ ಬಂಧು ಎನ್ನಿಸಿದ ಪರಮಪಾವನನಾದ ಅಲ್ಲಮಪ್ರಭು ತನ್ನಲ್ಲೇ ಆಲೋಚಿಸಿ ಶ್ರೇಷ್ಠ ತಪಸ್ವಿಗಳ ಅಂಜಿಕೆಯನ್ನು, ಆ ತರುಣಿಯರ ಬಳಲಿಕೆಯನ್ನು ತಾನೇ ಪರಿಹರಿಸಬೇಕೆಂದು ಆ ಕ್ಷಣವೇ ಮೈದೋರಿದನು. ೪೭. ಅಲ್ಲಮನು ಓಡುತ್ತಿದ್ದ ತಪಸ್ವಿಗಳನ್ನು ತಡೆದು ನಿಲ್ಲಿಸಿ, ಭಯಬೇಡವೆಂದು ಓರ್ವತಪಸ್ವಿಯ ರೂಪಿನಲ್ಲಿ ಕರುಣಾಮಯನಾಗಿ ಆ ತಪಸ್ವಿಗಳ ಸಮೂಹಕ್ಕೆ (ಕಾಣಿಸಿಕೊಂಡು) ಧೈರ್ಯ ಗೊಟ್ಟನು. (ಆದರೆ) ನಲಿದು ಓಡಿಬರುತ್ತಿದ್ದ ಮಾಯೆಯನ್ನು ಮೂದಲಿಸಿ, ಭಂಗಿಸಿ ಹಿಂತಿರುಗಿಸುವೆನೆಂದು ಮೊದಲಿನಂತೆ ಮಾಯೆಗೆ ರೂಪುದೋರಿದನು.

ತೃಷೆಗಳಳಿತುವು ಕಾಣುತಲಿ ಕಡು
ವಸುಗಳಡಗಿದವಡವಿಯಲಿ ಕಂ
ಪಿಸುತ ಮುಗ್ಗುತ ಕೆಡವುದಲಿ ಮಿಗೆ ಬಂದ ಬಳಲಿಕೆಯು
ಮಸಕಮಾದುದು ವಿಶ್ರಮಿಸಿದರು
ಶಶಿಮುಖಿಯರೆಯ್ತಂದು ಕಾಣುತ
ಮುಸುಕಿ ಮುತ್ತಿದರಲ್ಲಮನ ಶ್ರೀಪಾದಪಂಕಜವ ೪೮

ಲೇಸುಮಾಡಿದೆಯಯ್ಯ ಮಾಯೆಯ
ನೀಸು ದಿನ ಮನವೊಲಿಸಿ ಕಡೆಯಲಿ
ಘಾಸಿಮಾಡುವುದುಚಿತವೇ ನಿನಗೆನುತ ಕೆಳದಿಯರು
ಆ ಸದಾನಂದೈಕಮೂರ್ತಿ ವಿ
ಲಾಸಿಯಲ್ಲಮಲಿಂಗನಿದಿರಲಿ
ಸೂಸಿದರು ತಮ್ಮೊಡತಿಯಾಸಱು ಬೇಸಱೆಲ್ಲವನು ೪೯

ಆರು ಮೊದಲಲಿ ಬಯಸ ಹೇಳಿದ
ರಾರು ಕಾಣುತ ಕರೆಸ ಹೇಳಿದ
ರಾರು ತನ್ನನು ಬಳಿಕುದಾಸಿನ ಮಾಡ ಹೇಳಿದರು
ನಾರಿಯರಿಗಿಮು ಸಹಜ ಸಂಚಲ
ಕಾರಣಿಕತನ ತನ್ನ ತಾನೇ
ದೂರಿಸಿದೊಡಾನೇನ ಮಾಡುವೆನೆಂದನಲ್ಲಮನು ೫೦

ಹೇಳಬಾರದು ನೀನು ಮಾಡಿದ
ಬೇಳುವೆಯ ಬೇಗೆಯನು ಲೋಗರ
ನಾಳವಾಡಿಯೆ ನುಡಿದೆಯಲ್ಲದೆ ನೀನು ಕುಹಕದಲಿ
ಕೀಳಿಲಲಿ ಬಾಯ್ವಿಟ್ಟು ಮಾಯೆಯ
ವೇಳೆಯನು ಕಾಯ್ದಿರ್ದು ಕಡೆಯಲಿ
ಕೀಳು ಮಾಡಿಯೆ ನುಡಿದೆಯೆಂದರು ಸತಿಯರಲ್ಲಮನ ೫೧

೪೮. ಅಲ್ಲಮನನ್ನು ಕಂಡ ಕ್ಷಣ ಆ ಶಶಿಮುಖಿಯರ ಬಾಯಾರಿಕೆ ಬತ್ತಿಹೋಯಿತು. ಅತಿಯಾದ ಹಸಿವೆ ಅಡಗಿತು. ಕಾಡಿನಲ್ಲಿ ಕಂಪಿಸುತ್ತಾ, ಮುಗ್ಗರಿಸುತ್ತಾ, ಬೀಳುತ್ತಾ ಬರಲು ಉಂಟಾಗಿದ್ದ ಅತಿಯಾದ ಬಳಲಿಕೆ ಮಾಯವಾಯಿತು. ಆ ಸುಂದರಿಯರು ವಿಶ್ರಾಂತಿ ಹೊಂದಿ ಅಲ್ಲಮನಲ್ಲಿಗೆ ಬಂದು ಅವನ ಸಂಪದ್ಭರಿತವಾದ ಪಾದಕಮಲಗಳನ್ನು ಕಾಣುತ್ತಲೇ ಮೇಲೆ ಬಿದ್ದು ಮುತ್ತಿದರು. ೪೯. ಮಾಯಾದೇವಿಯ ಗೆಳತಿಯರು ಆ ಸದಾನಂದ ಮೂರ್ತಿಯಾದ ವಿಲಾಸಿ ಅಲ್ಲಮಲಿಂಗನ ಇದಿರಿನಲ್ಲಿ ತಮ್ಮ ಒಡತಿಯ ಬಳಲಿಕೆ ತೊಳಲಿಕೆಗಳೆಲ್ಲವನ್ನೂ ಹೇಳುತ್ತಾ "ಒಳ್ಳೆಯದನ್ನು ಮಾಡಿದೆಯಯ್ಯಾ, ಇಷ್ಟು ದಿವಸ ಮಾಯೆಯ ಮನವೊಲಿಸಿ ಕೊನೆಯಲ್ಲಿ ತೊಂದರೆ ಮಾಡುವುದು ನಿನಗೆ ಯೋಗ್ಯವೇ?" ಎಂದು ಆಕ್ಷೇಪಿಸಿದರು. ೫೦. ಅದಕ್ಕೆ ಅಲ್ಲಮ "ಯಾರು ಮೊದಲಿಗೆ ಬಯಸ ಹೇಳಿದರು? ಯಾರು ಕಾಣುತ್ತಲೇ ಕರೆಸ ಹೇಳಿದರು? ಅನಂತರ ಯಾರು ತನ್ನನ್ನು ಉದಾಸೀನ ಮಾಡಹೇಳಿದರು? ಸ್ತ್ರೀಯರಿಗೆ ಈ ಉದ್ದೇಶಸಾಧಕತನ ಹಾಗೂ ಚಾಂಚಲ್ಯ ಸಹಜವಾದುದು. (ನಿಮ್ಮೊಡತಿ) ತನಗೆ ತಾನೇ ವ್ಯಥೆಪಟ್ಟರೆ ನಾನೇನು ಮಾಡಲಿ?" ಎಂದು ಹೇಳಿದನು. ೫೧. "ನೀನು ಮಾಡಿದ ದುರಾಲೋಚನೆಯ ತಾಪವನ್ನು ಹೇಳಬಾರದು.

ತಾನೆ ಕಂಗೆಟ್ಟಿರಲು ಕರುಣಿಸಿ
ನಾನು ಸುಳಿದರೆ ನನ್ನನಾರೆಂ
ದೇನುವನು ಭಾವಿಸದೆ ಬೆಬ್ಬನೆ ಬೆಱೆತಹಂಕರಿಸಿ
ತಾನೆ ತನ್ನ ವಿಕಾರದಿಂದಿರ
ಲೇನು ಮಾಡುವೆ ಬಳಿಕ ಸಾಕೆಂ
ದಾನು ಬಂದೆನು ಬಿಟ್ಟು ತಪ್ಪೇನೆಂದನಲ್ಲಮನು ೫೨

ಎಂದ ಮಾತನು ಕೇಳಿ ಕಡು ಖತಿ
ಯಿಂದಲಹುದೈ ಧೂರ್ತ ನೀ ಗತಿ
ಯೆಂದು ನಂಬಿದೊಡೊಳ್ಳಿತಾಯಿತು ಬಳಿಕ ಮತ್ತೇನು
ಸಂದ ಸಟೆ ಕುತ್ಸಿತ ಕುಮಂತ್ರದ
ಬಂದಿಕಾಱನು ಚಾಟು ಚಪಳಿಗ
ನೆಂದು ನಾ ಮುಂದಱಿಯೆನೆಂದಳು ಮಾಯೆಯಲ್ಲಮನ ೫೩

ಕುಟಿಲ ಕುತ್ಸಿತ ಧೂರ್ತ ದುರ್ಜನ
ವಟಮಟಗತನ ಕಪಟ ಕಳವಳ
ಸಟೆ ವಿಕಾರಗಳಲ್ಲಮನವೋ ತಿಳಿಯೆ ಮಾಯೆಯವೊ
ದಿಟಕೆ ಬಲ್ಲ ವಿರಂಚಿ ಹರಿ ಸುರ
ಕಟಕ ವರಮುನಿ ಸಿದ್ಧ ಸಾಧಕ
ಪಟುಗಳೆಲ್ಲರ ಕೇಳಿ ನೋಡೆನುತಿರ್ದನಲ್ಲಮನು ೫೪

ಅನ್ಯರನ್ನು ಕುಹಕದಿಂದ ನಿಂದಿಸಿ ನುಡಿದೆಯಲ್ಲದೆ ಸಮಯ ಕಾದಿದ್ದು ಮಾಯೆಯನ್ನು ಕೀಳುಮಾಡಿ ಹೀನವಾಗಿ ಬಾಯಿಬಿಟ್ಟು ನುಡಿದೆ" ಎಂದು ಆ ಸತಿಯರು ಅಲ್ಲಮನನ್ನು ಆಕ್ಷೇಪಿಸಿದರು. ೫೨. ಅವಳು ಕಂಗೆಟ್ಟಿರಲು "ನಾನು ಕರುಣಿಸಿ ಕಾಣಿಸಿಕೊಂಡರೆ ನಾನು ಯಾರೆಂದು ವಿಚಾರಮಾಡದೆ, ಏನೋ ಭ್ರಾಂತಿಯಿಂದ ಮೋಹಗೊಂಡು ಅಹಂಕಾರದಿಂದ ಕೂಡಿ ಅವಳೇ ನನ್ನ ಸಂಬಂಧವಾದ ಹುಚ್ಚಿನಲ್ಲಿರಲು ನಾನೇನು ಮಾಡಲಿ? ಅನಂತರ ನಾನೇ ಸಾಕೆಂದು ಬಿಟ್ಟು ಬಂದೆನು, ನನ್ನಲ್ಲಿ ತಪ್ಪೇನು?" ಎಂದು ಅಲ್ಲಮ ನುಡಿದನು. ೫೩. ಅಲ್ಲಮನ ಮಾತು ಕೇಳಿದ ಮಾಯೆಯು ಅತಿಕೋಪದಿಂದ "ಧೂರ್ತ, ಅಹುದು, ನೀನೆ ಗತಿಯೆಂದು ನಂಬಿದ್ದಕ್ಕೆ ಬಳಿಕ ಒಳ್ಳೆಯದಾಯಿತು! ಮತ್ತೇನು ಸುಳ್ಳು, ನಿಂದೆ, ದುರಾಲೋಚನೆಗಳಿಂದ ಕೂಡಿದ ಕಳ್ಳ, ಚತುರೋಕ್ತಿಯನ್ನಾಡುವ ಚಪಲಿಗ ಎಂದು ನಾನು ಮೊದಲೇ ತಿಳಿದಿರಲಿಲ್ಲ" ಎಂಬುದಾಗಿ ಅಲ್ಲಮನಿಗೆ ಹೇಳಿದಳು. ೫೪. "ವಂಚನೆ, ನಿಂದೆ, ಕಪಟ, ನೀಚತನ, ಮೋಸ, ಕುತಂತ್ರ, ಕಳವಳ, ಸುಳ್ಳು, ವಿಕಾರ-ಇವೆಲ್ಲಾ ಅಲ್ಲಮನವೋ ಇಲ್ಲವೇ ಮಾಯೆಯವೋ ಎಂಬುದನ್ನು ಬ್ರಹ್ಮ, ವಿಷ್ಣು, ದೇವತೆಗಳ ಸಮೂಹ, ಸಿದ್ಧ ಸಾಧಕಪಟುಗಳೆಲ್ಲರೂ ಬಲ್ಲರು. ಅವರನ್ನು ಕೇಳಿ ನೋಡು" ಎಂದು

ಒಳ್ಳಿಹವರ್ಗೆ ನೀನು ತೋಱಿದ
ರೆಲ್ಲರೆನ್ನಾಧೀನ ಪಕ್ಷದ
ಬಲ್ಲಿದರು ಕೇಳವರುಗಳ ಬಲ್ಲವಿಕೆಗಳ ಕೇಡ
ಎಲ್ಲವನು ಹೇಳುವೆನು ನಿನ್ನಯ
ಸೊಲ್ಲ ಸೋಲಿಸಿ ಸಿಕ್ಕಿಸುವೆನೆನು
ತಲ್ಲಿ ಮಾಯೆ ನಿಜಪ್ರತಾಪವನಾಡತೊಡಗಿದಳು ೫೫

ಹರಿಯಯೆದೆಯನು ಮೆಟ್ಟಿದೆನು ಶಂ
ಕರನನರ್ಧಾಂಗದೊಳು ನೆಟ್ಟನೆ
ಹುರಿಸುಟಿಗೆಯಾಡಿದೆನು ಬ್ರಹ್ಮನ ಬಾಯ ಮುದ್ರಿಸಿದೆ
ಸುರನರೋರಗರೆಂಬ ಮಱವೆಯ
ಮರುಳ ತಂಡವನೆನ್ನ ತೊತ್ತಿರ
ಶರಣುಹೊಗಿಸಿದೆನೇನ ಕೇಳುವೆಯೆಂದಳಾ ಮಾಯೆ ೫೬

ಜಿನುಗುಮತಿಗಳ ಸಿದ್ಧಸಾಧಕ
ಮುನಿಗಳೆಂಬವದಿರುಗಳನು ನಾ
ಮುನಿದು ಕಚ್ಚುಟ ಕಂತೆ ಬತ್ತಲೆ ಬೋಳು ಜಡೆ ಲೋಚು
ಅನಶನವ್ರತ ನಾರು ಬೇರೆಂ
ಬನಿತಱಲಿ ದಂಡಿಸುವೆನಾ ಕಾ
ನನದ ಮರುಳರನೇನ ಕೇಳುವೆಯೆಂದಳಾ ಮಾಯೆ ೫೭

ಆದಿಯಂತವನಱಿಯದೆಲ್ಲರ
ವೇದಿಸಿದೆನೆಂದಕಟ ಗರ್ವಿಸಿ
ಹೋದೆ ನಿನ್ನ ನಿಜಸ್ವಭಾವದ ಮತ್ತತನದಿಂದೆ
ಆದೊಡವರಂತಿರಲಿ ಮಿಕ್ಕಿನ
ವೇದಶಾಸ್ತ್ರಪುರಾಣವಾಗಮ
ವಾದಿಯಾದವಱಿಂದೆ ಕೇಳೆನುತಿರ್ದನಲ್ಲಮನು ೫೮

ಅಲ್ಲಮ ನುಡಿದನು. ೫೫. "ನೀನು ಹೇಳಿದವರೆಲ್ಲಾ ಒಳ್ಳೆಯವರಾಗಿರುವರು. ನೀನು ತೋರಿದವರೆಲ್ಲಾ ನನ್ನ ಅಧೀನಕ್ಕೆ ಒಳಗಾದ ಶ್ರೇಷ್ಠರು. ಅವರುಗಳ ಶೌರ್ಯದ ಭಂಗ ವೆಲ್ಲವನ್ನು ಹೇಳುವೆನು. ನಿನ್ನ ಮಾತನ್ನು ಸೋಲಿಸಿ ನಿನ್ನನ್ನೇ ಸಿಕ್ಕಿಸುವೆನು" ಎಂದು ಮಾಯೆ ತನ್ನ ಪ್ರತಾಪವನ್ನು ಹೇಳತೊಡಗಿದಳು. ೫೬. "ಏನ ಕೇಳುವೆ, ವಿಷ್ಣುವಿನ ಎದೆಯನ್ನು ಮೆಟ್ಟಿದೆನು. ಶಂಕರನ ಅರ್ಧಾಂಗದಲ್ಲಿ ನೆಲೆಸಿದೆನು. ಬ್ರಹ್ಮನ ಬಾಯನ್ನು ಮುದ್ರಿಸಿದೆನು. ಸುರ, ನರ, ನಾಗರೆಂಬ ಅಜ್ಞಾನಿಗಳ, ಹುಚ್ಚರ ತಂಡವನ್ನು ನನ್ನ ಸೇವಕರಿಗೆ ಶರಣಾಗತ ರಾಗುವಂತೆ ಮಾಡಿದೆನು" ಎಂದು ಮಾಯೆಯು ಹೇಳಿದಳು. ೫೭. "ಅಲ್ಪಮತಿಗಳ ಹಾಗೂ ಸಿದ್ಧಸಾಧಕ ಮುನಿಗಳೆಂಬವರುಗಳ ಮೇಲೆ ನಾನು ಕೋಪಗೊಂಡು ಕೌಪೀನ, ಕಂತೆ, ಬತ್ತಲೆ, ಬೋಳು, ಜಡೆ, ತಲೆಯ ಕೂದಲುಗಳನ್ನು ಕೀಳಿಸಿಕೊಳ್ಳುವುದು, ಅನಶನವ್ರತ, ನಾರು, ಬೇರು-ಎಂಬಿವುಗಳಲ್ಲಿ ದಂಡಿಸುವೆನು. ಆ ಕಾಡಿನಲ್ಲಿನ ಹುಚ್ಚರನ್ನೇನು ಕೇಳುವೆ?" ಎಂದು ಮಾಯೆ ನುಡಿದಳು. ೫೮. "ಆದಿ ಅಂತ್ಯವ ತಿಳಿಯದೆ ಎಲ್ಲರನ್ನೂ ತಿಳಿದೆನೆಂದು, ಅಯ್ಯೋ, ನಿನ್ನ ನಿಜಸ್ವಭಾವದ ಮತ್ತತನದಿಂದ ಗರ್ವಿಸಿ ಹೋದೆ. ಆದರೂ

ಬಿಟ್ಟು ಕಳೆ ಬಱುಮಾತ ಶಬ್ದಗ
ಳೊಟ್ಟಲೆಂಬುವು ತನ್ನ ಪಾದದ
ಘಟ್ಟಣೆಯ ಧ್ವನಿಯವಱಲಾನಿನ್ನೇನ ಕೇಳುವೆನು
ಮುಟ್ಟ ತಿಳಿವೊಡೆ ಕೇಳು ನಿನ್ನಯ
ಕಟ್ಟಳೆಯತನವೈಸೆ ಎನುತಾ
ದಿಟ್ಟ ಮಾಯಾದೇವಿ ನುಡಿದಳು ಮತ್ತೆಯಲ್ಲಮನ ೫೯

ಎಲ್ಲರನು ನೀ ಜಱೆದು ಝಾಡಿಸಿ
ಹೊಳ್ಳುಗಳೆದೊಡೆ ನಿನ್ನಲೆನ್ನಲಿ
ಹೊಲ್ಲವೊಳ್ಳಿತನಱಿವ ಮಾತಂತಿರಲಿ ಹೇಳೊಂದ
ಬಲ್ಲೆಯಾದೊಡೆ ನೀನು ನಿನ್ನಯ
ಖುಲ್ಲತನವನು ಬಿಟ್ಟು ನಿರ್ಮಳ
ದಲ್ಲಿ ಮಾತಾಡೆಂದು ನುಡಿದನು ಮಾಯೆಗಲ್ಲಮನು ೬೦

ಹರಿಹರಬ್ರಹ್ಮಾದಿಗಳನೆ
ಲ್ಲರನು ನಿನ್ನಾಧೀನವೃತ್ತಿಯ
ಲಿರಿಸಿ ಮಿಗೆ ಜೋಡಾಡಿ ಕಾಡುವೆನೆಂದು ನೀ ನುಡಿದೆ
ಮರುಳೆ ನಿನ್ನನದಾರು ನಾನಾ
ಪರಿಯಲಾಡಿಸುವವರು ನೀನಿದ
ಪರಿಕಿಸದೆ ಗರ್ವದಲಿ ನುಡಿವರೆ ಮಾಯೆ ಕೇಳೆಂದ ೬೧

ಅವರ ಮಾತು ಅಂತಿರಲಿ. ಉಳಿದ ವೇದಶಾಸ್ತ್ರ ಪುರಾಣ ಆಗಮ ಇವೇ ಮೊದಲಾದವುಗಳಿಂದ ಕೇಳು" ಎಂದು ಅಲ್ಲಮ ಉತ್ತರಕೊಟ್ಟನು. ೫೯. "ವ್ಯರ್ಥವಾದ ಮಾತುಗಳನ್ನು ಬಿಟ್ಟುಬಿಡು. ಶಬ್ದಗಳ ರಾಶಿ ಎಂಬವು ನನ್ನ ಪಾದಗಳ ಬಡಿತದ ಧ್ವನಿ. ಅವುಗಳಲ್ಲಿ ನಾನಿನ್ನೇನ ಕೇಳಲಿ. ಚೆನ್ನಾಗಿ ತಿಳಿಯಬಯಸುವೆಯಾದರೆ, ಕೇಳು, ನಿನ್ನ ನಿಯಾಮಕತನ ಇಷ್ಟೆ ಅಲ್ಲವೆ!" ಎಂದು ಧೈರ್ಯಶಾಲಿನಿಯಾದ ಮಾಯಾದೇವಿಯು ಮತ್ತೆ ನುಡಿದಳು. ೬೦. "ಎಲ್ಲರನ್ನೂ ನೀನು ನಿಂದಿಸಿ ಕೊಡಹಿ ತಿರಸ್ಕಾರ ಮಾಡಿದರೆ ನಿನ್ನಲ್ಲಿ ಹಾಗೂ ನನ್ನಲ್ಲಿ ಕೆಡಕು-ಒಳಿತುಗಳನ್ನು ತಿಳಿವ ಮಾತಂತಿರಲಿ, ತಿಳಿದಿರುವೆಯಾದರೆ ಒಂದು ಮಾತು ಹೇಳು. ನೀನು ನಿನ್ನ ಮೂರ್ಖತನವನ್ನು ಬಿಟ್ಟು ಪರಿಶುದ್ಧ ಮನಸ್ಸಿನಿಂದ ಮಾತನಾಡು" ಎಂದು ಮಾಯೆಗೆ ಅಲ್ಲಮ ನುಡಿದನು. ೬೧. "ಹರಿಹರ ಬ್ರಹ್ಮಾದಿಗಳೆಲ್ಲರನ್ನು ನಿನ್ನ ಅಧೀನಕ್ಕೆ ಒಳಪಡಿಸಿ ಚೆನ್ನಾಗಿ ತಿರಸ್ಕರಿಸಿ ಕಾಡುವೆನೆಂದು ನೀನು ಹೇಳಿದೆ. ಹುಚ್ಚಿ, ನಿನ್ನನ್ನು ನಾನಾ ರೀತಿಯಲ್ಲಿ ಆಡಿಸುತ್ತಿರುವವರಾರು? ನೀನಿದನ್ನು ಪರೀಕ್ಷಿಸದೆ ಗರ್ವದಿಂದ ನುಡಿಯುವುದೆ? ಮಾಯೆ ಕೇಳು" ಎಂದು ಅಲ್ಲಮ ನುಡಿದನು.

ಆರನಾರಾಡಿಸುವರೆಂಬುದ
ನಾರು ಬಲ್ಲರು ಸಾಕು ಬಜೆಯ ವಿ
ಚಾರವಂತಿರಲಿನ್ನದೇ ಹಜೆಮಾತನಾಡಿದರೆ
ಸಾರಲಜೆವವೆ ನಮಗೆ ನಮ್ಮ ಮ
ನೋರಥಂಗಳು ನಿನ್ನ ಧೂರ್ತ ವಿ
ಕಾರವೆಲ್ಲವ ಬಿಟ್ಟು ಕೃಪೆಮಾಡೆಂದಳಾ ಮಾಯೆ ೬೨

ಮಾಡಿದನಿತರ ಕರ್ಮಫಲ ಕೈ
ಗೂಡಿತುಳ್ಳುದು ನಿನಗದೇನಸು
ಬೇಡುತಿಹೆ ಬೇಸಜಿದೆ ಬಜುದೆಗೆ ಬಂದು ಬೆಂಬಿಡದೆ
ಕಾಡಬೇಡಿನ್ನೇಳು ಸಖಿಯರ
ಕೂಡಿಕೊಳುತಲಿ ಮರಳಿ ನಿನ್ನಯ
ಬೀಡ ಸಾರುವದೊಳ್ಳಿತೆಂದನು ಮಾಯೆಗಲ್ಲಮನು ೬೪

ಭಾಷೆ ಸಲ್ಲದೆ ಹೋಯಿತೆನ್ನಯ
ಪಾಸಿ ವರ್ಧಿಸಿ ಹೊತ್ತುತಿದೆ ಕೈ
ಲಾಸದವರಿದ ಕೇಳಿ ನಗುವಂತಾಯಿತೇ ಎನಗೆ
ಈಸು ಧಾವತಿಯಿಂದೆ ನಾ ಕಡು
ಘಾಸಿಯಾದೆನು ಬೆಂದ ಹುಣ್ಣನು
ಕೀಸುವರೆ ಕಂಬಿಯಲಿ ಕೇಳಕಟೆಂದಳಾ ಮಾಯೆ ೬೪

ಮಿಕ್ಕು ಮಿಗೆ ಸಾಸುವೆಯ ರಾಶಿಯ
ನೊಕ್ಕಿದೆತ್ತಿಗೆ ಮೇದು ಮೆಲುಕಿಜೆ
ವಕ್ಕಜುಂಟೇ ಮರುಳೆ ನೀನಾ ವಿಧಿಯ ಪರಿಗಳಲಿ
ಹೊಕ್ಕು ಹೋರಟೆಗೊಂಡು ಕಾಮದ
ಲುಕ್ಕಿ ಬಳಿಕಿನ್ನೇನು ಕೃಪೆಯನು
ಲೆಕ್ಕಿಸಲು ಕೈಸಾರಬಲ್ಲುದೆ ಮಾಯೆ ಕೇಳೆಂದ ೬೫

೬೨. "ಯಾರನ್ನು ಯಾರು ಆಡಿಸುತ್ತಾರೆಂಬುದನ್ನು ಯಾರು ಬಲ್ಲರು. ಸಾಕು ವ್ಯರ್ಥ ವಿಚಾರ ಅದು ಹಾಗಿರಲಿ, ಇನ್ನು ಅಂತಹದೇ ಚುಚ್ಚು ಮಾತನಾಡಿದರೆ ನಮ್ಮ ಮನೋರಥಗಳು ನೆರವೇರುತ್ತವೆಯೆ? ನಿನ್ನ ಧೂರ್ತವಿಕಾರಗಳನ್ನೆಲ್ಲಾ ಮರೆತು ನನ್ನ ಮೇಲೆ ಕೃಪೆಮಾಡು" ಎಂದು ಮಾಯೆ ಬೇಡಿದಳು. ೬೩. "ನೀನು ಮಾಡಿದಷ್ಟರ ಕರ್ಮಫಲ ನಿನ್ನ ಕೈಸೇರಿತು. ಅದೇನನ್ನು ಬೇಡುತ್ತಿರುವೆ? ಬೇಸರಿಸದೆ, ವ್ಯರ್ಥವೆಂದು ಭಾವಿಸದೆ, ಬೆನ್ನುಬಿಡದೆ ಬಂದು ಕಾಡಬೇಡ, ಇನ್ನೇಳು. ಸಖಿಯರೊಂದಿಗೆ ಮರಳಿ ನಿನ್ನಯ ಬೀಡು ಸೇರುವುದು ಒಳ್ಳೆಯದು" ಎಂದು ಮಾಯೆಗೆ ಅಲ್ಲಮನು ಹೇಳಿದನು. ೬೪. "ಅಯ್ಯೋ ಕೇಳು, ನನ್ನ ಪ್ರತಿಜ್ಞೆ ಸಲ್ಲದೆ ಹೋಯಿತು. ನನ್ನ ಪಂಥ ಹೆಚ್ಚಿ ಬೆಂಕಿಯಂತೆ ಆವರಿಸುತ್ತಿದೆ. ಕೈಲಾಸದವರು ಇದನ್ನು ಕೇಳಿ ನನ್ನನ್ನು ನೋಡಿ ನಗುವಂತಾಯಿತೇ? ಇಷ್ಟೆಲ್ಲಾ ಶ್ರಮದಿಂದ ನಾನು ಕಡುಕಷ್ಟಕ್ಕೆ ಒಳಗಾದೆನು. (ಮೊದಲೇ) ಬೆಂದ ಗಾಯವನ್ನು ಸರಳಿನಿಂದ ಕೀಸುತ್ತಾರೆಯೆ" ಎಂದು ಮಾಯೆ ನುಡಿದಳು. ೬೫. "ಅತ್ಯಧಿಕವಾದ ಸಾಸುವೆಯ ರಾಶಿಯನ್ನು (ಮುಂದೆ) ಚೆಲ್ಲಿದ ಎತ್ತಿಗೆ (ಅದನ್ನು) ಮೇದು ಮೆಲುಕುಹಾಕುವ

ಆವ ಪರಿಯಿಂದಾದೊಡೇನೈ
ದೇವಪೂಜೆಯ ಮಾಡಿದೊಡೆ ಸಂ
ಭಾವಿಸಲು ಬರುತಿದೆ ನಿರರ್ಥಕೆ
ದಾವತಿಯೆ ಕಡೆತನಕ ದಿಟಕೆಯ
ದಾವ ಕೊಱತೆಯ ನಾನು ಮಾಡಿದೆನೆಂದಳಾ ಮಾಯೆ ೬೬

ತರಳೆ ತನ್ನಯ ಹೊನ್ನು ಸಲ್ಲದೆ
ತಿರುಗಿ ಬಂದೊಡೆಯಕ್ಕಸಾಲೆಯ
ದುರುಳತನದಲಿ ಬಯ್ಯಬಹುದೇ ನೀನು ಮತಿಗೆಟ್ಟು
ಹರನನರ್ಚಿಸುವಂಗಭೇದಾಂ
ತರವನಱಿಯದೆ ಸಟೆಯ ಭಕ್ತಿಯ
ಭರದಲೇತಕೆ ಫಲವ ಬಯಸುವೆ ಮಾಯೆ ಕೇಳೆಂದ ೬೭

ನಾನು ನಿನ್ನಲಿ ಸುಖವ ಸುಱೆದು ಸು
ಮಾನದಲಿ ನಿನ್ನಿಂದ ಶಿವತ
ತ್ವಾನುಭಾವವ ನಿಜವನಱಿದೆನ್ನಯ ಪ್ರತಿಜ್ಞೆಯನು
ಊನವಿಲ್ಲದೆ ಸಲಿಸಿ ಶಿವನಾ
ಸ್ಥಾನದಲಿ ನಾ ಮೆಱೆವೆನೆಂಬಭಿ
ಮಾನದಲಿ ನಂಬಿರ್ದೆನೆಂದಳು ಮಾಯೆಯಲ್ಲಮನ ೬೮

ಪ್ರೀತಿಯುಂಟೇ? ಹುಚ್ಚಿ, ನೀನು ಆ ವಿಧಿಯ ನಿಯಮದಂತೆ ಹೊಕ್ಕು, ವಿಷಯಗಳಲ್ಲಿ ಸಿಕ್ಕಿ, ಹೋರಾಟ ನಡೆಸಿ, ಕಾಮದಿಂದ ಉಕ್ಕಿ ಬಳಿಕ ಕೃಪೆಯನ್ನು ಬಯಸಲು ಅದು ದೊರಕಬಲ್ಲುದೆ? ಮಾಯೆ ಕೇಳು" ಎಂದು ಅಲ್ಲಮ ನುಡಿದನು. ೬೬. "ದೇವಪೂಜೆಯನ್ನು ಯಾವ ರೀತಿಯಿಂದ ಮಾಡಿದರೇನಂತೆ? ನನ್ನ ಮನೋರಥಗಳನ್ನು ಈಡೇರಿಸಬೇಡವೆ? ವಿಚಾರಮಾಡಿದರೆ ವ್ಯರ್ಥವಾದುದು ಕಂಡುಬರುತ್ತಿದೆ, ಕಡೆತನಕ ನೋವು ನಿಜವಾಗಿ ಕಂಡುಬರುತ್ತಿದೆ. ನಾನು ಪೂಜೆಯಲ್ಲಿ ಅದಾವ ನ್ಯೂನತೆಯನ್ನು ಮಾಡಿದ್ದೇನೆ?" ಎಂದು ಮಾಯೆ ಅಲ್ಲಮನನ್ನು ಕೇಳಿದಳು. ೬೭. "ಬಾಲೆ, ತನ್ನ ಚಿನ್ನ ಸಲುವಳಿಯಾಗದೆ ಹೋದರೆ ಅಕ್ಕಸಾಲೆಯನ್ನು ದುರುಳತನದಿಂದ ನಿಂದಿಸಬಹುದೇ? ನೀನು ಶಿವನನ್ನು ಪೂಜಿಸುವ ಕ್ರಮವನ್ನು ತಿಳಿಯದೆ ಬುದ್ಧಿಗೆಟ್ಟು ಹುಸಿಭಕ್ತಿಯ ಪರವಶತೆಯಲ್ಲಿ ಏಕೆ ಫಲವನ್ನು ಇಚ್ಛಿಸುವೆ? ಮಾಯೆ, ಕೇಳು" ಎಂದು ಅಲ್ಲಮ ನುಡಿದನು. ೬೮. "ನಾನು ನಿನ್ನಲ್ಲಿ ಸುಖವನ್ನು ಲೂಟಿಮಾಡಿ, ಸಂತೋಷದಿಂದ ನಿನ್ನಿಂದ ಶಿವತತ್ವಾನುಭಾವದ ನಿಜಸ್ವರೂಪವನ್ನು ತಿಳಿದು, ನನ್ನ ಪ್ರತಿಜ್ಞೆಯನ್ನು ಕೊರತೆಯಾಗದಂತೆ ಪೂರ್ಣಮಾಡಿ, ಶಿವನ ಆಸ್ಥಾನದಲ್ಲಿ ಶೋಭಿಸುವೆನೆಂದು ಅಭಿಮಾನದಿಂದ ನಿನ್ನನ್ನು ನಂಬಿದ್ದೆನು" ಎಂದು ಮಾಯೆ ಅಲ್ಲಮನಿಗೆ ಹೇಳಿದಳು.

ಹಡೆವ ಸೂಳೆಗೆ ಸೊಗಸು ಹುಟ್ಟದೆ
ಗುಡಿಯ ಸುಡುವಂದದಲಿ ನಿಜ ಜಂ
ಜಡದಲಿಮ್ಮನವಾಗಿ ಭಕ್ತಿಯ ಮಾಡಿ ಸಂಫಲವ
ಪಡೆಯಲಿಲ್ಲದೆ ಬಂದು ನೀ ಬಱು
ನುಡಿಗಳಿಂದಲಿ ನಮ್ಮ ಮೆಲ್ಲನೆ
ತೊಡಕಿಕೊಂಡೊಡೆ ಸಿಕ್ಕನಲ್ಲಮ ಮಾಯೆ ಕೇಳೆಂದ ೬೯

ನಮ್ಮನೊಲ್ಲದುದಲ್ಲದೀ ಪರಿ
ನಮ್ಮನೆಲ್ಲರ ಮುಂದೆ ಭಂಗಿಸಿ
ಹೆಮ್ಮೆಗೆಡಿಸುವ ಪರಿಯ ನೋಡಾ ಎನುತ ಮನ ಮಱುಗಿ
ಇಮ್ಮೆ ಬೆಂದವಳಿದ್ದಲಂತಿರೆ
ಹಮ್ಮವಿಸಿಯೊಱಗುತಲಿ ವಿಮಳೆಯ
ನೆಮ್ಮಿದಳು ನಿಲಲಾಱದಾಳಾಪಿಸುತಲಾ ಮಾಯೆ ೭೦

ಬೆಱಗುವಡೆದಿರೆ ನೆಯ್ದಿಲೆಗೆ ನೇ
ಸಱಿನ ನೆಮ್ಮುಗೆಯಾದ ತೆಱಸಲಿ
ಮುಱಿವಡೆದ ಮಾಯಾಂಗನೆಯ ಮುಖಭಂಗವನೆ ಕಂಡು
ಮಱುಗುತಿರ್ದರು ಕೂಡೆ ಕೆಳದಿಯ
ರುಱುಬಿ ಸುಮ್ಮನೆ ಮಾಱು ಮಾತಿಗೆ
ಹಱಿವನೆಣಿಸುತ ವಿಮಳೆ ಬಳಿಕಿಂತೆಂದಳಲ್ಲಮನ ೭೧

೬೯. "ಹೆರುವ ಸೂಳೆಗೆ ಅದರಿಂದ ಸಂತೋಷವಾಗದೆ ಚಿಂತೆಯಿಂದ ಮನೆಯನ್ನೇ ಸುಡುವಂತೆ ನೀನು ಎರಡು ಬಗೆಯ ಮನಸ್ಸಿನಿಂದ ಭಕ್ತಿಯನ್ನು ಮಾಡಿ ಒಳ್ಳೆಯ ಫಲವನ್ನು ಹೊಂದಲಾಗದೆ ವ್ಯರ್ಥ ನುಡಿಗಳಿಂದ ನಮ್ಮನ್ನು ಮೆಲ್ಲನೆ ಸಿಕ್ಕಿಸಲು ಪ್ರಯತ್ನಿಸಿದರೆ ನಾನು ಸಿಕ್ಕಲಾರೆನು, ಮಾಯೆ ಕೇಳು" ಎಂದು ಅಲ್ಲಮ ನುಡಿದನು. ೭೦ ನಮ್ಮನ್ನು ಇಚ್ಛಿಸದೇ ಹೋದುದಲ್ಲದೆ, ಈ ರೀತಿ ಎಲ್ಲರ ಮುಂದೆ ಅವಮಾನಿಸಿ ಹೆಮ್ಮೆಗೆಡಿಸುವ ಕ್ರಮವನ್ನು ನೋಡಾ ಎಂದು ದುಃಖಿಸಿ, ಎರಡು ಬಾರಿ ಬೆಂದ ಇದ್ದಿಲಂತೆ ಕರಿಕುಗೊಂಡ ಅವಳು ನಿಲ್ಲಲಾಗದೆ ಸಂಭಾಷಣೆ ಮಾಡುತ್ತಲೇ ವಿಮಳೆಯನ್ನು ಆಶ್ರಯಿಸಿ ಮೂರ್ಛೆಹೋದಳು. ೭೧. ನೆಯ್ದಿಲೆಗೆ ಸೂರ್ಯನ ಸಂಬಂಧವಾದ ರೀತಿಯಲ್ಲಿ ತಲೆತಗ್ಗಿಸಿದ ಮಾಯಾಂಗನೆಯ ಮುಖಭಂಗವನ್ನು ನೋಡಿ ಬೆರಗುಗೊಂಡ ಗೆಳತಿಯರೆಲ್ಲಾ ಸೇರಿ ಹೆಚ್ಚಾಗಿ ದುಃಖಿಸುತ್ತಿದ್ದರು. ಬಳಿಕ ವಿಮಳೆ ವ್ಯರ್ಥವಾದ ಪ್ರತ್ಯುತ್ತರವನ್ನು ಕೊನೆಗಾಣಿಸುವ ಉಪಾಯವನ್ನು ಆಲೋಚಿಸಿ ಅಲ್ಲಮನಿಗೆ ಹೀಗೆಂದಳು.

ಶರಣಜನರಕ್ಷಾಮಣಿಯೆ ಕಿಂ
ಕರಚಕೋರಸುಧಾಕರನೆ ಭಾ
ಸುರದಯಾಂಭೋನಿಧಿಯೆ ನೀನೀ ಸ್ತ್ರೀಯ ತನುಮನವ
ಒರಿಸಿ ನೋಡಿದೊಡಲ್ಲಿ ಭಾವಿಸೆ
ಹುರುಳು ಬಳಿಕೇನುಂಟು ನಿನ್ನಯ
ಕರುಣವಾಕೆಯ ಹರಣವೆಂದಳು ವಿಮಳೆ ವಿನಯದಲಿ        ೭೨

ಬಾಲೆ ನೀರಿಗೆ ಹೆಪ್ಪನೆಱೆದರೆ
ಹಾಲಿನಂತಿರೆ ಹೆತ್ತು ಭುಂಜಿಸಿ
ಬಾಳಿದವರಾರುಂಟು ಭಾವಿಸಲಾ ಪ್ರಕಾರದಲಿ
ಕಾಳುಮತಿಗಳಿಗಿನಿತು ಬುದ್ಧಿಯ
ಹೇಳಿದರೆ ಫಲವೇನು ಸಾಕೀ
ಖೂಳೆಗಾನಿನ್ನೇನ ಮಾಡುವೆ ವಿಮಳೆ ಕೇಳೆಂದ        ೭೩

ಕೀಳುಗಬ್ಬುನವೆಣ್ಣ ಕೋಪಿಸಿ
ಕಾಲಲೊದೆದೊಡೆ ಮೇಣು ಕರುಣಿಸಿ
ತೋಳಲಪ್ಪಿದೊಡೇನು ಪರುಷದ ಗಂಡನದಱಂತೆ
ಬಾಲೆಗೆಂತಾದೊಡೆಯು ನಿನ್ನ ಸ
ಮೇಳ ಘಟಿಸಿದ ಬಳಿಕ ಮಾಯೆಯ
ಪಾಲಿಸಲು ಬೇಕನುತ ನುಡಿದಳು ವಿಮಳೆಯಲ್ಲಮಗೆ        ೭೪

ವನಿತೆ ನಿನ್ನಯ ಮಾತಹುದು ಕ
ಬ್ಬುನವದಾದೊಡೆ ಪರುಷ ಮುಟ್ಟಲು
ಕನಕವಹುದಲ್ಲದೆ ವೃಥಾ ಹಳೆ ಹಂಚು ಹೊನ್ನಹುದೆ
ಮನಸು ಸಂಚಲವಾದ ಮಾಯಾಂ
ಗನೆಯದೇನನು ಮುಟ್ಟಿ ಮಾಡಿದೊ
ಡಿನಿತು ಸಂಫಲವಾಗಲಱಿಯದು ವಿಮಳೆ ಕೇಳೆಂದ        ೭೫

೭೨. "ಶರಣಜನರಕ್ಷಾಮಣಿಯೇ, ಭಕ್ತರೆಂಬ ಚಕೋರಪಕ್ಷಿಗಳಿಗೆ ಚಂದ್ರನಂತಿರುವವನೇ, ಶೋಭಿಸುವ ದಯಾಸಮುದ್ರನೇ, ನೀನೀ ಸ್ತ್ರೀಯ ತನು ಮನಗಳನ್ನು ಪರೀಕ್ಷಿಸಿ ನೋಡಿದರೆ ಅಲ್ಲಿ ತಿರುಳೇನಿದೆ? ವಿಚಾರಮಾಡಿದರೆ ನಿನ್ನ ಕರುಣವೇ ಆಕೆಗೆ ಪ್ರಾಣವಾಗಿದೆ" ಎಂದು ವಿಮಳೆ ವಿನಯದಿಂದ ನುಡಿದಳು. ೭೩. ಅಲ್ಲಮ ವಿಮಳೆಯ ಮಾತಿಗೆ ಉತ್ತರವೀಯುತ್ತಾ "ಬಾಲೆ, ನೀರಿಗೆ ಹೆಪ್ಪನ್ನು ಸುರಿದರೆ ಹಾಲಿನಂತೆ ಹೆಪ್ಪುಗಟ್ಟಿ ಅದನ್ನು ಸವಿದು ಬಾಳಿದವರಾರಿರುವರು? ಭಾವಿಸಲು ಆ ಪ್ರಕಾರದಲ್ಲಿ ದುಷ್ಟಬುದ್ಧಿಗಳಿಗೆ ಎಷ್ಟು ಬುದ್ಧಿ ಹೇಳಿದರೂ ಫಲವೇನು? ಸಾಕು, ಈ ದುಷ್ಟೆಗೆ ನಾನಿನ್ನೇನ ಮಾಡಲಿ, ವಿಮಳೆ ಕೇಳು" ಎಂದನು. ೭೪. "ಕೀಳಾದ ಕಬ್ಬಿಣವೆಂಬ ಹೆಣ್ಣನ್ನು ಪರುಷವೆಂಬ ಗಂಡನು ಕೋಪದಿಂದ ಕಾಲಿನಿಂದ ಒದೆದರೇನು, ಕರುಣಿಸಿ ತೋಳಿನಿಂದ ಅಪ್ಪಿದರೇನು? ಅದರಂತೆ ಬಾಲೆಗೆ ಹೇಗಾದರೂ ನಿನ್ನ ಸೇರಿಕೆಯುಂಟಾದ ಮೇಲೆ ಮಾಯೆಯನ್ನು ರಕ್ಷಿಸಬೇಕು" ಎಂದು ವಿಮಳೆಯು ಅಲ್ಲಮನನ್ನು ಪ್ರಾರ್ಥಿಸಿದಳು. ೭೫. "ವನಿತೆ, ನಿನ್ನ ಮಾತು ನಿಜ. ಕಬ್ಬಿಣವನ್ನಾದರೆ ಪರುಷ ಮುಟ್ಟಲು ಚಿನ್ನವಾಗುತ್ತದೆ. ಹಾಗಲ್ಲದೆ ಹಳೆಯ ಹಂಚನ್ನು

ದೇವ ತಪ್ಪಿದೊಡೇನು ನೀನು ಕೃ
ಪಾವಲೋಕನದಲಿ ನಿರೀಕ್ಷಿಸಿ
ದೇವಿಯರ ಹೂಣಿಕೆಯ ಸಲಿಸಿದರೇನು ಕುಂದಹುದೆ
ದೇವತನಕೂಣೆಯವೆ ಬಜೆದೆ ವ್ಯ
ರ್ಥಾ ವಿಳಾಸದ ಮಾತ ಬೀಜಿದೆ
ಕಾವುದೈ ಕರುಣದಲಿ ಮಾಯೆಯನೆಂದಳಾ ವಿಮಳೆ ೭೬

ಒಂದು ಬೀಜವ ಬಿತ್ತಿ ಮೇಲ್ ಮ
ತ್ತೊಂದು ಫಲವನು ಬಯಸಿ ಬಾತೊಡೆ
ಬಂದುದಹುದೇ ತನಗೆ ದಿಟವೀ ಮಾಯೆ ಮರುಳಾಗಿ
ಮುಂದುಗಾಣದೆ ಮದದ ತಾಮಸ
ದಿಂದೆ ಚಂಚಲಭಕ್ತಿ ಭರದಲಿ
ಬಂದೊಡುಂಟೇ ಸಂಫಲಂಗಳು ವಿಮಳೆ ಕೇಳೆಂದ ೭೭

ಆದೊಡೆಲೆ ಘನಮಹಿಮ ನಿನ್ನಯ
ಪಾದಗಳನೆಂತಾದೊಡೆಯು ಸಂ
ಪಾದಿಸಿದ ಬಳಿಕಿನ್ನು ನಿನ್ನಯ ಕರುಣವಿದ್ದಂತೆ
ಕಾದು ರಕ್ಷಿಸು ಮನಸು ಬಂದೋ
ಪಾದಿಯಲಿಯೆಂದೆನುತ ಮಧುರಾ
ಮೋದ ವಚನವ ಸುರಿವುತಿರ್ದಳು ವಿಮಳೆಯಲ್ಲಮಗೆ ೭೮

ಮುಟ್ಟಲು ಚಿನ್ನವಾಗುತ್ತದೆಯೇ? ಮನಸ್ಸು ಚೆನ್ನಾಗಿ ಚಲನೆಗೊಂಡ ಮಾಯಾದೇವಿಗೆ ಏನನ್ನು ಮಾಡಿದರೂ ಸ್ವಲ್ಪವೂ ಒಳ್ಳೆಯ ಫಲವಾಗಲು ಸಾಧ್ಯವಿಲ್ಲ, ವಿಮಳೆ, ಕೇಳು" ಎಂದು ಅಲ್ಲಮ ನುಡಿದನು. ೭೬. "ದೇವಾ, ತಪ್ಪಿದರೇನಂತೆ. ನೀನು ನಿನ್ನ ಕೃಪಾವಲೋಕನದಿಂದ ನೋಡಿ ಮಾಯಾದೇವಿಯ ಪ್ರತಿಜ್ಞೆಯನ್ನು ನೆರವೇರಿಸಿದರೆ ಕೊರತೆಯಾಗುತ್ತದೇನು? ದೇವತನಕ್ಕೆ ಕೊರತೆಯೆ? ಸುಮ್ಮನೆ ವ್ಯರ್ಥ ವಿಲಾಸದ ಮಾತನಾಡದೆ ಮಾಯೆಯನ್ನು ಕರುಣದಿಂದ ರಕ್ಷಿಸುವುದು" ಎಂದು ವಿಮಳೆ ಪ್ರಾರ್ಥಿಸಿದಳು. ೭೭. "ವಿಮಳೆ ಕೇಳು, ಒಂದು ಬೀಜವನ್ನು ಬಿತ್ತಿ ಮತ್ತೊಂದು ಫಲವನ್ನು ಬಯಸಿ ಹಾತೊರೆದರೆ ಲಭಿಸುತ್ತದೆಯೆ? ನಿಜವಾಗಿ ಈ ಮಾಯೆಯ ಮದದ ಅಜ್ಞಾನದಿಂದ, ಮರುಳಾಗಿ ಮುಂದುಗಾಣದೆ ಚಂಚಲವಾದ ಭಕ್ತಿಯ ರಭಸದಲ್ಲಿ ಬಂದದ್ದೇ ಆದರೆ ಸತ್ಫಲಗಳು ಲಭಿಸುತ್ತವೆಯೆ?" ಎಂದು ಅಲ್ಲಮ ನುಡಿದನು. ೭೮. "ಆದರೆ ಎಲೆ ಘನಮಹಿಮಾ, ನಿನ್ನ ಪಾದಗಳನ್ನು ಸಂಪಾದಿಸಿದ ಬಳಿಕ ಇನ್ನು ನಿನ್ನ ಕರುಣವಿದ್ದಂತೆ ಹೇಗಾದರೂ ಮಾಡಿ ರಕ್ಷಿಸು" ಎಂದು ಮಧುರ ಹಾಗೂ ಸಂತೋಷಭರಿತವಾದ ಮಾತುಗಳನ್ನು ವಿಮಳೆ ಅಲ್ಲಮನೊಡನೆ ಆಡಿದಳು.

ವಿಮಳೆ ವಿಮಳೆಯೆನಿಪ್ಪ ಹೆಸರನು
ಕಮಲಸಂಭವ ನಿನಗೆ ಸಲಿಸಿದ
ನಮಳಮತಿಯವನಹುದು ಜಾಗುರೆ ಎನುತೆ ಪರಿಣಮಿಸಿ
ಕ್ರಮದಲಿನ್ನಾದೊಡೆಯು ಮಿಗೆ ವಿ
ಶ್ರಮಿಸಬೇಕೆಂದೆನುತ ಬಳಿಕ
ಲ್ಲಮನು ಮಿಗೆ ವಿನಯದಲಿ ಮಾಯಾದೇವಿಗಿಂತೆಂದ ೭೯

ಕಾಮವೆತ್ತಲು ಪರಮತತ್ವದ
ಸೀಮೆಯೆತ್ತಲು ತಿಮಿರವೆತ್ತಲು
ತಾಮರಸಸಖನೆತ್ತಲರಿಸಿನವೆತ್ತ ಬಿಸಿಲೆತ್ತ
ಭ್ರಾಮಕದ ನುಡಿ ಸಾಕು ನೀನೆ
ತ್ತಾ ಮಹಾಘನವೆತ್ತ ಮರುಳೇ
ಕ್ಷೇಮದಲಿ ನೀ ಬಂದ ಬಟ್ಟೆಯಲಬಲೆ ಹೋಗೆಂದ ೮೦

ಕನಸುಮನಸಿನೊಳಾಗಳೆನ್ನಯ
ತನುವಿನಲಿ ನೀ ಸುಳಿದು ಮಚ್ಚಿಸಿ
ಯಿನಿತು ಧಾವತಿಗೊಳಿಸಿ ನಿಷ್ಕರುಣದಲಿ ನೀನೆನ್ನ
ಕನಲಿ ನುಡಿದೊಡೆ ನಾನು ಬಿಡುವೆನೆ
ತನಗೆ ಸತ್ತಡೆ ಭಾವಿಸಲು ಸಾ
ವನಿತು ಬಂದೊಡೆ ಬರಲಿ ಬಿಡೆ ನಾನೆಂದಳಾ ಮಾಯೆ ೮೧

ಕನಸಿನಲಿ ಚೇಳೂಜೆದೊಡೆ ವೇ
ದನಿಸಿತೆಂದಿರದೆದ್ದು ನರಳುವ
ಮನುಜರುಂಟೇ ಮರುಳೆ ನಿನ್ನ ಮನೋವಿಕಾರಗಳು
ನಿನಗೆ ತೋಜೆದೊಡೆಮ್ಮೊಳೇತಕೆ
ಮನಕಶವ ನೀ ಮಾಡುತಿಹೆ ಸಾ
ವಿನಿತು ಗಸಣೆಯ ಗೊಡವೆಗಾಜೆವು ಮಾಯೆ ಕೇಳೆಂದ ೮೨

೭೯. "ವಿಮಳೆ, ವಿಮಳೆ ಎನ್ನುವ ಹೆಸರನ್ನು ನಿನಗೆ ಕೊಟ್ಟ ಆ ಬ್ರಹ್ಮನು ಪರಿಶುದ್ಧ ಬುದ್ಧಿಯವನಾಗಿರುವನು. ಭಳಿರೇ!" ಎಂದು, ಸಮಾಧಾನ ಹೊಂದಿ ಇನ್ನಾದರೂ ಚೆನ್ನಾಗಿ ವಿಶ್ರಾಂತಿ ಪಡೆಯಬೇಕೆಂದು ಹೇಳಿ ಬಳಿಕ ಅಲ್ಲಮ ಅತಿ ವಿನಯದಿಂದ ಮಾಯಾದೇವಿಗೆ ಹೀಗೆಂದನು. ೮೦. "ಕಾಮವೆಲ್ಲಿ ಪರಮತತ್ವದ ಎಲ್ಲೆಯೆಲ್ಲಿ? ಕತ್ತಲೆಯೆಲ್ಲಿ ಸೂರ್ಯನೆಲ್ಲಿ? ಅರಿಸಿನವೆಲ್ಲಿ ಬಿಸಿಲೆಲ್ಲಿ? ಇನ್ನು ಅಸಂಬದ್ಧವಾದ ಮಾತು ಸಾಕು. ನೀನೆಲ್ಲಿ ಆ ಮಹಾಘನವೆಲ್ಲಿ? ಹುಚ್ಚಿ, ಕ್ಷೇಮದಿಂದ ನೀನು ಬಂದ ದಾರಿಯಲ್ಲಿ ಹೋಗು" ಎಂದು ಅಲ್ಲಮನು ನುಡಿದನು. ೮೧. "ನನ್ನ ಕನಸು ಮನಸ್ಸಿನಲ್ಲಿ ತನುವಿನಲ್ಲಿ ನೀನು ಸುಳಿದು ಪ್ರೀತಿಸಿ ಇಷ್ಟು ಆಯಾಸಗೊಳಿಸಿ (ಈಗ) ಕರುಣೆಯಿಲ್ಲದೆ ನೀನು ನನ್ನಲ್ಲಿ ಸಿಟ್ಟಾಗಿ ನುಡಿದರೆ ನಾನು ಬಿಡುವೆನೆ? ಭಾವಿಸಲು, ನನಗೆ ಸಾವು ಸಂಭವಿಸಿದರೂ ಸಂಭವಿಸಲಿ, ಬಿಡೆನು" ಎಂದು ಮಾಯೆ ಹಟ ಮಾಡಿದಳು, ೮೨. "ಕನಸಿನಲ್ಲಿ ಚೇಳು ಕಚ್ಚಿದರೆ ನೋವಾಯಿತೆಂದು ಇರದೆ ಮೇಲೆದ್ದು ನರಳುವ ಮನುಷ್ಯರುಂಟೆ? ಹುಚ್ಚಿ, ನಿನ್ನ ಮನೋವಿಕಾರಗಳು ನಿನಗೆ

ವಾಸಿ ಹುಟ್ಟಿದ ಬಳಿಕ ನಾನಿ
ನ್ನೇಸುದಿನವಿದ್ದಾದೊಡೆನ್ನಯ
ಭಾಷೆಯನು ನಾನುತ್ತರಿಸಬೇಕಲ್ಲದುಳಿದಂತೆ
ಆಸೆಯಿಲ್ಲದೆ ತಿರಿಗಿಗೊಡೆ ಹೆಂ
ಗೂಸುತನಕದು ಹಾನಿಯಾ ಕೈ
ಲಾಸಕಾನೆಂತೆಯ್ದುವೆನು ಕೇಳೆಂದಳಾ ಮಾಯೆ ೮೩

ಕಡಲನೀರುಗಳೆಲ್ಲವಮೃತದ
ಮಡುಗಳಾದರೆಯಹವು ಸುರಗಿರಿ
ಕುಡಿವಿಡಿದು ಹಬ್ಬಿದೊಡೆ ಹಬ್ಬುವುದವನಿಮಂಡಲದ
ಗಿಡುಗಳೆಲ್ಲವು ಕಲ್ಪತರುವಾ
ದ್ದೊಡೆಯಹವು ತತ್ತದನುಗಾಲಕೆ
ಮಡದಿ ಮಾಯೆಗೆ ಪರಮ ತತ್ವಜ್ಞಾನವಿಲ್ಲೆಂದ ೮೪

ನುಡಿದು ನುಣ್ಣನೆ ನೀನು ಮೆಲ್ಲನೆ
ಸಡಿಲಿ ಹೋದರೆ ನಾನು ನಿನ್ನನು
ಬಿಡುವನೇ ಕೇಳೆನ್ನ ಪ್ರೈಜೆಯ ಸಲಿಸಿದನ್ನಬರ
ಒಡಲು ನಿನಗಿಲ್ಲೆಂಬ ಬಿಂಕದ
ಬೆಡಗು ಬೇಡಿನ್ನೇನ ಮಾಡಿಯು
ತುಡುಕಿದಲ್ಲದೆ ಮಾಣೆನೆಂದಂಗೈಸಿದಳು ಮಾಯೆ ೮೫

ಕಾಣಿಸಿದರೆ, ನಮ್ಮಲ್ಲೇಕೆ ನೀನು ಸಿಟ್ಟು ಮಾಡುತ್ತಿರುವೆ? ನಾವು ಸ್ವಲ್ಪವೂ ನಿನ್ನ ಸಂಬಂಧವಾದ ಚಿಂತೆಗೆ ಗುರಿಯಾಗಲಾರೆವು, ಮಾಯೆ, ಕೇಳು" ಎಂದು ಅಲ್ಲಮನು ನುಡಿದನು. ೮೩. "ಪಂಥ ಹುಟ್ಟಿದ ಮೇಲೆ ನಾನು ಇನ್ನು ಎಷ್ಟು ದಿವಸಗಳಿದ್ದಾದರೂ ನನ್ನ ಪ್ರತಿಜ್ಞೆಯನ್ನು ಕೊನೆಗೊಳಿಸಬೇಕು. ಹಾಗಲ್ಲದೆ ಭಾಷೆ ಉಳಿದು ನಿರಾಶೆಯಿಂದ ಕೈಲಾಸಕ್ಕೆ ಹಿಂತಿರುಗಿದರೆ ಹೆಣ್ಣುತನಕ್ಕೇ ಅದು ಹಾನಿ. (ಹೀಗಿರಲು) ನಾನು ಅಲ್ಲಿಗೆ ಹೇಗೆ ಹೋಗಲಿ ಕೇಳು" ಎಂದು ಮಾಯೆಯು ನುಡಿದಳು. ೮೪. ಸಮುದ್ರದ ನೀರೆಲ್ಲಾ ಅಮೃತದ ತೊರೆಗಳಾದರೂ ಆಗಬಹುದು. ಮೇರುಪರ್ವತ ಚಿಗುರಿ ಹಬ್ಬಿದರೂ ಹಬ್ಬಬಹುದು. ಭೂಮಂಡಲದ ಗಿಡಗಳೆಲ್ಲಾ ಕಲ್ಪವೃಕ್ಷಗಳಾದರೂ ಆಗಬಹುದು. (ಹಾಗೆ) ಸಂಭವಿಸಿದರೂ, ಯಾವ ಕಾಲಕ್ಕೂ ಹೆಣ್ಣಾದ ಮಾಯೆಗೆ ಪರಮ ತತ್ವಜ್ಞಾನವಿಲ್ಲ" ಎಂದು ಅಲ್ಲಮನು ನುಡಿದನು. ೮೫. "ನಯವಾಗಿ ಮಾತನಾಡಿ ನೀನು ಮೆಲ್ಲನೆ ಜಾರಿಹೋದರೆ ಕೇಳು, ನನ್ನ ಪ್ರತಿಜ್ಞೆ ಸಲಿಸುವವರೆಗೆ ನಾನು ನಿನ್ನನು ಬಿಡುವೆನೆ? ನಿರ್ದೇಹಿ ನಾನು ಎಂಬ ಬಿಂಕದ ಒಯ್ಯಾರ ಬೇಡ. ಇನ್ನೇನು ಮಾಡಿದರೂ ನಿನ್ನನ್ನು ಹಿಡಿದಲ್ಲದೆ ಬಿಡೆನು" ಎಂದು ಮಾಯೆಯು ದೃಢ ಮಾಡಿದಳು.

ಬಯಲ ಬಂಧಿಸಲೆಂದು ಕೃತನಿ
ಶ್ಚಯವ ಮಾಡಲು ಸಿಕ್ಕಬಲ್ಲುದೆ
ನಿಯತ ನನ್ನನು ಹಿಡಿದುಕೊಂಬೊಡೆ ನೋಡು ನೀನೆನುತ
ಪ್ರಿಯದಲಾಗಳೆ ತನ್ನ ನಿಜ ನಿ
ರ್ಣಯವ ನಿರ್ಮಿಸಿ ನಿಮಿಷದಲಿ ನಿ
ರ್ವಯಲ ಜಾಲವ ಬೀಸಿ ಹೋದನು ಮಾಯೆಗಲ್ಲಮನು ೮೬

ಜಾಱಿದನು ಬಳಿಕಾತನೀಕೆಗೆ
ಹೇಱಿದುದು ಕಡು ದುಗುಡ ಸಖಿಯರು
ನೀಱೆಯನು ಸಂತೈಸಿದರು ನಾನಾ ಪ್ರಕಾರದಲಿ
ಗಾಱುದೂಱಿನ ಮಾಯೆಗೀಯೆಗೆ
ತೋಱಿಸುವನೇ ತನ್ನ ನಿಜವನು
ಮೀಱಿ ಮೀಸಲನಲ್ಲಮಪ್ರಭು ಗುರು ಗುಹೇಶ್ವರನು ೮೭

ಅಂತು ಗತಿ ೭ಕ್ಕಂ ಪದ ೩೭೪ಕ್ಕಂ ಮಂಗಳಂ

೮೬. "ಬಯಲನ್ನು ಬಂಧಿಸಬೇಕೆಂದು ದೃಢನಿರ್ಧಾರ ಮಾಡಲು ಅದು ಸಿಗಬಲ್ಲುದೆ? ನಿಶ್ಚಿತವಾಗಿಯೂ ನನ್ನನ್ನು ಹಿಡಿದುಕೊಳ್ಳುವೆಯಾದರೆ ನೀನು (ಪ್ರಯತ್ನಿಸಿ) ನೋಡು" ಎಂದು ಪ್ರೀತಿಯಿಂದ ತನ್ನ ದೃಢನಿರ್ಧಾರ ಮಾಡಿ ಮರುನಿಮಿಷದಲ್ಲಿ ಮಾಯೆಗೆ ನಿರ್ವಯಲ ಬಲೆಯನ್ನು ಬೀಸಿ ಅಲ್ಲಮ (ಅಲ್ಲಿಂದ) ನಿರ್ಗಮಿಸಿದನು. ೮೭. ಬಳಿಕ ಅಲ್ಲಿಂದ ಅಲ್ಲಮ ಜಾರಿಹೋದನು. ಈಕೆಗೆ ಅತಿಶಯವಾದ ದುಃಖ ಆವರಿಸಿತು. ಸಖಿಯರು ಸುಂದರಿ ಮಾಯೆಯನ್ನು ನಾನಾ ಬಗೆಯಾಗಿ ಸಮಾಧಾನ ಮಾಡಿದರು. ತಪ್ಪು ಅಪವಾದ ಮಾಡಿದ ಮಾಯೆಗೆ ಅಲ್ಲಮನು ತನ್ನ ನಿಜವನ್ನು ತೋರಿಸುವನೇ? ಗುರು ಗುಹೇಶ್ವರನಾದ ಅಲ್ಲಮಪ್ರಭುವು ಎಲ್ಲವನ್ನೂ ಮೀರಿದ ಮೀಸಲು ವಸ್ತುವಾಗಿರುವನು.

# ೮. ಬಸವಾದಿ ಪ್ರಮಥರು ಧರೆಗಿಳಿದುದು

**ಗತಿ ೮**

ಸೂಚನೆ : ಗಿರಿಸುತೆಯ ಸಾತ್ವಿಕದ ಕಳೆಯನು
ವರವೃಷೇಂದ್ರಪ್ರಮಥಗಣವನು
ಧರೆಗೆ ಕಳುಹಿದನೀಶನೊಲಿದಲ್ಲಮನನಜೆಯಲಿಕೆ

ಲಿಂಗಭಕ್ತರು ತಿಳಿವುದೀ ಪ್ರಭು
ಲಿಂಗಲೀಲೆಯೊಳಿನ್ನು ಮಾಯೆಯ
ಭಂಗಿಸಿದ ನಿರ್ಲೇಪನಿಧಿಯಲ್ಲಮನ ಕೃಪೆಯಿಂದೆ
ಹಿಂಗದವನೀತಳದ ಸಕಲಜ
ನಂಗಳನು ಪಾವನವ ಮಾಡಲ
ನಂಗರಿಪು ನಿಜಗಣವ ಕಳುಹಿದ ಕಥನಕಾರಣವ ೧

ಮಂದಮತಿಯಲಿ ನಿಜವ ಸಾಧಿಸ
ಲೆಂದು ಕಳವಳಗೊಂಡು ಹೂಣಿಸಿ
ಬಂದೊಡಲ್ಲಮಲಿಂಗ ಸಿಕ್ಕದೆ ಹೋದ ಭೇದದಲಿ
ಮುಂದುಗಾಣದೆ ಮೂರ್ಛೆವೋಗುತೆ
ವೃಂದಮಧ್ಯದೊಳಾ ವಿಳಾಸಿನಿ
ವೃಂದಸಹಿತ ಮಹಾ ಪ್ರಲಾಪಿಸುತಿರ್ದಳಾ ಮಾಯೆ ೨

ಸೂ : ಶಿವ ಪ್ರೀತಿಯಿಂದ ಗಿರಿಜೆಯ ಸಾತ್ವಿಕಕಳೆಯಾದ ಮಹಾದೇವಿಯಕ್ಕನನ್ನೂ ಶ್ರೇಷ್ಠರಾದ ಬಸವಾದಿ ಪ್ರಮಥಗಣಗಳನ್ನೂ ಅಲ್ಲಮಪ್ರಭುವನ್ನು ತಿಳಿಯಲಿಕ್ಕಾಗಿ ಭೂಮಿಗೆ ಕಳುಹಿಸಿದನು. ೧. ಈ ಪ್ರಭುಲಿಂಗಲೀಲೆಯಲ್ಲಿ ಲಿಂಗಭಕ್ತರು ಇನ್ನು ಮಾಯೆಯನ್ನು ಸೋಲಿಸಿದ ವೈರಾಗ್ಯನಿಧಿ ಅಲ್ಲಮನ ಕೃಪೆಯಿಂದ ಬಿಡದೆ ಭೂತಳದ ಸರ್ವ ಜನರನ್ನು ಪಾವನಮಾಡಲು ಶಿವನು ತನ್ನ ಗಣಗಳನ್ನು ಕಳುಹಿಸಿದ ಕಾರಣಕಥನವನ್ನು ತಿಳಿಯುವುದು. ೨. ಅಲ್ಲಮನ ನಿಜಸ್ಥಿತಿಯನ್ನು ಅರಿಯಬೇಕೆಂದು ಮಂದಬುದ್ಧಿಯಿಂದ ಚಿಂತಿಸಿ ಪ್ರತಿಜ್ಞೆಮಾಡಿ ಮಾಯೆಯು ಬರಲು ಅಲ್ಲಮಲಿಂಗನು ಅವಳ ಭೇದೋಪಾಯಕ್ಕೆ ಸಿಕ್ಕದಾದನು. (ಆಗ) ಮಾಯೆಯು ಗುಂಪಿನ ನಡುವೆ ಮುಂದುಗಾಣದೆ ಮೂರ್ಛೆ ಹೋಗಿ ಮತ್ತೆ ಎಚ್ಚತ್ತು ವಿಳಾಸಿನಿಯರೊಡನೆ ಅತಿಯಾಗಿ ಪ್ರಲಾಪಿಸುತ್ತಿದ್ದಳು.

ಮಗಳು ಮದ್ದಳೆಯುವನ ಬೆನ್ನಲಿ
ಜಗುಳಿ ಹೋದುವ ಕೇಳಿ ಹರಿತಂ
ದಗಣಿತವ್ಯಾಮೋಹದಲಿ ಮಾಯಾಂಗನೆಯ ಕಂಡು
ನಗೆಗೆಡೆಯ ಮಾಡಿದೆಯಲಾ ದೇ
ಸಿಗನ ಸಂಗವ ಮಾಡಿ ಕೆಡಿಸಿದೆ
ಮಗಳೆ ಎನುತಲಿ ಮಜುಗಿದನು ಮಮಕಾರಭೂಪಾಲ ೩

ಬೇಡ ಬೇಡೆಂದಾದಿಕಾಲದೊ
ಳಾಡಿ ತೋಱಿನೆ ಮಗಳೆ ತುದಿಯಲಿ
ಕೇಡು ಬಹುದಿದಱಿಂದಲೆಂದಾನೇಸನೊದಱಿದೊಡೆ
ಕೇಡುಗೊಳಿಸಿದೆ ಕಡೆಯಲಡವಿಯ
ಕೂಡಿದೌ ನೀನೆನುತೆ ಖತಿಯಲಿ
ಮೂಡಿ ಮುಳುಗುತೆ ಮಿಡುಕುತಿರ್ದಳು ಮೋಹಿನೀದೇವಿ ೪

ಉಮೆಯ ನೇಮವ ಕೊಂಡು ತಾನ
ಲ್ಲಮನ ಸಾಧಿಸಲೆಂದು ಬಂದಳು
ನಿಮಗೆ ಹೇಳುವೆ ನಾನು ಚಿಂತಿಸಬೇಡ ನೀವಿದಕೆ
ದ್ಯುಮಣಿಯಲ್ಲಮ ಸಿಕ್ಕದಾದನು
ತಮದ ಮಾಯೆಗೆಯದಱ ಚಿಂತಾ
ಭ್ರಮೆಯಲಡವಿಗೆ ಬಂದಳೆಂದಳು ವಿಮಳೆಯರಸಂಗೆ ೫

೩. ಮಗಳು ಮದ್ದಳೆಯುವನ ಬೆನ್ನು ಹಿಂದೆ ಅಪರಿಮಿತ ವ್ಯಾಮೋಹದಿಂದ ಓಡಿಹೋದುದನ್ನು ಕೇಳಿ ಮಮಕಾರಮಹಾರಾಜನು ಬಂದು ಮಾಯಾ ದೇವಿಯನ್ನು ಕಂಡು "ಮಗಳೇ, ಭಿಕಾರಿಯ ಸಂಗವನ್ನು ಮಾಡಿ ನಗೆಗೆ ಅವಕಾಶ ಮಾಡಿದೆಯಲ್ಲಾ, (ವಂಶಗೌರವವನ್ನು) ಕೆಡಿಸಿದೆಯಲ್ಲಾ" ಎಂದು ದುಃಖಿಸಿದನು. ೪. "ಬೇಡ ಬೇಡವೆಂದು ನಾನು ಮೊದಲಿನಿಂದಲೂ ಹೇಳಲಿಲ್ಲವೆ? ಇದರಿಂದ ಕೊನೆಗೆ ಕೇಡು ಬರುವುದೆಂದು ನಿನಗೆ ತೋರಲಿಲ್ಲವೆ? ನಾನೆಷ್ಟು ಹೇಳಿದರೇನು, ಕೊನೆಗೆ ನೀನು ಎಲ್ಲಾ ಹಾಳುಮಾಡಿದೆ. ಅಡವಿಯನ್ನು ಸೇರಿದೆ" ಎಂದು ಕೋಪದಲ್ಲಿ ಮೂಡಿ ಮುಳುಗುತ್ತಾ ಮೋಹಿನಿದೇವಿಯು ದುಃಖಿಸುತ್ತಿದ್ದಳು. ೫. "ಗಿರಿಜೆಯ ಆಜ್ಞೆಯನ್ನು ಸ್ವೀಕರಿಸಿ ತಾನು ಅಲ್ಲಮನನ್ನು ಗೆಲ್ಲಲೆಂದು ಮಾಯೆಯು ಬಂದಳು. ನಾನು ನಿಮಗೆ ಇದನ್ನು ತಿಳಿಸುತ್ತಿದ್ದೇನೆ. ಇದಕ್ಕಾಗಿ ನೀವು ಚಿಂತಿಸಬೇಡಿ. ಸೂರ್ಯಸಮಾನನಾದ ಅಲ್ಲಮನು ಕತ್ತಲೆಗೆ ಸಮಾನಳಾದ ಮಾಯೆಗೆ ಸಿಕ್ಕದಾದನು. ಅದರ ಚಿಂತೆಯಲ್ಲೇ ಸುತ್ತಾಡುತ್ತಾ ಕಾಡಿಗೆ ಮಾಯೆಯು ಬಂದಳು" ಎಂದು ಮಮಕಾರ ಮಹಾರಾಜನಿಗೆ ವಿಮಳೆಯು ಹೇಳಿದಳು.

ಹುಸಿಯನಾಡಳು ವಿಮಳೆ ನಾನಾ
ಶಶಿಧರಗೆ ಪ್ರೆಜೆಯನು ಮಿಗೆ ಪಸ
ರಿಸಿದೆ ಕೈಲಾಸದಲಿ ಬಂದೆನು ತನ್ನಿಮಿತ್ತದಲಿ
ಅಸಮನಲ್ಲಮ ಸಿಕ್ಕದೀ ಪರಿ
ನುಸುಳಿ ಹೋದನು ನೀವು ನಮ್ಮಯ
ದೆಸೆಗೆ ಚಿಂತಿಸಬೇಡೆನುತಲಿಂತೆಂದಳಾ ಮಾಯೆ ೬

ಕಾರಣವ ಕೈಕೊಂಡು ನಿಮ್ಮ ಕು
ಮಾರಿಯಾದೆನು ಬಂದು ನಮ್ಮಯ
ಕಾರಿಯವು ಕೈಗೂಡದಾಯಿತ್ತೆನುತೆ ಪಿತರರಿಗೆ
ಚಾರಬೇಡಿನ್ನೆಮ್ಮನೆನುತಲಿ
ಭೋರನೆದ್ದಾ ಮಾಯೆ ವಿಮಳಾ
ನಾರಿ ಸಹಿತವೆ ಹೋಗುತಿರ್ದಳು ರಜತಪರ್ವತಕೆ ೭

ಅಳಲಿದರು ಮಗಳಗಲಿದರೆ ಮಿಗೆ
ಬಳಲಿದರು ಭಾರಂಕದಲಿ ಕಡು
ಗಳಲಿದರು ಕಂದಿದರು ಕಳವಳಿಸಿದರು ಮೋಹದಲಿ
ತೊಳಲಿದರು ಕಾನನದೊಳಗೆ ಹಂ
ಬಲಿಸಿದರು ಹಮ್ಮೈಸಿದರು ಕೋ
ಮಳೆಯ ಕಾಣದೆ ಮೋಹಿನಿಯು ಮಮಕಾರ ಭೂಮಿಪನು ೮

ಕೇಳಿಬಂದನು ಬಳಿಕ ಭೂಮೀ
ಪಾಲಕನ ಗುರು ತಾನೆನುತ್ತಾ
ವೇಳೆಯಲಹಂಕಾರನಾ ಮಱುಕವನು ಮಾಣಿಸುತೆ
ಹೇಳನೇ ನಾನಂದು ಕಾರಣ
ಬಾಲಿಕೆಯ ಪರಿಗಳನು ಕಾಣುತೆ
ಕಾಲದಲಿ ನಿಮಗಱಿಯಬಾರದೆ ಭೂಪ ಕೇಳೆಂದ ೯

೬. "ವಿಮಳೆ ಸುಳ್ಳನ್ನು ಹೇಳುವುದಿಲ್ಲ. ನಾನು ಕೈಲಾಸದಲ್ಲಿ ಶಿವನ ಇದಿರಿನಲ್ಲಿ ವಿಶೇಷವಾದ ಪ್ರತಿಜ್ಞೆಯನ್ನು ತೊಟ್ಟು ಬಂದೆನು. ಅದರ ಕಾರಣವಾಗಿ ಅಸಮಾನನಾದ ಅಲ್ಲಮನು ನನಗೆ ಒಳಗಾಗದೇ ಈ ರೀತಿ ಜಾರಿಹೋದನು. ನೀವು ನನ್ನ ಕಾರಣಕ್ಕಾಗಿ ಚಿಂತಿಸಬೇಡಿ" ಎನ್ನುತ್ತ ಮಾಯೆಯು ಹೀಗೆಂದಳು. ೭. "ಕಾರಣವೊಂದನ್ನು ಸ್ವೀಕರಿಸಿ. ನಾನು ನಿಮ್ಮ ಮಗಳಾದೆನು. ಇಲ್ಲಿಗೆ ಬಂದ ನಮ್ಮ ಕಾರ್ಯವು ಕೈಗೂಡಲಿಲ್ಲ. ಇನ್ನು ನಮ್ಮನ್ನು ನಿರೀಕ್ಷಿಸಬೇಡಿ" ಎಂದು ತಂದೆಗೆ ಹೇಳಿ ತಕ್ಷಣ ಮೇಲೆದ್ದು ಮಾಯೆಯು ವಿಮಳೆಯೊಂದಿಗೆ ಕೈಲಾಸಪರ್ವತಕ್ಕೆ ಹೋದಳು. ೮. ಮೋಹಿನಿ-ಮಮಕಾರ ಭೂಪಾಲರು ಮಗಳಾದ ಮಾಯಾದೇವಿಯನ್ನು ಕಾಣದೆ ಅವಳ ಅಗಲಿಕೆಗಾಗಿ ದುಃಖಿಸಿದರು; ದುಃಖಭಾರದಿಂದ ವಿಶೇಷವಾಗಿ ಬಳಲಿದರು; ಹೆಚ್ಚಾಗಿ ವ್ಯಥೆಪಟ್ಟರು; ಬಾಡಿಹೋದರು; ಚಿಂತಿಸಿದರು; ಮೋಹದಿಂದ ಕಾಡಿನಲ್ಲಿ ಅಲೆದಾಡಿದರು; ಮಗಳಿಗಾಗಿ ಹಂಬಲಿಸಿ ಮೂರ್ಛೆಹೋದರು. ೯. ಮಹಾರಾಜನ ಗುರು ಅಹಂಕಾರಾಚಾರ್ಯನು ಈ ಸುದ್ದಿಯನ್ನು ತಾನು ಕೇಳಿದ ಬಳಿಕ ಆ ವೇಳೆಯಲ್ಲಿ ಮಹಾರಾಜನ ಬಳಿ ಬಂದು ಅವನ ದುಃಖವನ್ನು

ಏನು ಕಾರಣ ಬಂದಳೋ ಬಳಿ
ಕೇನು ಕಾರಣ ಪೋದಳೋ ನಾ
ವೇನ ಬಲ್ಲೆವು ಬಱಿದೆ ಚಿಂತಿಸಬೇಡ ಸಾಕೇಳು
ನೀನು ನಿಜಪುರಕೆನುತಲೊಡಗೊಂ
ಡಾ ನರೇಂದ್ರನ ಸತಿಸಹಿತ ದು
ಮ್ಮಾನವನು ಪರಿಹರಿಸಿ ತಂದನು ಬಳಿಕಹಂಕಾರ ೧೦

ಜನಪ ಕೇಳ್ಬೆ ತಥ್ಯವನು ಮೋ
ಹಿನಿಗೆ ಮಮಕಾರಗೆಯಹಂಕಾ
ರನ ಮಹಾಕೃಪೆಯುಳ್ಳೊಡಂತಾ ಮಾಯೆ ತಾನೆನಿಪ
ತನುಜೆಯರು ಹುಟ್ಟುವುದಪೂರ್ವವೆ
ಎನುತಲಾಪ್ತರು ಮಂತ್ರಿಗಳು ತ
ಜ್ಜನಪತಿಯ ಸಂತೈಸಿ ಸುಖದಿಂದಿರ್ದರವನಿಯಲಿ ೧೧

ವಿಮಳೆ ಸಹಿತವೆ ಹೋಗಿ ತನಗ
ಲ್ಲಮನು ಸಿಕ್ಕದೆ ಹೋದ ಕಾರ್ಯ
ಕ್ರಮವನಾಗಳೆ ಮಾಯೆ ಹೇಳಿದಳತ್ತ ವಿಸ್ತರಿಸಿ
ಉಮೆಯದೆಲ್ಲವ ಕೇಳಿ ಚಿಂತಾ
ಭ್ರಮೆಯಲಿರುತಿರಲಱಿದು ಬಂದಾ
ರಮಣಿಯನು ಸಂತೈಸಿ ನುಡಿದನು ನಗುತೆ ಶಶಿಮೌಳಿ ೧೨

ನಿವಾರಿಸುತ್ತಾ "ಮಹಾರಾಜಾ, ಅಂದು ನಾನು ಕಾರಣಕನ್ಯೆಯ ರೀತಿಗಳನ್ನು ಇವಳಲ್ಲಿ ಗುರುತಿಸಿ ನಿಮಗೆ ಹೇಳಲಿಲ್ಲವೆ? ಕಾಲ ಸಾಗುತ್ತಾ ಬಂದಂತೆ ನಿಮಗೆ ಅದು ತಿಳಿಯಬಾರದೆ?" ಎಂದು ನುಡಿದನು. ೧೦. ಬಳಿಕ ಅಹಂಕಾರಾಚಾರ್ಯನು "(ಮಾಯೆಯು) ಏನು ಕಾರಣ ಬಂದಳೊ, ಏನು ಕಾರಣ ಹೋದಳೊ ನಾವೇನು ಬಲ್ಲೆವು. ವ್ಯರ್ಥವಾಗಿ ಚಿಂತಿಸಬೇಡ. ದುಃಖ ಸಾಕು. ನಿನ್ನ ಪಟ್ಟಣಕ್ಕೆ ನಡೆ" ಎಂದು ಹೇಳಿ ಅವರ ಸಂಕಟವನ್ನು ಪರಿಹರಿಸಿ ಮಹಾರಾಜನನ್ನು ಮಹಾರಾಣಿಯೊಂದಿಗೆ ಕರೆದುತಂದನು. ೧೧. "ಮಹಾರಾಜಾ ಕೇಳು, ವಾಸ್ತವವಾಗಿ ನಿಮಗೆ ಅಹಂಕಾರನ ಮಹಾಕೃಪೆಯಿರುವುದಾದರೆ ಮಾಯೆ ತಾನೆನಿಸುವ (ಇನ್ನೊಬ್ಬ) ಮಗಳು ಹುಟ್ಟುವುದು ಅಪೂರ್ವವೆ?" ಎಂದು ಆಪ್ತರು, ಮಂತ್ರಿಗಳು ಮಹಾರಾಜನನ್ನು ಸಮಾಧಾನಿಸಿ ಭೂಮಿಯಲ್ಲಿ ಸುಖದಿಂದಿದ್ದರು. ೧೨. ಮಾಯೆಯು ವಿಮಳೆಯೊಂದಿಗೆ ಕೈಲಾಸಕ್ಕೆ ಹೋಗಿ ಅಲ್ಲಮನು ತನಗೆ ಸಿಕ್ಕದೆ ಹೋದ ಕಾರ್ಯಕ್ರಮವನ್ನು ಗಿರಿಜೆಗೆ ವಿಸ್ತರಿಸಿ ಹೇಳಿದಳು. ಉಮೆ ಅದೆಲ್ಲವನ್ನು ಕೇಳಿ ಚಿಂತೆಯಿಂದ ಮಂಕಾಗಿರಲು, ಅದನ್ನರಿತ ಚಂದ್ರ ಮೌಳಿಯು ಗಿರಿಜೆಯಲ್ಲಿಗೆ ಬಂದು ನಗುತ್ತ ಅವಳನ್ನು ಸಂತೈಸುತ್ತಾ ಹೀಗೆಂದನು:

ಸಿಡಿಲುವಕ್ಕಿಯ ಪಕ್ಕವನು ಕಿ
ತ್ತಡಬಳದ ಬಾಣಸವ ಮಾಡುವ
ಕಡುಗಲಿಗಳಾರುಂಟು ಕಾಲೋರಗದ ನಿದ್ರೆಯನು
ಕೆಡಿಸಿ ಬದುಕುವ ಕೀಲಣದ ಗಾ
ರುಡಿಗರಾರುಂಟೆನ್ನ ತತ್ವದ
ತೊಡಕು ದುರ್ಘ ಚಿಂತೆಯೇತಕೆ ಗಿರಿಜೆ ಕೇಳೆಂದ ೧೩

ಅಲ್ಲಮನ ಮುಖದಿಂದಲೀಕೆಯ
ನಲ್ಲವೆನಿಸಿದೆ ನೀನೆಯ್ಯೆಸಲೆ
ಅಲ್ಲದೆನ್ನ ಸಮಾನ ಮಾಯೆಯ ಜಜೆದು ಜಾಡಿಸುವ
ಬಲ್ಲಿದರದಾರುಂಟು ನಮ್ಮಯ
ಸೊಲ್ಲಿಗಾಯಿತು ಸೋಲವೆನುತಾ
ವಲ್ಲಭಗೆ ದುರ್ಲಭಗೆ ಸುಲಭಗೆ ನುಡಿದಳಾ ಗಿರಿಜೆ ೧೪

ನೀನೆ ನಿನ್ನಯ ಗರ್ವತನದ
ಜ್ಞಾನದಲಿ ಮಾಯೆಯನು ಕಳುಹಿದೊ
ಡಾ ನಿರೂಪನು ಸಚ್ಚಿದಾನಂದೈಕರಸಮಯನು
ತಾನು ಸಿಕ್ಕುವನೇ ವೃಥಾ ದು
ಮ್ಮಾನವೇಕೆಂದೆನುತಲೀಶ್ವರ
ಮಾನಿನಿಯ ಮೂದಲಿಸಿ ನುಡಿದನು ನಗುತೆ ವಿನಯದಲಿ ೧೫

ಎಲೆ ಸದಾಶಿವ ನಿನ್ನೊಳಾದೊಡೆ
ಛಲಕೆ ನಾನಂಜುವೆನು ನಿನ್ನಯ
ಬಲುಹಿಗಾನಿದಿರಲ್ಲ ನಿನ್ನಯ ಕರುಣವಿದ್ದಂತೆ
ಸಲಹಿ ನಿನ್ನ ನಿಜಸ್ವರೂಪದ
ನಿಲವನಜೆಹಿಸಿಯೆನ್ನ ಸಲುಗೆಯ
ಸಲಿಸಬೇಕೆಂದಗಜೆ ನುಡಿದಳು ಮತ್ತೆ ಪಶುಪತಿಗೆ ೧೬

೧೩. "ಗಿರಿಜೆ ಕೇಳು, ಸಿಡಿಲುಹಕ್ಕಿಯ ರೆಕ್ಕೆಯನ್ನು ಕಿತ್ತು ಮಾಂಸದ ಅಡಿಗೆಯನ್ನು ಮಾಡುವ ಕಡುಗಲಿಗಳು ಯಾರಿರುವರು? ಕಾಳೋರಗನ ನಿದ್ರೆಯನ್ನು ಕೆಡಿಸಿ ಬದುಕುವ ತಂತ್ರದ ಗಾರುಡಿಗರಾರಿರುವರು? ನನ್ನ ತತ್ವದ ಅರಿವು ತಿಳಿಯಲು ಸುಲಭ ಸಾಧ್ಯವಲ್ಲದುದು ಚಿಂತೆಯೇಕೆ?" ಎಂದನು. ೧೪. ಗಿರಿಜೆಯು ಸುಲಭನೂ ದುರ್ಲಭನೂ ಆದ ತನ್ನ ಪತಿಗೆ "ಅಲ್ಲಮನ ಮುಖದಿಂದ ಇವಳನ್ನು ನೀನು ಸೋಲಿಸಿದೆಯಷ್ಟೆ. ಹಾಗಲ್ಲದಿದ್ದರೆ ನನ್ನ ಸಮಾನಳಾದ ಮಾಯೆಯನ್ನು ನಿಂದಿಸಿ ಬಿಸುಡುವವರಾರು? ನಮ್ಮ ಮಾತಿಗೆ ನಿನ್ನಿಂದ ಸೋಲಾಯಿತು" ಎಂದು ನುಡಿದಳು. ೧೫. "ನೀನೆ ನಿನ್ನ ಅಹಂಭಾವದ ಅಜ್ಞಾನದಲ್ಲಿ ಮಾಯೆಯನ್ನು ಕಳುಹಲು ಆ ಉಪಮಾರಹಿತನೂ ಸತ್‌ಚಿತ್ ಆನಂದ ಸ್ವರೂಪನೂ ಆದ ಅಲ್ಲಮನು ಸಿಕ್ಕುತ್ತಾನೆಯೆ? ವ್ಯರ್ಥವಾದ ಚಿಂತೆಯೇಕೆ?" ಎಂದು ನಗುತ್ತಾ ಶಿವ ಗಿರಿಜೆಯನ್ನು ಮೂದಲಿಸಿ ನುಡಿದನು. ೧೬. ಪಾರ್ವತಿ ಮತ್ತೆ ಪಶುಪತಿಯೊಂದಿಗೆ "ಸದಾಶಿವ, ನಿನ್ನೊಂದಿಗೆ ಹಠ ತೊಡಲು ನಾನು ಅಂಜುವೆನು. ನಿನ್ನ ಶಕ್ತಿಗೆ ನನ್ನ ವಿರೋಧವಿಲ್ಲ. ನಿನ್ನ ಕರುಣೆಯಂತೆ ನನ್ನನ್ನು ಕಾಪಾಡಿ, ನಿನ್ನ ನಿಜಸ್ವರೂಪದ ಸ್ಥಿತಿಯನ್ನು

ಆ ನುಡಿಯ ಕೇಳುತ್ತೆ ಕರುಣಾಂ
ಭೋನಿಧಾನನು ಮೆಚ್ಚಿಯಾದೊಡೆ
ನೀನು ಮುನ್ನಲಿ ನಿನ್ನ ತಾಮಸಗುಣದ ಮಾಯೆಯನು
ಏನು ಕಾರಣ ಕಳುಹಿ ಭಾಷೆಗೆ
ಹೀನವನು ನೀ ಪಡೆದೆ ನಾವಿದ
ಕೇನ ಮಾಡಲಿಬೇಕು ಬೆಸನನು ಗಿರಿಜೆ ಹೇಳೆಂದ ೧೭

ಮೂಗು ಹೋಗಿಹ ಮುಖುಡಿನವಗಿದಿ
ರಾಗಿ ಕನ್ನಡಿದೋಜಿ ಲಜ್ಜೆಯು
ಬೇಗೆಯಲಿ ಬೇಯಿಸುವನಂತಿರೆ ಮೂದಲಿಸಲೇಕೆ
ತಾಗಿ ತಲೆಯೊಡೆದವರು ಭಾವಿಸೆ
ಬಾಗದಿಹರೇನಂತು ಕಾರಣ
ಹೋಗಲಿನ್ನಾ ಮಾತೆನುತಲಿಂತೆಂದಳಾ ಗಿರಿಜೆ ೧೮

ಆವ ಪರಿಯಿಂದಜಿವೆನಾದೊಡೆ
ದೇವ ನಿನ್ನ ನಿಜಸ್ವರೂಪದ
ಭಾವವನು ಪ್ರಜ್ವಲಿಸಿ ತಿಳಿವಂತೆನಗೆ ಕೃಪೆಮಾಡಿ
ಕಾವುದೆನೆ ಪಾರ್ವತಿಗೆ ದೇವರ
ದೇವನೀಕೆಯನಿನ್ನು ಕರುಣಿಸಿ
ಪಾವನವ ಮಾಡುವೆನು ನಾನೆನುತಭವನಿಂತೆಂದ ೧೯

ನಿನ್ನ ನಿರ್ಮಳ ಸಾತ್ವಿಕದ ಸಂ
ಪನ್ನ ಕಳೆಯನು ಕಳುಹಿ ಧರೆಯೊಳು
ಚೆನ್ನೆಯಾಗಿರೆ ಜನಿಸಿ ನೆಱೆ ನಿಷ್ಕಾಮಭಕ್ತಿಯಲಿ
ಮುನ್ನಲಿರುತಿರಲಲ್ಲಮಪ್ರಭು
ತನ್ನ ತಾನೇ ನಿಜವ ತೋಱುವ
ನಿನ್ನ ಸಂಶಯವಿಲ್ಲ ದಿಟವಿದು ಗಿರಿಜೆ ಕೇಳೆಂದ ೨೦

ತಿಳಿಸಿ ನನ್ನ ಬಯಕೆಯನ್ನು ಸಲಿಸಬೇಕು" ಎಂದು ಹೇಳಿದಳು. ೧೭. ಆ ಮಾತನ್ನು ಕೇಳುತ್ತಲೆ ಕರುಣಾಸಮುದ್ರನಾದ ಶಿವನು ಮೆಚ್ಚಿ, "ನೀನು ಹಿಂದ ನಿನ್ನ ತಾಮಸಗುಣದ ಮಾಯೆಯನ್ನು ಏನು ಕಾರಣ ಕಳುಹಿಸಿ ಪ್ರತಿಜ್ಞೆಗೆ ಕುಂದನ್ನು ಪಡೆದೆ? ನಾವು ಇದಕ್ಕೆ ಏನು ಮಾಡಬೇಕು? ಗಿರಿಜೆ, ಹೇಳು" ಎಂದನು. ೧೮. "ಮೂಗು ಹೋಗಿರುವ ಮುಖದವನಿಗೆ ಇದಿರಾಗಿ ಕನ್ನಡಿಯನ್ನು ತೋರಿ ನಾಚಿಕೆಯ ತಾಪದಲ್ಲಿ ಬೇಯಿಸುವಂತೆ ಅದುಕಾರಣ (ನನ್ನನ್ನು) ಮೂದಲಿಸುವುದೇಕೆ? ವಿಚಾರಮಾಡಲು ತಾಗಿ ತಲೆಯೊಡೆದವರು ಬಾಗದಿರುವರೇ? ಇನ್ನು ಆ ಮಾತು ಹೋಗಲಿ" ಎಂದು ಗಿರಿಜೆ ನುಡಿದು ಮತ್ತೆ ಹೀಗೆಂದಳು. ೧೯. "ಯಾವ ರೀತಿಯಿಂದಲಾದರೂ ತಿಳಿಯುವುದಾದರೆ, ದೇವಾ, ನಿನ್ನ ನಿಜಸ್ವರೂಪದ ಭಾವವನ್ನು ಪ್ರಜ್ವಲಿಸಿ ತಿಳಿಯುವಂತೆ ನನಗೆ ಅನುಗ್ರಹಿಸಿ ಕಾಪಾಡುವುದು" ಎಂದು ಕೇಳಿದ ಪಾರ್ವತಿಗೆ ದೇವರ ದೇವನಾದ ಶಿವನು ಇವಳನ್ನು ಇನ್ನು ನಾನು ಕರುಣಿಸಿ ಪವಿತ್ರಳನ್ನಾಗಿ ಮಾಡುವೆನು ಎಂದು ಆಲೋಚಿಸಿ ಹೀಗೆಂದನು. ೨೦. "ಗಿರಿಜೆ ಕೇಳು, ನಿನ್ನ ಪವಿತ್ರವಾದ ಸಾತ್ವಿಕದ ಸಂಪನ್ನಕಳೆಯನ್ನು ಭೂಮಿಗೆ

ಎನೆ ಹಸಾದವ ಸಲಿಸಿ ಬದುಕಿದೆ
ನೆನುತೆ ಬಂಜೆಗೆ ಬೇಹ ಬಯಕೆಯ
ತನುಜನಾದಂತಾಕೆಯಾ ನುಡಿಗೇಳಿ ಪರಿಣಮಿಸಿ
ಮನದೊಳುತ್ಸಾಹಿಸುತೆ ತನ್ನಯ
ವಿನುತ ಸತ್ವಗುಣಸ್ವರೂಪವ
ನನುವಿನಲಿ ಸಂಜನಿಸ ಕಳುಹಿಂದಳುಮೆ ಧರಾತಳಕೆ ೨೧

ಬಳಿಕ ಸಂತೋಷದಲಿ ತನ್ನಯ
ಸಲುಗೆ ಬಿನ್ನಹವೆಂಬ ಬೀಜದ
ಬೆಳೆಗೆ ಹದವಳೆ ಹಣ್ಣಿ ಹಸರಿಸಿತೆನುತೆ ಹರುಷದಲಿ
ನಲಿದು ನಗುತಲಿ ಪರಮ ಪಾವನ
ಸುಲಭ ಕರುಣಾಕಾರ ಶಿವ ನಿ
ನ್ನೊಲವಿನಿಂದಾನಿನ್ನು ಬದುಕಿದೆನೆಂದಳಾ ಗಿರಿಜೆ ೨೨

ಆ ನುಡಿಯ ಮಾರ್ಕೊಂಡು ಶಿವ ಶಿವ
ದೇನನಾಡಿದೆ ತಾಯೆ ನೀವೆಂ
ದೂ ನಿಧಾನಿಸಲಚಲಸುಖಿಗಳು ಶಿವನ ಕರುಣದಲಿ
ಹಾನಿ ಯಾವುದು ಮುನ್ನಲೀಗಲಿ
ದೇನು ಬಂದುದು ತಾವು ಹೂಳ್ದ ನಿ
ಧಾನ ತಮಗಹುದೇನು ವಿಸ್ಮಯವೆಂದ ವೃಷಭೇಂದ್ರ ೨೩

ಕಳುಹಿಸಿ (ಅವಳು) ಮಂಗಳಾಂಗಿಯಾಗಿ ಜನಿಸಿ ಅತಿಶಯವಾದ ನಿಷ್ಕಾಮಭಕ್ತಿಯಿಂದಿರುತ್ತಿರಲು ಅಲ್ಲಮಪ್ರಭುವು ತನಗೆ ತಾನೇ ನಿಜರೂಪುದೋರುವನು. ಇನ್ನು ಸಂಶಯಬೇಡ. ಇದು ಸತ್ಯ" ಎಂದನು. ೨೧. ಶಿವನು ಹಾಗೆಂದು ನುಡಿಯಲು ಗಿರಿಜೆಯು 'ಅನುಗ್ರಹ ಮಾಡಿದುದರಿಂದ ಬದುಕಿದೆನು' ಎನ್ನುತ್ತ ಬಂಜೆಯಾದವಳಿಗೆ ಬಯಕೆಯ ಮಗನಾದಂತೆ ಶಿವನ ಆ ಮಾತನ್ನು ಕೇಳಿ ಅವಳು ತೃಪ್ತಿಗೊಂಡು ಮನಸ್ಸಿನಲ್ಲಿ ಸಂತೋಷಿಸುತ್ತಾ ತನ್ನ ಹೊಗಳಿಕೆಗೆ ಪಾತ್ರವಾದ ಸಾತ್ವಿಕ ಗುಣಸ್ವರೂಪವನ್ನು ಭೂತಳವನ್ನು ಸೇರಿ ಹುಟ್ಟಲು ಕಳುಹಿಸಿದಳು. ೨೨. ಅನಂತರ ಸಂತೋಷದಿಂದ ತನ್ನ ಸಲುಗೆಯ ಪ್ರಾರ್ಥನೆಯೆಂಬ ಬೀಜದ ಬೆಳೆಗೆ ಹದವಾದ ಮಳೆ ಸಿದ್ಧವಾಗಿ ಹರುಷದಿಂದ ಚೆಲ್ಲಿತು ಎಂದು ನಲಿದು ನಗುತ್ತಾ "ಪರಮ ಪಾವನನೂ ಸುಲಭನೂ ಕರುಣಾಕಾರನೂ ಆದ ಶಿವನೇ, ನಿನ್ನ ಪ್ರೀತಿಯಿಂದ ನಾನಿನ್ನು ಬದುಕಿದೆ"ನೆಂದು ಗಿರಿಜೆ ಹೇಳಿದಳು. ೨೩. ಶಿವನ ಮುಂದಿದ್ದ ವೃಷಭೇಂದ್ರನು ಆ ಮಾತಿಗೆ ಪ್ರತಿಯಾಗಿ "ಶಿವಶಿವಾ! ಅದೇನು ಹೇಳಿದೆ ತಾಯೆ. ಆಲೋಚಿಸಲು ನೀವು ಯಾವಾಗಲೂ ಶಿವನ ಕರುಣದಿಂದ ಪರಮ ಸುಖಿಗಳು. ಹಿಂದೆ ಆದ ಹಾನಿಯೇನು? ಈಗ ಏನಾಯಿತು? ತಾವು ಬಚ್ಚಿಟ್ಟ ಸಂಪತ್ತು ತಮಗೇ ಬರುವುದಾದರೆ ಅದರಲ್ಲಿ ಆಶ್ಚರ್ಯವೇನು?" ಎಂದನು.

ಇಲ್ಲದುದು ಬಹುದಿಲ್ಲ ದಿಟ ಮು
ನ್ನುಳ್ಳುದೇ ಬಹುದಂತು ಮುಂದಣಿ
ಗುಳ್ಳ ಸಿದ್ಧಿಗೆಯವರ ವಾಸನೆ ನೀಡಿ ನಿಲುಕುವುದು
ಬಲ್ಲೆ ನೀನದ ನಿನ್ನ ಭಾವನೆ
ಯೊಳ್ಳಿತ್ತೈ ಎಂದೆನುತೆ ಗೌರೀ
ವಲ್ಲಭನು ವರವೃಷಭರಾಜನ ಹೊಗಳುತಿಂತೆಂದ ೨೪

ಹೂಳಿದರ್ಥವನಱಸಿ ಹಡೆವನ
ಕಾಲು ಕೊಂಡೊಯ್ವಂತೆ ನಿನ್ನಯ
ನಾಲಗೆಯೆ ತಾ ನುಡಿವುತಿದೆ ಶುಭಸೂಚನಾರ್ಥವನು
ಹೇಳಲೇನಿನ್ನಲ್ಲಮನ ಸ
ಮ್ಮೇಳದಲಿ ಸುಖಿಯಾಗು ಹೋಗಿ
ನ್ನೇಳೆನುತಲಾ ವೃಷಭರಾಜಂಗಭವನಿಂತೆಂದ ೨೫

ನೀನು ಧರೆಯಲಿ ಮೆಱೆಯದಿರ್ದೊಡೆ
ತಾನು ಸಿಕ್ಕುವನಲ್ಲವಲ್ಲಮ
ನೀನು ಭಕ್ತಿಯ ಮಾಡಿ ಕಾಣಿಸೆ ನಿನ್ನ ಕತದಿಂದೆ
ಸ್ವಾನುಭಾವಸುಖಸ್ವರೂಪನಿ
ಧಾನವನು ಸಾಧಿಸಲಿ ಸರ್ವರು
ಮಾನನಿಧಿ ಕೇಳೆನುತೆ ಬೆಸಸಿದನೀಶ ವೃಷಭಂಗೆ ೨೬

ಈತನೇ ಬಳಿಕಿನ್ನು ದಿಟವಾ
ಭೂತಳದೊಳಲ್ಲಮನನಱಿವ ಮ
ಹಾತಿಶಯವಹ ಭಕ್ತಿಯನು ನೆಱೆ ಮಾಡಿ ಮೆಱೆವವನು
ಏತಕೀ ಭ್ರಮೆಯೆನುತೆ ಮದಮತಿ
ಗೋತು ವೃಷಭನನಣಕವಾಡುತೆ
ಮಾತನಾಡಿದರಲ್ಲಿ ಕೆಲಬರು ಶಿವನ ಸಭೆಯೊಳಗೆ ೨೭

೨೪. "ಇಲ್ಲದೇ ಇರುವುದು ಬರುವುದಿಲ್ಲ. ಮುನ್ನ ಇದ್ದುದೇ ಬರುವುದು. ಇದು ಸತ್ಯ. ಅವರವರ ಹಿಂದಣ ಕರ್ಮ ಮುಂದಣ ಸಿದ್ಧಿಗೆ ಫಲವನ್ನು ನೀಡಿ ಕೊಡುವುದು. ನೀನು ಇದನ್ನು ಬಲ್ಲೆ. ನಿನ್ನ ಮನಸ್ಸು ಒಳ್ಳೆಯದು" ಎಂದು ಹೇಳಿ ಗೌರೀವಲ್ಲಭನಾದ ಶಿವನು ಶ್ರೇಷ್ಠನಾದ ವೃಷಭರಾಜನನ್ನು ಹೊಗಳುತ್ತಾ ಹೀಗೆಂದನು. ೨೫. ಬಚ್ಚಿಟ್ಟ ಧನವನ್ನು ಅರಸಿ ಅದನ್ನು ಪಡೆಯುವವನ ಕಾಲುಗಳು ಅವನನ್ನೇ ಕರೆದೊಯ್ವಂತೆ ನಿನ್ನ ನಾಲಗೆ ಶುಭಸೂಚನಾರ್ಥವನ್ನು ತಾನೇ ನುಡಿಯುತ್ತಲಿದೆ ಹೇಳಲೇನು, ಇನ್ನು ಅಲ್ಲಮನ ಕೂಡಿಕೆಯಲ್ಲಿ ಸುಖಿಯಾಗು ಹೋಗು, ಮೇಲೇಳು ಎಂದು ನುಡಿದು ವೃಷಭರಾಜನಿಗೆ ಶಿವನು ಮತ್ತೆ ಹೀಗೆಂದನು : ೨೬. "ಮಾನನಿಧಿ ಕೇಳು, ನೀನು ಭೂಮಿಯಲ್ಲಿ ಮೆರೆಯದಿದ್ದರೆ ಅಲ್ಲಮ ತಾನು ಸಿಗುವವನಲ್ಲ. ನೀನು ಭಕ್ತಿಯನ್ನು ಆಚರಿಸಿ ಅಲ್ಲಮನನ್ನು ಕಾಣಿಸಲು ನಿನ್ನ ಕಾರಣದಿಂದ ಎಲ್ಲರೂ 'ಸ್ವಾನುಭಾವ ಸುಖಸ್ವರೂಪ ನಿಧಿ'ಯನ್ನು ಸಾಧಿಸಲಿ" ಎಂದು ನುಡಿದನು. ೨೭. ಶಿವನ ಸಭೆಯಲ್ಲಿ ಕೆಲವರು "ಇನ್ನು ಮುಂದೆ ನಿಜವಾಗಿಯೂ ಭೂತಳದಲ್ಲಿ ಅಲ್ಲಮನನ್ನು ತಿಳಿಯುವ ಅತಿ ವಿಶೇಷವಾದ ಭಕ್ತಿಯನ್ನು

ದೂಷಕರ ನುಡಿಗೇಳಿ ಮನದಲಿ
ರೋಷವನು ತಾಳಿದನೆ ಮದದಲಿ
ವಾಸಿಯನು ಮಾಡಿದನೆ ಮಾಱುತ್ತರವನುಸುರಿದನೆ
ಈಸು ಶಮೆ ದಮೆ ಸಮತೆಯುಳ್ಳ ಸ
ದಾಶುಚಿಗಳಾರೆನುತೆ ವೃಷಭನ
ನಾ ಸದಾಶಿವ ಪೊಗಳುತಿರ್ದನು ಪಂಚವದನದಲಿ ೨೮

ಮರುಳರಿವರಿದು ವೃಷಭರಾಜನ
ಪರಿಯನಱಿಯದೆ ನುಡಿದರಾದೊಡೆ
ಧರೆಯೊಳುದಯಿಸಿ ನೋಡಲಾತನ ಭಕ್ತಿಯುನ್ನತಿಯ
ಹಿರಿದು ತಮ್ಮಯ ಮನದ ಮದಮ
ತ್ಸರವ ನೀಗಲಿಯೆನುತಲಾ ಶಂ
ಕರನು ಬಳಿಕವರುಗಳನಟ್ಟಿದನಂದಿಳಾತಳಕೆ ೨೯

ಮೆಱೆದು ಭೂಮೀತಳದೊಳುದಯಿಸಿ
ನೆಱೆ ವಿಚಾರಿಸಿ ನಿಮ್ಮ ನಿಮ್ಮಯ
ಕೊಱತೆಗಳನಲ್ಲಲ್ಲಿ ಸಾಧಿಸಿ ಮನಸು ದಣಿವಂತೆ
ನೆಱತೆಯೆನಿಸುವುದಚಲಪದವಿಯ
ನಱೆವುದೆನುತಲಿ ಕಳುಹಿದನು ಜಗ
ದೆಱೆಯ ಪಶುಪತಿ ವೃಷಭ ಮೊದಲಾಗಿರ್ದ ಶಿವಗಣವ ೩೦

ಚೆನ್ನಾಗಿ ಮಾಡಿ ಈತನೇ ಶೋಭಿಸುವವನು! ಏತಕ್ಕೆ ಈ ಹುಚ್ಚು" ಎನ್ನುತ್ತ ಗರ್ವಯುಕ್ತ ಬುದ್ಧಿಯಿಂದ ವೃಷಭನನ್ನು ಪರಿಹಾಸ್ಯ ಮಾಡಿದರು. ೨೮. "ನಿಂದಿಸುವವರ ಮಾತು ಕೇಳಿ ಮನಸ್ಸಿನಲ್ಲಿ ರೋಷವನ್ನು ತಾಳಿದನೆ? ಗರ್ವದಿಂದ ಪಂಥವನ್ನು ತೊಟ್ಟನೆ? ಪ್ರತ್ಯುತ್ತರವನ್ನು ಕೊಟ್ಟನೆ? ಇಷ್ಟು ಶಾಂತಿ, ಸ್ಥೈರಣೆ, ಸಮಾನತೆಗಳುಳ್ಳ ಅತಿ ಪವಿತ್ರರಾರು?" ಎಂದು ಸದಾಶಿವ ತನ್ನ ಪಂಚಮುಖಗಳಿಂದ ವೃಷಭನನ್ನು ಹೊಗಳುತ್ತಿದ್ದನು. ೨೯. "ಇವರು ಹುಚ್ಚರು. ವೃಷಭರಾಜನ ರೀತಿಯನ್ನರಿಯದೆ ನುಡಿದರಾದರೆ ಭೂಮಿಯಲ್ಲಿ ಹುಟ್ಟಿ ಆತನ ಭಕ್ತಿಯ ಹಿರಿಮೆಯನ್ನು ನೋಡಲಿ. ತಮ್ಮ ಮನಸ್ಸಿನಲ್ಲಿ ಹಿರಿದಾಗಿರುವ ಮದಮತ್ಸರಗಳನ್ನು ನೀಗಲಿ" ಎನ್ನುತ್ತಾ ಶಂಕರ ಅವರನ್ನು ಭೂಲೋಕಕ್ಕೆ ಕಳುಹಿಸಿದನು. ೩೦. "ಭೂಲೋಕದಲ್ಲಿ ಹುಟ್ಟಿ ಶೋಭಿಸಿ, ನಿಮ್ಮ ನಿಮ್ಮ ಲೋಪ ದೋಷಗಳನ್ನು ಮನದಣಿವಂತೆ ಆಗಾಗಲೇ ಚೆನ್ನಾಗಿ ವಿಚಾರಮಾಡಿಕೊಂಡು ಸ್ಥಿರವಾದ ಪದವಿಯನ್ನು ಪರಿಪೂರ್ಣಗೊಳಿಸುವುದು" ಎಂದು ಜಗದ ಒಡೆಯನಾದ ಪಶುಪತಿಯು ವೃಷಭನೇ ಮೊದಲಾದ ಶಿವಗಣವನ್ನು ಕಳುಹಿಸಿದನು.

ಬೀಳುಕೊಂಡುದು ಪ್ರಮಥಗಣದೊಳ
ಗೇಳುನೂರೆಪ್ಪತ್ತು ಗಡಣಕೆ
ಮೇಳವಾಯಿತು ರುದ್ರಕನ್ನಿಕೆಯರಲಿ ಕೆಲಕೆಲರು
ಹೇಳಲೇನಾ ಚಂದ್ರಧರನ ಕೃ
ಪಾಳುತನವನು ಶಿವಗಣದ ಸುಖ
ದೇಳಿಗೆಯನವರವರ ಹರುಷದ ಮನದ ಹರವರಿಯ ೩೧

ಹರಿ ವಿರಿಂಚಿ ಸುರೇಂದ್ರ ಸುರಮುನಿ
ವರರು ಹರುಷಿತರಾಗಿ ದೇವಾ
ಪರಮಪಾವನವಾಯ್ತು ಧಾರುಣಿ ಹಲವು ಮಾತೇನು
ನಿರುಪಮದ ಗುರುಲಿಂಗ ಜಂಗಮ
ದಿರವನಜಿವೊಡೆ ಸಾಧ್ಯವಿನ್ನಾ
ವರ ವೃಷೇಂದ್ರನ ಕತದಲೆಂದುದು ಕೂಡೆ ತಮತಮಗೆ ೩೨

ಅಲ್ಲಮಪ್ರಭು ಪಾದಪಂಕಜ
ದಲ್ಲಿ ಮಧುಕರವಾಗಿ ಮಂಡಿಸಿ
ಯೊಳ್ಳಿತೆನಿಪ ಶಿವಾನುಭಾವಾಮೃತದ ಬಂಡುಂಡು
ಬಲ್ಲಿತಹ ಬಗೆಯೆಂಬ ಹಸಿವಿನ
ಹೊಲ್ಲವೆಯ ನೆಱೆ ನೀಗಬೇಕೆಂ
ದೆಲ್ಲ ಬಂದರು ಬಳಿಕ ವೃಷಭ ಪ್ರಮಥಗಣವಿಳೆಗೆ ೩೩

ಅಂತು ಗತಿ ೮ಕ್ಕಂ ಪದ ೪೦೭ಕ್ಕಂ ಮಂಗಳಂ

೩೧. ಪ್ರಮಥಗಣದೊಳಗೆ ಏಳುನೂರೆಪ್ಪತ್ತು ಮಂದಿಯ ಗುಂಪಿಗೆ ರುದ್ರಕನ್ಯೆಯರಲ್ಲಿ ಕೆಲವರ ಹೊಂದಿಕೆಯಾಯಿತು. ಇವರನ್ನು ಕೈಲಾಸದವರು ಗೌರವಪೂರ್ವಕವಾಗಿ ಭೂಲೋಕಕ್ಕೆ ಕಳುಹಿಸಿದರು. ಶಿವನ ಕೃಪಾಳುತನವನ್ನು, ಶಿವಗಣದ ಸುಖದ ಅಭಿವೃದ್ಧಿಯನ್ನು, ಅವರವರ ಹರುಷಗೊಂಡ ಮನಸ್ಸಿನ ವಿಸ್ತಾರವನ್ನು ಏನು ಹೇಳಲಿ! ೩೨. ವಿಷ್ಣು ಬ್ರಹ್ಮ ದೇವೇಂದ್ರ ಶ್ರೇಷ್ಠರಾದ ದೇವಮುನಿಗಳು ಸಂತೋಷಗೊಂಡು "ದೇವಾ, ಹೆಚ್ಚು ಮಾತೇನು? ಭೂಮಿ ಪರಮಪಾವನತೆಯನ್ನು ಹೊಂದಿತು. ಶ್ರೇಷ್ಠನಾದ ವೃಷಭೇಂದ್ರನ ಕಾರಣದಿಂದ ಉಪಮಾತೀತವಾದ ಗುರು ಲಿಂಗ ಜಂಗಮದ ಅಸ್ತಿತ್ವವನ್ನು ತಿಳಿಯಲು ಇನ್ನು ಸಾಧ್ಯ" ಎಂದು ತಮ್ಮ ತಮ್ಮಲ್ಲೇ ಅಂದುಕೊಂಡರು. ೩೩. ಅನಂತರ ಅಲ್ಲಮಪ್ರಭುವಿನ ಪಾದಕಮಲದಲ್ಲಿ ದುಂಬಿಯಾಗಿ ಕುಳಿತು, ಒಳ್ಳೆಯದಾದ ಶಿವಾನುಭವಾಮೃತದ ಮಧುವನ್ನು ಸವಿದು, ಶಕ್ತಿಶಾಲಿಯಾದ ಇಷ್ಟಾರ್ಥವೆಂಬ ಹಸಿವಿನ ಕೊರತೆಯನ್ನು ಚೆನ್ನಾಗಿ ನೀಗಬೇಕೆಂದು ವೃಷಭ ಹಾಗೂ ಪ್ರಮಥಗಣಗಳೆಲ್ಲ ಭೂಲೋಕಕ್ಕೆ ಬಂದರು.

# ೯. ಬಸವಾದಿ ಪ್ರಮಥರು ಜನಿಸಿದುದು

## ಗತಿ ೯

ಸೂಚನೆ : ವಸುಧೆಯೊಳು ಮಹದೇವಿಯಕ್ಕನು
ಬಸವರಾಜ ಪ್ರಮಥಗಣವಾ
ವಿಷಮವಾದಿಗಳೆಲ್ಲರುದಯಿಸಿ ಬಳೆದರೊಲವಿನಲಿ

ಪ್ರೇಮದಿಂದಲಿ ಕೇಳುವುದು ನಿ
ಸ್ಸೀಮರೆನಿಸುವ ವೀರಶೈವ
ಸ್ತೋಮರೆಲ್ಲರು ಮಿಗೆ ಪುರಾತನರಾದ ಪರಿಯಿಂದೆ
ಭೂಮಿಯಲಿ ಸಂಜನಿಸಿ ಬಳೆದ ಮ
ಹಾಮನೋಹರಚಾರುಚರಿತೋ
ದ್ದಾಮತೆಯ ಸಂಗತಿಯನೀ ಪ್ರಭುಲಿಂಗಲೀಲೆಯಲಿ ೧

ಇಳೆಯೊಳುಡುತಡಿಯೆಂಬ ಪಟ್ಟಣ
ದೊಳಗೆ ವೀರಶಿವಾಗಮಿಕ ನಿ
ರ್ಮಳನ ವಲ್ಲಭೆಯೆನಿಪ ಸುಮತಿಯ ಗರ್ಭಶುಕ್ತಿಯಲಿ
ಚೆಲುವೆಯಾದ ಕುಮಾರಿಯೆಂಬ
ಗ್ಗಳದ ಮುತ್ತುದಯಿಸಿತು ಧರಣೀ
ತಳದೊಳಗೆ ಪಾರ್ವತಿಯ ಸಾತ್ವಿಕಗುಣವೆ ರೂಪಾಗಿ ೨

ಹೆಟ್ಟುಗೆಗೆ ಶಿವಯೋಗ ರಾಜ್ಯದ
ಪಟ್ಟಗಟ್ಟುವರಂತೆ ನೊಸಲಿನೊ
ಳಿಟ್ಟರಮಲವಿಭೂತಿಯನು ಭವಭವದ ಸೋಂಕುಗಳು
ಮುಟ್ಟದಂತಿರೆ ರಕ್ಷೆಯೆಂದೆನೆ
ಕಟ್ಟಿದರು ಕಂಠದಲಿ ಲಿಂಗವ
ನ್ನೊಟ್ಟಜೆಯಲಾ ಸುಮತಿ ನಿರ್ಮಳರಾ ಕುಮಾರಿತಿಗೆ ೩

ಸೂ : ಭೂಲೋಕದಲ್ಲಿ ಮಹದೇವಿಯಕ್ಕ, ಬಸವರಾಜ, ಪ್ರಮಥಗಣ, ಎದುರುವಾದಿಗಳು ಎಲ್ಲರೂ ಹುಟ್ಟಿ ಸಂತೋಷದಿಂದ ಬೆಳೆದರು. ೧. ಸಾಟಿಯಿಲ್ಲದವರೆನ್ನಿಸುವ ವೀರಶೈವ ಬಳಗದವರೆಲ್ಲರೂ ಅತಿಪುರಾತನರಾದ ಬಸವಾದಿ ಪ್ರಮಥರು ಯಾವ ರೀತಿಯಿಂದ ಭೂಮಿಯಲ್ಲಿ ಹುಟ್ಟಿ ಬೆಳೆದರೆಂಬ ಅತಿ ಮನೋಹರವಾದ, ಸುಂದರವಾದ ಶ್ರೇಷ್ಠ ಚರಿತೆಗಳ ವಿಚಾರವನ್ನು ಈ ಪ್ರಭುಲಿಂಗಲೀಲೆಯಲ್ಲಿ ಪ್ರೀತಿಯಿಂದ ಕೇಳುವುದು. ೨. ಭೂಮಿಯಲ್ಲಿ ಉಡುತಡಿಯೆಂಬ ಪಟ್ಟಣದಲ್ಲಿ ವೀರ ಶಿವಾಗಮಿಕನಾದ ನಿರ್ಮಳನ ಹೆಂಡತಿಯೆನ್ನಿಸಿದ ಸುಮತಿಯ ಗರ್ಭಶುಕ್ತಿಯಲ್ಲಿ ಪಾರ್ವತಿಯ ಸಾತ್ವಿಕಗುಣವೇ ರೂಪಾಗಿ ಚೆಲುವೆ ಕುಮಾರಿಯೆಂಬ ಶ್ರೇಷ್ಠ ಮುತ್ತಾಗಿ ಹುಟ್ಟಿತು. ೩. ಸುಮತಿ ನಿರ್ಮಳರು ತಮ್ಮ ಕುವರಿಗೆ ಸ್ತ್ರೀಗೆ ಶಿವಯೋಗರಾಜ್ಯದ ಪಟ್ಟಗಟ್ಟುವವರಂತೆ ಹಣೆಯಲ್ಲಿ ಪರಿಶುದ್ಧವಾದ ವಿಭೂತಿಯನ್ನು ಇಟ್ಟರು. ಜನ್ಮಜನ್ಮಗಳ ಸೋಂಕುಗಳು ಸ್ಪರ್ಶಿಸದಂತಿರಲು ರಕ್ಷೆ ಎನ್ನುವಂತೆ ಕಂಠದಲ್ಲಿ ಲಿಂಗವನ್ನು ಅತಿಶಯವಾಗಿ

ಪರಮನಿಕ್ಕೆಯ ಮುಟ್ಟಿ ತೋಱುವ
ಪರಿಯಲಾತ್ಮಜೆಯುತ್ತಮಾಂಗದೊ
ಳಿರಿಸಿ ಹಸ್ತವನಲ್ಲಿ ಬೆರಸುವುದೆನುತೆ ಕಿವಿಯೊಳಗೆ
ನೆರಹುವಂತಿರೆ ಶೈವಪಂಚಾ
ಕ್ಷರಿಯನುಪದೇಶಿಸಿ ವಿನೂತನ
ಹರುಷದಲಿ ಹರಸಿದನು ನಿರ್ಮಳ ಮತ್ತೆ ನಿಜಸುತೆಯ ೪

ಶೀವಿ ತನುವಿನಲತಿಮಹತ್ತರ
ದೇವತಾಕಳೆಯಿರಲು ಮಿಗೆ ಮಾ
ದೇವಿಯೆಂಬೀ ಹೆಸರನಿಟ್ಟರು ನಿಜಕುಮಾರಿತಿಗೆ
ಭಾವೆ ಬಳೆವುತ್ತಿರಲು ನಿರ್ಮಳ
ದೇವ ಸುಮತಿಯರೀಷ್ಸಿತಾರ್ಥವ
ನೀವುತಿಹ ನಡೆನುಡಿಯಲೊಪ್ಪುವ ಕಲ್ಪಲತೆಯಂತೆ ೫

ಈಕೆ ಭಕ್ತಿಯ ಬಳ್ಳಿಯಂತೆಯ
ನೇಕಪರಿಯಲಿ ಬಳೆವುತಿರ್ದಳು
ಲೋಕದೊಳು ತಾನಲ್ಲದಿಲ್ಲೆನಲತುಳ ಮಹಿಮೆಯಲಿ
ಆಕೆಯಂತಿರಲಿತ್ತಲೊಲಿದು ಪಿ
ನಾಕಿ ಕಳುಹಿದ ಮಹಿಮರೆಲ್ಲರು
ಬೇಕು ಬೇಕೆಂಬೆಡೆಗಳಲಿ ಸಂಜನಿಸತೊಡಗಿದರು ೬

ಶುದ್ಧ ಭಕ್ತಿಯ ಭರದ ಮೊಱಡಿಯ
ಮುದ್ದಯನ ಸತಿಯುದರನಿಧಿಯಲಿ
ಸಿದ್ಧರಾಮ ಶಶಾಂಕನೆಂಬ ಮಹಾಮನೋಹರನು
ಉದ್ಧರಿಸಹುಟ್ಟಿದನು ಯೋಗಿ ಸ
ಮೃದ್ಧ ಸೊನ್ನಲಪುರದೊಳೊಪ್ಪಿರು
ತಿರ್ದನಾತನನೇಕ ವಿಭವದಲಖಿಳ ಜಗವಱಿಯೆ ೭

ಕಟ್ಟಿದರು. ೪. ಪ್ರಣವಸ್ವರೂಪಿಯ ವಾಸಸ್ಥಳವನ್ನು ಮುಟ್ಟಿ ತೋರುವ ರೀತಿಯಲ್ಲಿ ನಿರ್ಮಳನು ಮಗಳ ಶಿರದ ಮೇಲೆ ಹಸ್ತವನ್ನು ಇರಿಸಿ ಶೈವಧರ್ಮದ ಪಂಚಾಕ್ಷರೀ ಮಂತ್ರವನ್ನು ಅಲ್ಲಿ ಕೂಡಿಸುವುದೆಂದು ಕಿವಿಯೊಳಗೆ ಸೇರುವಂತೆ ಉಪದೇಶಿಸಿ ವಿನೂತನವಾದ ಹರುಷದಿಂದ ಆಶೀರ್ವದಿಸಿದನು. ೫. ಅತಿ ಮಹತ್ತರವಾದ ದೇವತಾಕಳೆಯು ದೇಹದಲ್ಲಿ ವಿಶೇಷವಾಗಿ ತುಂಬಿರಲು ನಿರ್ಮಳ ಸುಮತಿಯರು ತಮ್ಮ ಕುಮಾರಿಗೆ ಮಾದೇವಿ ಎಂಬ ಹೆಸರನ್ನು ಇಟ್ಟರು. ಅವರ ಮನಸ್ಸಿನ ಬಯಕೆಗಳನ್ನು ನೀಡುವ ಶಕ್ತಿಯುಳ್ಳ, ನಡೆನುಡಿಗಳಿಂದ ಒಪ್ಪುವ ಮಾದೇವಿಯು ಕಲ್ಪವೃಕ್ಷದ ಬಳ್ಳಿಯಂತೆ ಬೆಳೆಯುತ್ತಿದ್ದಳು. ೬. ಲೋಕದಲ್ಲಿ ತಾನಲ್ಲದೆ ಮತ್ತೋರ್ವರಿಲ್ಲವೆಂಬ ಅತುಳಮಹಿಮೆಯಿಂದ ಈಕೆ ಭಕ್ತಿಯ ಬಳ್ಳಿಯಿಂದ ಅನೇಕ ರೀತಿಯಲ್ಲಿ ಬೆಳೆಯುತ್ತಿದ್ದಳು. ಅಂತಿರಲು ಇತ್ತ ಒಲಿದು ಶಿವ ಕಳುಹಿಸಿದ ಮಹಿಮರೆಲ್ಲರು ತಮತಮಗೆ ಇಚ್ಛೆ ಬಂದ ಸ್ಥಳಗಳಲ್ಲಿ ಹುಟ್ಟತೊಡಗಿದರು. ೭. ಅತಿಶಯವಾದ ಪರಿಶುದ್ಧ ಭಕ್ತಿಯ ಮೊರಡಿಯ ಮುದ್ದಯ್ಯನ ಸತಿಯ ಹೊಟ್ಟೆಯೆಂಬ ನಿಧಿಯಲ್ಲಿ ಸಿದ್ಧರಾಮಚಂದ್ರನೆಂಬ ಅತಿ ಮನೋಹರನು

ಗೋಚರಿಸದನುಪಮದ ಭಕ್ತಿಯ
ನಾಚರಿಸಬೇಕೆಂದು ಮಡಿವಳ
ಮಾಚಿದೇವನು ಹುಟ್ಟಿದನು ಶಿವಭಕ್ತರುದರದಲಿ
ಈ ಚತುರ್ದಶಭುವನದೊಳು ಸಚ
ರಾಚರವ ಪಾವನವ ಮಾಡುವ
ಸೂಚನೆಯ ಶಿವಲಿಂಗಭಕ್ತಿಯ ಮಾಡುತಿರುತಿರ್ದ ೮

ಒಳ್ಳಿತಾಗಿ ಯಥಾಕ್ರಮಕ್ರಮ
ದಲ್ಲಿ ಪ್ರಮಥರು ರುದ್ರಕನ್ನೆಯ
ರೆಲ್ಲರುದುಭವಿಸಿದರು ಶುದ್ಧಶಿವೈಕ್ಯರುದರದಲಿ
ಮೆಲ್ಲ ಮೆಲ್ಲನೆ ಬಳೆದು ತಮತಮ
ಗುಳ್ಳ ಕಾಯಕವಿಡಿದು ಭೂತಳ
ದಲ್ಲಿ ಮೆಱೆವುತ್ತಿರ್ದರೀಶ್ವರಭಾವ ಭಕ್ತಿಯಲಿ ೯

ದಾನ ಧರ್ಮ ಪರೋಪಕಾರವಿ
ಧಾನ ಗುರು ಶಿವಭಕ್ತಿಯುಕ್ತಿಯ
ನೂನರೀತಿಯಲಿಂಗಳೇಶ್ವರ ಬಾಗವಾಡಿಯಲಿ
ಮಾನನಿಧಿಗಳು ಸುಕೃತಿಗಳು ಮಹಿ
ಮಾನತೆಯಲಿರುತಿಪ್ಪರದನಾ
ನೇನ ಹೇಳುವೆ ಮಾದರಸ ಮಾದಾಂಬಿಕೆಯರಿರವ ೧೦

ಲೋಕವನ್ನು ಉದ್ಧಾರ ಮಾಡಲು ಹುಟ್ಟಿದನು. ಸಿದ್ಧರಾಮಯೋಗಿಯು ಅನೇಕ ವೈಭವಗಳಿಂದ ಸಕಲ ಜಗಕ್ಕೆ ತಿಳಿಯುವಂತೆ ಸಂಪದ್ಭರಿತವಾದ ಸೊನ್ನಲಪುರದಲ್ಲಿ ಶೋಭಿಸುತ್ತಿದ್ದನು. ೮. ಕಾಣಲಾಗದ ಎಣೆಯಿಲ್ಲದ ಭಕ್ತಿಯನ್ನು ಆಚರಿಸಬೇಕೆಂದು ಮಡಿವಳ ಮಾಚಿದೇವನು ಶಿವಭಕ್ತರ ಹೊಟ್ಟೆಯಲ್ಲಿ ಹುಟ್ಟಿದನು; ಈ ಹದಿನಾಲ್ಕು ಲೋಕಗಳಲ್ಲಿ ಸಚರಾಚರವನ್ನು ಪವಿತ್ರಮಾಡುವ ಬಗೆಯನ್ನು ಸೂಚಿಸುವ ಶಿವಲಿಂಗಭಕ್ತಿಯನ್ನು ಆಚರಿಸುತ್ತಿದ್ದನು. ೯. ಸೊಗಸಾಗಿ ಕ್ರಮಕ್ರಮವಾಗಿ ಪ್ರಮಥರು, ರುದ್ರಕನ್ಯೆಯರು-ಇವರೆಲ್ಲರೂ ಶುದ್ಧರೂ, ಶಿವನಲ್ಲಿ ಒಮ್ಮನವಾಗಿರುವವರೂ ಆದವರ ಹೊಟ್ಟೆಯಲ್ಲಿ ನೆಲೆಸಿ, ಮೆಲ್ಲಮೆಲ್ಲನೆ ಬೆಳೆದು ತಮತಮಗುಳ್ಳ ಕಾಯಕ ತಳೆದು ಭೂತಳದಲ್ಲಿ ಈಶ್ವರಭಾವಭಕ್ತಿಯಲ್ಲಿ ಶೋಭಿಸುತ್ತಿದ್ದರು. ೧೦. ಇಂಗಳೇಶ್ವರ ಬಾಗವಾಡಿಯಲ್ಲಿ ಮಾನನಿಧಿಗಳೂ, ಪುಣ್ಯವಂತರೂ, ಮಾನ್ಯರೂ ಆದ ಮಾದರಸ ಮಾದಾಂಬಿಕೆಯರು ದಾನ ಧರ್ಮ ಪರೋಪಕಾರ ವಿಧಾನ ಹಾಗೂ ಗುರು ಶಿವಭಕ್ತಿ ಚತುರತೆಗಳಲ್ಲಿ ಕೊರತೆಯಿಲ್ಲದ ರೀತಿಯಲ್ಲಿರುವರು. ಅವರ ಸ್ಥಿತಿಯನ್ನು ನಾನು ಏನೆಂದು ಹೊಗಳಲಿ?

ಆಕೆ ತಾನು ಪತಿವ್ರತಾಶೀ
ಲೈಕೆ ಮಾದರಸಾಂಕನಾದೊಡೆ
ಯೇಕಪತ್ನೀವ್ರತ ಗುಣಾನ್ವಿತನವರ ಜಠರದಲಿ
ಲೋಕದೊಳು ಗುರುಶಿಷ್ಯ ಸಂಗನಿ
ರಾಕುಳಕೆ ಸುಜ್ಞಾನವುದಯಿಸು
ವಾಕೃತಿಯ ಸುಕುಮಾರ ಸಂಜನಿಸಿದನು ಜಗವಱಿಯೆ ೧೧

ಅಳನು ಮಿಡುಕನು ಮಿನುಗಿಸನು ಕ
ಣ್ಗಳನಿದೇನೆಂದವರು ಕಂಡು
ಮ್ಮಳಿಸಿ ಪಿತರುಗಳಱಿವು ಮಱಹಿನಲಿರಲು ಶಿವನೊಲಿದು
ತೊಳಗಿ ಬೆಳಗುತೆ ಬಂದು ಮಿಗೆ ಮನೆ
ಯೊಳಗೆ ಕುಳ್ಳಿತು ಶಿಶುವ ನಿಜಕರ
ತಳದೊಳೆತ್ತಿದನೊಲವಿನಿಂದಲಿ ಭಕ್ತವತ್ಸಲನು ೧೨

ಪರಮ ನೀನಹೆಯೆಂದು ನೊಸಲಲಿ
ಬರೆವನಂತಿರಲಿಟ್ಟು ಭೂತಿಯ
ನಿರುತ ನಿನ್ನುಪನಗಲಿ ನಾನಿರೆನೆಂದು ಕುಱುಹಾಗಿ
ನೆರಹುವಂತಿರೆ ದಿವ್ಯಲಿಂಗವ
ಕೊರಳಿನಲಿಯುವ ಧರಿಸಿ ಕರುಣಾ
ಕರ ಸದಾಶಿವನಾ ಮಹಾತ್ಮಗೆ ತಾನೆ ಗುರುವಾದ ೧೩

ನಂಬುಗೆಯ ಕೊಡುವಂತೆ ಹಸ್ತವ
ನಿಂಬಿನಲಿ ಮಸ್ತಕದೊಳಿರಿಸುತ
ಲುಂಬ ತಾಣವಿದೆಂದು ಕಿವಿಯಲಿ ಪಚ್ಚೆ ಪೇಳ್ವಂತೆ
ಶಂಭು ಪಂಚಾಕ್ಷರಿಯ ನೇಮಿಸಿ
ತುಂಬಿ ತನುವಿಗೆ ಬಸವ ನೀನೆಂ
ದೆಂಬ ನಾಮವನಿಟ್ಟು ಹೋದನು ದೇವ ನಿಮಿಷದಲಿ ೧೪

೧೧. ಮಾದಾಂಬಿಕೆಯು ಪತಿವ್ರತೆ. ಪ್ರಸಿದ್ಧನಾದ ಮಾದರಸನಾದರೊ ಏಕಪತ್ನೀವ್ರತನು, ಸದ್ಗುಣಗಳಿಂದ ಕೂಡಿದವನು. ಆ ದಂಪತಿಗಳ ಗರ್ಭದಲ್ಲಿ ಗುರು ಶಿಷ್ಯರ ಶಾಂತಿ ಸಮ್ಮಿಳನದಿಂದ ಹುಟ್ಟುವ ರೀತಿಯಲ್ಲಿ ಜಗತ್ತೆಲ್ಲಾ ತಿಳಿಯುವಂತೆ ಸುಕುಮಾರನು ಹುಟ್ಟಿ ಬಂದನು. ೧೨. ಅಳದೆ, ಅಲ್ಲಾಡದೆ, ಕಣ್ಣುಗಳನ್ನು ಚಲಿಸದೆ (ಇರುವ ಮಗನನ್ನು) ಕಂಡು ಇದೇನೆಂದು ಅಜ್ಞಾನದಲ್ಲಿ ತಂದೆತಾಯಿಯರು ದುಃಖಿಸಿರಲು ಆಗ ಭಕ್ತವತ್ಸಲನಾದ ಶಿವನು ಒಲಿದು ಪ್ರಕಾಶವನ್ನು ಬೀರುತ್ತಾ ಅವರಲ್ಲಿಗೆಬಂದು ಮನೆಯ ಒಳಗೆ ಕುಳಿತು ಶಿಶುವನ್ನು ತನ್ನ ಅಂಗೈಯಲ್ಲಿ ಎತ್ತಿಕೊಂಡನು. ೧೩. ಪ್ರಣವಸ್ವರೂಪಿ ನೀನಾಗುವೆಯೆಂದು ಹಣೆಯಲ್ಲಿ ಬರೆಯುವವನಂತೆ ವಿಭೂತಿಯನ್ನು ಇಟ್ಟು, ನಿಶ್ಚಯವಾಗಿಯೂ ನಿನ್ನನ್ನಗಲಿ ನಾನಿರಲಾರೆ ನೆಂದು ಚಿಹ್ನೆಯಾಗಿ ಕೂಡಿಸುವಂತೆ ಶ್ರೇಷ್ಠಲಿಂಗವನ್ನು ಕೊರಳಿನಲ್ಲಿ ಧರಿಸಿ ಕರುಣಾಕರನಾದ ಸದಾಶಿವನು ಆ ಮಹಾತ್ಮನಿಗೆ ತಾನೇ ಗುರುವಾದನು. ೧೪. ಆ ಮಹಾದೇವನು ಆಶ್ವಾಸನೆ ಕೊಡುವಂತೆ ಹಸ್ತವನ್ನು ಶಿರದಲ್ಲಿ ನೆಲೆಗೊಳಿಸುತ್ತ ಜ್ಞಾನವನ್ನು ಉಣ್ಣುವ ಸ್ಥಾನವಿದೆಂದು

ಮಗನು ನಿಶ್ಚೈತನ್ಯದಿಂದಿರೆ
ಬೆಗಡುಗೊಂಡಳವಳಿದು ಮಱವೆಯ
ತಗಹು ತೆಗೆದೆಚ್ಚಱಿಕೆ ತೋಱಿತು ಜನನಿಜನಕರಿಗೆ
ಬಗೆವೊಡಿದು ಕನಸಲ್ಲ ಕರಸೋ
ಜಿಗವಲಾ ಪ್ರತ್ಯಕ್ಷವೆನುತವ
ರುಗಳು ಲಿಂಗವಿಭೂತಿಸಹಿತಿಹ ಸುತನ ನೋಡಿದರು ೧೫

ನೋಡಿಯುಪದೇಶವನು ಶಂಭುವೆ
ಮಾಡಿ ಹೆಸರನು ಬಸವನೆಂದೇ
ಕೂಡಿ ಕೊಟ್ಟನಲಾ ಶಿವಾ ನಮ್ಮಯ ಸಭಾಗ್ಯತೆಗೆ
ನೋಡಲೆಣೆಯಾರುಂಟೆನುತೆ ಕೈ
ಗೂಡಿ ಪುತ್ರೋತ್ಸಾಹ ಧರ್ಮವ
ಮಾಡಿ ಮಾದರಸಾಂಕ ಪ್ಯೆವೆಚ್ಚಿದನು ಹರುಷದಲಿ ೧೬

ಆದುವಾತಗೆ ನಾಮಕರಣಗ
ಳಾದಿಯಾದ ಸಮಸ್ತವಿಭವವಿ
ನೋದವಾತಗೆ ಮಱೆದ ಮಾತನು ನೆನಸಿಕೊಟ್ಟಂತೆ
ವೇದ ಶಾಸ್ತ್ರ ಪುರಾಣವಾಗಮ
ವಾದಿಯಾಗಿಹ ಕರ್ಮಕಳೆಗಳು
ವೇದಿಸಿದುವೊಮ್ಮಿಂಗೆ ಕೇಳಲು ಬಸವರಾಜಂಗೆ ೧೭

ಕಿವಿಯಲ್ಲಿ ಹೇಳುವಂತೆ ಶಿವಪಂಚಾಕ್ಷರೀ ಮಂತ್ರವನ್ನು ಉಪದೇಶಿಸಿ, ದೇಹದಲ್ಲಿ ತುಂಬಿ, ಬಸವನೆಂಬ ಹೆಸರನಿಟ್ಟು ನಿಮಿಷದಲ್ಲಿ ಅಂತರ್ಧಾನನಾದನು. ೧೫. ಮಗನು ಚೈತನ್ಯ ಹೀನನಾಗಿರಲು ಆಶ್ಚರ್ಯಗೊಂಡು ಶಕ್ತಿಗುಂದಿ ಮರವೆಯ ಸಂಬಂಧ ಹಿಮ್ಮೆಟ್ಟಿ, ಜನನೀ ಜನಕರಿಗೆ ತಿಳುವಳಿಕೆಯುಂಟಾಯಿತು. ವಿಚಾರಮಾಡಲು ಇದು ಕನಸಲ್ಲ, ಅತ್ಯಾಶ್ಚರ್ಯ ಕರವಾದ ಸತ್ಯವೆಂದು ಅವರು ಲಿಂಗವಿಭೂತಿಗಳಿಂದ ಕೂಡಿದ ಮಗನನ್ನು ನೋಡಿದರು. ೧೬. ಮಗುವನ್ನು ನೋಡಿ ಮಂತ್ರೋಪದೇಶವನ್ನು ಶಿವನೇ ಮಾಡಿ ಬಸವನೆಂದು ಹೆಸರನ್ನು ಅನುಗ್ರಹಿಸಿದನು. ನೋಡಲು ನಮ್ಮ ಸೌಭಾಗ್ಯಕ್ಕೆ ಸಮಾನರಾರುಂಟು? ಎಂದು ಪುತ್ರಜನನದಿಂದುಂಟಾದ ಸಂತೋಷಕ್ಕೆ ದಾನಧರ್ಮವನ್ನು ಮಾಡಿ ಮಾದರಸನು ಹರುಷದಿಂದ ಉಬ್ಬಿದನು. ೧೭. ಆತನಿಗೆ ನಾಮಕರಣವೇ ಮೊದಲಾದ ಸರ್ವ ವೈಭವಗಳ ವಿನೋದವಾಯಿತು. ಮರೆತುಹೋದ ಮಾತನ್ನು ನೆನೆಸಿಕೊಟ್ಟಂತೆ ವೇದಶಾಸ್ತ್ರ ಪುರಾಣ ಆಗಮಗಳೇ ಮೊದಲಾದ ಕರ್ಮಕಲೆಗಳು ಬಸವರಾಜನಿಗೆ ಕೇಳಲು ಒಮ್ಮೆಗೇ ತಿಳಿದುವು.

ಉಪನಯನ ಲಕ್ಷವನು[1] ಮುಂದಾ
ವಿಪುಲಮತಿಗಲ್ಲಮನು ತೋಱೆಸು
ವುಪಮೆಯನು ಸೂಚಿಸುವ ಪರಿಯಲಿ ಬಸವರಾಜಂಗೆ
ಉಪನಯನವಾಯಿತ್ತು ವಿಭವದೆ
ತ್ರಿಪುರವೈರಿಯ ಭಕ್ತಿಭಾವದ
ಲಪರಿಮಿತ ಮಹಿಮೆಯನು ತೋಱೆದನಾ ಮಹಾತ್ಮಕನು ೧೮

ಇತ್ತಲಿವರಿರುತಿರ್ದರಾಗಳೆ
ಯತ್ತ ಪರವಾದಿಗಳು ಜನಿಯಿಸಿ
ಮತ್ತೆಯ.ವರೊಳಗೊಬ್ಬನತಿಬಳ ವೀರ ಬಿಜ್ಜಳನು
ಉತ್ತಮದ ಕಲ್ಯಾಣದಲಿ ನೃಪ
ವೃತ್ತಿಯಿಂದಿರುತಿರ್ದನೇಕ
ಚ್ಛತ್ರದಲಿ ಭೂಮಿಯನು ಪಾಲಿಸುತಿರ್ದನೊಲವಿನಲಿ ೧೯

ಜನಪನಿರುತಿರಲತ್ತಲಿತ್ತಲು
ಜನನಿಜನಕರ ಬೀಳುಕೊಂಡನು
ವಿನಯದಲಿ ತಮ್ಮಕ್ಕ ನಾಗಾಯಿಗಳ ಸಹವಾಗಿ
ಅನುಕರಿಸಿ ನಡೆತಂದು ತನ್ನಯ
ಮನವೊಲಿದು ಬಸವಣ್ಣ ಹೊಕ್ಕನು
ಜನಪ ಬಿಜ್ಜಳನಾಳುತಿಹ ಕಲ್ಯಾಣಪುರವರವ ೨೦

೧೮. ಮುಂದೆ ಆ ಬುದ್ಧಿವಂತನಾದ ಬಸವನಿಗೆ ಅಲ್ಲಮನು ಉಪನಯನದ ಗುರಿಯನ್ನು ತೋರಿಸುವ, ಹೋಲಿಕೆಯನ್ನು ಸೂಚಿಸುವ ರೀತಿಯಲ್ಲಿ ವೈಭವಪೂರ್ವಕವಾಗಿ ಉಪನಯನವಾಯಿತು. ತ್ರಿಪುರಸಂಹಾರಿಯಾದ ಶಿವನನ್ನು ಭಕ್ತಿಭಾವದಿಂದ (ನೆನೆದ) ಮಹಾತ್ಮನಾದ ಬಸವನು ಲೆಕ್ಕವಿಲ್ಲದಷ್ಟು ಮಹಿಮೆಗಳನ್ನು ತೋರಿದನು. ೧೯. ಇತ್ತ ಇವರು ಇರುತ್ತಿರಲು ಆಗಲೇ ಅತ್ತ ಪರವಾದಿಗಳು ಜನಿಸಿದರು. ಮತ್ತೆ ಅವರೊಳಗೊಬ್ಬ ಅತಿಬಲಶಾಲಿಯಾದ ವೀರ ಬಿಜ್ಜಳನು ಶ್ರೇಷ್ಠವಾದ ಕಲ್ಯಾಣದಲ್ಲಿ ರಾಜನಾಗಿ, ಏಕಛತ್ರಾಧಿಪತಿಯಾಗಿ ಭೂಮಿಯನ್ನು ಪ್ರೀತಿಯಿಂದ ಪಾಲಿಸುತ್ತಲಿದ್ದನು. ೨೦. ಅತ್ತ ಮಹಾರಾಜನಿರುತ್ತಿರಲು ಇತ್ತ ಬಸವಣ್ಣನು ತಂದೆತಾಯಿಯರನ್ನು ವಿನಯದಿಂದ ಬೀಳ್ಕೊಂಡು ತಮ್ಮಕ್ಕ ನಾಗಾಯಿಯನ್ನು ಜೊತೆಯಲ್ಲಿ ಕರೆದುಕೊಂಡು ಮನವೊಲಿದು ನಡೆದು ಜನಪ ಬಿಜ್ಜಳನಾಳುವ ಶ್ರೇಷ್ಠವಾದ ಕಲ್ಯಾಣಪುರವನ್ನು ಪ್ರವೇಶಿಸಿದನು.

---

೧. ಮುಂದೆ ಇಂತಹ ಲಕ್ಷಾಂತರ ಉಪನಯನಗಳನ್ನು ಮಾಡಿ ತೋರಿಸುವನು ಎಂಬುದನ್ನು ಸೂಚಿಸುವಂತೆ-ಈ ಉಪನಯನದ ಲಕ್ಷಗಷ್ಟು ದೊರೆಯುವುದೆಂದು ಅಭಿಪ್ರಾಯ (ರಂ)

ಆ ನರೇಂದ್ರನ ಕಂಡು ಬಳಿಕಾ
ಸ್ಥಾನಮಧ್ಯದೊಳೊಂದು ದಿವಸವ
ನೂನಕಾರಣಲಿಖಿತ ಬಿದ್ದಿರಲದನು ತಿಳಿದೋದಿ
ಆ ನರೇಂದ್ರಂಗಪರಿಮಿತದ ನಿ
ಧಾನವನು ತಾ ತೆಗೆಸಿ ಸಲಿಸಿದ
ನೇನನೆಂಬೆನು ಬಸವರಾಜನ ಘನ ಮಹೋನ್ನತಿಯ ೨೧

ಭೂತಳಾಧೀಶ್ವರನ ಮನದೊಳ
ಗೀತ ಕಾರಣಪುರುಷನಹ ಸಂ
ಕೇತ ಮಿಸುಗಲು ಕೊಟ್ಟನಂದು ಮಹಾಪ್ರಧಾನಿಕೆಯ
ಪ್ರೀತಿಯಿಂದೆ ವಿವಾಹವನು ವಿ
ಖ್ಯಾತಿ ಮಿಗೆ ವಿಭವದಲಿ ಮಾಡಿದ
ನೋತು ಬಿಜ್ಜಳರಾಯನೆಮ್ಮಯ ಬಸವರಾಜಂಗೆ ೨೨

ಮಿಕ್ಕು ಭಕ್ತಿಯಲೊಂದು ದಿವಸದ
ಲಕ್ಕ ನಾಗಾಯಿಗಳು ಬಸವನ
ಲೊಕ್ಕು ಮಿಕ್ಕ ಮಹಾಪ್ರಸಾದವನುಣಲು ಕ್ಷಣದೊಳಗೆ
ತಕ್ಕ ಶಿವತತ್ವಸ್ವರೂಪವೆ
ಸಿಕ್ಕಿ ಬೆಳದುದಯಿಸಲು ಕಾಣುತ
ಲಕ್ಕನಾ ಬಸವೇಶ್ವರನ ಹೆಸರಿಟ್ಟಳಾ ಶಿಶುಗೆ ೨೩

ಧಾರುಣೀವಳಯದಲಿ ಕೀರ್ತಿಯು
ದಾರದಿಂದಿರುತಿರ್ದನುಮೆಯ ಕು
ಮಾರ ಷಣ್ಮುಖನಂತೆ ಸಕಳಕಳಾವಿಶಾರದನು
ವೀರಶೈವಾಗಮದ ವಿವಿಧ ವಿ
ಚಾರಪರ ಗುರು ಲಿಂಗ ಜಂಗಮ
ಸಾರ ಪರಮಾರಾಧ್ಯನೆಮ್ಮಯ ಚೆನ್ನಬಸವಣ್ಣ ೨೪

೨೧. ಅನಂತರ ಬಸವಣ್ಣನು ಬಿಜ್ಜಳನನ್ನು ಕಂಡು ಆಸ್ಥಾನಮಧ್ಯದಲ್ಲಿ ಒಂದು ದಿವಸ ಕಾರಣವೇ ಇಲ್ಲದೆ ಲಿಖಿತವೊಂದು (ಆಗಸದಿಂದ) ಬೀಳಲು ಅದನ್ನು ಓದಿ ತಿಳಿದು ಆ ನರೇಂದ್ರನಿಗೆ ಅಪರಿಮಿತವಾದ ಹೂಳಿಟ್ಟ ನಿಧಿಯನ್ನು ತೆಗೆಸಿ ಕೊಡಿಸಿದನು. ಬಸವರಾಜನ ಅತಿಶಯವಾದ ಮಹೋನ್ನತಿಯನ್ನು ಹೇಗೆ ವರ್ಣಿಸಲಿ! ೨೨. ಭೂಪಾಲನಾದ ಬಿಜ್ಜಳನು ಮನದಲ್ಲಿ ಈತ ಕಾರಣಪುರುಷನಾಗಿರುವನೆಂಬ ಕುರುಹು ಹೊಳೆಯಲು ಬಸವಣ್ಣನಿಗೆ ಮಹಾಪ್ರಧಾನಿಯ ಹುದ್ದೆಯನ್ನು ಕೊಟ್ಟನು ಮತ್ತು ಬಸವರಾಜನ ಕೀರುತಿ ಹೆಚ್ಚುವಂತೆ ಒಲಿದು ವೈಭವಪೂರ್ವಕವಾಗಿ ವಿವಾಹವನ್ನು ಮಾಡಿದನು. ೨೩. ಅತಿಶಯವಾದ ಭಕ್ತಿಯಿಂದ ಒಂದು ದಿವಸ ಅಕ್ಕ ನಾಗಾಯಿಯು ಬಸವಣ್ಣ ಉಂಡು ಮಿಕ್ಕ ಮಹಾಪ್ರಸಾದವನ್ನು ಸೇವಿಸಲು ಆ ಕ್ಷಣದೊಳಗೆ ಯೋಗ್ಯವಾದ ಶಿವತತ್ವ ಸ್ವರೂಪವೇ ಸೇರಿ ಗರ್ಭದಲ್ಲಿ ಬೆಳೆಯಿತು. ಮಗು ಹುಟ್ಟಲು ಅದನ್ನು ಕಂಡ ಅಕ್ಕ ನಾಗಾಯಿ ಆ ಶಿಶುವಿಗೆ ಬಸವೇಶ್ವರನ ಹೆಸರನ್ನು ಇಟ್ಟಳು. ೨೪. ಉಮೆಯ ಕುಮಾರ ಷಣ್ಮುಖನಂತೆ ಸಕಲ ಕಲೆಗಳಲ್ಲಿ ವಿಶಾರದನೂ ವೀರಶೈವಾಗಮದ ವಿವಿಧ ವಿಚಾರಗಳಲ್ಲಿ

ಪರಮ ಪೂರ್ವಾಚಾರ್ಯ ಬಸವೇ
ಶ್ವರನಿಗೊಬ್ಬ ಕುಮಾರನಾದನು
ಧರಣಿಯೊಳಗಪ್ರತಿಮ ಗುಣಗಣನಿಲಯನಾತಂಗೆ
ವರದ ಕೂಡಲ ಸಂಗಮೇಶನ
ನಿರುತ ನಾಮವನಿಟ್ಟು ಸುಖದಿಂ
ದಿರುತಲಿರ್ದನು ಬಸವದಂಡಾಧೀಶನೊಲವಿನಲಿ ೨೫

ಆದಿಯಲಿ ಕೈಲಾಸದೊಳು ಸಂ
ವಾದವನು ಮಾಡಿದವರೆಲ್ಲರ
ಮೂದಲಿಸಿ ಸತ್ತವರನೆತ್ತಿಯನೇಕ ಮಹಿಮೆಯನು
ಮೇದಿನಿಗೆ ತಾ ಮೆಱೆದು ನೆಱೆ ಪರ
ವಾದಿಗಳು ತಲೆದೂಗೆ ತನ್ನ ವಿ
ನೋದದಿಂದಿರುತಿರ್ದನೆಮ್ಮಯ ಬಸವದಂಡೇಶ ೨೬

ರೂಢಿ ಮೆಚ್ಚಲು ಹಲವು ಪರಿಯ ಪ
ವಾಡಗಳ ಮೆಱೆವುತೆ ನಿರಂತರ
ನೀಡುತಿರ್ದನು ನಿಷ್ಠೆಯಿಂದಲಿ ಲಿಂಗಜಂಗಮಕೆ
ಬೇಡಿದವರಿಗೆ ಬೇಡಿತನು ಕೈ
ಗೂಡಿಸುತೆ ದಾಸೋಹತನದಲಿ
ಮಾಡುತಿರ್ದನು ಬಸವದಂಡಾಧೀಶ ಭಕ್ತಿಯಲಿ ೨೭

ತಿಳುವಳಿಕೆಯುಳ್ಳವನೂ ಗುರು ಲಿಂಗ ಜಂಗಮಶ್ರೇಷ್ಠರನ್ನು ಹೆಚ್ಚಾದ ಶ್ರದ್ಧೆಯಿಂದ ಆರಾಧಿಸುವವನೂ ಆದ ನಮ್ಮ ಚೆನ್ನಬಸವಣ್ಣನು ಭೂವಳಯದಲ್ಲಿ ಕೀರ್ತಿ, ಉದಾರತೆಗಳಿಂದ ಕೂಡಿ ಇರುತ್ತಿದ್ದನು. ೨೫. ಶ್ರೇಷ್ಠ ಪೂರ್ವಾಚಾರ್ಯನಾದ ಬಸವೇಶ್ವರನಿಗೆ ಓರ್ವ ಕುಮಾರ ಜನಿಸಿದನು. ಭೂಮಿಯಲ್ಲಿ ಅಪ್ರತಿಮ ಗುಣಗಳ ಮೊತ್ತಕ್ಕೆ ಮನೆಯಾದ ಆತನಿಗೆ ವರದಾನಿ ಕೂಡಲಸಂಗಮೇಶನ ನಿಜನಾಮವನ್ನು ಇಟ್ಟು ಸುಖದಿಂದ ಬಸವದಂಡಾಧೀಶನು ಇರುತ್ತಿದ್ದನು. ೨೬. ಆದಿಯಲ್ಲಿ ಕೈಲಾಸದಲ್ಲಿ ವಾದ ಮಾಡಿದವರೆಲ್ಲರನ್ನು ಮೂದಲಿಸಿ, ಸತ್ತವರನ್ನು ಬದುಕಿಸಿ, ಅನೇಕ ಮಹಿಮೆಗಳನ್ನು ಭೂಲೋಕದಲ್ಲಿ ಪರವಾದಿಗಳು ಚೆನ್ನಾಗಿ ತಲೆದೂಗುವಂತೆ ಪ್ರದರ್ಶಿಸಿ ತನ್ನ ವಿನೋದದಿಂದ ನಮ್ಮ ಬಸವದಂಡೇಶನು ಇರುತ್ತಿದ್ದನು. ೨೭. ಬಸವದಂಡಾಧೀಶನು ಭೂಮಿ ಮೆಚ್ಚುವಂತೆ ಹಲವು ಬಗೆಯ ಪವಾಡಗಳನ್ನು ಪ್ರದರ್ಶಿಸುತ್ತಾ ಯಾವಾಗಲೂ ನಿಷ್ಠೆಯಿಂದ ಕೂಡಿ ಲಿಂಗ ಜಂಗಮಗಳಿಗೆ ನೀಡುತ್ತಲೂ ಬೇಡಿದವರಿಗೆ ಇಷ್ಟವಾದ್ದನ್ನು ದಾಸೋಹತನದಿಂದ ಕೈಗೂಡಿಸುತ್ತಲೂ ಇದ್ದನು.

ಮರ ಶಿಲಾ ಪಶುದೇಹ ಗೇಹದೊ
ಳಿರಲು ನಾವಿನ್ನಾಜಿವೆನುತಲಿ
ಸುರತರುವೆ ಕೈಯಾಗಿ ಚಿಂತಾಮಣಿಯೆ ಮನವಾಗಿ
ಸುರರ ಧೇನುವೆ ಶಬ್ದವಾಗಿಯೆ
ನೆರೆದು ನೆಲಸಿದುವೆನಲು ಬಸವನ
ಕರ ಮನೋವಚನಂಗಳಿತ್ತುವು ಸುಖವನಖಿಳರಿಗೆ ೨೮

ಸೋಕು ಸುಯಿಸುಡಿ ನೋಟ ಮನವೇ
ಕೈಕ ಪರುಷಗಳಾಗಿ ವೇದಿಸಿ
ಬೇಕು ಬೇಕೆಂಬುದ ನಿರಂತರ ಲಿಂಗ ಜಂಗಮಕೆ
ಸಾಕು ಸಾಕೆನೆ ದಣಿಯೆ ನೀಡುತ
ನೇಕ ವಸ್ತುವ ನಿಚ್ಚನಿಚ್ಚಲಿ
ಲೋಕವನು ಪಾವನವ ಮಾಡಿದ ಬಸವ ಭಕ್ತಿಯಲಿ ೨೯

ಬಗೆವೊಡೀ ಪರಿ ಭಕ್ತಿಯಾ ಕೃತ
ಯುಗದಲಿಲ್ಲೆನೆ ಮಿಕ್ಕ ಠಕ್ಕಿನ
ಯುಗದಲೊಂದೂ ಇಲ್ಲವಿದು ಪೊಸತೆನುತೆ ಜಗದೊಳಗೆ
ನೆಗಳಿ ನಿರ್ವಂಚನೆಯ ಭಕ್ತಿಯ
ಮೊಗೆದು ಗಣತಿಂತಿಣಿಗಳಿರ್ದರು
ಜಗದೊಳಚ್ಚರಿಯಾಗಿ ನಿರ್ಮಳ ಭಾವಶುದ್ಧಿಯಲಿ ೩೦

೨೮. ಮರ, ಶಿಲೆ, ಪಶುಗಳು ದೇಹವೆಂಬ ಮನೆಯೊಳಗಿರುತ್ತಿರಲು[1] ನಾವು ಇನ್ನು ಅಸಮರ್ಥರು ಎಂದು ಕಲ್ಪವೃಕ್ಷವೇ ಕೈಯಾಗಿ, ಚಿಂತಾಮಣಿಯೇ ಮನವಾಗಿ, ಕಾಮಧೇನುವೇ ಶಬ್ದವಾಗಿ ಕೂಡಿ ನೆಲಸಿದುವು ಎನ್ನುವಂತೆ ಬಸವನ ಕೈಗಳು ಮನಸ್ಸು ಮಾತುಗಳು ಸರ್ವರಿಗೆ ಸುಖವನ್ನು ಅನುಗ್ರಹಿಸಿದುವು. ೨೯. ಸ್ಪರ್ಶ, ಉಸಿರು, ನುಡಿ, ನೋಟ, ಮನ-ಇವು ಏಕೈಕ ಪರುಷಮಣಿಗಳಾಗಿ ಸೇರಿ, ಬೇಕುಬೇಕಾದ ಅನೇಕ ವಸ್ತುಗಳನ್ನು ನಿರಂತರವಾಗಿ ಲಿಂಗಜಂಗಮಗಳಿಗೆ ಮನದಣಿಯುವಂತೆ ನಿತ್ಯನಿತ್ಯವೂ ನೀಡುತ್ತಾ ಬಸವಣ್ಣ ತನ್ನ ಭಕ್ತಿಯಿಂದ ಲೋಕವನ್ನು ಪಾವನಮಾಡಿದನು. ೩೦. ವಿಚಾರಮಾಡಲು (ಭುವಿಯಲ್ಲಿ) ಈ ರೀತಿಯ ಭಕ್ತಿಯು ಕೃತಯುಗದಲ್ಲಿ ಇಲ್ಲದಿರಲು ಉಳಿದ ಮೋಸದ ಯುಗಗಳಲ್ಲಿ ಎಂದೂ ಇರಲಿಲ್ಲ (ಎನ್ನುವಂತೆ), ಜಗತ್ತಿನಲ್ಲಿ ಇದು ಹೊಸತು ಎನ್ನುವಂತೆ ವಂಚನೆಯಿಲ್ಲದ ಭಕ್ತಿಯನ್ನು ಜಗತ್ತಿಗೇ ಅಚ್ಚರಿಯಾಗುವಂತೆ ಮಾಡಿ ನಿರ್ಮಲವಾದ ಭಾವಶುದ್ಧಿಯಿಂದ ಕೂಡಿ ಗಣಸಮೂಹಗಳು ಇದ್ದುವು.

---

೧. ಸಾಮಾನ್ಯರಾದ ಪಾಮರರ ಕೈಯೇ ಮರ, ಮನಸ್ಸು ಶಿಲೆ, ಮಾತು ಪಶುವಿನ ಧ್ವನಿ. ಹೀಗೆ ಮರ ಶಿಲೆ ಪಶುಗಳು ದೇಹದಲ್ಲಿ ಹೋಗಿ ನೆಲೆಸಿರುವಾಗ ನಾವೇಕೆ ಸುಮ್ಮನಿರಬೇಕು ಎಂದು ಚಿಂತಿಸಿ ಕಲ್ಪವೃಕ್ಷ, ಚಿಂತಾಮಣಿ, ಕಾಮಧೇನಗಳು ಬಸವೇಶ್ವರನ ದೇಹದಲ್ಲಿ ಬಂದು ನೆಲೆಸಿದವು ಎಂದು ಅಭಿಪ್ರಾಯ (ರಂ)

ಮಲಯಜದ ಮರ ಗಾಳಿಸೋಂಕಿನ
ಉಳಿದ ಮರ ಪರಿಮಳಿಸುವಂತಿರೆ
ತಿಳಿಯಲೆಂದಲ್ಲಮನ ಕಾರಣ ಬಸವನುದಯಿಸಲು
ಇಳೆಯೊಳಾ ಮಹಿಮನ ಪದಾಂಬುಜ
ಗಳ ರಜಸ್ಸಿನ ರೇಣುಸಂಗದ
ಬಲುಹಿನಲಿ ಶಿವಭಕ್ತರಾದರು ನರರು ತಮತಮಗೆ ೩೧

ಭಕ್ತರಿಲ್ಲದ ರಾಜ್ಯವಿಲ್ಲೆನೆ
ಭಕ್ತರಿಲ್ಲದ ದೇಶವಿಲ್ಲೆನೆ
ಭಕ್ತರಿಲ್ಲದ ಗ್ರಾಮಗೃಹವೊಂದಿಲ್ಲವೆಂದೆನಲು
ಭಕ್ತಿ ಮಿಗೆ ಪೂರೈಸಿ ಭಾವಿಸಿ
ಭಕ್ತಿಯುಗವಾಗಿರ್ದುದಿಳೆ ಶಿವ
ಭಕ್ತಸೃಷ್ಟಿಯದೆನಲು ಬಸವನ ಘನದ ಮಹಿಮೆಯಲಿ ೩೨

ಒಂದು ಕಲ್ಯಾಣದ ಶಿವೈಕ್ಯರ
ನಿಂದ ನಿಲುವಿನ ಮಹಿಮೆಯಂತಿಂ
ತೆಂದು ಹೇಳಲಿಕಱಿಯೆನಱಿದುದನೊಂದ ಹೇಳುವೆನು
ಇಂದುಮೌಳಿಯ ಸಗುಣಮೂರ್ತಿಯ
ತಂದುವೂಡುಪರುಡಿಸುವರು ಮಿಗೆ
ಬಂಧುತನ ಮೊದಲಾದ ನಾನಾ ಪರಿಯಲೊಲಿಸುವರು ೩೩

೩೧. ಮಲಯಪರ್ವತದಲ್ಲಿ ಹುಟ್ಟಿದ ಶ್ರೀಗಂಧದ ಮರದ ಗಾಳಿಯ ಸೋಂಕುವಿಕೆಯಿಂದ ಉಳಿದ ಮರಗಳು ಪರಿಮಳಿಸುವಂತೆ ಭೂಲೋಕದ ಜನ ತಿಳಿಯಲಿ ಎಂದು ಅಲ್ಲಮನ ಕಾರಣದಿಂದ ಬಸವನು ಭುವಿಯಲ್ಲಿ ಹುಟ್ಟಿ ಬರಲು ಆ ಮಹಿಮನ ಪಾದಕಮಲಗಳ ಧೂಳಿಯ ಕಣದ ಒಡನಾಟದ ಶಕ್ತಿಯಿಂದ ಮನುಷ್ಯರು ತಮಗೆ ತಾವೇ ಶಿವಭಕ್ತರಾದರು. ೩೨. ಭಕ್ತರಿಲ್ಲದ ರಾಜ್ಯವಿಲ್ಲ. ಭಕ್ತರಿಲ್ಲದ ದೇಶವಿಲ್ಲ. ಭಕ್ತರಿಲ್ಲದ ಗ್ರಾಮ ಮನೆಗಳು ಒಂದೂ ಇಲ್ಲ ಎನ್ನುವಂತೆ ಭಕ್ತಿ ಅತಿಶಯವಾಗಿ ತುಂಬಿ, ಯೋಚಿಸಲು ಬಸವನ ಘನವಾದ ಮಹಿಮೆಯಿಂದ ಭಕ್ತಿ ಸೃಷ್ಟಿಯಾದಂತೆ ಭೂಮಿ ಭಕ್ತಿಯುಗವಾಗಿದ್ದಿತು. ೩೩. ಭುವಿಯಲ್ಲಿ ಒಂದೇ ಒಂದಾದ ಕಲ್ಯಾಣದಲ್ಲಿ ಶಿವೈಕ್ಯರು ನಿಂತ ನಿಲುವಿನ ಮಹಿಮೆ ಅಂತು ಇಂತು ಎಂದು ಹೇಳಲಿಕ್ಕೆ ತಿಳಿಯೆನು. ತಿಳಿದುದೊಂದನ್ನು ಮಾತ್ರ ಹೇಳುವೆನು. (ಅವರು) ಶಿವನ ಸಗುಣಮೂರ್ತಿಯನ್ನು ತಂದು ಉಣ್ಣಿಸುವರು, ಉಡಿಸುವರು, ಅತಿಶಯವಾದ ಬಂಧುತನವೇ ಮೊದಲಾದ ನಾನಾ ಕ್ರಮದಲ್ಲಿ ಒಲಿಸುವರು.

ಮಿಕ್ಕ ಠಾವಿನ ಶಿವನ ಭಕ್ತರ
ಲೆಕ್ಕವನು ಹೇಳುವರೆಯಗಣಿತ
ವುಕ್ಕುತಿರ್ದುದು ಧರಣಿ ಭಕ್ತಿರಸಾಬ್ಧಿಯೆಂಬಂತೆ
ಹೊಕ್ಕು ನೋಡಿದೊಡಾವ ಕಡೆಯಲಿ
ತಕ್ಕ ತಕ್ಕಂದದಲಿ ಶಿವನನು
ಸಿಕ್ಕಿಸುವ ಶಿವಭಕ್ತರಿರ್ದರು ಕೂಡೆ ಧಾತ್ರಿಯಲಿ ೩೪

ಸ್ವಾತಿನಕ್ಷತ್ರದ ಸುವೃಷ್ಟಿಗೆ
ಯೋತು ಬಾಯ್ಗಳ ಬಿಟ್ಟು ಚಿಪ್ಪುಗ
ಳಾತುಕೊಂಡಿಪ್ಪಂತೆ ನಮ್ಮಯ ಗುರು ಗುಹೇಶ್ವರನ
ಖ್ಯಾತ ಕರುಣಾಮೃತವನಮಲ
ಪ್ರೀತಿಯಿಂದಲಿ ಹಾರುತಿರ್ದರು
ಭೂತಳದ ಶಿವಲಿಂಗಭಕ್ತರು ಕೂಡೆ ತಮತಮಗೆ ೩೫

ಅಂತು ಗತಿ ೯ಕ್ಕಂ ಪದ ೪೪೨ಕ್ಕಂ ಮಂಗಳಂ

೩೪. ಇನ್ನುಳಿದ ಸ್ಥಳಗಳಲ್ಲಿರುವ ಶಿವನ ಭಕ್ತರ ಲೆಕ್ಕವನ್ನು ಹೇಳಲು ಅದು ಅಗಣಿತ. ಭೂಮಿಯಲ್ಲಿ ಭಕ್ತಿರಸದ ಸಮುದ್ರವೆಂಬಂತೆ ಉಕ್ಕುತ್ತಿದ್ದಿತು. ಒಳಹೊಕ್ಕು ನೋಡಿದರೆ ಎಲ್ಲಾ ಕಡೆಯಲ್ಲೂ ತಕ್ಕ ತಕ್ಕ ರೀತಿಯಲ್ಲಿ ಶಿವನನ್ನು ಧರಿಸಿರುವ (ಒಲಿಸುವ) ಶಿವಭಕ್ತರು ಭೂಮಿಯಲ್ಲಿ ಇದ್ದರು. ೩೫. ಭೂತಳದ ಶಿವಭಕ್ತರು ನೆರೆದು, ಸ್ವಾತಿನಕ್ಷತ್ರದ ಮಳೆಗೆ ಪ್ರೀತಿಯಿಂದ ಬಾಯಿಬಿಟ್ಟು ಚಿಪ್ಪುಗಳು ಆತುಕೊಂಡಿರುವಂತೆ ತಮ್ಮ ತಮ್ಮೊಳಗೆ ನಮ್ಮ ಗುರು ಗುಹೇಶ್ವರನ ಪ್ರಖ್ಯಾತವಾದ ಕರುಣಾಮೃತವನ್ನು ಪರಿಶುದ್ಧ ಪ್ರೀತಿಯಿಂದ ನಿರೀಕ್ಷಿಸುತ್ತಿದ್ದರು.

# ೧೦. ಮಹಾದೇವಿಯಕ್ಕ

## ಗತಿ ೧೦

ಸೂಚನೆ : ತನಗೆ ಮನಸೋತಿರ್ದ ಕೌಶಿಕ
ಜನಪತಿಯನೊಲ್ಲದೆ ವಿರಕ್ತಿಯು
ನನುಕರಿಸಿ ಮಾದೇವಿ ನಡೆದಳು ಭಕ್ತಿವೇದೆಯಲಿ

ಭಂಗವೇ ಬಸುಱಾದ ವಿಷಯಸು
ಖಂಗಳಿಗೆ ಮಿಗೆ ಹೇಸಿ ನಿರ್ವಿಷ
ಯಾಂಗದಿಂದಲಿ ಗುರು ಗುಹೇಶ್ವರ ಪಾದಪಂಕಜದ
ಸಂಗವನು ಮಾಡುವರೆ ಕೇಳುವು
ದಂಗವಿಸಿ ಮಾದೇವಿಯಕ್ಕನ
ಸಂಗತಿಯ ಸಂಭ್ರಮದ ಸಂಧಿಯ ಪದದ ಪದ್ಧತಿಯ ೧

ಇತ್ತಲೀ ಮಾದೇವಿ ಮಿಗೆ ಬಳೆ
ವುತ್ತಲಿದ್ದಳು ಜವ್ವನದ ಕಳೆ
ವೆತ್ತಿ ಭರದಲಿ ಪುಟವನಿಕ್ಕಿದ ಮಿಸುನಿಯಂದದಲಿ
ಉತ್ತಮದ ಮೈಲುಳಿಯ ಕಾಂತಿಯು
ಮತ್ತಗಜಗಮನದ ವಿಳಾಸದ
ತೆತ್ತವಣೆಯ ನವೀನ ರೀತಿಯ ಜಾತಿಭಾವದಲಿ ೨

ತುಂಬಿ ಲಿಂಗದ ನಿಷ್ಠೆಯೊಡನೆ ನಿ
ತಂಬ ಮೊಲೆ ಮುಡಿ ಹೆಚ್ಚಿ ಬಳೆದವು
ಶಂಭುವಿನ ಸತ್ಕರ್ಮ ಭಕ್ತಿ ಜ್ಞಾನವೆಂಬಂತೆ
ಶಂಬರಾರಿಯ ಶಸ್ತ್ರಹತಿಯ ವಿ
ಡಂಬನೆಯ ಧಿಕ್ಕರಿಸಿ ತೋಱುವೆ
ನೆಂಬ ಭರದಲಿ ಜವ್ವನವ ಹೇಱಿದಳು ಮಾದೇವಿ ೩

ಸೂ : ತನಗೆ ಮನಸೋತಿದ್ದ ಕೌಶಿಕಮಹಾರಾಜನನ್ನು ಒಲ್ಲದೆ ವಿರಕ್ತಿಯನ್ನು ಅನುಕರಿಸಿ ಭಕ್ತಿಯನ್ನು ಗುರಿಯಾಗಿ ಹೊಂದಿ ಮಹಾದೇವಿಯಕ್ಕ ನಡೆದಳು. ೧. ಕಷ್ಟಗಳೇ ಗರ್ಭವಾಗಿ, ಇಂದ್ರಿಯಸುಖಗಳಿಗೆ ಅತಿಯಾಗಿ ಹೇಸಿ, ಇಂದ್ರಿಯಸುಖಗಳಿಗೆ ಹೊರತಾಗಿ ದೇಹದಿಂದ ಗುರು ಗುಹೇಶ್ವರನ ಪಾದಕಮಲಗಳ ಸಂಗವನ್ನು ಮಾಡುವವರು ಆಸೆಪಟ್ಟು ಮಹಾದೇವಿಯಕ್ಕನ ಸಂಗತಿಯನ್ನು ಸಂಭ್ರಮದ ಸಂಧಿಯ ಪದ್ಯರೀತಿಯಲ್ಲಿ ಕೇಳುವುದು. ೨. ಶ್ರೇಷ್ಠವಾದ ದೇಹವಿನ್ಯಾಸದ ಕಾಂತಿಯಿಂದ, ಮದಿಸಿದ ಆನೆಯ ನಡೆಯ ಸೊಗಸಿನಿಂದ, ನವೀನ ರೀತಿಯಲ್ಲಿ ಜೋಡಣೆಯಾದ ಸಹಜ ಭಾವಗಳಿಂದ ಇತ್ತ ಮಹಾದೇವಿ ತೀವ್ರವಾಗಿ ಪುಟವಿಕ್ಕಿದ ಚಿನ್ನದಂತೆ ಯೌವನದ ಕಳೆ ಹೊಂದಿ ಅತಿಶಯವಾಗಿ ಬೆಳೆಯುತ್ತಲಿದ್ದಳು. ೩. ಲಿಂಗದ ನಿಷ್ಠೆ ಬೆಳೆದಂತೆ ತುಂಬಿದ ನಿತಂಬ ಶಿವನ ಸತ್ಕರ್ಮ ಭಕ್ತಿ ಜ್ಞಾನಗಳಂತೆ ಅತಿಶಯವಾಗಿ ಬೆಳೆದುವು. ಶಂಬರನೆಂಬ ರಾಕ್ಷಸನ ಶತ್ರುವಾದ

ಇರುತಲೊಂದಾನೊಂದು ದಿನವಾ
ಪುರದರಸ ವೈಹಾಳಿಯಿಂದೈ
ತರುತಿರಲು ಸಂಭ್ರಮವ ಕೇಳುತೆ ಬಂದು ಬಾಗಿಲಲಿ
ತರುಣಿ ನಿಂದು ನಿರೀಕ್ಷಿಸುತ್ತಿರೆ
ಧರಣಿಪತಿ ಕಾಣುತ್ತೆ ಕಾಮಾ
ತುರತೆ ಮಿಗೆ ಕಂಗೆಟ್ಟು ಕಳವಳಿಸಿದನು ನಿಮಿಷದಲಿ ೪

ಕನ್ನೆಯಿವಳಾರವಳು ಕೇಳಿದು
ಬನ್ನಿರೋ ಎನೆ ಹರಿದು ತಿಳಿದಾ
ಕನ್ನೆಯಿಂತಪ್ಪವರ ಮಗಳೆಂದಱುಹಿದರು ಚರರು
ತನ್ನ ಮನದೊಳಗೆಣಿಸುತೀಕೆಯ
ನಿನ್ನು ವರಿಸುವೆನೆಂಬ ಭರವಾ
ಸನ್ನಿಸಲು ಕೌಶಿಕಮಹೀಪತಿ ಹೊಕ್ಕನರಮನೆಯ ೫

ಎಳೆದುತರಿಸಿದೊಡವಳ ಮನಸಿಗೆ
ಮುಳಿಸು ಮೇಲಪಕೀರ್ತಿ ಕೆಲಬರ
ಕಳುಹಿ ತಿಳಿವೆನೆನುತ್ತೆ ಹೆಗ್ಗಡಿತಿಯರನಟ್ಟಿದೊಡೆ
ಬಳಿಕಲವರೈತಂದು ಮಿಗೆ ನಿ
ರ್ಮಳನ ಸುಮತಿಯ ಕೇಳಿದರೆ ನೃಪ
ಕುಲದವಗೆ ಕೊಡೆವೆಂದರಪರಾ ನಿಜಕುಮಾರಿತಿಯ ೬

ಶಿವನ ಶಸ್ತ್ರದ ಹೊಡೆತದ ಅನುಕರಣೆಯನ್ನು ತಿರಸ್ಕರಿಸಿ ತೋರುವೆನೆಂಬ ಉತ್ಸಾಹದಲ್ಲಿ ಮಹಾದೇವಿ ಯೌವನವನ್ನು ಹೊತ್ತಳು. ೪. ಹೀಗಿರಲು ಒಂದಾನೊಂದು ದಿನ ಆ ಪುರದ ಅರಸನು ಕುದುರೆ ಸವಾರಿಯಿಂದ ಬರುತ್ತಿರಲು, ಆ ಸಂಭ್ರಮವನ್ನು ಕೇಳಿ ತರುಣಿ ಮಹಾದೇವಿ ಬಂದು ಬಾಗಿಲಲ್ಲಿ ನೋಡುತ್ತಿರಲು, ಧರಣಿಪತಿ ಅವಳನ್ನು ಕಂಡು ಕಾಮಾತುರ ಹೆಚ್ಚಾಗಿ ನಿಮಿಷಮಾತ್ರದಲ್ಲೇ ಕಂಗೆಟ್ಟು ಚಿಂತಿಸಿದನು. ೫. 'ಕನ್ನೆ ಇವಳಾರವಳು ಕೇಳಿ ಬನ್ನಿ' ಎಂದು ಕೌಶಿಕ ಸೇವಕರಿಗೆ ಆಜ್ಞಾಪಿಸಲು ಅವರು ಓಡಿ ವಿಚಾರಿಸಿ ಬಂದು ಕನ್ಯೆ ಇಂತಹವರ ಮಗಳೆಂದು ತಿಳಿಸಿದರು. ಈಕೆಯನ್ನು ಇನ್ನು ಮದುವೆಯಾಗುವೆನೆಂಬ ತವಕದಿಂದ ಕೂಡಿ ಮನದಲ್ಲಿ ಅದನ್ನು ಎಣಿಸುತ್ತಾ ಕೌಶಿಕಮಹಾರಾಜನು ಅರಮನೆಯನ್ನು ಪ್ರವೇಶಿಸಿದನು. ೬. ಎಳೆದು ತರಿಸಿದರೆ ಅವಳ ಮನದಲ್ಲಿ ಮುನಿಸುಂಟಾಗುತ್ತದೆ; ಎಲ್ಲಕ್ಕಿಂತ ಹೆಚ್ಚಾಗಿ ಅಪಕೀರ್ತಿ ಬರುತ್ತದೆ. ಕೆಲವರನ್ನು ಅವಳಲ್ಲಿಗೆ ಕಳುಹಿಸಿ ಅವಳ ಮನಸ್ಸನ್ನು ತಿಳಿಯುವೆನೆಂದು ಹೆಗ್ಗಡಿತಿಯರನ್ನು ಕೌಶಿಕ ಅಟ್ಟಿದನು. ಬಳಿಕ ಅವರು ಮಹಾದೇವಿಯ ಮನೆಗೆ ಬಂದು ಅವಳ ತಂದೆ ತಾಯಿಯರಾದ ನಿರ್ಮಳ ಸುಮತಿಯರನ್ನು ಮಹಾದೇವಿಯನ್ನು ಅರಸನಿಗೆ ಕೊಡಿರೆಂದು ಕೇಳಿದರು. ಅದಕ್ಕೆ ಅವರು ತಮ್ಮ ಕುಮಾರಿಯನ್ನು ನೃಪಕುಲದವನಿಗೆ ಕೊಡೆವು ಎಂದರು.

ಅರಸಗಿದಿರೇ ನೀವು ಸುಮ್ಮನೆ
ಸರಸದಿಂದಲಿ ಕೊಡುವುದೊಳ್ಳಿತು
ವಿರಸವಾದೊಡೆ ನೀವು ಮಾಡುವುದೇನು ಭೂಪತಿಯ
ಮರುಳುತನಗಳು ಬೇಡ ನಿಮ್ಮಯ
ತರುಣಿಯುಂಡುಟ್ಟಿಹಳು ನಾನಾ
ಪರಿಯಲೊಳ್ಳಿಹ ದಾಯವೆಂದಱುಹಿದರು ನಿರ್ಮಳಗೆ ೭

ತಾಯ ಮಾಱಿಯೆ ತೊತ್ತ ಕೊಂಬೀ
ದಾಯವನು ಸುಡು ವಿಷಮ ಕುಲದಲಿ
ಕಾಯದಾಸೆಗೆ ಕೊಳುಕೊಡೆಯ ಕಳವಳಿಸಿ ಮಾಡಿದೊಡೆ
ನಾಯಕವ ನರಕಗಳು ತಪ್ಪವು
ರಾಯ ಮಾಡುವುದೇನು ಬಳಿಕೀ
ನಾಯತವು ಸಾಕೆನುತ ನಿರ್ಮಳನವರಿಗಿಂತೆಂದ ೮

ಆಕೆಯನು ಕೇಳುವುದು ದಿಟ ಬಳಿ
ಕಾಕೆ ಸಣ್ಣಹ ಮಗಳೆಯದಱಿಂ
ದಾಕೆಯನೆ ನೆಱೆ ತಿಳಿದೊಡಂಬಡಿಸುವುದು ಬುದ್ಧಿಯಲಿ
ಆಕೆ ತಾನಹುದೆಂದಳಾದರೆ
ಯಾಕೆಯನು ನಾವಾಗಳಿತ್ತಪ
ರೇಕೆ ಬಹುಮಾತೆನುತೆ ನಿರ್ಮಳ ನುಡಿದನಬಲೆಯರ ೯

ಅನುಮತಿಸಿ ನಾರಿಯರು ಬಳಿಕಾ
ವನಿತೆಯನು ಕೇಳಿದರೆ ತನ್ನೊಳು
ನೆನೆದಳೊಂದನುಮಾನವನು ತಾನೇ ವಿವೇಕದಲಿ
ಜನಪನಳುಪಿಗೆ ಹಱುವ ಮಾಡುವೆ
ನೆನುತಲಾ ಮಾದೇವಿ ಜಾಣಿನ
ವಿನಯದಲಿ ನಸುನಗುತಲಾಳಾಪಿಸಿದಳೊಳಗೊಳಗೆ ೧೦

೭. "ಅರಸನಿಗೆ ವಿರುದ್ಧ ನೀವು ನಿಲ್ಲುವಿರಾ? ಸುಮ್ಮನೆ ಸರಸದಿಂದ ಕೊಡುವುದು ಒಳ್ಳೆಯದು. ವಿರಸವಾದರೆ ಭೂಪತಿಯನ್ನು ನೀವೇನು ಮಾಡುವಿರಿ? ಹುಚ್ಚುತನ ಬೇಡ. ನಿಮ್ಮ ಮಗಳು ಉಂಡು, ಉಟ್ಟು [ಸುಖವಾಗಿ] ಇರುವಳು. ನಾನಾ ರೀತಿಯಲ್ಲಿ ಒಳ್ಳೆಯ ಆಸ್ತಿಯನ್ನು [ನಿಮಗೆ] ಕೌಶಿಕ ಅನುಗ್ರಹಿಸುವನು" ಎಂದು ನಿರ್ಮಳನಿಗೆ ಹೆಗ್ಗಡಿತಿಯರು ತಿಳಿಸಿದರು. ೮. "ತಾಯನ್ನು ಮಾರಿ ಸೇವಕರನ್ನು ಕೊಳ್ಳುವ ಈ ಸಾಧನವನ್ನು ಸುಡು. ದೇಹದ ಮೇಲಿನ ಆಸೆಗಾಗಿ ಸಮವಲ್ಲದ ಕುಲದೊಂದಿಗೆ ಕೊಳುಕೊಡೆಯ ವ್ಯವಹಾರ ಮಾಡಿದರೆ ನಾಯಕ ನರಕಗಳು ತಪ್ಪವು. ಆ ಬಳಿಕ ರಾಜನು ಮಾಡುವುದೇನು? ವಿಸ್ತಾರವಾದ ವಿವರಣೆ ಸಾಕು" ಎಂದು ಹೇಳಿ ನಿರ್ಮಳನು ಮತ್ತೆ ಹೀಗೆಂದನು. ೯. "ಅವಳನ್ನು ಕೇಳುವುದು ಸರಿ. ಅವಳಾದರೊ ಎಳೆಯ ಮಗಳು. ಆದಕಾರಣ ಅವಳನ್ನು ಚೆನ್ನಾಗಿ ತಿಳಿದು ಜಾಣತನದಿಂದ ಒಪ್ಪಿಸುವುದು. ಆಕೆ ಒಪ್ಪಿದರೆ ಆಗಲೇ ಒಪ್ಪಿಸಿಕೊಡುವೆವು. ಹೆಚ್ಚು ಮಾತೇಕೆ?" ಎಂದು [ಆ] ಅಬಲೆಯರೊಂದಿಗೆ ನಿರ್ಮಳ ನುಡಿದನು. ೧೦. ಬಳಿಕ [ನಿರ್ಮಳನ ಆ ಮಾತಿಗೆ] ಒಪ್ಪಿ ನಾರಿಯರು ಮಹಾದೇವಿಯನ್ನು ಕೇಳಲು

ಪರಿಮಳವನಾರಿಕ್ಕಿದರು ಕ
ರ್ಪೂರಕೆ ಕೋಗಿಲೆಗಾರು ಸೊಗಸಿನ
ಸರವ ಕಲಿಸಿದರಂಚೆಗಾರಡಿಯಿಡಲು ಕಲಿಸಿದರು
ಪರಿಕಿಸುವೊಡವಕಾ ಗುಣಂಗಳ
ನೆರವು ತಂದರೆ ಮನದಲಂತಾ
ಪರಿಯಲಾ ಮಾದೇವಿ ತಾನೇ ನೆನೆದಳೊಂದನುವ ೧೧

ನಾನೆ ಬೇಕಾಗಿರ್ದೊಡವನಾ
ನೇನ ಹೇಳಿದ ಮಾಡಲೆನುತಾ
ಮಾನಿನಿಯರೊಳು ನುಡಿದು ಮಧುರಾಳಾಪವಚನದಲಿ
ಆ ನರೇಂದ್ರನೆ ಬಂದು ನನ್ನ ಮ
ನೋನುರಾಗವ ಸಲಿಸುವಂತಿರೆ
ತಾನು ಶಪಥವ ಮಾಡಬೇಕೆಂದಳು ಮಹಾದೇವಿ ೧೨

ಐಸಲೇ ಎನುತದನು ಹೋಗಿ ವಿ
ಳಾಸಿನಿಯರಱುಹಿದೊಡೆ ಕೇಳಿ ಮ
ಹಾ ಸುಮಾನದಲರಸು ಬಂದನು ನಿರ್ಮಳನ ಮನೆಗೆ
ಕಾಸಿ ಕರಗಿದ ಲೋಹದಂತಿರೆ
ಘಾಸಿಯಾಗುತೆ ಮತ್ತೆ ಮನದಭಿ
ಲಾಷೆ ಹೆಚ್ಚಿತು ಮಾನಿನಿಯ ಕಾಣುತೆ ಮಹೀಪತಿಗೆ ೧೩

ವಿವೇಕದಿಂದ ಆಕೆ ತನ್ನಲ್ಲೇ ಉದ್ದೇಶವೊಂದನ್ನು ಆಲೋಚಿಸಿದಳು. ಅರಸನು ಆಸೆಪಡುವುದಕ್ಕೆ ಉಪಾಯವೊಂದನ್ನು ಮಾಡುವೆನೆಂದು ಮಾದೇವಿಯು ಜಾಣತನದ ವಿನಯದಲ್ಲಿ ನಸುನಗುತ್ತಾ ಒಳಗೊಳಗೇ ಮಾತನಾಡಿಕೊಂಡಳು. ೧೧. "ಕರ್ಪೂರಕ್ಕೆ ಪರಿಮಳವನ್ನು ಯಾರು ಕೊಟ್ಟರು? ಕೋಗಿಲೆಗೆ ಯಾರು ಸೊಗಸಾದ ದನಿಯನ್ನು ಕಲಿಸಿದರು? ಹಂಸಪಕ್ಷಿಗೆ ಯಾರು ನಡೆಯಲು ಕಲಿಸಿದರು? ಮನಸ್ಸಿನಲ್ಲಿ ಪರೀಕ್ಷಿಸಲು ಆ ಗುಣಗಳ ಸಹಾಯವನ್ನು ಯಾರಿಂದಲಾದರೂ ತಂದುವೆ?" ಆ ರೀತಿಯಲ್ಲಿ ಮಾದೇವಿಯು ತಾನೇ ಆಲೋಚನೆಯೊಂದನ್ನು ಮಾಡಿದಳು. ೧೨. "ನಾನು ಬೇಕಾಗಿದ್ದರೆ ಅವನು ನಾನು ಹೇಳಿದ್ದನ್ನೆಲ್ಲಾ ಮಾಡಲಿ ಎಂದು ಆ ಹೆಗ್ಗಡಿತಿಯರೊಂದಿಗೆ ಮಧುರವಾಗಿ ಮಾತುಗಳನ್ನಾಡುತ್ತಾ ರಾಜನೇ ಬಂದು ನನ್ನ ಮನದ ಬಯಕೆಯನ್ನು ಪೂರೈಸುವಂತಿದ್ದರೆ ಅವನು ಪ್ರತಿಜ್ಞೆಯನ್ನು ಮಾಡಬೇಕು" ಎಂದು ಮಹಾದೇವಿ ನುಡಿದಳು. ೧೩. ಅಷ್ಟೇತಾನೆ ಎಂದೆನುತ್ತ ವಿಳಾಸಿನಿಯರು ಹೋಗಿ ಅರಸನಿಗೆ ತಿಳಿಸಲು ಮಹಾಸುಮ್ಮಾನದಿಂದ ಅರಸನು ನಿರ್ಮಳನ ಮನೆಗೆ ಬಂದನು. ರಾಜನು ಮಹಾದೇವಿಯನ್ನು ಕಂಡು ಕಾಯಿಸಿ ಕರಗಿಸಿದ ಲೋಹದಂತೆ ಮನಸ್ಸಿನಲ್ಲಿ ಹಿಂಸೆಯನ್ನು ಅನುಭವಿಸುತ್ತಾ (ಅವಳನ್ನು ಹೊಂದಲು) ಮತ್ತಷ್ಟು

ಲಲನೆ ಕೇಳೌ ನಿನ್ನ ಬಯಕೆಯ
ಸಲಿಸುವೆನು ಮೊದಲಲ್ಲಿ ಬಳಿಕಾ
ನೊಲಿಸಿಕೊಂಬೆನು ನಿನ್ನನಂತಲ್ಲದೆ ದುರುಕ್ತಿಯಲಿ
ನೆಲನೊಡೆಯ ನಾನೆಂಬ ಗರ್ವದ
ಬಲುಹುಗಿಲುಹನು ಮಾಡಿದೊಡೆ ಕೇ
ಳೆಲಗೆ ತನ್ನಯ ಸತ್ಯಭಾಷೆಯನೆಂದನವನೀಶ ೧೪

ಹುಸಿಯ ನುಡಿವನ ಜೀವಹಿಂಸೆಯ
ದೆಸೆಗೆ ನಲಿವನ ತಾಯಿ ಮಕ್ಕಳ
ಬೆಸುಗೆಯನು ಬಿಚ್ಚುವನ ಮಿತ್ರಂಗೆರಡು ಬಗೆವವನ
ಪಿಸುಣಿಗನ ಕೃಪಣನ ವೃಥಾ ಕೋ
ಪಿಸುವವನ ದುರ್ಗತಿಗಳಾಗಲಿ
ಶಶಿಮುಖಿಯೆ ನಾ ಮರಳಿ ನಿನಗಳುಪಿದರೆ ಕೇಳೆಂದ ೧೫

ತನ್ನ ಕಾರಿಯವಾಗಬೇಕೆಂ
ದನ್ನಿಗರ ಕೆಡಿಸುವ ನಿರಂತರ
ತನ್ನ ಸತಿಯನು ಬಾಧಿಸುವ ಪರಸತಿಗೆ ವೇದಿಸುವ
ಕುನ್ನಿಗಳ ಗತಿಯಹುದು ತನಗೀ
ನನ್ನಿಯನು ತಪ್ಪಿದೊಡೆ ಸಾಕಿಲೆ
ಕನ್ನೆ ಸಂಶಯಬೇಡವಿನ್ನೇಳೆಂದನವನೀಶ ೧೬

ನಿಂದಕನ ನಿಷ್ಠುರನ ದಳದುಳ
ಬಂದಿಕಾಱನ ಬಾಹಿರನ ರಣ
ಹಿಂದೆಗನ ಪತಿವಂಚಕನ ವಿಶ್ವಾಸಘಾತಕನ
ಬಂಧುಭೇದನ ಭಜಕ ಭಕ್ಷನ
ನಿಂದಿತಾಹಾರಿಗನ ನರಕದೊ
ಳೊಂದುವೆನು ನಾ ಮರಳಿ ನಿನಗಳುಪಿದರೆ ಕೇಳೆಂದ ೧೭

ಅಭಿಲಾಷೆಯನ್ನು ಹೊಂದಿದನು. ೧೪. "ಲಲನೆ ಕೇಳು, ನಿನ್ನ ಬಯಕೆಯನ್ನು ಮೊದಲು ಸಲ್ಲಿಸುವೆನು. ಅನಂತರ ನಿನ್ನನ್ನು ಒಲಿಸಿಕೊಳ್ಳುವೆನು. ಹಾಗಲ್ಲದೆ ದುರುಕ್ತಿಯಿಂದ ನೆಲದ ಒಡೆಯ ನಾನೆಂಬ ಗರ್ವದ ಶಕ್ತಿಯನ್ನು ತೋರಿಸಿದರೆ ನನ್ನ ಸತ್ಯದ ಭಾಷೆಯನ್ನು ಕೇಳು" ಎಂದು ಅರಸನು ನುಡಿದನು. ೧೫. ಚಂದ್ರಮುಖಿಯೆ ಕೇಳು, ನಾನು ನಿನ್ನನ್ನು ಭಾಷೆ ಪೂರೈಸುವ ಮುನ್ನ ಬಯಸಿದರೆ ಸುಳ್ಳು ಹೇಳುವವನ, ಜೀವಹಿಂಸೆಯ ಸ್ಥಿತಿಗೆ ಸಂತೋಷಿಸುವವನ, ತಾಯಿ ಮಕ್ಕಳ ಬಾಂಧವ್ಯವನ್ನು ಬಿಚ್ಚುವವನ, ಮಿತ್ರನಿಗೆ ಎರಡು ಬಗೆಯುವವನ, ಚಾಡಿ ಹೇಳುವವನ ದುರ್ಗತಿಗಳು ನನಗೆ ಆಗಲಿ" ಎಂದನು. ೧೬. "ಈ ಸತ್ಯದ ಭಾಷೆ ತಪ್ಪಿದರೆ ತನ್ನ ಕಾರ್ಯವಾಗಬೇಕೆಂದು ಅನ್ಯರ ಹಾಳುಮಾಡುವ, ಯಾವಾಗಲೂ ತನ್ನ ಹೆಂಡತಿಯನ್ನು ಬಾಧಿಸುವ, ಪರಸತಿಯನ್ನು ಬಯಸುವ ನಾಯಿಗಳ ಗತಿ ನನಗೆ ಆಗಲಿ. ಇಷ್ಟು ಸಾಕೆ, ಎಲೆ ಕನ್ಯೆ ಸಂಶಯ ಬೇಡ, ಇನ್ನೇಳು" ಎಂದು ಅರಸನು ನುಡಿದನು. ೧೭. "ಭಾಷೆ ಪೂರೈಕೆಯ ಮುನ್ನ ನಿನ್ನನ್ನು ನಾನು ಕಾಮಿಸಿದರೆ ನಿಂದಕನ, ನಿಷ್ಠುರನ, ಬಲು ಸೂರೆಮಾಡುವ ಕಳ್ಳನ, ಬಹಿಷ್ಕೃತನಾದವನ, ಯುದ್ಧದಲ್ಲಿ

ತನಗಿದೊಳ್ಳಿಹ ರೀತಿ ಸಮನಿಸಿ
ತೆನುತೆ ನಿಶ್ಚೈಸುತಲಿ ನುಡಿದಳು
ವನಿತೆಯಾದೊಡೆಯೇನ ಹೇಳಿದ ಕೇಳದಾಕ್ಷಣವೆ
ಜನಪ ನಿನ್ನನು ಬಿಟ್ಟು ನಾ ಹೋ
ಹೆನು ಯಥಾರ್ಥವಿದೆಂದು ದಿಟವನು
ವನಿತೆ ನುಡಿಯಲು ಭೂಪನಾ ಮಾದೇವಿಗಿಂತೆಂದ ೧೮

ನೋಡುವರೆ ನಾ ನೀನು ಹೇಳಿದ
ಮಾಡದಾಕ್ಷಣ ನೀನು ಸುಖದಿಂ
ದಾಡುತಿಪ್ಪುದು ನಿನ್ನ ಬುದ್ಧಿಗೆ ಬಂದ ಪರಿಯಿಂದೆ
ನಾಡ ಮಾತಿನ್ನೇಕೆ ಕರುಣವ
ಮಾಡಿ ನಿನ್ನ ಕೃಪಾನಿರೀಕ್ಷೆಯ
ಜೋಡ ತೊಡಿಸೆನಗೆಂದನಾ ಮಾನಿನಿಗೆ ಮಹಿಪಾಲ ೧೯

ಆದೊಡಾಗಲಿಯರಸ ನಡೆಯೆನೆ
ಮೇದಿನೀಪತಿ ಹರುಷದಿಂದಲಿ
ಹೋದನಾಗಳೆ ಹೊಕ್ಕನರಮನೆಯನು ಸುಮಾನದಲಿ
ಆದರಿಸಿ ಶೃಂಗಾರ ಮಾಡಿ ವಿ
ನೋದದಲಿ ದಂಡಿಗೆಯನೇಜಿಸು
ತೈದಿದರು ಹೆಗ್ಗಡಿತಿಯರು ಮಾದೇವಿಸಹವಾಗಿ ೨೦

ಹೆದರಿ ಹಿಂದೆಗೆದವನ, ಒಡೆಯನಿಗೆ ವಂಚನೆ ಮಾಡುವವನ, ವಿಶ್ವಾಸಘಾತಕನ, ಬಂಧುಗಳಲ್ಲಿ ವ್ಯತ್ಯಾಸ ಮಾಡುವವನ, ಸ್ತುತಿ ಮಾಡಿ ಉಣ್ಣುವವನ, ನಿಂದಿಸಿದವರಲ್ಲಿಯೇ ಆಹಾರ ಸ್ವೀಕರಿಸುವವನ ಗತಿಯನ್ನು ನರಕದಲ್ಲಿ ನಾನು ಹೊಂದುವೆನು ಕೇಳು" ಎಂದು ಅರಸನು ನುಡಿದನು. ೧೮. ಮಹಾದೇವಿಯು ತನಗೆ ಒಳ್ಳೆಯದಾಯಿತೆಂದು ಮನದಲ್ಲಿ ನಿಶ್ಚಯಿಸುತ್ತಾ "ಮಹಾರಾಜಾ, ಹೆಂಗುಸಾದ ನಾನು ಹೇಳಿದುದನ್ನು ನೀನು ಪಾಲಿಸದೇ ಹೋದರೆ ನಾನು ಆ ಕ್ಷಣವೇ ಬಿಟ್ಟು ಹೋಗುವೆನು, ಇದು ಸತ್ಯ" ಎಂದು ನಿಜವನ್ನು ಅವಳು ನುಡಿಯಲು (ಆಗ) ರಾಜನು ಮಾದೇವಿಗೆ ಹೀಗೆಂದನು. ೧೯. "ಪರೀಕ್ಷಿಸಿ ನೋಡುವುದಾದರೆ, ನೀನು ಹೇಳಿದ್ದನ್ನು ನಾನು ಆಕ್ಷಣ ಮಾಡದಿದ್ದರೆ ನೀನು ನಿನ್ನ ಬುದ್ಧಿಗೆ ಬಂದ ರೀತಿಯಲ್ಲಿ ಸುಖದಿಂದಿರುವುದು. ಸಣ್ಣ ಮಾತಿನ್ನೇಕೆ? ನಿನ್ನ ಕರುಣೆಯನ್ನು ನನ್ನ ಮೇಲೆ ಮಾಡಿ, ನಿನ್ನ ಕೃಪಾಕಟಾಕ್ಷವೆನ್ನುವ ಜೋಡನ್ನು ನನಗೆ ತೊಡಿಸು" ಎಂದು ಆ ಮಾನಿನಿಗೆ ಕೌಶಿಕ ನುಡಿದನು. ೨೦. 'ಅರಸಾ, ಹಾಗಾದರೆ ಆಗಲಿ ನಡೆ' ಎಂದು ಮಹಾದೇವಿಯು ನುಡಿಯಲು ಭೂಪಾಲ ಹರುಷದಿಂದ ಆಗಲೇ ಹೋಗಿ ಅರಮನೆಯನ್ನು ಪ್ರವೇಶಿಸಿದನು. ಆನಂದದಿಂದ ಹೆಗ್ಗಡಿತಿಯರು (ತಮ್ಮೊಡತಿಯಾಗುವವಳನ್ನು) ಗೌರವಿಸಿ, ಶೃಂಗರಿಸಿ, ವಿನೋದದಿಂದ ಪಲ್ಲಕ್ಕಿ ಏರಿಸಿ ಜೊತೆಯಲ್ಲಿ ನಡೆದರು.

ಅರಮನೆಯ ಹೊಕ್ಕಳು ವಿಳಾಸದ
ಲಿರುತಿರಲು ಮಾದೇವಿಯನು ಕಂ
ಡರಸನೇಕಾಂತದಲಿ ತುಡುಕಿದೊಡಾಕೆ ವಿನಯದಲಿ
ಅರಸ ಸೈರಿಸು ಮತ್ಪ್ರಿಯವನು
ತ್ತರಿಸು ಬಳಿಕಂಗೈಸು ಎನಲಾ
ತರುಣಿಗವನೀಪಾಲ ನುಡಿದನು ವಿನಯಪರನಾಗಿ ೨೧

ಏನಮಾಡಲಿಬೇಕು ಹೇಳೆಲೆ
ಮಾನಿನಿಯೆ ಎನಲಾಕೆ ನುಡಿದಳು
ನೀನು ಸಲೆ ಶಿವಭಕ್ತನಾದೊಡೆ ಕೂಡುವೆನು ನಿನ್ನ
ನೀನು ಭವಿಯಾಗಿರ್ದೊಡೊಲ್ಲೆನು
ನಾನು ಹೇಳುವುದಿನಿತೆಯನಲು ಸು
ಮಾನ ಹೋಗಿ ದುಮಾನವಾಯಿತು ಮತ್ತೆ ಜನಪತಿಗೆ ೨೨

ಗೂಗೆಗಾದಿತ್ಯನ ಕರಂಗಳು
ಮೂಗರಿಗೆ ಮಾತುಗಳು ಡಂಬಕ
ಯೋಗಿಗನುಭವ ಕೋಪಿಗುಪಶಮೆ ನಾಯ್ಗೆ ನಾರಂಗ
ಮೂಗುಹೀನಗೆ ಮುಕುರವುಚಿಸಿಕೆ
ಯಾಗಬಲ್ಲುವೆ ಭಕ್ತಿಗೆಳಸದೆ
ರೋಗಿಗೌಷಧಿಯರುಚಿಯಾದಂತಾಯಿತವನಿಪಗೆ ೨೩

ನಮಗೆ ಶಿವಭಕ್ತಿಯನು ಮಾಡುವ
ಸಮಯವಳವಡದೆನಲು ನೃಪತಿಗೆ
ರಮಣಿ ನುಡಿದಳು ನಮಗೆ ನಿಮ್ಮಯ ಸಂಗವಳವಡದು
ನಮಗೆ ನಾವಿನ್ನುತ್ತರಾಯಿಗ
ಳೆಮಗೆ ಬಂಧನ ಬಿಟ್ಟುದೆನುತಾ
ಕ್ರಮದಲುಟ್ಟುಡುಗೊಱೆಯ ತೊಡಿಗೆಯನಿತ್ತಳರಸಂಗೆ ೨೪

೨೧. ಅರಮನೆಯನ್ನು ಮಹಾದೇವಿ ಪ್ರವೇಶಿಸಿ ವಿಲಾಸದಿಂದ ಇರುತ್ತಿರಲು ಅವಳನ್ನು ಕಂಡ ಅರಸ ಕೌಶಿಕ ಏಕಾಂತದಲ್ಲಿ ಅಪ್ಪಲು (ಆಗ) ಆಕೆ ವಿನಯದಿಂದ 'ಅರಸಾ, ಸೈರಿಸು ನನಗೆ ಪ್ರಿಯವಾದುದನ್ನು ಉತ್ತರಿಸು. ಅನಂತರ ನನ್ನನ್ನು ಸ್ವೀಕರಿಸು' ಎನ್ನಲು, ಅರಸನು ವಿಯನದಿಂದ ಕೂಡಿ ಆ ತರುಣಿಗೆ ಹೀಗೆಂದನು. ೨೨. "ಎಲೆ ಮಾನಿನಿ, ಏನು ಮಾಡಬೇಕು ಹೇಳು" ಎಂದು ಕೌಶಿಕ ಕೇಳಲು ಆಕೆ "ನೀನು ಹಿರಿಯ ಶಿವಭಕ್ತನಾದರೆ ನಿನ್ನನ್ನು ಸೇರುವೆನು. ನೀನು ಭವಿಯಾಗಿದ್ದರೆ ನಿನ್ನನ್ನು ಒಲ್ಲೆನು. ನಾನು ಹೇಳುವುದಿಷ್ಟೆ" ಎಂದು ಹೇಳಿದಳು. ಆ ಮಾತು ಕೇಳಿದ ರಾಜನಿಗೆ ಸಂತೋಷ ಹೋಗಿ ಸಂಕಟವಾಯಿತು. ೨೩. ಗೂಗೆಗೆ ಸೂರ್ಯನ ಕಿರಣಗಳು, ಮೂಗರಿಕೆ ಮಾತುಗಳು, ಸುಳ್ಳು ಯೋಗಿಗೆ ಅನುಭವ, ಕೋಪಿಗೆ ಶಾಂತಿ, ನಾಯಿಗೆ ಕಿತ್ತಳೆ, ಮೂಗಿಲ್ಲದವನಿಗೆ ಕನ್ನಡಿ ಸಹನೆಯಾಗಬಲ್ಲುವೆ? ಶಿವಭಕ್ತಿಯನ್ನು ಇಚ್ಛಿಸದ ಅರಸನಿಗೆ (ಮಾದೇವಿಯ ಮಾತು) ರೋಗಿಗೆ ಔಷಧಿ ಅರುಚಿಯಾದಂತೆ ಆಯಿತು. ೨೪. "ನಮಗೆ ಶಿವಭಕ್ತಿಯನ್ನು ಆಚರಿಸಲು

ಆತನಿದ ನೆಱೆನೋಡುತಿವಳಿಗೆ
ಭೂತ ಹೊಡೆಯಿತೊ ಮೇಣು ಪಿತ್ತದ
ಧಾತು ಹೆಚ್ಚಿತೊ ಸುಖದಲುಂಡುಟ್ಟಿರಲು ಹೇಳಿದೊಡೆ
ಏತಕಿವಳು ವಿರಕ್ತೆಯೆನೆ ವಿಪ
ರೀತದಲಿ ತಲೆಗೆದಱೆ ಬತ್ತಲೆ
ಕೌತುಕವ ಮಾಡಿದಳು ಶಿವ ಎನುತರಸ ಬೆಱಗಾದ ೨೫

ಮೀಸಲಳಿಯಿತು ಬಯಕೆ ಮನದಭಿ
ಲಾಷೆ ಜಾಱಿತು ಕಾಮದಾತುರ
ವೋಸರಿಸಿತೆಡೆವಱೆಯಿತಳುಪು ವಿವೇಕ ವರ್ಧಿಸಿತು
ಭಾಷೆ ಭರವೇಱಿತ್ತು ಮತ್ತೆ ಮ
ಹೀಶನಾದೊಡೆ ಹೋಗಲೆನುತೆ ನಿ
ರಾಸೆಯಿಂದಲಿ ಹೋಗಬಿಟ್ಟನು ಬಳಿಕ ಬಾಲಕಿಯ ೨೬

ಹಿಡಿದ ಲಿಂಗದ ಪರವಿಭೂತಿಯ
ತೊಡಹದಂಗದ ಮೆಯ್ಗೆ ಮುಸುಕಿದ
ಬಿಡುಮುಡಿಯ ಹೊದಿಕೆಯ ವಿಳಾಸತೆ ರಾಹು ಚಂದ್ರಮನ
ಹಿಡಿದು ನೆಟ್ಟನೆ ನಿಂದು ನಿಗುರುತೆ
ಪೊಡವಿಯಲಿ ಬಂದಿರ್ದುದೋ ಎನೆ
ಕಡುವಿರಕ್ತಿಯ ವೇಷ ಕಾಣಿಸಿತಿಂದುವದನೆಯಲಿ ೨೭

ಸಮಯ ಹೊಂದದು" ಎಂದು ಹೇಳಿದ ಅರಸನಿಗೆ ಮಾದೇವಿಯು "ನಮಗೆ ನಿಮ್ಮಯ ಸಂಗ ಹೊಂದದು. ನಿಮಗೆ ನಾವಿನ್ನು ಪರಕೀಯರು. ನಮಗೆ ಬಂಧನದಿಂದ ಬಿಡುಗಡೆಯಾಯಿತು" ಎಂದು ಆ ಸ್ಥಿತಿಯಲ್ಲಿಯೇ ಉಟ್ಟ ವಸ್ತ್ರವನ್ನೂ ಆಭರಣಗಳನ್ನೂ ಅರಸನಿಗೆ ಕೊಟ್ಟಳು. ೨೫. ಕೌಶಿಕ ಇದನ್ನು ಚೆನ್ನಾಗಿ ನೋಡುತ್ತಾ "ಇವಳಿಗೆ ಭೂತ ಹೊಡೆಯಿತೆ? ಅಥವಾ ಪಿತ್ತದ ಧಾತು ಹೆಚ್ಚಿತೊ? ಸುಖದಿಂದ ಉಂಡು ಉಟ್ಟು ಇರಲು ಹೇಳಿದರೆ ಇವಳೇಕೆ ವಿರಕ್ತೆಯಂತೆ ವಿಪರೀತವಾಗಿ ತಲೆಗೆದರಿ, ವಸ್ತ್ರ ತೊರೆದು ಆಶ್ಚರ್ಯವನ್ನುಂಟುಮಾಡಿದಳು, ಶಿವನೇ" ಎನ್ನುತ್ತಾ ಅರಸನು ಬೆರಗಾದನು. ೨೬. (ರಾಜನಿಗೆ) ಶ್ರದ್ಧೆಯಿಂದಿದ್ದುದು ನಾಶವಾಯಿತು ಬಯಕೆ, ಮನದ ಕೋರಿಕೆ ಜಾರಿತು, ಕಾಮದ ಆತುರ ಪಕ್ಕಕ್ಕೆ ಸರಿಯಿತು, (ಮಾದೇವಿಯನ್ನು ಪಡೆವ ಆಸೆ) ಜಾಗ ಬಿಟ್ಟುಕೊಟ್ಟಿತು, ವಿವೇಕ ಹೆಚ್ಚಿತು, ಭಾಷೆ ಭರವೇರಿತು. ಬಳಿಕ ಮಹೀಶನು ಹಾಗಾದರೆ ಹೋಗಲಿ ಎಂದು ನಿರಾಶೆಯಿಂದ ಬಾಲಕಿಯನ್ನು ಹೋಗಬಿಟ್ಟನು. ೨೭. ಚಂದ್ರಮುಖಿಯಾದ ಮಹಾದೇವಿಯ ಕೈಯಲ್ಲಿ ಹಿಡಿದ ಲಿಂಗ, ಅಂಗಕ್ಕೆ ಭೂಷಣವಾಗಿರುವ ಶ್ರೇಷ್ಠವಾದ ವಿಭೂತಿ, ದೇಹವನ್ನು ಮುಸುಕಿದ ಬಿಚ್ಚಿದ ಮುಡಿಯ ಹೊದಿಕೆ-ಇವುಗಳ ಸೌಂದರ್ಯವು ರಾಹು ಚಂದ್ರನನ್ನು ಹಿಡಿದು ನೇರವಾಗಿ ನಿಂದು ನಿಮಿರಿ

ತಂದೆತಾಯ್ಗಳು ನಂಟರಿಷ್ಟರು
ಬಂಧು ಬಳಗಗಳಿತರ ಜನಗಳು
ಬಂದು ನಿಂದೆಲೆ ಅಕ್ಕ ನೀನಕಟೇಕೆ ಮರುಳಾದೆ
ಎಂದೆನಲು ಶಿವಗರ್ಪಿಸಿದ ತನು
ವಿಂದು ಮೊದಲಾಗೆನ್ನ ಹಂಬಲ
ನಿಂದು ಕಳೆವುದು ನೀವೆನುತೆ ಮಾದೇವಿ ಜಾಜಿದಳು ೨೮

ಐಸಲೇ ನಮಗೇನು ತನ್ನಯ
ವಾಸಿಯಿಂದೆ ವಿರಕ್ತಿ ಬಂದುದೆ
ಮೀಸಲಳಿಯದೆ ಕನ್ನೆತನದಲಿ ಶಿವನನಪ್ಪುವೊಡೆ
ಲೇಸು ನಿಜಕುಲಕೋಟಿಗೆನುತವ
ರೋಸರಿಸಿದರು ಬಳಿಕಲತಿಸುಖ
ವಾಸದಲಿ ಮಾದೇವಿ ನಡೆದಳು ಭಕ್ತಿಭಾವದಲಿ ೨೯

ಕಾಯವಳಿಯದೆ ಶಿವನ ಕೂಡುವ
ದಾಯವನುಭವವಾವ ಘನ ಗುರು
ರಾಯನಿಂದೆನಗಹುದೊ ಶಿವ ಶಿವ ಎನುತೆ ನೆನೆಯುತಲಿ
ಆಯತಿಕೆಯಲಿ ನಗರ ವಿಪಿನ ವಿ
ಕಾಯದಲಿ ಕಾಜಿ ತೊಳಳಿ ಭಕ್ತೋ
ಪಾಯದಲಿ ಸುಳಿದಾಡುತಿರ್ದಳು ಮತ್ತೆ ಮಾದೇವಿ ೩೦

ಭೂಮಿಯಲ್ಲಿ ಬಂದಿದ್ದುದೊ ಎನ್ನುವಂತೆ ಅತಿ ವಿರಕ್ತಿಯ ವೇಷ ಕಾಣಿಸಿತು. ೨೮. ತಂದೆ ತಾಯಿಗಳು, ನಂಟರಿಷ್ಟರು, ಬಂಧು ಬಳಗ, ಇತರ ಜನಗಳು ಬಂದು ನಿಂತು 'ಅಯ್ಯೋ, ಎಲೆ ಅಕ್ಕ ನೀನೇಕೆ ಮರುಳಾದೆ?' ಎಂದೆನ್ನಲು, ಅವರಿಗೆ ಮಾದೇವಿಯು ಇಂದು ಮೊದಲಾಗಿ ಈ ದೇಹವು ಶಿವನಿಗರ್ಪಿತವಾಗಿದೆ. ಇನ್ನು ನೀವು ನನ್ನ ಮೇಲಿನ ಹಂಬಲವನ್ನು ಬಿಡುವುದು ಎನ್ನುತ್ತಾ (ಅಲ್ಲಿಂದ) ಮುಂದೆ ಸರಿದಳು. ೨೯. "ಅಷ್ಟೇ ತಾನೆ, ನಮಗೇನು. ತನ್ನ ಪಂಥದಿಂದ ಅವಳಿಗೆ ವಿರಕ್ತಿ ತಲೆದೋರಿತು. ಮೀಸಲು ಬಿಡದೆ, ಕನ್ಯಾವಸ್ಥೆಯಲ್ಲೇ ಶಿವನನ್ನು ಅಪ್ಪುವುದಾದರೆ ನಿಜವಾಗಿಯೂ ಕುಲಕೋಟಿಗೆ ಒಳ್ಳೆಯದು" ಎನ್ನುತ್ತ ಎಲ್ಲರೂ ಪಕ್ಕಕ್ಕೆ ಸರಿದರು. ಬಳಿಕ ಅತಿಸುಖದಿಂದ ಭಕ್ತಿಭಾವದಿಂದ ಮಾದೇವಿ ಮುಂದೆ ನಡೆದಳು. ೩೦. ಕಾಯವು ಅಳಿಯದೆ ಶಿವನನ್ನು ಸೇರುವ ಉಪಾಯದ ಅನುಭವವು ಶಿವಶಿವಾ ಯಾವ ಘನಗುರುರಾಯನಿಂದ ನನಗೆ ಆಗುತ್ತದೆಯೋ ಎಂದು ಮಾದೇವಿ ನೆನೆಯುತ್ತ, ವಿಶಾಲವಾದ ಪಟ್ಟಣ ಹಾಗೂ ಕಾಡುಗಳಲ್ಲಿ ಅಲೆದಾಡಿ, ಭಕ್ತಿಯ ಸುಲಭ ಸಾಧನದಲ್ಲಿ ಸುಳಿದಾಡುತ್ತಿದ್ದಳು.

ಎಲ್ಲಿ ಸಜ್ಜನವೆಲ್ಲಿ ನಿರ್ಜನ
ವೆಲ್ಲಿ ಗಿಡು ಮಡುವೆಲ್ಲಿ ತರು ಗಿರಿ
ಯೆಲ್ಲಿ ಗಹ್ವರವೆಲ್ಲಿ ಪೂಗೊಳವೆಲ್ಲಿ ಲತೆ ಪುಳಿನ
ಎಲ್ಲ ಎಡೆಯಲಿ ಹಾಡುತಾಡುತೆ
ಮೆಲ್ಲಮೆಲ್ಲನೆಯರಸುತಿರ್ದಳು
ಅಲ್ಲಮಪ್ರಭು ಗುರು ಗುಹೇಶ್ವರನನು ಮಹಾದೇವಿ ೩೧

ಅಂತು ಗತಿ ೧೦ಕ್ಕಂ ಪದ ೪೭೪ಕ್ಕಂ ಮಂಗಳಂ

೩೧. ಎಲ್ಲಿ ಸಜ್ಜನರಿರುವರೊ ಅಲ್ಲಿ; ಎಲ್ಲಿ ನಿರ್ಜನಪ್ರದೇಶವಿದೆಯೊ ಅಲ್ಲಿ; ಎಲ್ಲಿ ಗಿಡು ಮಡುಗಳಿವೆಯೊ ಅಲ್ಲಿ; ಎಲ್ಲಿ ತರು ಗಿರಿಗಳಿವೆಯೊ ಅಲ್ಲಿ; ಎಲ್ಲಿ ಗುಹೆಗಳಿವೆಯೊ ಅಲ್ಲಿ; ಎಲ್ಲಿ ಹೂಗಳಿವೆಯೊ ಅಲ್ಲಿ; ಎಲ್ಲಿ ಬಳ್ಳಿಗಳು ಮರಳುದಿನ್ನೆಗಳಿವೆಯೊ ಅಲ್ಲಿ-ಹೀಗೆ ಎಲ್ಲೆಡೆಗಳಲ್ಲಿ ಹಾಡುತ್ತಾಡುತ್ತಾ ಅಲ್ಲಮಪ್ರಭುವಾಗಿರುವ ಗುರು ಗುಹೇಶ್ವರನನ್ನು ಮಾದೇವಿ ಮೆಲ್ಲ ಮೆಲ್ಲನೆ ಹುಡುಕುತ್ತಿದ್ದಳು.

# ೧೧. ಗೊಗ್ಗಯ್ಯ

## ಗತಿ ೧೧

ಸೂಚನೆ : ಬೆರಸಿ ತನ್ನೊಳಗನಿಮಿಷನನಾ
ಪರಿಯಲಲ್ಲಮನೊಂದು ವೇಷವ
ಧರಿಸಿ ಸುಳಿದನು ಲೀಲೆಯಿಂದೆ ಜಗದ್ಧಿತಾರ್ಥದಲಿ

ಕಾಳು ವಿಷಯದ ವಿಧಿಯ ದಾಳಾ
ದೂಳಿಯಲಿ ಹತವಾಗಿ ಕಾಲನ
ಕಾಲ ಬಾಯಲಿ ಬೀಳಲೊಲ್ಲೆವೆನಿಪ್ಪ ಸುಕೃತಿಗಳು
ಕೇಳುವುದು ಕಿವಿಗೊಟ್ಟು ಭಕ್ತಿಯ
ಕಾಲು ಕೀಲನು ನುಡಿದು ತೋಱಿಸಿ
ಪಾಲಿಸುವ ಪರಬೊಮ್ಮನಲ್ಲಮ ಸುಳಿದ ಸುಲಭತೆಯ ೧

ಲಿಂಗ ನಿಜವನು ಬಯಸಿ ಭಕ್ತಜ
ನಂಗಳಿರುತಿರಲಲ್ಲಮಪ್ರಭು
ಲಿಂಗನಂತದನಜಿದು ತನ್ನ ಕಟಾಕ್ಷಕಾಂತಿಯಲಿ
ಹಿಂಗಿಸುವೆನೆಲ್ಲರ ಮನೋಮಯ
ದಂಗದೊಳಹೊಱಗಿಡಿದ ತಮದ ತ
ರಂಗಗಳನೆಂದೆನುತೆ ಕಾರಣಕಾಯದಲಿ ಸುಳಿದ ೨

ಸುಳಿದು ಸುಖದಲಿ ತನ್ನ ಲೀಲೆಯ
ಬಳಸಬೇಕೆಂದೊಂದು ವೇಷದ
ಹೊಳಹಿನಲಿ ಬರುತಿರಲು ಕಟ್ಟದಿರಿನಲಿ ಚೆಲುವಾಗಿ
ತಳಿತ ಕೆಂದಾವರೆಯ ನೆಯ್ದಿಲು
ಗೊಳನ ನಾನಾ ಪರಿಯ ಹೂಗಿಡು
ಗಳ ಲತಾಮಂಟಪದ ತೋಟವ ಕಂಡನಲ್ಲಮನು ೩

ಸೂ : ಅನಿಮಿಷದೇವನನ್ನು ತನ್ನಲ್ಲಿ ಐಕ್ಯಮಾಡಿಕೊಂಡು, ಆ ರೀತಿಯ ಒಂದು ವೇಷವನ್ನು ಜಗತ್‌ಸಂರಕ್ಷಣಾರ್ಥವಾಗಿ ಧರಿಸಿ (ಪ್ರಭುವು) ಲೀಲೆಯಿಂದ ಸುಳಿದನು. ೧. ವಿಧಿಯ (ನಿಯಾಮಕದಂತೆ) ನೀಚ ಇಂದ್ರಿಯಾಕಾಂಕ್ಷೆಗಳ ಕಾಳಗದಲ್ಲಿ ಸತ್ತು, ಯಮನ ಭೀಕರವಾದ ಬಾಯಲ್ಲಿ ಬೀಳಲಿಕ್ಕೆ ಇಷ್ಟಪಡದ ಪುಣ್ಯವಂತರು ಕಿವಿಗೊಟ್ಟು ಕೇಳುವುದು. ಭಕ್ತಿಯ ಮೂಲವನ್ನು ನುಡಿದು, ರಕ್ಷಿಸುವ ಪರಬ್ರಹ್ಮಸ್ವರೂಪಿಯಾದ ಅಲ್ಲಮನು ಸುಲಭವಾಗಿ ಮಾಡಬಹುದಾದ ಆ ಭಕ್ತಿಯ ರಹಸ್ಯವನ್ನು ತೋರಿಸಿ ಕಾಣಿಸಿಕೊಂಡನು. ೨. ಪರಮಾತ್ಮನ ನಿಜಸ್ವರೂಪವನ್ನು ತಿಳಿಯಬಯಸಿ ಭಕ್ತಜನರು ಇರುತ್ತಿರಲು ಅದನ್ನರಿತ ಅಲ್ಲಮಪ್ರಭುಲಿಂಗನು ಎಲ್ಲರ ಮನೋಮಯವಾಗಿರುವ, ದೇಹದ ಒಳಹೊರಗೆ ಕವಿದಿರುವ ಕತ್ತಲೆಯ ತರಂಗಗಳನ್ನು ತನ್ನ ಕಡೆಗಣ್ಣೋಟದ ಕಾಂತಿಯಿಂದ ಹಿಂಗಿಸುವೆನೆಂದು ಮಹದ್ ಉದ್ದೇಶವೊಂದರ ನೆರವೇರಿಕೆಗಾಗಿಯೇ ದೇಹ ಧರಿಸಿ ಕಾಣಿಸಿಕೊಂಡನು. ೩. ಸುಖಮೂರ್ತಿಯಾಗಿ ಸುಳಿದು, ತನ್ನ ಲೀಲೆಯನ್ನು (ಸಂದರ್ಭ ಬಂದಲ್ಲಿ) ಬಳಸಬೇಕೆಂದು ಒಂದು ವೇಷ ಧರಿಸಿ, ಅದರ ಕಾಂತಿಯಲ್ಲಿ ನಡೆದು ಬರುತ್ತಿರಲು,

ಆ ವನವ ಪಾಲಿಸುವನೊಬ್ಬನು
ಪಾವನೀಕೃತ ಚಿತ್ತನೀಶ್ವರ
ಭಾವ ಭಕ್ತನು ಗೊಗ್ಗಿದೇವನು ಕೃಷಿನಿಮಿತ್ತಿಳೆಯ
ತೀವಿಯಗಳುತ್ತಿರ್ದೊಡಾ ಪ್ರ
ಸ್ತಾವದಲಿ ಕಂಡಲ್ಲಮಪ್ರಭು
ದೇವತಾನಾತನ ಸಮೀಪಕೆ ಹೋಗಿ ನಿಂದಿರ್ದ ೪

ಮಿಕ್ಕು ಬೆವಸಾಯವನು ಮಾಡುವ
ಹೆಕ್ಕಳದ ಹೋರಟೆಯ ಕಾಣುತ
ಲಕ್ಕರಿಂದಲಿ ನೋಡಿ ಕರುಣರಸಾರ್ದ್ರಚಿತ್ತದಲಿ
ಸಿಕ್ಕಿತಲ್ಲಾ ಲೋಕವೀ ಪರಿ
ಕಕ್ಕುಲಿಸಿಯೊಡಲಾಸೆಗಳುವನು
ಲೆಕ್ಕಿಸದೆಯಕಟೆನುತಲಲ್ಲಮ ತನ್ನೊಳಿಂತೆಂದ ೫

ಆದೊಡಿನ್ನೀತನನುಪಾಯದ
ಭೇದದಿಂದೊಡಬಡಿಸಿ ಭಕ್ತಿಯ
ಹಾದಿಯನು ಹತ್ತಿಸುವೆನಾನೇ ಲಿಂಗಮಾರ್ಗವನು
ಸಾಧಿಸುವ ಸಾಧಕನವೊಲು ಸಂ
ವಾದಿಸುವೆನೀತನಲಿಯೊಂದು ವಿ
ನೋದವನು ಮಾಡುವೆನೆನುತಲಲ್ಲಮನು ಬಗೆಗೊಂಡ ೬

ಇದಿರಿನಲ್ಲಿ ಸೊಗಸಾಗಿ ಅರಳಿದ ಕೆಂದಾವರೆ, ನೈದಿಲೆಗಳ ಕೊಳಗಳು, ನಾನಾಬಗೆಯ ಹೂಗಿಡಗಳು, ಲತಾಮಂಟಪಗಳು ಇವುಗಳಿಂದ ಕೂಡಿದ ತೋಟವನ್ನು ಅಲ್ಲಮ ಕಂಡನು. ೪. ಪಾವನವಾದ ಮನಸ್ಸುಳ್ಳವನೂ ಈಶ್ವರನಲ್ಲಿ ಭಾವವುಳ್ಳ ಭಕ್ತನೂ ಆದ ಗೊಗ್ಗಿದೇವನು ಆ ವನವನ್ನು ಪಾಲಿಸುವವನು. ವ್ಯವಸಾಯ ಕಾರಣವಾಗಿ ಭೂಮಿಯನ್ನು ಚೆನ್ನಾಗಿ ಅಗೆಯುತ್ತಿರಲು ಆ ಸಂದರ್ಭದಲ್ಲಿ ಅಲ್ಲಮಪ್ರಭು (ಅವನನ್ನು) ಕಂಡು ಆತನ ಸಮೀಪಕ್ಕೆ ಹೋಗಿ ನಿಂತನು. ೫. ಚೆನ್ನಾಗಿ ವ್ಯವಸಾಯವನ್ನು ಮಾಡುವಲ್ಲಿ ಹೆಚ್ಚಾದ ಹೋರಾಟವನ್ನು ಕಂಡು ಪ್ರೀತಿಯಿಂದ ಗೊಗ್ಗಿದೇವನನ್ನು ನೋಡಿ ಕರುಣೆಯಿಂದ ಒದ್ದೆಯಾದ ಮನದಿಂದ 'ಈ ಲೋಕವು ದೇಹದ ಮೇಲಿನ ಆಸೆಗಾಗಿ ಜ್ಞಾನವನ್ನು ಲೆಕ್ಕಿಸದೆಯೆ, ಅಯ್ಯೋ, ಈ ರೀತಿ ಮೋಹಕ್ಕೆ ಒಳಗಾಗಿದೆಯಲ್ಲಾ' ಎಂದು (ನೊಂದು) ಅಲ್ಲಮ ತನ್ನಲ್ಲಿಯೇ ಹೀಗೆಂದನು. ೬. ಆದರೂ ಇನ್ನು ಈತನನ್ನು ಉಪಾಯದಿಂದ ಭೇದಿಸಿ, ಒಪ್ಪಿಸಿ, ಭಕ್ತಿಮಾರ್ಗಕ್ಕೆ ಸೇರಿಸುವೆನು. ನಾನೇ ಲಿಂಗದ ಹಾದಿಯನ್ನು ಸಾಧಿಸುವ (ಮೋಕ್ಷವನ್ನು ಸಾಧಿಸುವ) ಸಾಧಕನ ರೀತಿಯಲ್ಲಿ ಈತನೊಂದಿಗೆ ಸಂವಾದ ಮಾಡುವೆನು, ಲೀಲೆಯೊಂದನ್ನು ನಟಿಸುವೆನು ಎನ್ನುತ್ತಾ ಅಲ್ಲಮನು ಆಲೋಚಿಸಿದನು.

ಬಳಿಕಲಾ ತೋಟಗನ ಬುದ್ಧಿಗೆ
ತಿಳಿವ ತೀಡುವೆನೆನುತೆ ಮಿಗೆ ಕಂ
ಗಳಿಗೆ ಕಟ್ಟಿದಿರಾಗುತಲಿ ಶರಣಾರ್ಥಿಯೆಂದೆನಲು
ನಲಿದು ಕೇಳುತೆ ಕೂಡೆ ಶರಣೆಂ
ದೊಲಿದು ನೀನಾರೆನುತೆ ವಿನಯಂ
ಗಳಲಿ ತದ್ವನಪಾಲ ಕೇಳಿದನಲ್ಲಮಪ್ರಭುವ ೭

ಭಾವಿಸಲು ಶಿವಭಕ್ತರೆಂಬವ
ರಾವ ಠಾವಿನಲಿಪ್ಪರವರ ಕೃ
ಪಾವಲೋಕನಭಕ್ತಿ ಭಿಕ್ಷಾಂಬೇಹಿಗಳು ನಾವು
ಆವುದಱೊಳಹುದಲ್ಲವಲ್ಲಮ
ದೇವನೆಂಬುದೆ ನಮಗೆ ಸಲೆ ಸಂ
ಭಾವಿಸಿದ ಹೆಸರಾಗಿಹುದು ಭಕ್ತಯ್ಯ ಕೇಳೆಂದ ೮

ತಿಳಿದು ನಾನಾ ಪರಿಗಳಿಂದಲಿ
ಗಳಿಸಿದರ್ಥವ ಲಿಂಗ ಜಂಗಮ
ಗಳಿಗೆ ನೀಡುತಲೊಕ್ಕು ಮಿಕ್ಕುದನುಂಡು ಸುಖಿಯಹುದು
ಇಳೆಯೊಳಿದು ಶಿವಭಕ್ತಿ ಬಱಿದೆಗೆ
ತೊಳಲಿಯಱಸಲದೇನು ಕಾರಣ
ವೆಲೆ ಮರುಳೆ ಕೇಳೆಂದನಾ ಗೊಗ್ಗಯ್ಯನಲ್ಲಮಗೆ ೯

ನಿಮ್ಮ ಹೆಸರೇನಯ್ಯ ಎಂದರೆ
ನಮ್ಮ ಹೆಸರೇ ಗೊಗ್ಗಯನು ಕೇ
ಳೆಮ್ಮ ಮತವಿದು ಲೌಕಿಕರು ನಾವಱಿಯೆವೇನುವನು
ಸುಮ್ಮನಿರಬೇಡೆಮಗೆ ವಿವರಿಸಿ
ನಿಮ್ಮ ಮನಸಿನ ಬುದ್ಧಿಯಾವುದ
ನೆಮ್ಮಿಹುದು ಹೇಳೆಂದನಾ ಗೊಗ್ಗಯ್ಯನಲ್ಲಮಗೆ ೧೦

೭. ಬಳಿಕ ಆ ತೋಟಿಗನ ಬುದ್ಧಿಗೆ ಅರಿವನ್ನು ಚೆನ್ನಾಗಿ ತೀಡುವೆನೆನ್ನುತ್ತ ಆತನ ಕಣ್ಣಿಗೆ ಕಾಣುವಂತೆ ಇದಿರಾಗಿ ಶರಣಾರ್ಥಿ ಎನ್ನಲು (ಆ ಮಾತನ್ನು) ಸಂತಸದಿಂದ ಕೇಳಿ ಕೂಡಲೇ ಶರಣೆಂದು (ಪ್ರೀತಿಪೂರ್ವಕವಾಗಿ) ನುಡಿದು, ನೀನಾರು ಎಂದು ವಿನಯದಿಂದ ಆ ವನಪಾಲನು ಅಲ್ಲಮಪ್ರಭುವನ್ನು ಕೇಳಿದನು. ೮. "ವಿಚಾರಮಾಡಲು, ನಾವು ಶಿವಭಕ್ತರೆನ್ನುವವರು ಯಾವ ಸ್ಥಳದಲ್ಲಿರುವರೊ (ಅಲ್ಲಿಗೆ ನಡೆದು) ಅವರ ಕೃಪಾದೃಷ್ಟಿಯಿಂದ ಕೂಡಿದ ಭಕ್ತಿಯ ಭಿಕ್ಷೆಯನ್ನು ಬೇಡುವವರು. ಎಲ್ಲದರಲ್ಲೂ ಇದ್ದೂ ಇಲ್ಲದ ಅಲ್ಲಮದೇವನೆಂಬುದೇ ನಮಗೆ ಚೆನ್ನಾಗಿ ಶೋಭಿಸುವ ಹೆಸರಾಗಿರುವುದು ಭಕ್ತಯ್ಯಾ ಕೇಳು" ಎಂದು ಅಲ್ಲಮ ನುಡಿದನು. ೯. ಲೋಕವನ್ನು ಅರಿತು, ನಾನಾ ರೀತಿಗಳಿಂದ ಸಂಪಾದಿಸಿದ ಸಂಪತ್ತನ್ನು ಲಿಂಗಜಂಗಮರಿಗೆ ನೀಡುತ್ತಾ, ಅವರು ಉಂಡು ಮಿಕ್ಕ ಪ್ರಸಾದವನ್ನು ಉಂಡು ಸುಖಿಯಾಗುವುದು. ಭುವಿಯಲ್ಲಿ ಇದೇ ಶಿವಭಕ್ತಿ. ಎಲೆ ಮರುಳೇ, ವ್ಯರ್ಥವಾಗಿ ತೊಳಲಿ ಅರಸುವುದೇನು ಕಾರಣ? ಕೇಳು, ಎಂದು ಗೊಗ್ಗಯ್ಯ ಅಲ್ಲಮನಿಗೆ ನುಡಿದನು. ೧೦. "ನಿಮ್ಮ ಹೆಸರೇನಯ್ಯ?" ಎಂದು ಅಲ್ಲಮ ಕೇಳಲು "ನಮ್ಮ ಹೆಸರು ಗೊಗ್ಗಯ್ಯನೆಂದು. ನಮ್ಮ ಅಭಿಪ್ರಾಯವಿದು. ಲೌಕಿಕರಾದ ನಾವು ಏನನ್ನೂ ತಿಳಿಯೆವು.

ಆವ ಬೆವಸಾಯುವನು ಮಾಡಲು
ಜೀವವೆತೆಗಳು ತಪ್ಪವದಱಲಿ
ದೇವನೊಲಿವನೆ ನೋವು ನಿಲುವುದೆ ಸಾವು ಹಿಂಗುವುದೆ
ಧಾವತಿಯ ಕಡೆತನಕ ತಪ್ಪದು
ಭಾವಿಸುವೊಡದು ಭವಿಗಳಂಗವಿ
ದಾವುದಲ್ಲದ ಮತವನೆಲೆ ಗೊಗ್ಗಯ್ಯ ಕೇಳೆಂದ ೧೧

ಇಲ್ಲಿ ಭಕ್ತಿಯ ಮಾಡುತಲಿ ಕಡೆ
ಯಲ್ಲಿ ಕೈಲಾಸವನು ಹೊಕ್ಕೊಡೆ
ಯೆಲ್ಲಿಯವು ಬಿಡು ನೋವು ಸಾವುಗಳೆಂಬ ಸಂಕಟವು
ಬಲ್ಲವರ ಕೇಳೆಮ್ಮ ನಂಬುಗೆ
ಯಿಲ್ಲದಿರ್ದೊಡೆ ಮರುಳೆ ನೀನೆನು
ತಲ್ಲಮನು ಗೊಗ್ಗಯ್ಯನನು ಬೋಧಿಸಿತಿರ್ದನೀ ಮತವ ೧೨

ಆವಧರಿಸಿ ಕೇಳೆನ್ನ ಬುದ್ಧಿಯ
ಜವಣನಾದಲೆ ಜೀವಲವಮಾ
ತ್ರವನು ನೋಯಿಸಿ ಭಕ್ತಿಯಲಿ ಕೈಲಾಸಪುರದೊಳಗೆ
ಭವನ ಬಸಱೊಳಗಿರ್ದೊಡೆಯು ಸಂ
ಭವಿಸುವುವು ಕಡುನೋವು ಸಾವುಗ
ಳಿವನು ಕಳೆವರ ಕಾಣೆನ್ನೆ ಗೊಗ್ಗಯ್ಯ ಕೇಳೆಂದ ೧೩

ಸುಮ್ಮನಿರಬೇಡ, ನಿಮ್ಮ ಮನಸ್ಸಿನಲ್ಲಿರುವ ವಿಚಾರ ಏನನ್ನು ಆಶ್ರಯಿಸಿದೆ ಎಂಬುದನ್ನು ವಿವರಿಸು" ಎಂದು ಗೊಗ್ಗಯ್ಯ ಅಲ್ಲಮನಿಗೆ ಹೇಳಿದನು. ೧೧. "ಯಾವ ವ್ಯವಸಾಯವನ್ನು ಮಾಡಿದರೂ ಜೀವಕ್ಕೆ ವ್ಯಥೆಗಳು ತಪ್ಪವು. ಅದರಿಂದ ದೇವನು ಒಲಿವನೆ? ನೋವು ನಿಲ್ಲುವುದೆ? ಸಾವು ಹಿಂಗುವುದೆ? ಕೊನೆತನಕ ಚಿಂತೆ ತಪ್ಪುವುದೆ? ಭಾವಿಸುವುದಾದರೆ, ಅದು ಭವಿಗಳ ಉದ್ಯಮವು. ಇದಾವುದೂ ಅಲ್ಲದ ವಿಚಾರವನ್ನು ಎಲೆ ಗೊಗ್ಗಯ್ಯ ಕೇಳು" ಎಂದನು. ೧೨. ಇಲ್ಲಿ ಗುರು ಲಿಂಗ ಜಂಗಮ ಸೇವೆ ಮಾಡಿ ಕೊನೆಗೆ ಕೈಲಾಸವನ್ನು ಪ್ರವೇಶಿಸಿದರೆ ನೋವು ಸಾವುಗಳೆಂಬ ಸಂಕಟವು ಎಲ್ಲಿಯವು, ಬಿಡು. ಹುಚ್ಚಪ್ಪಾ, ನಮ್ಮ ಮಾತಿನಲ್ಲಿ ನಂಬುಗೆಯಿಲ್ಲದಿದ್ದರೆ ತಿಳಿದವರನ್ನು ಕೇಳು ಎಂದು ಗೊಗ್ಗಯ್ಯನಿಗೆ ಈ ಎಲ್ಲ ವಿಚಾರಗಳನ್ನು ಅಲ್ಲಮ ಬೋಧಿಸಿದನು. ೧೩. "ಗೊಗ್ಗಯ್ಯಾ, ನನ್ನ ತಿಳುವಳಿಕೆಯ ಪ್ರಮಾಣವನ್ನಾದರೂ ಮನಸ್ಸುಗೊಟ್ಟು ಕೇಳು. ಅಲ್ಪಮಾತ್ರ ವಾದ ಜೀವವನ್ನು ನೋಯಿಸಿ ಭಕ್ತಿಯ (ಹೆಚ್ಚಳದಿಂದ) ಕೈಲಾಸಪುರದೊಳಗಿನ ಮನೆಯ ಬಸಿರಿನಲ್ಲಿ (ಅಡಗಿ) ಇದ್ದರೂ ಅತಿಯಾದ ನೋವು ಸಾವುಗಳು (ತಪ್ಪದೆ) ಬರುವುವು. ಇವನ್ನು ನಿವಾರಿಸುವವರನ್ನು ಕಾಣೆನು" ಎಂದನು.

ಕೊಂದವಗೆ ಕೊಲೆ ತಪ್ಪದಾರೇ
ನೆಂದೊಡೆಯು ಹರಿ ಹರ ವಿರಿಂಚಿಗ
ಳಿಂದ ಬಲ್ಲಿದರಾರು ದಿಟವವರಾದೊಡೆಯು ತುದಿಗೆ
ಬಂಧನಪ್ರದ ಬಾಹ್ಯಕರ್ಮವ
ನೊಂದುಗೂಡಿದರಾದೊಡವರಿಗೆ
ಸಂದ ನಿಜಸುಖವಿಲ್ಲವೈ ಗೊಗ್ಗಯ್ಯ ಕೇಳೆಂದ ೧೪

ಸಾವೊಡೀ ಗುರು ಲಿಂಗ ಜಂಗಮ
ಸೇವೆ ತಾ ಮುನ್ನೇಕೆ ಹಸಿವಿನ
ಬೇವಸದಲಡಿಗಡಿಗೆ ಬೇವಗೆಯೊಕ್ಕುದುಣಲೇಕೆ
ಈ ವಿಧಿಯಲೇನುಂಟು ನೆಱೆ ನಿ
ರ್ಭಾವದಂಗವನಱಿಯದನ್ನಕ
ಸಾವುದಾದರೆ ಮಾಣದೈ ಗೊಗ್ಗಯ್ಯ ಕೇಳೆಂದ ೧೫

ಪರಿಕಿಸಲು ಗುರು ಲಿಂಗ ಜಂಗಮ
ದಿರವದಾವೆಡೆಯೆಂಬುದೀಯುಪ
ಚರಣೆಗಱಿಸದದಱ ಪರಿಯೆಂತೋ ಮಹಾದೇವ
ಅರಿದಲಾ ಎಂದೆನುತೆ ನೆವದಿಂ
ದೊರೆದನಾ ಗೊಗ್ಗಯ್ಯಗಿಂತೀ
ಪರಿಯಸಲ್ಲಮಲಿಂಗನೊಲಿದನ್ಯಾಪದೇಶದಲಿ ೧೬

೧೪. "ಗೊಗ್ಗಯ್ಯಾ ಕೇಳು, ಯಾರು ಏನೇ ಹೇಳಿದರೂ ಕೊಂದವರಿಗೆ ಕೊಲೆ ತಪ್ಪದು. ವಿಷ್ಣು ಶಿವ ಬ್ರಹ್ಮರುಗಳಿಗಿಂತ ಶ್ರೇಷ್ಠರಾರು? ನಿಜಕ್ಕೂ ಅವರಾದರೂ ಕೊನೆಗೆ ಬಂಧನವನ್ನುಂಟುಮಾಡುವ ಬಾಹ್ಯಕರ್ಮಗಳನ್ನು ಮಾಡಿದವರಾದರೆ ಅವರಿಗೆ ಪ್ರಸಿದ್ಧವಾದ ಪರಮಸುಖವಿಲ್ಲ" ಎಂದನು. ೧೫. "ಗೊಗ್ಗಯ್ಯಾ ಕೇಳು, ಸಾಯುವುದಾದರೆ ಗುರು ಲಿಂಗ ಜಂಗಮರುಗಳ ಸೇವೆ ತಾನೆ ಮೊದಲು ಏತಕ್ಕೆ (ಬೇಕು)? ಹಸಿವಿನ ದುಃಖದಲ್ಲಿ ಮೇಲಿಂದ ಮೇಲೆ ಬೆಂದು ಹೋಗುವುದಾದರೆ ಪ್ರಸಾದವನ್ನು ಉಂಡು ಪ್ರಯೋಜನವೇನು? ಈ ಕ್ರಮದಿಂದ ಫಲವೇನುಂಟು? ಚೆನ್ನಾಗಿ ಮನಸ್ಸನ್ನು ಲಯಮಾಡಿಸುವ ರೀತಿಯನ್ನು ತಿಳಿಯುವವರೆವಿಗೂ ಸಾಯುವುದು ತಪ್ಪದು" ಎಂದನು. ೧೬. "ಪರೀಕ್ಷಿಸಲು ಗುರು ಲಿಂಗ ಜಂಗಮರ ಸ್ಥಿತಿ, ಸ್ವರೂಪ, ಲಕ್ಷಣಗಳೇನು? ಅವುಗಳ ಮೂಲವೇನು? ಎನ್ನುವುದು ಈ ಉಪಚಾರದ ಮಾತಿನಿಂದ ತಿಳಿಯುವುದಿಲ್ಲ. ಅವುಗಳ ರೀತಿ ಹೇಗೆ? ಮಹಾದೇವಾ" ಎಂದು ಗೊಗ್ಗಯ್ಯ ಅಲ್ಲಮನನ್ನು ಕೇಳಲು ಅದಕ್ಕೆ ಅಲ್ಲಮನು 'ತಿಳಿಯುವೆ' ಎಂದು ಹೇಳಿ ಆ ನೆವದಿಂದ ಗೊಗ್ಗಯ್ಯನಿಗೆ ಒಲಿದು ಬೇರೆ ರೀತಿಯಲ್ಲಿ ಅದನ್ನು ಹೇಳಿದನು.

ಎಲ್ಲವನು ಕೇಳುತ್ತಲಾತನು
ಹೊಲ್ಲವಾಯಿತು ಭಕ್ತಿಯೆಂಬುದು
ಕಲ್ಲ ಕಡಲೆಯ ಮೆಲುವ ಪರಿಯಲ್ಲಾ ಮಹಾದೇವ
ಅಲ್ಲಮನ ನಾವಱಿಯೆವೈ ನೀ
ಬಲ್ಲೆ ನಿನ್ನಯ ಮನದ ಹರಿವನು
ಸಲ್ಲದುಳಿದರಿಗೆಂದನಾ ಗೊಗ್ಗಯ್ಯನೊಲವಿನಲಿ ೧೭

ಮತ್ತೆಯಲ್ಲಮನಾದೊಡೊಂದು ನಿ
ಮಿತ್ತದೃಷ್ಟಾಂತವನು ತೋಱಿಸಿ
ಹತ್ತಿಸುವೆನೀತಂಗೆ ಹಾದಿಯನೆನುತಲತಿಕೃಪೆಯ
ಚಿತ್ತದಲಿ ಗೊಗ್ಗಯ್ಯನಗುಳುತೆ
ಕಿತ್ತ ಹೆಂಟೆಯ ಕೆಳಗೆ ತೋಱಿದ
ನುತ್ತಮದ ಹೊಂಗಳಸವೊಂದನು ನಿಮಿಷಮಾತ್ರದಲಿ ೧೮

ಏನಿದೇನೆಂದಿಬ್ಬರೊಲಿದನು
ಮಾನದಿಂದಗುಳಲು ಸಮಾಧಿ
ಸ್ಥಾನದಾ ದೇಗುಲವ ಕಂಡೊಳಪೊಕ್ಕು ಹರುಷದಲಿ
ಮೌನದಿಂ ನಿಬ್ಬೆಱಗು ಹೊಡೆದವ
ಧಾನದನಿಮಿಷದೃಷ್ಟಿ ಲಿಂಗ
ಧ್ಯಾನದಂಗವ ಕಂಡರಾ ಗೊಗ್ಗಯ್ಯನಲ್ಲಮನು ೧೯

ಅಂತರಂಗವ ಹೊಕ್ಕು ನೆಱೆ ನಿ
ಶ್ಚಿಂತ ನಿಲುವನು ನೋಡುವನುಭವಿ
ಯಂತೆ ಗೊಪೆಯೊಳಗೊಂದು ಲಿಂಗ ಪ್ರಾಣ ತನುಮಯದ
ಜಂತ್ರಗಿಟಗಿಟಯಾದ ಲಿಂಗದ
ಚಿಂತೆಯಲಿ ಮಱವಟ್ಟ ಮೈಯ ಮ
ಹಂತನನು ಗೊಗ್ಗಯ್ಯನಲ್ಲಮ ಸಹಿತ ನೆಱೆ ಕಂಡ ೨೦

೧೭. ಎಲ್ಲವನ್ನೂ ಕೇಳಿದ ಗೊಗ್ಗಯ್ಯನು "ಭಕ್ತಿಯೆಂಬುದು ಕಲ್ಲಿನ ಕಡಲೆಯನ್ನು ತಿನ್ನುವ ರೀತಿಯಲ್ಲಿ ಕೆಟ್ಟದಾಯಿತು. ಪರಾತ್ಪರಸ್ವರೂಪನಾದ ಅಲ್ಲಮನನ್ನು ನಾನು ತಿಳಿಯೆ. ನಿನ್ನ ಮನಸ್ಸಿನ ಓಟವನ್ನು ನೀನು ಬಲ್ಲೆ. ಉಳಿದವರಿಗೆ ಅದು ಸಾಧ್ಯವಾಗದು" ಎಂದು ಒಲವಿನಿಂದ ಅಲ್ಲಮನಿಗೆ ಹೇಳಿದನು. ೧೮. ಅನಂತರ ಅಲ್ಲಮನಾದರೊ ಒಂದು ಸಾಂಕೇತಿಕ ದೃಷ್ಟಾಂತವನ್ನು ತೋರಿಸಿ ಗೊಗ್ಗಯ್ಯನನ್ನು ಭಕ್ತಿಯ ಹಾದಿಗೆ ಹತ್ತಿಸುವೆನೆಂದು (ಆಲೋಚಿಸಿ) ಹೆಚ್ಚಿನ ಕೃಪೆಯಿಂದ ಕೂಡಿದ ಮನದಿಂದ ಗೊಗ್ಗಯ್ಯ ಉಳುತ್ತಾ ಕಿತ್ತ ಹೆಂಟೆಯ ಕೆಳಗೆ ನಿಮಿಷ ಮಾತ್ರದಲ್ಲೇ ಉತ್ತಮವಾದ ಹೊಂಗಳಸವೊಂದನ್ನು ತೋರಿಸಿದನು. ೧೯. ಏನಿದೇನೆಂದು ಇಬ್ಬರೂ ಪ್ರೀತಿಸಿ, ಅನುಮಾನದಿಂದ ನೆಲವನ್ನು ತೋಡಲು ಸಮಾಧಿಸ್ಥಾನದ ಆ ದೇಗುಲವನ್ನು ಕಂಡು ಹರುಷದಿಂದ ಒಳಗೆ ನಡೆದು, ಮೌನದಿಂದ ರೆಪ್ಪೆಹೊಡೆಯದೆ ಲಿಂಗದಲ್ಲಿ ತನ್ಮಯವಾಗಿ, ನೋಟವನ್ನುಳ್ಳ ಧ್ಯಾನಮಗ್ನ ದೇಹವನ್ನು ಗೊಗ್ಗಯ್ಯ ಅಲ್ಲಮರು ಕಂಡರು. ೨೦. ಅಂತರಂಗವನ್ನು ಪ್ರವೇಶಿಸಿ ಚೆನ್ನಾಗಿ ನಿಶ್ಚಿಂತ ನಿಲವನ್ನು ನೋಡುವ ಅನುಭವಿಯಂತೆ ಗುಹೆಯಲ್ಲಿ ಲಿಂಗವೇ ಪ್ರಾಣ ತನುವಾದಂತೆ

ಮಾಡಬಲ್ಲರೆ ಭಕ್ತಿಯಂಗವ
ನೋಡಿದ್ಯೆ ನಮ್ಮಯ್ಯನಙುವಿನ
ಗಾಡಿಯನು ಗಂಭೀರ ಭಕ್ತಿಯ ಗರುವ ಮೋಡಿಯನು
ರೂಢಿಗೇಕೋಭಾವನಿಷ್ಠೆಯ
ಗೂಢವೆನುತನಿಮಿಷನ ಮಿಗೆ ಕೊಂ
ಡಾಡಿ ಗೊಗ್ಗಯ್ಯಂಗೆಯಲ್ಲಮಲಿಂಗ ತೋಱಿದನು ೨೧

ಭಂಗಪದವಿಯನೊಲ್ಲೆನಿನ್ನೀ
ಲಿಂಗದಲಿ ಸುಖಿಯಪ್ಪೆನೆಂದಾ
ಭೃಂಗಿನಾಥನೆ ಶಿವಸಮಾಧಿಯಲಿದ್ದನೆಂಬಂತೆ
ಲಿಂಗದಲಿ ನೆಱೆ ನಟ್ಟ ನೋಟದ
ಕಂಗಳೇ ಕರುಳಾಗಿಯೆಲುವೆಸೆ
ವಂಗದನಿಮಿಷನಿರವನಾ ಗೊಗ್ಗಯ್ಯನೀಕ್ಷಿಸಿದ ೨೨

ಇದೆ ಕಣಾ ಶಿವಲಿಂಗಭಕ್ತಿಯ
ಹೃದಯವನು ಸಾಧಿಸುವ ಪರಿಭಾ
ವದಲಿ ನೆಱೆ ನಟ್ಟಾಲಿಯಲಿ ನಿಬ್ಬೆಱಗಿನಂದದಲಿ
ಇದನು ಸಾಧಿಸದನ್ಯವ್ಯವಸಾ
ಯದಲಿ ಸಾವೊಡೆ ಕಬ್ಬಿನಿಚ್ಚೆಗೆ
ಬಿದಿರ ಮೆಲುವಂತಪ್ಪುದ್ಯೆ ಗೊಗ್ಗಯ್ಯ ಕೇಳೆಂದ ೨೩

ಅತ್ಯಂತ ಪ್ರಕಾಶಮಾನವಾದ ಲಿಂಗದ ಧ್ಯಾನದಲ್ಲೇ ಮರವಟ್ಟ ದೇಹದ ಮಹಾಜ್ಞಾನಿಯನ್ನು ಗೊಗ್ಗಯ್ಯ ಅಲ್ಲಮನೊಂದಿಗೆ ಚೆನ್ನಾಗಿ ನೋಡಿದನು. ೨೧. "ಮಾಡುವುದಾದರೆ ಭಕ್ತಿಯ ರೀತಿಯನ್ನು, ನಮ್ಮಯ್ಯನ ತಿಳುವಳಿಕೆಯ ಸೊಬಗನ್ನು, ಗಂಭೀರಭಕ್ತಿಯ ಹೆಮ್ಮೆಯ ರೀತಿಯನ್ನು, ಕ್ರಮವಾದ ಏಕೋಭಾವ ನಿಷ್ಠೆಯ ಆಳವನ್ನು ನೋಡಿದೆಯಾ?" ಎನ್ನುತ್ತ ಅನಿಮಿಷನನ್ನು ವಿಶೇಷವಾಗಿ ಕೊಂಡಾಡಿ ಅಲ್ಲಮಲಿಂಗನು ಗೊಗ್ಗಯ್ಯನಿಗೆ ತೋರಿಸಿದನು. ೨೨. ಶಾಶ್ವತವಲ್ಲದ ಪದವಿಯನ್ನು ಒಲ್ಲೆ. ಇನ್ನು ಈ ಲಿಂಗದಲ್ಲಿ ಸುಖಿಯಾಗುವೆ ಎಂದು ಕೈಲಾಸದ ದ್ವಾರಪಾಲಕನಾದ ಭೃಂಗಿಯೇ ಶಿವಸಮಾಧಿ ಯಲ್ಲಿ ಇದ್ದನೆಂಬಂತೆ ಲಿಂಗದಲ್ಲಿ ಚೆನ್ನಾಗಿ ನಾಟಿದ ದೃಷ್ಟಿಯುಳ್ಳ, ಕಣ್ಣುಗಳೇ ಕರುಳಾಗಿ ಎಲುಬುಗಳಿಂದ ಶೋಭಿಸುವ, ದೇಹದ ಅನಿಮಿಷದೇವನ ಸ್ಥಿತಿಯನ್ನು ಗೊಗ್ಗಯ್ಯನು ನೋಡಿದನು. ೨೩. "ಗೊಗ್ಗಯ್ಯ ಕೇಳು, ಶಿವಲಿಂಗಭಕ್ತಿಯ ತಿರುಳನ್ನು ಸಾಧಿಸುವ ರೀತಿಯಿದು. ಭಾವದಲ್ಲಿ ಚೆನ್ನಾಗಿ ನಾಟಿದ ಕಣ್ಣುಗಳಿಂದ, ರೆಪ್ಪೆ ಹೊಡೆಯದ ದೃಷ್ಟಿಯಿಂದ ಇದನ್ನು ಸಾಧಿಸದೆ ಅನ್ಯಕಾರ್ಯದಲ್ಲಿ ಸಾಯುವುದಾದರೆ ಕಬ್ಬನ್ನು ಮೆಲ್ಲುವ ಇಚ್ಛೆಗೆ ಬದಲು ಬಿದಿರನ್ನು ಮೆಲ್ಲುವಂತಾಗುತ್ತದೆ" ಎಂದನು.

ಬಡವನಕ್ಷಯನಿಧಿ ನಿಧಾನವ
ನೆಡಹುತಲಿ ಕಂಡಂತೆ ಕೈಕಾಲ್
ಮುಡುಬಗಳವಟ್ಟಂತೆ ಕುರುಡಗೆ ಕಣ್ಣು ಬಂದಂತೆ
ಬಿಡದೆಯಱಸುವ ಬಳ್ಳಿ ಕಾಲನು
ತೊಡರಿತೆಂಬಂತೆನ್ನ ಬಯಕೆಯ
ಕಡೆಯ ಕಂಡೆನೆನುತ್ತಲಲ್ಲಮ ನುಡಿದನುಚಿತದಲಿ ೨೪

ಗುರುವೆ ಕರುಣಿಸು ಭಕ್ತಿಭಾವದ
ಕರುವೆ ಕರುಣಿಸು ಲಿಂಗನಿಷ್ಠೆಯ
ಗರುವ ಕರುಣಿಸು ಕರುಣಿಸೆನುತನಿಮಿಷನ ಕೊಂಡಾಡಿ
ನರನು ತಾ ದಿಟವೆಂಬ ಬಳಕೆಯ
ಪರಿಯನಂಗೀಕರಿಸಿ ಪರರಿಗೆ
ಪರಮನಲ್ಲಮ ನಟಿಸುತಿರ್ದನು ತನ್ನ ಲೀಲೆಯಲಿ ೨೫

ಅಱಿಯದವದಾಳೋಚನೆಗೆ ತನ
ಗುಱುವ ಗುರುವನಿಮಿಷನು ತಾನೇ
ನೆಱೆ ವಿನೂತನ ಶಿಷ್ಯನೆಂಬವೊಲಖಿಳ ಭಕ್ತರಿಗೆ
ಅಱುಹನಂಗೀಕರಿಸಿ ತನ್ನಯೆ
ಕುಱುಹಿನಾಕಾರದಲಿ ಕಲಿಸುವ
ತೆಱನನಲ್ಲಮ ನಟಿಸುತಿರ್ದನು ತನ್ನ ಲೀಲೆಯಲಿ ೨೬

ಹತ್ತೆ ಬಂದಿರೆ ಸೂಜಿಗಲ್ಲನು
ಹತ್ತಿ ಮೋಹಿಪ ಸೂಜಿಯಂತಿರೆ
ತೆತ್ತಿಸಿದುದಾ ಸಚ್ಚಿದಾನಂದಸ್ವರೂಪೆನಿಪ
ನಿತ್ಯನಲ್ಲಮನಂಶವಾದ ನಿ
ಮಿತ್ತವಾ ಕ್ಷಣ ಕಾಣುತಪೆ ಮೈ
ಯೆತ್ತಿತೊಯ್ಯನೆಯನಿಮಿಷಯ್ಯನ ಕೈಯ ಶಿವಲಿಂಗ ೨೭

೨೪. "ಬಡವನು ಅಕ್ಷಯನಿಧಿ, ಶಂಖಪದ್ಮಾದಿ ನವನಿಧಿಗಳನ್ನು ಎಡವಿ ಕಂಡಂತೆ, ಕೈಕಾಲುಗಳು ಹೆಳವನಿಗೆ ಹೊಂದಿದಂತೆ, ಕುರುಡನಿಗೆ ಕಣ್ಣು ಬಂದಂತೆ, ಬಿಡದೆ ಹುಡುಕವ ಬಳ್ಳಿ ಕಾಲಿಗೇ ತೊಡರಿತು ಎಂಬಂತೆ ನನ್ನ ಬಯಕೆಯ ಕೊನೆಯನ್ನು ಕಂಡೆನು" ಎನ್ನುತ್ತ ಅಲ್ಲಮನು ಯೋಗ್ಯರೀತಿಯಲ್ಲಿ ನುಡಿದನು. ೨೫. "ಗುರುವೆ ಕರುಣಿಸು, ಭಕ್ತಿಭಾವದ ಪುತ್ಥಳಿಯೆ ಕರುಣಿಸು, ಲಿಂಗನಿಷ್ಠೆಯ ಶ್ರೇಷ್ಠನೆ ಕರುಣಿಸು, ಕರುಣಿಸು" ಎನ್ನುತ್ತ ಅನಿಮಿಷನನ್ನು ಕೊಂಡಾಡಿ, ಇತರರಿಗೆ ತಾನು ನಿಜವಾಗಿ ಮನುಷ್ಯನು ಎಂಬ ಬಳಕೆಯ ರೀತಿಯನ್ನು ಅಂಗೀಕರಿಸಿ ಪ್ರಣವಸ್ವರೂಪಿಯಾದ ಅಲ್ಲಮನು ತನ್ನ ಲೀಲೆಯಿಂದ ನಟಿಸುತ್ತಿದ್ದನು. ೨೬. ತನಗೆ ಒಪ್ಪುವ ಗುರು ಅನಿಮಿಷನು. ತಾನೇ ಆತನ ವಿನೂತನ ಶಿಷ್ಯ ಎನ್ನುವ ರೀತಿಯಲ್ಲಿ ಸರ್ವಭಕ್ತರಿಗೆ, ತಿಳಿಯದವರ ಆಲೋಚನೆಗೆ (ನಿಲುಕುವಂತೆ) ಆ ತಿಳುವಳಿಕೆಯನ್ನು ತನಗೆ ಸಮ್ಮತವಾದ ರೀತಿಯಲ್ಲಿ ಕಲಿಸುವ ಕ್ರಮವನ್ನು ಅಲ್ಲಮ ತನ್ನ ಲೀಲೆಯಿಂದ ನಟಿಸುತ್ತಿದ್ದನು. ೨೭. ಸಮೀಪ ಬಂದ ಸೂಜಿಗಲ್ಲನ್ನು ಏರಿ ಮೋಹಿಸುವ ಸೂಜಿಯಂತೆ ಆ ಸಚ್ಚಿದಾನಂದ ಸ್ವರೂಪನೆನ್ನಿಸುವ ನಿತ್ಯನಾದ ಅಲ್ಲಮನ ಅಂಶವಾದ

ನೋಟವೇ ಪ್ರಾಣಸ್ವರೂಪಿನ
ಮಾಟವಾದ ನಿಮಿತ್ತ ಲಿಂಗದ
ಕೂಟದೊಡನಾಗನಿಮಿಷಯ್ಯನ ಜೀವಕಳೆ ಬಂದು
ನಾಟಿತೀತನ ದಿವ್ಯದೇಹದ
ಕೋಟರದೊಳೇನೆಂಬೆನೈಕ್ಯದ
ಮಾಟದಲಿ ಮಮಕರಿಸಿ ಮಕರಿಸಿ ಮೆಱೆದನಲ್ಲಮನು ೨೮

ಲಿಂಗದೊಡನನಿಮಿಷನ ನೋಟದ
ಕಂಗಳಾತನ ಜೀವಕಳೆ ಹೆಱೆ
ಹಿಂಗದಲ್ಲಮನಲ್ಲಿ ನೆಲಸಿದೊಡೀತನದ ಕಂಡು
ಅಂಗವಿಸುವೊಡೆಯೆಮ್ಮ ಬಱೆಯಱು
ವಿಂಗೆ ಭೇದಿಸಬಾರದಿವರನು
ಸಂಗದಂಗವನೆನುತಲಾ ಗೊಗ್ಗಯ್ಯ ಬೆಱಗಾದ ೨೯

ಈ ಕೃಪಾಳುವೆ ದೇವನಾಗಲಿ
ಬೇಕದಲ್ಲದೊಡನಿಮಿಷನ ತಾ
ಸ್ವೀಕರಿಸುವನೆ ಕೂಡಬಲ್ಲುದೆ ಲಿಂಗವೀತನಲಿ
ಬೇಕೆನುತಲೆನಗೀ ರಹಸ್ಯದ
ರೇಖೆಯನು ತೋಱೆಸುವನೇ ಭೂ
ಲೋಕದೊಳಗಿದು ಪೊಸತೆನುತೆ ಗೊಗ್ಗಯ್ಯನಿಂತೆಂದ ೩೦

ಎಲೆ ಮಹಾತ್ಮನೆ ನಿನ್ನ ಸೂತ್ರದ
ಹೊಲಬಿದಲ್ಲದೆ ಸುಮ್ಮನೀ ಪರಿ
ಸಿಲುಕಬಲ್ಲುದೆ ನಿನ್ನೊಳೀ ಗುರುಲಿಂಗಕಳೆ ಬಂದು
ನೆಲಸಿತದುಕಾರಣದಲಾನದ
ತಿಳಿದೆನೀಗಳು ನೀನೆ ನಿರುಪಮ
ನಿಳಯನಹೆಯೆನುತಲ್ಲಮನ ಗೊಗ್ಗಯ್ಯನಿಂತೆಂದ ೩೧

ಕಾರಣ (ಅಲ್ಲಮನನ್ನು ಕಾಣುತ್ತಲೇ) ಅನಿಮಿಷಯ್ಯನ ಕೈಯಲ್ಲಿನ ಶಿವಲಿಂಗವು ಆ ಕ್ಷಣವೇ ಮೆಲ್ಲನೆ ಮೇಲೆದ್ದು ಬಂದು (ಅಲ್ಲಮನನ್ನು) ಸೇರಿತು. ೨೮. ನೋಟವೇ ಪ್ರಾಣಸ್ವರೂಪವಾದ ಕ್ರಿಯೆಯಾದ ಕಾರಣ ಲಿಂಗದ ಕೂಟದೊಡನೆ ಆಗ ಅನಿಮಿಷಯ್ಯನ ಜೀವಕಳೆ ಬಂದು ಈತನ ದಿವ್ಯ ದೇಹದ ಪೊಟ್ಟರೆಯಲ್ಲಿ ಸೇರಿತು. ಏನು ಹೇಳಲಿ, ಐಕ್ಯಸ್ಥಿತಿಯಲ್ಲಿ ಅಹಂಕರಿಸಿ ಹೆಚ್ಚಾಗಿ ಅಲ್ಲಮ ಶೋಭಿಸಿದನು. ೨೯. ಲಿಂಗದೊಡನೆ ಅನಿಮಿಷನ ನೋಟದ ಕಂಗಳು, ಆತನ ಜೀವಕಳೆ ಅಳಿಸಿ ಹೋಗದೆ ಅಲ್ಲಮನಲ್ಲಿ ಬಂದು ನೆಲೆಸಲು ಅದನ್ನು ಕಂಡ ಗೊಗ್ಗಯ್ಯ (ಹೀಗೆ) ಕೂಡುವುದಾದರೆ ನಮ್ಮ ವ್ಯರ್ಥವಾದ ಜ್ಞಾನಕ್ಕೆ ಇವರ ಸೇರಿಕೆಯ ರೀತಿಯು ಭೇದಿಸಲಾಗದುದು ಎನ್ನುತ್ತಾ ಆಶ್ಚರ್ಯಗೊಂಡನು. ೩೦. "ಈ ಕೃಪಾಳುವು ದೇವನಾಗಲೇಬೇಕು. ಹಾಗಿಲ್ಲದಿದ್ದರೆ ಅನಿಮಿಷನನ್ನು ಸ್ವೀಕರಿಸುವನೇ? ಲಿಂಗವೀತನಲ್ಲಿ ಕೂಡಬಲ್ಲುದೆ? ಬೇಕೆಂದೇ ನನಗೆ ಈ ರಹಸ್ಯದ ರೇಖೆಯನ್ನು ತೋರಿಸುವನೆ? ಭೂಲೋಕದಲ್ಲಿ ಇದು ಹೊಸತು" ಎಂದು (ಭಾವಿಸಿ) ಗೊಗ್ಗಯ್ಯ ಅಲ್ಲಮನಿಗೆ ಹೀಗೆಂದನು. ೩೧. "ಎಲೆ ಮಹಾತ್ಮನೆ ನಿನ್ನ ಸೂತ್ರದ ಮಾರ್ಗವಿದಲ್ಲದೆ ಸುಮ್ಮನೆ ಈ ರೀತಿಯಲ್ಲಿ ನಿನ್ನನ್ನು ಈ ಗುರು ಹಾಗೂ ಲಿಂಗಕಳೆ ಬಂದು ಸೇರಬಲ್ಲುದೆ? ಆ ಕಾರಣದಿಂದಾಗಿ ಇವು

ಸಾರೆಯಲಿ ಶಿವಲಿಂಗಭಕ್ತಿಯ
ದಾರಿಯನು ನಾನನಿಮಿಷನ ಸಾ
ಕಾರದಲಿ ಕಂಡಱಿದೆನೀಗಳು ನಿನ್ನ ಕತದಿಂದೆ
ಸಾರಜಂಗಮಲಿಂಗವೆಂಬಾ
ಕಾರದಲಿ ನೀ ಸುಳಿಯುತೀ ಪರಿ
ಧಾರುಣಿಯ ಭಕ್ತರನು ಸಲಹೆನುತಿರ್ದನಲ್ಲಮಗೆ ೩೨

ಎನಲು ಶಿವಭಕ್ತಿಯ ರಹಸ್ಯದ
ಘನವು ಗೊಗ್ಗಯ್ಯಂಗೆ ವೇದಿಸಿ
ದನುವ ತಾನಱಿದಾಡೊಡಿದಕೇನೀತನೆಂದಂತೆ
ಅನುಕರಿಸಿ ಕಾಣಿಸುತೆ ಜಗತೀ
ಜನವ ಸುಖಿಗಳ ಮಾಡುವೆನು ನಾ
ನೆನುತಲಿರ್ದನು ಗುರುಗುಹೇಶ್ವರಲಿಂಗ ಕರುಣದಲಿ ೩೩

ಜಗದ ಭಕ್ತರದಾವ ಮುಖದಲಿ
ಹೊಗುತಲಿರ್ದರು ತಾನು ಬಳಿಕಾ
ಬಗೆಯನಂಗೀಕರಿಸಿಕೊಂಡನು ತನ್ನ ಲೀಲೆಯಲಿ
ಬಗಿದ ಬೆಱಗಿನ ಕೈಯ ಲಿಂಗದ
ತೆಗೆದ ಚಿತ್ತದ ನಟ್ಟ ನೋಟದ
ಮೊಗದ ಭಾವದ ಭಕ್ತಿಯಂಗವ ತೊಟ್ಟನಲ್ಲಮನು ೩೪

ನಿನ್ನಲ್ಲಿ ನೆಲಸಿದುವು. ನಾನದನ್ನು ಈಗ ತಿಳಿದೆನು. ನೀನು ಉಪಮಿಸಲಾಗದ ಆವಾಸ ಸ್ಥಾನವಾಗಿರುವೆ" ಎನ್ನುತ್ತಾ ಅಲ್ಲಮನನ್ನು ಕುರಿತು ಗೊಗ್ಗಯ್ಯ ಹೀಗೆಂದನು. ೩೨. "ನಾನು ಹತ್ತಿರದಲ್ಲಿಯೆ ಶಿವಲಿಂಗಭಕ್ತಿಯ ಮಾರ್ಗವನ್ನ ನಿನ್ನ (ಆಗಮನ) ಕಾರಣದಿಂದಾಗಿ, ಅನಿಮಿಷನ ಪ್ರತ್ಯಕ್ಷದಿಂದ ಕಂಡು ತಿಳಿದೆನು. ಮುಖ್ಯವಾಗಿ ಜಂಗಮಲಿಂಗವೆಂಬ ಆಕಾರದಲ್ಲಿ ನೀನು ಸುಳಿಯುತ್ತಾ ಈ ರೀತಿಯಲ್ಲಿ ಭೂಮಿಯಲ್ಲಿನ ಭಕ್ತರನ್ನು ರಕ್ಷಿಸು" ಎಂದು ಗೊಗ್ಗಯ್ಯನು ಅಲ್ಲಮನನ್ನು ಪ್ರಾರ್ಥಿಸಿದನು. ೩೩. ಹೀಗೆ ಗೊಗ್ಗಯ್ಯನು ಹೇಳಲು, ಅಲ್ಲಮನು ಶಿವಭಕ್ತಿಯ ರಹಸ್ಯದ ಘನವು ಗೊಗ್ಗಯ್ಯನಿಗೆ ತಿಳಿದ ಕ್ರಮವನ್ನು ಅರಿತು, ಆದರೇನು, ಈತನೆಂದಂತೆ ಅನುಕರಣೆ ಮಾಡಿ ದರ್ಶನವೀಯುತ್ತಾ ಜಗತ್ತಿನ ಜನಗಳನ್ನು ಗುರು ಗುಹೇಶ್ವರಲಿಂಗನ ಕರುಣೆಯಿಂದ ನಾನು ಸುಖಿಗಳನ್ನಾಗಿ ಮಾಡುವೆನು ಎಂದು [ಮನಸ್ಸಿನಲ್ಲಿ] ಆಲೋಚಿಸಿದನು. ೩೪. ಜಗತ್ತಿನ ಭಕ್ತರು ಯಾವ ಪ್ರಕಾರದಲ್ಲಿ ಶರಣು ಹೋಗುತ್ತಿದ್ದರೊ ಹಾಗೆ ಅವರ ಭಕ್ತಿಯ ಬಗೆಯನ್ನು ತನ್ನ ಲೀಲೆಯಲ್ಲಿ ಅಂಗೀಕರಿಸಿ ಕೊಂಡನು. ಆಶ್ಚರ್ಯದಿಂದ ಕೂಡಿದ ಕೈಯ ಲಿಂಗದ, ನಟ್ಟ ಮನಸ್ಸಿನ, [ಲಿಂಗದಲ್ಲಿ] ನಟ್ಟ ನೋಟದ ಮುಖಭಾವಗಳಿಂದ ಭಕ್ತಿಯ ರೀತಿಯನ್ನು ಅಲ್ಲಮ ಧರಿಸಿದನು.

ಒಡನೆ ಕಾಣುತಲಂತದನು ನೀ
ನೊಡೆಯನಾಗಿಹುದೀ ಪರಿಯಲೀ
ಪೊಡವಿಯಲಿ ಸದ್ಭಕ್ತರೆಲ್ಲರಿಗಱಿವನೀವುತಲಿ
ನುಡಿದು ತೋಱಲದೇಕೆ ನೀನೇ
ನಡೆದು ತೋಱಿಸಿ ಲಿಂಗನಿಷ್ಠೆಯ
ಹಿಡಿಹುಗೊಳಿಸುವುದೆಂದನಾ ಗೊಗ್ಗಯ್ಯನಲ್ಲಮಗೆ ೩೫

ದೀನಮನದವನಂತೆ ಕಂಡ ನಿ
ಧಾನವನು ತಾನೊಬ್ಬನುಂಬನೆ
ದಾನಿ ಲೇಸೈ ನಿನ್ನ ಪರಿ ನೀ ಕಂಡ ಶಿವಪಥವ
ಮಾನವರಿಗಱುಹೆಂಬ ಮಹದಭಿ
ಮಾನಿ ನೀನೇ ಜಗದ ಗುರುವೆಂ
ದಾ ನಿರೂಪಮನಲ್ಲಮನು ಹೊಗಳಿದನು ಗೊಗ್ಗಯನ ೩೬

ಬಳಿಕಲಾ ಗೊಗ್ಗಯ್ಯ ನೆಱೆ ನಿ
ಶ್ಚಳದ ತೋಟದ ಲಿಂಗಭಾವದ
ಬಳಕೆಯನೆ ಬಲಿದಿರುತಲಿರ್ದನು ನಿಜನಿವಾಸದಲಿ
ಇಳೆಯ ಭಕ್ತರ ಪಾವನವ ಮಾ
ಡಲಿಕೆ ತಾನೇ ಕುಱುಹುವಿಡಿದ
ಗ್ಗಳೆಯತನದಲಿ ನಡೆದನಲ್ಲಮ ಲಿಂಗಲೀಲೆಯಲಿ ೩೭

**ಅಂತು ಸಂಧಿ ೧೧ಕ್ಕಂ ಪದ ೫೧೦ಕ್ಕಂ ಮಂಗಳಂ**

೩೫ ಒಡನೆ ಅದನ್ನು ಅಲ್ಲಮನಲ್ಲಿ ಕಂಡ ಗೊಗ್ಗಯ್ಯನು "ನೀನು ಈ ರೀತಿಯಲ್ಲಿ ಭೂಮಿಯಲ್ಲಿರುವ ಸದ್ಭಕ್ತರಿಗೆಲ್ಲಾ ತಿಳಿವನ್ನು ನೀಡುತ್ತ ಒಡೆಯನಾಗಿರುವುದು. ನುಡಿದು ತೋರುವುದೇಕೆ? ನೀನೇ ಲಿಂಗ ನಿಷ್ಠೆಯನ್ನು ಆಚರಣೆಯಲ್ಲಿ ತೋರಿಸಿ [ಅದನ್ನು] ಧರಿಸಲು ಅನುಕೂಲಮಾಡಿಕೊಡುವುದು" ಎಂದನು. ೩೬. ದಾನಿಯಾದವನು ನವನಿಧಿಗಳನ್ನು ಕಂಡು ದೀನ ಮನದವನಂತೆ ತಾನೊಬ್ಬನೆ ಉಣ್ಣುವನೆ? ನಿನ್ನ ರೀತಿ ಒಳ್ಳೆಯದು. ನೀನು ಕಂಡ ಶಿವಪಥವನ್ನು ಮಾನವರಿಗೆ ತಿಳಿಸು. ಮಹದಭಿಮಾನಿಯಾದ ನೀನೇ ಜಗದ ಗುರು" ಎಂದು ಆ ಉಪಮಾತೀತನಾದ ಅಲ್ಲಮನನ್ನು ಗೊಗ್ಗಯ್ಯನು ಹೊಗಳಿದನು. ೩೭. ಲಿಂಗಲೀಲೆಯಲ್ಲಿ ಭೂಮಿಯಲ್ಲಿನ ಶಿವಭಕ್ತರನ್ನು ಪಾವನರನ್ನಾಗಿ ಮಾಡಲು ತಾನೇ ಪ್ರಣವಸ್ವರೂಪಿಯ ಆಕಾರವನ್ನು ಧರಿಸಿ ಹಿರಿಯತನದಲ್ಲಿ ಅಲ್ಲಮನು ನಡೆದನು. ಬಳಿಕ ಆ ಗೊಗ್ಗಯ್ಯನು ವಿಶೇಷವಾಗಿ ಚಾಂಚಲ್ಯರಹಿತವಾದ ತೋಟದಲ್ಲಿನ ಅನಿಮಿಷಯ್ಯನ ಭಾವದ ಬಳಕೆಯನ್ನೇ ವೃದ್ಧಿಗೊಳಿಸಿ ತನ್ನ ಮನೆಯಲ್ಲಿ ಇರುತ್ತಿದ್ದನು.

# ೧೨. ಮುಕ್ತಾಯಿಯಕ್ಕ

## ಗತಿ ೧೨

ಸೂಚನೆ :

ಭಕ್ತಿಯನು ಮುಕ್ತಾಯಿಗಱುಹಿಸಿ
ಮುಕ್ತನಾದಜಗಣ್ಣನಿರವನು
ವ್ಯಕ್ತದಲಿ ವಿರಚಿಸಿದನೆಮ್ಮಯ ಗುರು ಗುಹೇಶ್ವರನು

ನೆಟ್ಟನಱಿವೊಡೆ ಗುಪ್ತಭಕ್ತಿಯ
ಬಟ್ಟೆಯನು ಬಯಸುವರು ಭಾವಿಸಿ
ಮುಟ್ಟಿ ಮೋಹಿಸಿ ಬಾಹಿರಂಗದ ಭ್ರಮೆಯ ಭರಗೆಡಿಸಿ
ಕೆಟ್ಟ ಕಾಯದ ಕಳವಳಂಗಳ
ಕಟ್ಟಿ ಕಳೆದಾ ಪ್ರಳಯಕಾಲನ
ಮೆಟ್ಟಿ ನಡೆವರು ತಿಳಿವುದೀ ಪ್ರಭುಲಿಂಗಲೀಲೆಯನು ೧

ಅಲ್ಲಮಪ್ರಭುರಾಯನಾನತ
ರೆಲ್ಲರನು ಸಂಸಾರ ನಿರಸದ
ಕಲ್ಲಕಾರುವ ಕೋಟಲೆಯ ಮಾಣಿಸಿ ಶರೀರದಲಿ
ಸಲ್ಲಲಿತ ಲಿಂಗಾನುಭಾವದ
ಬೆಲ್ಲವನು ಮೆಲಕಲಿಸಿ ನಿಜಸುಖ
ದಲ್ಲಿ ನಿಲಿಸುವೆನೆನುತೆ ಬರುತಿರ್ದನು ವಿನೋದದಲಿ ೨

ಪೊಡವಿಯಲಿ ನೆಱೆ ಗುಪ್ತಭಕ್ತಿಯ
ಲಡರಿದೈಕ್ಯಸ್ಥಳ ಸಮಾಧಿಯ
ನೊಡರಿಸಿದನಜಗಣ್ಣನೆಂಬ ಮಹಾತ್ಮನಾತಂಗೆ
ಒಡನೆ ಹುಟ್ಟಿದಳೊಬ್ಬಳಱಿಯದೆ
ಕಡುಖತಿಯಿಲಿರುತಿರಲಿಕಲ್ಲಮ
ನಡೆದು ಬಂದನು ಮಾಣಿಸಲು ಮುಕ್ತಾಯ ಮನದಳಲ ೩

ಸೂ : ಮುಕ್ತಾಯಿಯಕ್ಕನಿಗೆ ಭಕ್ತಿಯ ಅರಿವು ಮಾಡಿಕೊಟ್ಟು ಮುಕ್ತನಾದ ಅಜಗಣ್ಣನ ಸ್ಥಿತಿಯನ್ನು ಸ್ಪಷ್ಟವಾಗಿ ನಮ್ಮ ಗುರುಗುಹೇಶ್ವರನು ಕಾಣಿಸಿದನು. ೧. ಗುಪ್ತಭಕ್ತಿಯ ಮಾರ್ಗವನ್ನು ತಿಳಿಯಬಯಸುವವರು ನೇರವಾಗಿ ತಿಳಿಯಬಯಸುವುದಾದರೆ ಗುರುಗುಹೇಶ್ವರನನ್ನು ಅರಿತು, ಚೆನ್ನಾಗಿ ಸೇರಿ, ಬಹಿರಂಗದ ಮೋಹವನ್ನು ಬೇಗನೆ ನಾಶಮಾಡಿ, ದೇಹದ ಕೆಟ್ಟ ಚಿಂತೆಗಳನ್ನು ದೂರಮಾಡಿ, ಪ್ರಳಯಕಾಲನನ್ನು ಮೆಟ್ಟಿ ನಡೆಯುವುದನ್ನು ಈ ಪ್ರಭುಲಿಂಗಲೀಲೆಯನ್ನು ಓದಿ ತಿಳಿಯುವುದು. ೨. ಅಲ್ಲಮ ಪ್ರಭುರಾಯನು ಅಡ್ಡಬಿದ್ದವರೆಲ್ಲರನ್ನು ಸಾರಹೀನವಾದ ಸಂಸಾರದಲ್ಲಿ ಎಡವಿ ಬೀಳಿಸುವ (ಭಯಪಡಿಸುವ) ಕಷ್ಟಗಳನ್ನು ನಿವಾರಿಸಿ, ದೇಹದಲ್ಲಿ ಮನೋಹರವಾದ ಲಿಂಗಾನುಭಾವದ ಬೆಲ್ಲವನ್ನು ತಿನ್ನಲು ಕಲಿಸಿ, ಪರಮಸುಖದಲ್ಲಿ ಜನರನ್ನು ನಿಲ್ಲಿಸುವೆನೆಂದು ವಿನೋದದಿಂದ ಬರುತ್ತಿದ್ದನು. ೩. ಭೂಮಿಯಲ್ಲಿ ಉತ್ತಮವಾದ ಗುಪ್ತಭಕ್ತಿಯಿಂದ ಐಕ್ಯಸ್ಥಳವನ್ನು ಮುಟ್ಟಿ ಮಹಾತ್ಮನಾದ ಅಜಗಣ್ಣನೆಂಬವನು ಸಮಾಧಿಸ್ಥನಾದನು. ಅವನ ಒಡಹುಟ್ಟಿದ

ಬರಲು ಮಿಗೆ ಕಾಣುತಲಿ ಸಲೆ ಸ
ತ್ಕರಿಸಿ ವಂದಿಸಿ ತನ್ನ ಚಿಂತೆಯ
ಪರಿಹರಿಸುವಂತಪ್ಪನೊಬ್ಬ ಮಹಾತ್ಮ ನೀನೆನಗೆ
ದೊರಕಿದೆಯಲಾ ಎನ್ನ ಪುಣ್ಯಕೆ
ಸರಿಯದಾರೆನುತಲ್ಲಮಪ್ರಭು
ಬರಲು ಮುಕ್ತಾಯಿಗಳು ಪರಿಣಮಿಸಿದರು ಭಕ್ತಿಯಲಿ ೪

ತಾಯೆ ಭಕ್ತರಿಗುಂಟೆ ಚಿಂತೆಗ
ಳಾಯಸಂಗಳು ಲೋಕಲೌಕಿಕ
ರಾಯತವ ನೀ ನೆಗಳಿ ಬಚಿದೆಗೆ ಹಲವ ಹಂಬಲಿಸಿ
ಬಾಯ ಬಿಡಲಹುದೇ ವೃಥಾ ನಿ
ಷ್ಕಾಯದಜಗಣ್ಣಂಗೆ ಮರುಳೇ
ಮಾಯೆ ಮೋಹವಿದೇತಕೌ ಮುಕ್ತಾಯಿ ಕೇಳೆಂದ ೫

ಏನು ಮಾಡುವೆನಯ್ಯ ಎನ್ನ ನಿ
ಧಾನವಪ್ಪಜಗಣ್ಣ ತಂದೆಯ
ನಾನದೆಂತಗಲುವೆನು ನನಗಿದನನಿತ ಸೂಚಿಸದೆ
ತಾನು ಹೋದೊಡೆ ಬಳಿಕಲೆನಗಿ
ನ್ನೇನು ಗತಿಯೆಂದೆನುತೆ ಕಡುದು
ಮ್ಮಾನವೆಲ್ಲವ ನುಡಿದಳಾ ಮುಕ್ತಾಯಿಯಲ್ಲಮಗೆ ೬

ಮುಕ್ತಾಯಿಯು (ತನ್ನ ಅಣ್ಣ ಗುಪ್ತಭಕ್ತಿಯಿಂದ ಶಿವೈಕ್ಯನಾದನೆಂಬುದನ್ನು) ತಿಳಿಯದೆ ಅತಿಯಾದ ಸಿಟ್ಟಿನಿಂದ ಇರುತ್ತಿರಲು ಅವಳ ಮನಸ್ಸಿನ ದುಃಖವನ್ನು ನಿವಾರಿಸುವುದಕ್ಕಾಗಿ ಅಲ್ಲಮನು ನಡೆದುಬಂದನು. ೪. ಅಲ್ಲಮನು ಬರಲು ಅವನನ್ನು ಕಂಡ ಮುಕ್ತಾಯಿಯು ಸತ್ಕರಿಸಿ, ವಂದಿಸಿ "ನನ್ನ ಚಿಂತೆಯನ್ನು ಪರಿಹರಿಸುವಂತಹ ಒಬ್ಬ ಮಹಾತ್ಮನಾದ ನೀನು ನನಗೆ ಸಿಕ್ಕಿದೆ. ನನ್ನ ಪುಣ್ಯಕ್ಕೆ ಸಮಾನವಾವುದು?" ಎನ್ನುತ್ತ ಅವನಿಗೆ ಭಕ್ತಿಯಿಂದ ನಮಸ್ಕಾರ ಮಾಡಿದಳು. ೫. ಆಗ ಅಲ್ಲಮನು ಮುಕ್ತಾಯಿಯನ್ನು ಕುರಿತು "ತಾಯೆ, ಭಕ್ತರಿಗುಂಟೆ ಚಿಂತೆ ಆಯಾಸಗಳು? ಲೋಕದ ಲೌಕಿಕರ ಕ್ರಮದಲ್ಲಿ ನೀನು ವರ್ತಿಸಿ, ವ್ಯರ್ಥವಾಗಿ ಹಲವು ಬಗೆಯಲ್ಲಿ ಹಂಬಲಿಸಿ, ಸುಮ್ಮನೆ ಗೋಳಿಡಬಹುದೆ? ಹುಚ್ಚೀ, ಕಾಯವೇ ಇಲ್ಲದ ಅಜಗಣ್ಣನ ಬಗೆಗೆ ಮಾಯಾಮೋಹವಿದೇತಕ್ಕೆ?" ಎಂದನು. ೬. "ಏನ ಮಾಡುವೆನಯ್ಯ, ನನ್ನ ಸಂಪತ್ತಾದ ಅಜಗಣ್ಣನನ್ನು ನಾನು ಹೇಗೆ ಅಗಲಿ ಇರಲಿ? ನನಗೆ ಇದನ್ನು ಸ್ವಲ್ಪವೂ ತಿಳಿಸದೆ ಅಜಗಣ್ಣ ಹೋಗಲು ಆ ಬಳಿಕ ನನಗಿನ್ನೇನು ಗತಿ?" ಎಂದೆನ್ನುತ್ತಾ ತನ್ನ ದುಃಖವನ್ನೆಲ್ಲಾ ಮುಕ್ತಾಯಿ ಅಲ್ಲಮನ ಮುಂದೆ ತೋಡಿಕೊಂಡಳು.

ಮರುಳಲಾ ನೀನಕ್ಕ ಮುನ್ನೇ
ನಿರದಲಿದ್ದನೆ ಬಳಿಕಲೀಗಲಿ
ಶರಿರವನು ಸಡಿಲಿಸಿದನೇ ಅಜಗಣ್ಣನಾರೆಂದು
ಪರಿಕಿಸದೆ ಹಂಬಲಿಸಲೇತಕೆ
ಗುರು ಗುಹೇಶ್ವರಲಿಂಗಸಂಗದ
ಶರಣನಾತನು ಮಱುಗದಿರು ಮುಕ್ತಾಯಿ ಕೇಳೆಂದ ೭

ಬೆಡಗನಾಡದಿರಯ್ಯ ಕೇಳೆ
ನ್ನೊಡನೆ ಹುಟ್ಟಿದನೀಸು ದಿನವೊಂ
ದೊಡಲುವಿಡಿದಜಗಣ್ಣನಿರ್ದನು ಗುಪ್ತಭಕ್ತಿಯಲಿ
ನಡೆದು ತೋಱಿಸುತೆಲ್ಲರಱಿಯಲು
ಕಡೆಯಲೀ ಪರಿ ಕಾಣಬಾರದ
ತೊಡಕನೊಡ್ಡಿದನೆಂದಳಾ ಮುಕ್ತಾಯಿಯಲ್ಲಮಗೆ ೮

ಕಾರಣವ ಕಾಣಿಸದ ಮನದ ವಿ
ಕಾರಿಗಳಿಗಾ ಶರಣರೊಂದು ಶ
ರೀರವನು ತೋಱಿದೊಡೆ ನಿನ್ನವರೆಂದು ನಂಬದಿರು
ಹಾರವಿಸದಿರು ತಿಳಿದು ನೋಡಿ ವಿ
ಚಾರಿಸುವೊಡಜಗಣ್ಣನೆಂಬನ
ಪಾರಮಹಿಮನು ನಿತ್ಯನೌ ಮುಕ್ತಾಯಿ ಕೇಳೆಂದ ೯

ಆತ ಮಹಿಮನು ನಿತ್ಯನಹನೀ
ಮಾತು ಹುಸಿಯದು ತಪ್ಪದಾದೊಡೆ
ಭೂತಳದೊಳಿರುತಿರದೆ ಗುಪ್ತಶಿವಾನುಭಾವನೆಯ
ರೀತಿಯಿಂದಜಗಣ್ಣನುಪಮಾ
ತೀತನಾದನು ಬಳಿಕಲೆಮ್ಮರ
ವೇತಕೆಂದೆನುತಿರ್ದಳಾ ಮುಕ್ತಾಯಿಯಲ್ಲಮಗೆ ೧೦

೭. "ಅಕ್ಕಾ, ನೀನು ಹುಚ್ಚಿ. ಹಿಂದೆ ಇರದೇ ಇದ್ದನೆ? ಈಗ ಶರೀರವನ್ನು ಬಿಟ್ಟನೆ? ಅಜಗಣ್ಣ ಯಾರೆಂದು ವಿಚಾರಮಾಡದೆ ಹಂಬಲಿಸುವುದೇಕೆ? ಆತನು ಗುರುಗುಹೇಶ್ವರ ಲಿಂಗಸಂಗದ ಶರಣನು, ಮುಕ್ತಾಯಿ ದುಃಖಿಸದೆ ಕೇಳು" ಎಂದನು. ೮. "ತೋರಿಕೆಯ ಮಾತನಾಡದಿರಯ್ಯ. ಕೇಳು, ಅಜಗಣ್ಣ ನನ್ನೊಡ ಹುಟ್ಟಿದವನು. ಇಷ್ಟು ದಿವಸ ಗುಪ್ತಭಕ್ತಿಯಲ್ಲಿ ಜೀವಹಿಡಿದು ಅಜಗಣ್ಣನಿದ್ದನು. ಗುಪ್ತಭಕ್ತಿಯನ್ನು ಆಚರಿಸುತ್ತಿರಲು ಅದನ್ನು ಎಲ್ಲರೂ ತಿಳಿಯಲು ಕೊನೆಗೆ ಈ ರೀತಿ ಅದೃಶ್ಯನಾಗಿ ತೊಡಕನ್ನುಂಟುಮಾಡಿದನು" ಎಂದು ಮುಕ್ತಾಯಿ ಅಲ್ಲಮನಿಗೆ ಹೇಳಿದಳು. ೯. "ಮುಕ್ತಾಯಿ ಕೇಳು, ಮನದಲ್ಲಿ ವಿಕಾರ ಗಳಿಗೆಡೆಗೊಟ್ಟಿರುವವರಿಗೆ ಜನನದ ಕಾರಣ ಕಾಣಿಸದು. ಶರಣರು ಅವತರಿಸಿ ಬಂದರೆ ಅವರನ್ನು ನಿನ್ನವರೆಂದು ಭಾವಿಸದಿರು; ನಿನ್ನವರೆಂದು ಆಶಿಸದಿರು. ಶರಣರ ಅವತಾರವನ್ನು ತಿಳಿದು, ವಿಚಾರ ಮಾಡುವುದಾದರೆ ಅಜಗಣ್ಣನೆಂಬುವವನು ನಿತ್ಯನು" ಎಂದು ಅಲ್ಲಮನು ನುಡಿದನು. ೧೦. "ಆತ ಮಹಿಮಾಪುರುಷನು, ಹುಟ್ಟು ಸಾವುಗಳಿಲ್ಲದವನು. ಈ ಮಾತು ಸುಳ್ಳಲ್ಲ; ತಪ್ಪುವುದಿಲ್ಲ. ಆದಾಗ್ಯೂ ಭೂತಳದಲ್ಲಿ ಗುಪ್ತಶಿವಾನುಭಾವದಲ್ಲಿ ಇರುತ್ತಾ

ಲೋಕಲೌಕಿಕರೊಡನೆ ಬಳಕೆಯ
ದೇಕೆ ಪರಮಾರ್ಥದಲಿ ತಾನೇ
ಕೈಕನಾದಹೆನೆಂದೆನುತಲಜಗಣ್ಣ ನಿರ್ವಯಲ
ಸ್ವೀಕರಿಸಿದೊಡೆ ನೀನು ನಿನ್ನ ವಿ
ವೇಕದಲಿಯೊಂದೊಂದ ನುಡಿವುದು
ಸಾಕೆನುತೆ ಮುಕ್ತಾಯ ಸಂತೈಸಿದನು ಪ್ರಭುರಾಯ ೧೧

ದೇವ ನಿಮ್ಮವರುಗಳ ಪರಿಯನು
ನೀವೆ ಬಲ್ಲಿರಿ ಹಾವಿನಡಿಯನು
ಹಾವುಗಳು ನೆಱೆ ಬಲ್ಲುವಲ್ಲದೆ ನಮಗೆ ಗೋಚರವೆ
ಭಾವಿಸುವೊಡೆಮಗಿನ್ನು ಗತಿಮತಿ
ಯಾವುದೆಂದೆನುತಲ್ಲಮಪ್ರಭು
ದೇವರಿಗೆ ಮುಕ್ತಾಯಿ ಬಿನ್ನೈಸಿದಳು ಭಕ್ತಿಯಲಿ ೧೨

ಅಕ್ಕ ಕೇಳೌ ನಿನ್ನ ಹೆಸರಿಗೆ
ತಕ್ಕ ಬಯಕೆಯ ನೀನು ಬಯಸಿದೆ
ಮಿಕ್ಕ ಭವಭಾರಿಗಳು ಬಲ್ಲರೆ ಲಿಂಗಮಾರ್ಗವನು
ಹೊಕ್ಕು ಹೋರಟೆಯೆಲ್ಲವನು ಹೊ
ಯ್ದಿಕ್ಕಿ ಸುಖಿಸುವುದೆಂತು ನಿಜಪದ
ದಿಕ್ಕೆ ನಿನಗಹುದೆಂದೆನುತೆ ಮುಕ್ತಾಯಿಗಿಂತೆಂದ ೧೩

ಅಜಗಣ್ಣನು ಹೋಲಿಸಲು ಬಾರದಾದನು. ಅವನ ಮರಣಾನಂತರ ನಾವು ಜೀವಿಸಿರಲೇಕೆ?" ಎಂದು ಮುಕ್ತಾಯಿ ಅಲ್ಲಮನಿಗೆ ಹೇಳುತ್ತಿದ್ದಳು. ೧೧. "ಲೋಕದ ಲೌಕಿಕರೊಡನೆ ವ್ಯವಹಾರವೇಕೆ? ತಾನು ಪರಮಾರ್ಥದಲ್ಲಿ ಏಕೈಕನಾಗುವೆನೆಂದು ಅಜಗಣ್ಣ ಶೂನ್ಯವನ್ನು ಸ್ವೀಕರಿಸಲು (ಬಯಲಾಗಲು) ನೀನು ನಿನ್ನ ತಿಳುವಳಿಕೆಯಂತೆ ಒಂದೊಂದು ಬಗೆಯಾಗಿ ನುಡಿಯುವುದು ಸಾಕು" ಎನ್ನುತ್ತ ಪ್ರಭುರಾಯ ಮುಕ್ತಾಯಿಯನ್ನು ಸಮಾಧಾನ ಮಾಡಿದನು. ೧೨. "ದೇವಾ, ನಿಮ್ಮವರುಗಳ ರೀತಿಯನ್ನು ನೀವೇ ಬಲ್ಲಿರಿ. ಹಾವಿನ ಅಡಿಯನ್ನು ಹಾವುಗಳು ಚೆನ್ನಾಗಿ ಬಲ್ಲುವಲ್ಲದೆ ಅದು ನಮಗೆ ಗೋಚರವೆ? ಭಾವಿಸಿದರೆ ಇನ್ನು ನಮಗೆ ಗತಿ ಮತಿ ಯಾವುದು?" ಎಂದು ಅಲ್ಲಮ ಪ್ರಭುದೇವರನ್ನು ಭಕ್ತಿಯಿಂದ ಮುಕ್ತಾಯಿಯು ಪ್ರಾರ್ಥಿಸಿದಳು. ೧೩. "ಅಕ್ಕ ಕೇಳು, ನಿನ್ನ ಹೆಸರಿಗೆ ತಕ್ಕ ಬಯಕೆಯನ್ನು ನೀನು ಬಯಸಿದೆ. ಲಿಂಗಮಾರ್ಗವನ್ನು ಉಳಿದ ಸಂಸಾರಿಗಳು ಬಲ್ಲರೆ? (ಸಂಸಾರದಲ್ಲಿ) ಸಿಕ್ಕಿ ಹೋರಾಟ ನಡೆಯಿಸಿ ವಿಷಯಗಳನ್ನೆಲ್ಲಾ ಸದೆಬಡಿಯುವುದು, ಹಾಗೆ ಮಾಡಿದಲ್ಲಿ ಶಾಶ್ವತವಾದ ಮನೆ ನಿನಗೆ ಪ್ರಾಪ್ತವಾಗುವುದು" ಎಂದು ಹೇಳಿ ಮತ್ತೆ ಮುಕ್ತಾಯಿಗೆ ಹೀಗೆಂದನು.

ಹಱುಗೋಲನ ಜೋಗ್ಯೈಸಿಕೊಳುತಲಿ
ತೊಱೆಯ ದಾಂಟುವರಂತೆ ಲಿಂಗವ
ನಱಿವವರು ಕರ್ಮೇಂದ್ರಿಯಂಗಳನೊಯ್ಯನೋಸರಿಸಿ
ಹೊಱಗೆ ಮಾಡುವ ಮಾಟವೆಲ್ಲವ
ತೊಱೆವುದಂತರ್ಮಾರ್ಗವೊಂದನೆ
ಹೊಱುವುದಿದು ಶಿವಭಕ್ತಿಯೌ ಮುಕ್ತಾಯಿ ಕೇಳೆಂದ ೧೪

ನಿಯತವಿದು ದೇಹಿಂಗಳು ಕರ್ಮೇಂ
ದ್ರಿಯವ ಜಱಿದೊಡೆ ಜೀವವಾವಾ
ಶ್ರಯದಲಿಹುದು ಮನಸ್ಸು ಮಚ್ಚುವುದೆಂತು ಪಟುವಾಗಿ
ಬಯಲು ತಾನಹ ಪರಿಯದಾವುದು
ನಿಯಮಿಸ್ಯೆ ನೀನೆನಲು ನಿಜ ನಿ
ರ್ಣಯವನಾ ಮುಕ್ತಾಯಿಗಲ್ಲಮಲಿಂಗನಿಂತೆಂದ ೧೫

ಕೇಳಿದೌ ಶಿಶುಗಳಿಗೆ ತಾಯ್ಮೊಲೆ
ಪಾಲೆ ಜೀವನವಾದೊಡೆಯು ನೆಱೆ
ಪಾಲನೆಱೆವುತೆ ಮೆಲ್ಲಮೆಲ್ಲನೆಯಶನವನು ಸವಿಸಿ
ಬಾಲಕರ ಪಟುಮಾಡಬಲ್ಲ ಸ
ಕೀಲಕರವೋಲ್ ಹೊಱಗೆ ಮಱೆದು ನಿ
ರಾಳದಲಿ ನಿಲಲಱೆವುದೌ ಮುಕ್ತಾಯಿ ಕೇಳೆಂದ ೧೬

೧೪. "ಮುಕ್ತಾಯಿ ಕೇಳು, ಹೊಳೆಯನ್ನ ದಾಟುವವರು ಹರಿಗೋಲನ್ನು ಸಿದ್ಧಪಡಿಸಿಕೊಳ್ಳುವಂತೆ ಲಿಂಗನನ್ನು ತಿಳಿಯಬಯಸುವವರು ಕರ್ಮೇಂದ್ರಿಯಗಳನ್ನು ಮೆಲ್ಲನೆ ಪಕ್ಕಕ್ಕೆ ಸರಿಸಿ, ಹೊರಗಿನ ಕ್ರಿಯೆಗಳನ್ನೆಲ್ಲಾ ತ್ಯಜಿಸಿ ಒಳಮಾರ್ಗವೊಂದನ್ನೇ ಅನುಸರಿಸಬೇಕು ಇದೇ ಶಿವಭಕ್ತಿಯಾಗಿರುವುದು" ಎಂದು ಅಲ್ಲಮ ನುಡಿದನು. ೧೫. "ದೇಹದ ಮೇಲೆ ಸ್ವಾಧೀನವಿರುವ ಮನುಷ್ಯರು ಕರ್ಮೇಂದ್ರಿಗಳನ್ನು ನಿಂದಿಸಿದ್ದೇ ಆದರೆ ಜೀವವು ನಿಶ್ಚಯವಾಗಿ ಯಾವುದರ ಆಶ್ರಯದಲ್ಲಿರುವುದು? ಮನಸ್ಸು ಸಮರ್ಥವಾಗಿ (ನಿನ್ನ ಹೇಳಿಕೆಯನ್ನು) ಮೆಚ್ಚುವುದು ಹೇಗೆ? ಬಯಲು (ಶೂನ್ಯ) ಯಾವ ಸ್ಥಿತಿಯಲ್ಲಿದೆ? ನಿನ್ನ ಅಭಿಪ್ರಾಯವನ್ನು ತಿಳಿಸು" ಎಂದು ಮುಕ್ತಾಯಿಯು ಅಲ್ಲಮನಿಗೆ ಹೇಳಲು ಅಲ್ಲಮನು ಅವಳಿಗೆ ಹೀಗೆ ಹೇಳಿದನು. ೧೬. "ಇಂದ್ರಿಯಾದಿಗಳು ವಿಷಯಗಳ ಕಡೆಗೆ ಹರಿಯುವುದು, ಮಗು ಮೊಲೆಹಾಲನ್ನು ಬಯಸುವುದು ಹೇಗೆ ಸ್ವಾಭಾವಿಕವೋ ಹಾಗೆ ಸ್ವಾಭಾವಿಕವು. ಆದರೆ ಮಗುವಿಗೆ ಹಾಲನ್ನು ಕೊಡುತ್ತಲೇ ಮೆಲ್ಲ ಮೆಲ್ಲಗೆ ಅನ್ನದ ಕಡೆಗೂ ಪ್ರೇಮ ಹುಟ್ಟುವಂತೆ ತಾಯಿಯಾದವಳು ಹೇಗೆ ಅಭ್ಯಾಸ ಮಾಡಿಸುವಳೋ ಹಾಗೆಯೇ ಗುರುವಾದವನು ಭಕ್ತಿಯ ಅಭ್ಯಾಸವನ್ನು ಮಾಡಿಸಿ ವಿಷಯಗಳ ಕಡೆಗೆ ಮನಸ್ಸು ಹರಿಯುವುದನ್ನು ಕ್ರಮವಾಗಿ ಬಿಡಿಸುತ್ತಾನೆ. ಈ ಭಕ್ತಿಯ ಅಭ್ಯಾಸಕ್ಕೆ ಇಷ್ಟಲಿಂಗವು ಆವಶ್ಯಕ. ಇದರ ಮೂಲಕ ಅಂತರ್ಮುಖಿಯಾಗಬೇಕು. ಮುಕ್ತಾಯಿ ಕೇಳು" ಎಂದು ಅಲ್ಲಮ ನುಡಿದನು.

ಪರಮತತ್ವವ ನುಡಿದು ಹೇಳುವ
ಗುರುವೆ ನಿನಗಿನ್ನೂ ವಿಚಾರಿಸೆ
ವರಮನೋವಾಕ್ಕಾಯ ಕರ್ಮಗಳಿರಲು ನೀವೆಮಗೆ
ಹಿರಿದು ಬಲ್ಲವಿಕೆಯಲಿ ವಾಕ್ಚಾ
ತುರಿಯವನು ರಚಿಸಿದೊಡೆ ನಂಬುಗೆ
ದೊರಕುವುದೆ ನಮಗೆಂದಳಾ ಮುಕ್ತಾಯಿಯಲ್ಲಮಗೆ ೧೭

ಅಹುದು ಮತ್ತೇನವ್ವ ದಿಟಘನ
ಮಹಿಮನಾದರೆ ನೋಡಲಿದಿರಿ
ಟ್ಟಿಹುವೆ ನಿರ್ವಯಲಿಗೆ ಮನೋವಾಕ್ಕಾಯಕರ್ಮಗಳು
ವಿಹಿತವಾ ನಿರ್ಣಯವನರಿವೊಡೆ
ಬಹಳವದು ಸಂಕೋಚದಲಿ ನಿ
ರ್ವಹಿಸಿ ಹೇಳುವೆನೆನುತಲಲ್ಲಮನಾಕೆಗಿಂತೆಂದ ೧೮

ಬೆಂದ ನುಲಿಯಾಕಾರವಾಗಿಹು
ದೆಂದೊಡದು ನೆಯ್ವರ ಕೆಲಸಕೆ
ಬಂದುದುಂಟೇ ಮರುಳೆ ಲಿಂಗಜ್ಞಾನವಹ್ನಿಯಲಿ
ಬೆಂದು ಹೋದೊಡಲುಗನು ಭಾವಿಸ
ಲೊಂದುವಿಲ್ಲದ ಬಯಲುಗನೊಳಿ
ನ್ನೊಂದು ಕಲ್ಪಿಸಲಾಗದೌ ಮುಕ್ತಾಯಿ ಕೇಳೆಂದ ೧೯

೧೭. "ಶ್ರೇಷ್ಠವಾದ ತತ್ತ್ವವನ್ನು ನಿರೂಪಿಸಿ ಹೇಳುವ ಗುರುವೇ, ವಿಚಾರಮಾಡಲು, ನಿಮಗಿನ್ನೂ ಉತ್ತಮವಾದ ಮನೋ ವಾಕ್ ಕಾಯಕರ್ಮಗಳಿರಲು ನೀವು ನಮಗೆ ನಿಮ್ಮ ಹಿರಿದಾದ ತಿಳುವಳಿಕೆಯಿಂದ ವಾಕ್ಚಾತುರ್ಯವನ್ನು ಪ್ರದರ್ಶಿಸಿದಲ್ಲಿ (ನಮಗೆ) ವಿಶ್ವಾಸ ಉಂಟಾಗುವುದೆ?" ಎಂದು ಮುಕ್ತಾಯಿ ಅಲ್ಲಮನನ್ನು ಕೇಳಿದಳು. ೧೮. "ಅಹುದು, ಅತ್ತೇನವ್ವಾ, ನಿಜವಾದ ಘನಮಹಿಮನಾದರೂ ಮನೋ ವಾಕ್ ಕಾಯ ಕರ್ಮಗಳು ಬಯಲಿನಲ್ಲಿ ನೋಡಲು ಇದಿರಿಗೆ ಕಾಣಿಸುತ್ತವೆಯೆ? ಯೋಗ್ಯ ರೀತಿಯಲ್ಲಿ ಆ ವಿಚಾರ ತಿಳಿಯಬಯಸುವೆಯಾದರೆ ಅದು ಅಪಾರವಿದೆ. ನಿನಗೆ ಅದನ್ನು ಸಂಕ್ಷಿಪ್ತವಾಗಿ ಹೇಳಲು ಪ್ರಯತ್ನಿಸುವೆನು" ಎಂದು ಅಲ್ಲಮನು ಹೇಳಿ ಮತ್ತೆ ಅವಳಿಗೆ ಹೀಗೆಂದು ನುಡಿದನು. ೧೯. "ಮುಕ್ತಾಯಿ ಕೇಳು, ಸುಟ್ಟುಹೋದ ನೂಲು ಅದರ ಆಕಾರದಲ್ಲಿಯೇ ಇದೆ ಎಂದರೆ ಅದು ಮಗ್ಗದವರ ಕೆಲಸಕ್ಕೆ ಬರುವುದುಂಟೆ? ಹುಚ್ಚೀ, (ಶರಣನು) ಲಿಂಗಜ್ಞಾನವೆಂಬ ಬೆಂಕಿಯಲ್ಲಿ ಬೆಂದುಹೋದ ದೇಹವುಳ್ಳವನು. ವಿಚಾರ ಮಾಡಲು, ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆಯಲು ಏನೂ ಇಲ್ಲದ ಬಯಲ ದೇಹಿಯಲ್ಲಿ ಇನ್ನೊಂದನ್ನು ಕಲ್ಪಿಸಬಾರದು" ಎಂದು ಅಲ್ಲಮನು ನುಡಿದನು.

ಒಡೆಯ ಚಿತ್ತಯಿಸಯ್ಯ ನಿರ್ವಯ
ಲೊಡಲುಗನು ನೀನಹುದು ದಿಟವಾ
ದೊಡೆಯದೆಂತೆನ್ನೊಳು ವಿವೇಕ ವಿಚಾರಬೋಧೆಯನು
ನುಡಿವ ಪರಿಯೆಂತಣ್ಣ ನಿನ್ನಯ
ಬೆಡಗ ನಾನಱಿವಂತೆ ಹೇಳೆನ
ಲೊಡನೆಯಲ್ಲಮಲಿಂಗನಾ ಮುಕ್ತಾಯಿಗಿಂತೆಂದ ೨೦

ತಂಗಿ ಕೇಳಾರಾರ ಭಾವದ
ಭಂಗಿಯಂತಿಹುದಂತೆ ಮದ್ವಚ
ನಂಗಳೆಮ್ಮಯ ತನುಮನೋವಚನಗಳು ತೋಱಿದೊಡೆ
ಅಂಗವಿದರಾವೆಂದು ನೀ ಮನ
ಸಿಂಗೆ ತಾರದಿರೆನುತಲಲ್ಲಮು
ಲಿಂಗನಾಕೆಗಿದೊಂದು ರೀತಿಯ ನುಡಿದು ತೋಱಿಸಿದ ೨೧

ಎಲ್ಲವಹುದೈ ದಿಟ ವಿಚಾರಿಸ
ಬಲ್ಲವರಿಗಾ ಪಿಂಡಮಯತನು
ವಿಲ್ಲದಿರೆ ತಾಳೋಷ್ಠ ಸಂಪುಟಸಂಗ ಶಬ್ದಗಳು
ಎಲ್ಲಿ ಸಂಜನಿಸಿದುವು ನಿಮ್ಮೊಡ
ಲಲ್ಲಿ ಪೇಳಿದ ದಸರಿದೊಡಕಿನ
ಸೊಲ್ಲಿನಂಗವನೆನುತೆ ಕೇಳಿದಳಾಕೆಯಲ್ಲಮನ ೨೨

ಮಗಳೆ ಕೇಳೌ ಪೃಥ್ವಿಮಯತನು
ಮುಗಿಲಿಗಿಲ್ಲದೊಡೇನು ಗರ್ಜನೆ
ನೆಗಳುತಿರವೇ ಲೋಕವಱಿಯಲದೇನು ಸೋಜಿಗವೆ
ಬಗೆಯ ಸಾಕ್ಷಾದಪ್ರಮೇಯದ
ಸಗುಣ ನಿರ್ಗುಣವೆನಿಸುವೆನ್ನಯ
ವಿಗಡತನಕೇನರಿದು ನುಡಿ ಮುಕ್ತಾಯಿ ಕೇಳೆಂದ ೨೩

೨೦. ಮುಕ್ತಾಯಿ ಅಲ್ಲಮನನ್ನು (ಪ್ರಾರ್ಥಿಸುತ್ತಾ) "ಒಡೆಯಾ ಕೇಳಯ್ಯ, ನಿರಾಕಾರಸ್ವರೂಪಿ ನೀನಾಗಿರುವೆ. ಅದು ನಿಜವಾಗಿದ್ದರೆ ನನಗೆ ವಿವೇಕ ವಿಚಾರ ಬೋಧೆಯನ್ನು ತಿಳಿಸುವ ರೀತಿ ಯಾವುದು? ಅಣ್ಣಾ, ನಿನ್ನ ಮನೋಹರ ಸ್ವರೂಪವನ್ನು ನಾನು ತಿಳಿಯುವಂತೆ ಹೇಳು" ಎಂದಳು. ಅದಕ್ಕೆ ತಕ್ಷಣ ಅಲ್ಲಮಲಿಂಗನು ಮುಕ್ತಾಯಿಯನ್ನು ಕುರಿತು ಹೀಗೆಂದನು. ೨೧. "ತಂಗೀ, ಕೇಳು ಅವರವರ ಭಾವಗಳಿಗನುಗುಣವಾಗಿ ನಮ್ಮ ತನು ಮನ ವಚನಗಳು ತೋರಲು ನಾವು ದೇಹಿಗಳೆಂದು ನೀನು ಮನಸ್ಸಿಗೆ ತಂದು ಕೊಳ್ಳಬೇಡ" ಎಂದು ಅಲ್ಲಮ ಲಿಂಗನು ಅವಳಿಗೆ ತನ್ನದೊಂದು ಪರಿಯನ್ನು ನುಡಿದು ತೋರಿಸಿದನು. ೨೨. "ಎಲ್ಲವೂ ಸರಿ ನಿಜ, ವಿಚಾರಮಾಡಲು ಆ ಪಿಂಡಮಯ ದೇಹವಿಲ್ಲದಿರಲು ನಾಲಿಗೆ, ತುಟಿ ಇವುಗಳ ಕೂಟದ ಶಬ್ದಗಳು ನಿಮ್ಮ ಒಡಲಲ್ಲಿ ಎಲ್ಲಿ ಹುಟ್ಟಿದುವು? (ರೇಸಿಮೆಯ) ಹುರಿಯಂತೆ ತೊಡಕಾಗಿರುವ ನಿನ್ನ ಮಾತಿನ ರೀತಿಯನ್ನು (ವಿವರಿಸಿ) ಹೇಳು" ಎಂದು ಅಲ್ಲಮನನ್ನು ಮುಕ್ತಾಯಿಯು ಕೇಳಿದಳು. ೨೩. "ಮಗಳೇ ಕೇಳು, ಪೃಥ್ವೀಮಯದೇಹವು ಆಕಾಶಕ್ಕೆ ಇಲ್ಲದಿದ್ದರೇನು? ಅದು ಗುಡುಗನ್ನು ಉಂಟುಮಾಡುವುದಿಲ್ಲವೆ? ಲೋಕ

ಅಹುದು ಮತ್ತೇನಯ್ಯ ನಿಮ್ಮಯ
ಮಹಿಮೆಯನು ನಾವೆತ್ತ ಬಲ್ಲೆವು
ಸಹಜವಾದೊಡೆ ವೇದಶಾಸ್ತ್ರಾಗಮಗಳುಪಮಿಸದ
ಬಹಳ ನೀ ದಿಟ ನೀನೆ ಶರಣೆಂ
ದಿಹೆವು ನಾವೆಮಗೇಕೆ ತರ್ಕ
ಸ್ಪೃಹೆಗಳೆಂದೆನುತಿರ್ದಳಾ ಮುಕ್ತಾಯಿಯಲ್ಲಮಗೆ ೨೪

ಮನದ ಮತ್ಸರವಳಿದು ಸಮತೆಯ
ನೆನಹು ನೆಲಸಿ ನಿಗರ್ವತನದೊಂ
ದನುಭವಣೆಯಳವಟ್ಟುದಾ ಮುಕ್ತಾಯಿಗೊಲವಿಂದೆ
ವಿನುತ ನಿತ್ಯಾನಂದ ನಿರ್ಮಳ
ತನುವೆ ತಾನಹ ಸೌಖ್ಯತೆಯ ಸೂ
ಚನೆಯನುಪದೇಶಿಸಿದನೆಮ್ಮಯ ಗುರುಗುಹೇಶ್ವರನು ೨೫

ನೂಲ ಹಿಡಿದೋಜೆಯಲಿ ಬೆಟ್ಟದ
ಮೇಲನಡರುವರಂತೆ ಭಕ್ತಿಯ
ಕೀಲನುಪದೇಶಿಸಿದ ಗುರುವಚನಾಜ್ಞೆಯನು ಹಿಡಿದು
ಲೀಲೆಯಿಂದಾ ಬ್ರಹ್ಮರಂಧ್ರವ
ನಾಲಿಸುತಲೊಡಹಾಯ್ದು ನಿಜದ ನಿ
ರಾಳದಲಿ ನಿಂದಿರ್ದಳಾ ಮುಕ್ತಾಯಿ ಭಕ್ತಿಯಲಿ ೨೬

ತಿಳಿಯಲು ಅದೇನು ಆಶ್ಚರ್ಯದ ಸಂಗತಿಯೆ? ವಿಚಾರ ಮಾಡಲು, ಪ್ರತ್ಯಕ್ಷವಾಗಿ ಅಳತೆಗೆ ನಿಲುಕದವನೂ ಸಗುಣ ನಿರ್ಗುಣನೆನಿಸುವವನೂ ಆದ ನನ್ನ ಈ ಹಿರಿತನವನ್ನು ತಿಳಿದು ಮಾತನಾಡು" ಎಂದು ಅಲ್ಲಮನು ನುಡಿದನು. ೨೪. "ನಿಜ. ಮತ್ತೇನಯ್ಯಾ, ನಿಮ್ಮಂತಹವರ ಮಹಿಮೆಯನ್ನು ನಾವೆಲ್ಲಿ ಬಲ್ಲೆವು? ಸಹಜವಾಗಿಯೂ ನೀನು ವೇದಶಾಸ್ತ್ರ ಆಗಮಗಳಿಗೆ ಹೋಲಿಸಲಾಗದ ಹಿರಿತನವುಳ್ಳವನು. ಇದು ಸತ್ಯ, ನೀನೇ ಶರಣು ಎಂದು ನಾವಿರುವೆವು. ನಮಗೆ ವಾದದ ಆಸೆಯೇಕೆ?" ಎಂದು ಮುಕ್ತಾಯಿ ಅಲ್ಲಮನಿಗೆ ಹೇಳುತ್ತಿದ್ದಳು. ೨೫. ಮುಕ್ತಾಯಿಗೆ ಮನದ ಸಿಟ್ಟು ಮಾಯವಾಗಿ, ಸಮಾಧಾನದಿಂದ ಕೂಡಿದ ಧ್ಯಾನ ಮನಸ್ಸಿನಲ್ಲಿ ನೆಲಸಿ, ನಿರಹಂಕಾರದ ತಿಳುವಳಿಕೆ ಸೇರಿತು. ವಿಶೇಷವಾಗಿ ಸ್ತುತಿಸಲ್ಪಡುವ ನಿತ್ಯಾನಂದ ನಿರ್ಮಳ ತನುವೇ ತಾನಾಗಿರುವ ಹಿತಕರ ಸೂಚನೆಯನ್ನು ನಮ್ಮ ಗುರುವಾದ ಗುಹೇಶ್ವರನು ಉಪದೇಶಿಸಿದನು. ೨೬. ಹಗ್ಗವಿಡಿದು ಜಾಣತನದಿಂದ ಬೆಟ್ಟವನ್ನೇರುವಂತೆ ಭಕ್ತಿಯ ತಂತ್ರವನ್ನು ಉಪದೇಶಿಸಿದ ಗುರುಗಳ ಮಾತಿನ ಆಜ್ಞೆಯನ್ನು ಅನುಸರಿಸಿ ಲೀಲೆಯಿಂದ ಆ ಬ್ರಹ್ಮರಂಧ್ರವನ್ನು ದಾಟಿ ಹೊಂದುವ ಸ್ಥಾನವನ್ನು ತಿಳಿದು ರಭಸದಿಂದ ನುಗ್ಗಿ ಮುಕ್ತಿಸ್ಥಿತಿಯ ಶಾಂತತೆಯಲ್ಲಿ ಭಕ್ತಿಯಿಂದ ಮುಕ್ತಾಯಿಯು

ಸುಖವನೈದಿದಳಲ್ಲಮನ ಪದ
ನಖದ ಕಾಂತಿಯ ಕಂಡು ಮನಸಿನ
ಮುಖದ ಕತ್ತಲೆ ತಿಳಿಯೆ ಪರಮಾನಂದಭಾವದಲಿ
ಅಖಿಲ ಶರಣರು ನೋಡಲಚಳಿತ
ಸುಖದೊಳೋಲಾಡುತ್ತಲಿರ್ದಳು
ನಿಖಿಳೆ ಸದ್ಯೋನ್ಮುಕ್ತೆ ಮುಕ್ತಾಯಿಗಳು ಜಗವರಿಯೆ ೨೭

ಅಂತು ಸಂಧಿ ೧೨ಕ್ಕಂ ಪದ ೫೩೭ಕ್ಕಂ ಮಂಗಳಂ

ನಿಂತಿದ್ದಳು. ೨೭. ಅಲ್ಲಮನ ಪಾದಗಳ ಉಗುರುಗಳ ಕಾಂತಿಯನ್ನು ಕಂಡು ಮನಸ್ಸೆಂಬ ಮುಖದಲ್ಲಿ ಆವರಿಸಿದ್ದ ಕತ್ತಲೆ ತಿಳಿಯಾಗಲು ಪರಮಾನಂದಭಾವದಿಂದ ಸುಖವನ್ನು ಮುಕ್ತಾಯಿ ಹೊಂದಿದಳು. ಸರ್ವಶರಣರು ನೋಡುತ್ತಿರುವಲ್ಲಿ ಜಗತ್ತಿಗೇ ತಿಳಿಯುವಂತೆ ಜೀವನ್ಮುಕ್ತಳಾದ ಮುಕ್ತಾಯಿಯು ಅಚಲಿತ ಸುಖದಲ್ಲಿ ಓಲಾಡುತ್ತಿದ್ದಳು.

# ೧೩. ಸಿದ್ಧರಾಮ

## ಗತಿ ೧೩

ಸೂಚನೆ : ಲಿಂಗಪದವನು ಸಿದ್ಧರಾಮ
ಯ್ಯಂಗೆ ತೋಱಿಸಿ ಗುರು ಗುಹೇಶ್ವರ
ಲಿಂಗನಿರ್ದನು ಸೊನ್ನಲಾಪುರದೊಳಗೆ ಲೀಲೆಯಲಿ

ಇಲ್ಲಿ ಕೇಳುವುದಿನ್ನು ಸಾಧಕ
ರೆಲ್ಲರಲ್ಪಜ್ಞಾನಮಾರ್ಗವ
ಹೊಳ್ಳುಮಾಡಿ ವಿಶುದ್ಧಪೂರ್ವಜ್ಞಾನಮಾರ್ಗದಲಿ
ಒಳ್ಳಿತಾಗಿಹ ಸುಖವ ಬಯಸಲು
ಬಲ್ಲ ಭಕ್ತರಿಗಱಿವು ತೋಱಿಸು
ವಲ್ಲಮಪ್ರಭು ಗುರು ಗುಹೇಶ್ವರಲಿಂಗಲೀಲೆಯಲಿ ೧

ತಾನೆ ತನ್ನ ವಿನೋದದಿಂದೆ ಮ
ಹಾನುಭಾವವ ಬಯಸಿ ಬಳಲುವ
ಮಾನವರಿಗಾ ಪ್ರಾಣಲಿಂಗವನಱುಹಿಸುವೆನೆನುತೆ
ತಾನೆ ವರಗುರು ತಾನೆ ಜಂಗಮ
ತಾನೆ ಶಿವಲಿಂಗಸ್ವರೂಪವ
ನೂನವಿಲ್ಲದೆ ಧರಿಸಿಕೊಂಡಾ ಪ್ರಭುವೆ ಬಱುತಿರ್ದ ೨

ಪಿಂಡದೊಳು ಪಿರಿದೆನಿಪ ನಾಡೀ
ಮಂಡಲಂಗಳ ತಾನೆ ಸಾಧಿಸಿ
ಕಂಡಖಂಡಜ್ಞಾನದಿಕ್ಕೆಯ ಪರಿಯನಿದಿರಿಟ್ಟು
ಮಂಡಲಿಸಿ ಕಲುಮರನೊಳೊಡ್ಡಣೆ
ಗೊಂಡು ಮಾಡಿಸಿ ಹೆಸರುವಡೆದು
ದ್ಧಂಡರೀತಿಯ ಸಿದ್ಧರಾಮನ ಪುರಕೆ ಪ್ರಭು ಬಂದ ೩

ಸೂ : ಲಿಂಗದ ಸ್ಥಿತಿಯನ್ನು ಸಿದ್ಧರಾಮನಿಗೆ ತೋರಿಸಿ ಸೊನ್ನಲಾಪುರದಲ್ಲಿ ಲೀಲೆಯಿಂದ ಗುರುಗುಹೇಶ್ವರಲಿಂಗನು ಇರುತ್ತಿದ್ದನು. ೧. ಸಾಧಕರೆಲ್ಲಾ ಇಲ್ಲಿ ಕೇಳುವುದು. ಅಲ್ಪಜ್ಞಾನಮಾರ್ಗವನ್ನು ಪರಿಶುದ್ಧವಾದ ಜ್ಞಾನಮಾರ್ಗದಿಂದ ಸತ್ವಹೀನವನ್ನಾಗಿ ಮಾಡಿ, ಒಳ್ಳೆಯದಾದ ಸುಖವನ್ನು ಬಯಸಲು, ಯೋಗ್ಯರಾದ ಭಕ್ತರಿಗೆ ಜ್ಞಾನವನ್ನು, ಗುರುಗುಹೇಶ್ವರಲಿಂಗಲೀಲೆಯಿಂದ ಅಲ್ಲಮಪ್ರಭುವು ತೋರಿಸುತ್ತಿದ್ದನು. ೨. ಮಹತ್ತರವಾದ ಅನುಭವವನ್ನು ಪಡೆಯಬಯಸಿ ಬಳಲುವ ಮಾನವರಿಗೆ ಆ ಪ್ರಾಣಲಿಂಗವನ್ನು ತಿಳಿಸುವೆನೆಂದು ತಾನೇ ತನ್ನ ವಿನೋದದಿಂದ ಶ್ರೇಷ್ಠನಾದ ಗುರು ಜಂಗಮ ಶಿವಲಿಂಗ ಸ್ವರೂಪಗಳನ್ನು ಕೊರತೆಯಿಲ್ಲದಂತೆ ಧರಿಸಿ ಅಲ್ಲಮಪ್ರಭುವೆ ಬರುತ್ತಿದ್ದನು. ೩. ಪಿಂಡದಲ್ಲಿ ಹಿರಿದೆನ್ನಿಸಿದ ನಾಡೀಸಮೂಹಗಳನ್ನು ತಾನೇ ಸಾಧಿಸಿ ಕಂಡ ಅಖಂಡಜ್ಞಾನದ ವಾಸಸ್ಥಾನದ ರೀತಿಯನ್ನು ಎದುರಿಗೆ ಇಟ್ಟುಕೊಂಡು, ಕಲ್ಲು ಮರಗಳನ್ನು ರಾಶಿ ಮಾಡಿ,

ಹಲವು ದೆಸೆಯಲಿ ಚಿತ್ರಪತ್ರದ
ಚೆಲುವದಾಗಿರೆ ಪರಿಪರಿಯ ದೇ
ಗುಲವ ಮಾಡಿಸುತಿಪ್ಪ ಗುಡ್ಡಗಳಿಕ್ಕೆವಿಂಡುಗಳ
ನೆಲನೆ ಬೆಸಲಾದಂತೆ ಮಿಗೆ ಮಣ್
ಗೆಲಸದೊಡ್ಡರು ಬಂಡಿಕಾಱರು
ಕಲುಕುಟಿಗರಿದ್ದೆಡೆಯ ಸೊನ್ನಲಪುರಕೆ ಪ್ರಭು ಬಂದ ೪

ನೂಲ ಸಂಕಲೆಗಡಿದು ಕನಕದ
ಕೋಳವನು ಕಾಲಿಂಗೆ ಕೀಲಿಪ
ಕಾಳುಮತಿಯನವನಂತೆ ಸತಿಸುತಕೂಟ ಭಯವೆಂದು
ಬಾಳಿಕೆಯನತಿಗಳೆದು ಮರಳಿಯು
ಬೋಳುಮಂಡೆಯ ಕೀರ್ತಿಗೋಸುಗ
ಕೋಳುಹೋದನೆ ರಾಮನೆನುತಲ್ಲಮನು ಬೆಱಗಾದ ೫

ಚಿಕ್ಕ ಸಂಸಾರವನು ಸಡಿಲಿಸಿ
ಹೊಕ್ಕನಲ್ಲಾ ಹಿರಿಯ ಸಂಸಾ
ರಕ್ಕಕಟ ವಿಖ್ಯಾತಿಪೂಜಾಲಾಭದಿಚ್ಛೆಯಲಿ
ಸಿಕ್ಕಿಬಿದ್ದನು ಸಿದ್ಧರಾಮನು
ಮಿಕ್ಕ ಭವಭಾರಿಗಳನಾದೊಡೆ
ಮುಕ್ಕದೇ ವಿಧಿಯೆನುತಲಲ್ಲಮನ ನೋಡಿ ಬೆಱಗಾದ ೬

ಗುಡಿ ಕೆರೆಗಳನ್ನು ಕಟ್ಟಿಸಿದ ಪ್ರಖ್ಯಾತವಾದ, ಬಲಿಷ್ಠವಾದ ಸಿದ್ಧರಾಮನ ಪುರಕ್ಕೆ ಅಲ್ಲಮಪ್ರಭುವು ಬಂದನು. ೪. ಹಲವು ದಿಕ್ಕುಗಳಲ್ಲಿ ಪರಿಪರಿಯ ಚಿತ್ರಭಿತ್ತಿಗಳಿಂದ ಶೋಭಿಸುವ ರಮಣೀಯವಾದ, ಚೆಲುವಾಗಿರುವ, ಬಗೆಬಗೆಯ ದೇವಾಲಯಗಳನ್ನು ಮಾಡಿಸುತ್ತಿರುವ ಶಿಷ್ಯರುಗಳ ಸಮೂಹವಿರುವ, ಭೂಮಿಯೇ ಹೆತ್ತಂತೆ ಅತಿಹೆಚ್ಚಿನ ಸಂಖ್ಯೆಯ ಮಣ್ಣುಗೆಲಸದ ಒಡ್ಡರು, ಬಂಡಿಕಾರರು, ಕಲ್ಲುಕುಟಿಗರು ಇರುವ ಸೊನ್ನಲಪುರಕ್ಕೆ ಪ್ರಭುವು ಬಂದನು. ೫. "ನೂಲಿನ ಸಂಕೋಲೆಯನ್ನು ಕಡಿದು ಚಿನ್ನದ ಕೋಳವನ್ನು ಕಾಲಿಗೆ ಸಿಕ್ಕಿಸುವ ಅಲ್ಪ ಬುದ್ಧಿಯವನಂತೆ ಸತಿ ಸುತರ ಸಂಗ ಭಯವೆಂದು ಸಂಸಾರವನ್ನು ನಿರಾಕರಿಸಿ, ಮತ್ತೆ ಬೋಳುತಲೆಯ ಕೀರುತಿಗಾಗಿ ಸಿದ್ಧರಾಮ ಗುರಿಯಾದನೆ!" ಎಂದು ಅಲ್ಲಮ ಆಶ್ಚರ್ಯಪರವಶನಾದನು. ೬. "ಅಯ್ಯೋ ಸಿದ್ಧರಾಮನು ಚಿಕ್ಕ ಸಂಸಾರವನ್ನು ಬಿಟ್ಟು ಹಿರಿಯ ಸಂಸಾರವನ್ನು ಪ್ರವೇಶಿಸಿದನಲ್ಲಾ! ಖ್ಯಾತಿ, ಪೂಜೆ, ಲಾಭಗಳ ಇಚ್ಛೆಯಿಂದ ಸಿಕ್ಕಿಬಿದ್ದನಲ್ಲಾ! ಉಳಿದ ಸಂಸಾರಿಗಳನ್ನು ವಿಧಿ ಮುಕ್ಕುವುದಿಲ್ಲವೆ?" ಎನ್ನುತ್ತ ಸಿದ್ಧರಾಮನ [ಸ್ಥಿತಿಯನ್ನು] ನೋಡಿ ಅಲ್ಲಮ ಆಶ್ಚರ್ಯಗೊಂಡನು.

ಒಡ್ಡರಾಮನಿದೇನು ಗೊಡವೆಯ
ನೊಡ್ಡಿಕೊಂಡು ವೃಥಾ ಮನಸ್ಸನು
ಗೊಡ್ಡಮಾಡಿಯೆ ಕೆಟ್ಟನೆನುತಲ್ಲಮನು ಕೇಳಿದೊಡೆ
ಗುಡ್ಡರೆಲ್ಲರು ಗುರುವನಾವನು
ಖಡ್ಡತನದಲಿ ಜಱಿವನೆನುತವ
ರಡ್ಡಹಾಯ್ದರು ತೊಡಗಿದರು ತೋಟಿಯನು ತಮತಮಗೆ ೭

ಆರರೆ ಘಡಘಡಬಾರು ನಮ್ಮಯ
ಗುರುವನೀ ಪರಿ ಜಱಿದು ಜಾಡಿಸಿ
ಹರಿ ಹರ ಬ್ರಹ್ಮಾಮರೇಂದ್ರರು ನುಡಿಯಲಮ್ಮುವರೆ
ಮರುಳುಮಾನವ ನೀನು ನುಡಿದರೆ
ಸರಿಯೆ ಸಿದ್ಧಂಗೆನುತಲಿದ್ದರು
ಕೆರಳಿ ಗುಡ್ಡಗಳೆಕ್ಕವಿಂಡುಗಳಲ್ಲಮ ಪ್ರಭುವ ೮

ಅಕಟ ನಿಮ್ಮಯೆ ಗುರುವಿನಾಗಮ
ಯುಕುತಿ ಪಾಷಾಣಕ್ಕೆ ಬಂದುದೆ
ವಿಕಳ ಸಿದ್ಧನ ನಂಬಿ ಪಡೆದಿರಿ ಗುಡ್ಡಪದವಿಯನು
ಸಕಲ ಕಲ್ಲನು ಕಡಿದು ಕಲ್ಲಿಗೆ
ಶಿಖರ ದೇಗುಲವೆಂದು ಮಾಡಿಸಿ
ಮಕರಿಸುವರವರೊಡ್ಡರಲ್ಲದೆ ಸಿದ್ಧರಲ್ಲೆಂದ ೯

ಎಕ್ಕವಿಂಡುಗಳೆಲ್ಲದಾಳ್ದನ
ಮಿಕ್ಕು ಜಱಿವಲ್ಲಮನ ಮಾತಿಗೆ
ಕೊಕ್ಕರಿಸಿ ಕೆಕ್ಕರಿಸಿ ಕೋಪಾಟೋಪವಾವರಿಸಿ
ತಕ್ಕಯಿಸಿ ಕೆಡೆಬಡಿವೆವೆನುತಡ
ಹೊಕ್ಕು ಮೈಮುಸುಕಿದೊಡೆ ನಗುತಲಿ
ಸಿಕ್ಕದವದಿರಿಗಲ್ಲಮಪ್ರಭುರಾಯನಿಂತೆಂದ ೧೦

೭. "ಒರಟನಾದ ಸಿದ್ಧರಾಮನು ಇದೇನು ಗೊಡವೆಯನ್ನು ಹಚ್ಚಿಕೊಂಡು ಸುಮ್ಮನೆ ಮನಸ್ಸನ್ನು ತೊಂದರೆಗೆ ಒಳಪಡಿಸಿ ಕೆಟ್ಟನೊ" ಎನ್ನುತ್ತ ಅಲ್ಲಮನು ಸಿದ್ಧರಾಮನ ಶಿಷ್ಯರನ್ನು ಕೇಳಲು, ಅವರು ತಮ್ಮ ಗುರುವನ್ನು ಇದಾವನು ದಿಟ್ಟತನದಿಂದ ನಿಂದಿಸುತ್ತಿರುವನೆಂದು ಅಡ್ಡಗಟ್ಟಿ ತಾವು ತಾವೇ [ಅವನೊಡನೆ] ಹೋರಾಟಕ್ಕೆ ತೊಡಗಿದರು. ೮. "ಅಬ್ಬಾ! ನಮ್ಮ ಗುರುವನ್ನು ಈ ರೀತಿ ನಿಂದಿಸಿ, ಕೊಡಹಿ ನುಡಿಯಲು ಹರಿ ಹರ ಬ್ರಹ್ಮ ಅಮರೇಂದ್ರರು ಸಮರ್ಥರಾಗುವರೆ? ಎಲ ಎಲಾ, ಹುಚ್ಚು ಮನುಷ್ಯ, ಸಿದ್ಧರಾಮನನ್ನು ನೀನು ಈ ರೀತಿ ನುಡಿಯುವುದು ಸರಿಯೇ?" ಎಂದು ಶಿಷ್ಯರುಗಳ ಸಮೂಹವೆಲ್ಲಾ ಕೆರಳಿ ಅಲ್ಲಮಪ್ರಭುವನ್ನು ಪ್ರಶ್ನಿಸಿದರು. ೯. "ಅಯ್ಯೋ, ನಿಮ್ಮ ಗುರುವಿನ ತಂತ್ರಶಾಸ್ತ್ರದ ಮುಕ್ತಿ ಕಲ್ಲಿನಲ್ಲಿ ಅಭಿಮಾನವಿಟ್ಟು ದೇವರೆಂದು ಒದ್ದಾಡುವ ಸ್ಥಿತಿಗೆ ಬಂದಿತೆ? ಹುಚ್ಚು ಸಿದ್ಧನನ್ನು ನಂಬಿ ನೀವು ಶಿಷ್ಯಪದವಿಯನ್ನು ಪಡೆದಿರಿ. ಎಲ್ಲಾ ಕಲ್ಲುಗಳನ್ನು ಕೆತ್ತಿ ಅದಕ್ಕೆ ಶಿಖರವಾಗಿ ದೇವಾಲಯವನ್ನು ನಿರ್ಮಿಸಿ ಹೆಚ್ಚುತ್ತಿರುವವರು ಒಡ್ಡರಲ್ಲದೆ ಸಿದ್ಧರಲ್ಲ" ಎಂದು ಅಲ್ಲಮ ನುಡಿದನು. ೧೦. ಶಿಷ್ಯರ ದೊಡ್ಡ ಸಮೂಹವೆಲ್ಲಾ ತಮ್ಮ ಒಡೆಯನನ್ನು ಅತಿಶಯವಾಗಿ ನಿಂದಿಸುತ್ತಿರುವ

ಸಲುವುದೈ ದಿಟವಿನ್ನು ನಿಮಗೆ
ಕೈಲನ ಹೆಸರದು ಹುಸಿಯೆ ಅಲ್ಲದೊ
ಡುಲಿದು ಘೂರ್ಮಿಸಿ ಕೆರಳಿ ಮೊಗ್ಗರವಾಯ್ವುದೇ ಬಜೆದೆ
ಬಲಹು ನಿಮ್ಮಯ ಗುರುನಿರೂಪಣೆ
ಕಲಹಕಾರಣರಾದಿರೆನುತಲಿ
ಹಳಿದು ಹೀಹಾಳಿಸಿದನಲ್ಲಮಲಿಂಗನವರುಗಳ ೧೧

ನೋಡು ನೋಡಾ ಮತ್ತೆ ಮಾಣದೆ
ನಾಡ ಮಾತನು ಕಲಿತು ನಮ್ಮೊಡ
ನಾಡುತಿಹರೆ ದೊಠಾರತನದಲಿ ಮರುಳುತನದಿಂದೆ
ಬೇಡ ಬೇಡಿನ್ನೆಮ್ಮ ಗುರುವನು
ಖೋಡಿಗಳೆದರೆ ಕೆಡುವೆ ನೀನೆನು
ತಾಡುತಿರ್ದರು ಬಜೆಯ ಬೀರವ ಗುಡ್ಡರಲ್ಲಮಗೆ ೧೨

ಗುಡ್ಡಗಳು ನೀವಕಟ ನಮ್ಮಯ
ಖಡ್ಡತನಕಾನುವಿರೆ ನಿಮ್ಮಯ
ದೊಡ್ಡನನು ಕರೆತನ್ನಿ ನೋಡುವೆವಾತನಳಬಳವ
ಒಡ್ಡರಾಮನ ರೀತಿಯನುಭವ
ದೊಡ್ಡವಣೆಯನು ಕಾಂಬೆವೆನುತಲಿ
ಗುಡ್ಡರೆಲ್ಲರು ಕೆರಳುವಂತಿರೆ ನುಡಿದನಲ್ಲಮನು ೧೩

ಅಲ್ಲಮನ ಮಾತಿಗೆ ಅಸಹ್ಯಪಟ್ಟು ದುರುದುರನೆ ನೋಡಿ ಕೋಪಾಟೋಪ ದೇಹವನ್ನೆಲ್ಲಾ ಆವರಿಸಲು, ಅಲ್ಲಮನನ್ನು ತಬ್ಬಿ ಕೆಳಗೆ ಬೀಳುವಂತೆ ಹೊಡೆಯೋಣವೆಂದು ಅಡ್ಡಗಟ್ಟಿ ವೈಮುಟ್ಟಲು ಅಲ್ಲಮನು ನಗುತ್ತಾ ಅವರಿಗೆ ಸಿಕ್ಕದೆ ಹೀಗೆಂದನು. ೧೧ "[ಗುರುಗುಟ್ಟುತ್ತಾ ಮೇಲೆ ಬೀಳಲು ಬಂದ ನಿಮಗೆ] ನಿಜವಾಗಿಯೂ ಹಂದಿಯ ಹೆಸರು ಸಲ್ಲುವುದು. ಅದು ಸುಳ್ಳಾಗದು. ಹಾಗಿಲ್ಲದಿದ್ದರೆ ಶಬ್ದಮಾಡಿ ಮೊರೆದು ಕೆರಳಿ ಸಮೂಹದಿಂದ ಕೂಡಿ ವ್ಯರ್ಥವಾಗಿ ಹಾಯುತ್ತಿದ್ದಿರೆ? ನಿಮ್ಮ ಗುರುವಿನ ಉಪದೇಶ ಬಲವಾಗಿದೆ. ಜಗಳಕ್ಕೆ ಕಾರಣರಾದಿರಿ" ಎಂದು ಅಲ್ಲಮಲಿಂಗನು ಅವರುಗಳನ್ನು ನಿಂದಿಸಿ ತುಚ್ಛೀಕರಿಸಿದನು. ೧೨. "ನೋಡು ನೋಡು, ಮರಳಿ ಬಿಡದೆ ಸಾಮಾನ್ಯರ ಮಾತನ್ನು ಕಲಿತು ನಮ್ಮೊಡನೆ ಹುಚ್ಚುತನದಿಂದ ಹಾಗೂ ಹಠಮಾರಿತನದಿಂದ ಆಡುತ್ತಿರುವನಲ್ಲಾ! ಬೇಡ ಬೇಡ, ಇನ್ನು ನಮ್ಮ ಗುರುವನ್ನು ದೂಷಿಸಿದರೆ ನೀನು ಹಾಳಾಗುವೆ" ಎಂದು ವ್ಯರ್ಥವಾದ ಶೌರ್ಯದ ಮಾತನ್ನು ಶಿಷ್ಯರು ಅಲ್ಲಮನೊಂದಿಗೆ ಆಡುತ್ತಿದ್ದರು. ೧೩. "ಅಯ್ಯೋ, ನೀವು ಶಿಷ್ಯರು. ನಮ್ಮ ದಿಟ್ಟತನವನ್ನು ಎದುರಿಸುವಿರಾ? ನಿಮ್ಮ ಹಿರಿಯ ನನ್ನು ಕರೆದುತನ್ನಿ. ಆತನ ಶಕ್ತಿಯನ್ನು ನೋಡುತ್ತೇವೆ. ಒಡ್ಡರಾಮನ ರೀತಿಯನ್ನೂ, ಭವದ ಸಿದ್ಧತೆಯನ್ನೂ ನೋಡುತ್ತೇವೆ!" ಎಂದು ಶಿಷ್ಯರೆಲ್ಲರೂ ಕೆರಳುವಂತೆ ಅಲ್ಲಮನು ನುಡಿದನು.

ಕೆಡಹಿಕೊಳ್ಳಿನ್ನೀತನಾಳ್ದನ
ಜಡಿದು ನುಡಿಮಿಕ್ಕಲಿಸಿ ಹೋಹನೆ
ಹಿಡಿದುಕೋ ಕೋ ಎನುತೆ ಗುಡ್ಡಗಳೆಕ್ಕೆವಿಂಡುಗಳು
ಬಿಡದೆ ತೆಕ್ಕೆಯೊಳಲ್ಲಮನ ಬಯ
ಲೊಡಲ ಬಂಧಿಸಲೆಂದು ಬಗಿಯಲು
ಹಿಡಿಹಿಗಿಲ್ಲದೊಡವರು ಬೆಱಗಾಗಿರ್ದರದ ಕಂಡು ೧೪

ನೆರವಿ ತಾನಾಗಿಹನು ತತ್ತಡೆ
ಹೊರಗೆ ಬಂದಿಹ ದೂರ ಹೋಗಿಹ
ತೆರಳ ತಕ್ಕೆಗೆ ಸಿಕ್ಕನೀ ಪರಿ ಹಲವು ಪಡಣೆಯಲಿ
ಹುರುಳುಗೆಡಿಸಲು ಬಳಿಕ ಗುಡ್ಡರು
ಕೆರಳಿ ಕೆಡೆಯೆನುತಲ್ಲಮನ ಮೇ
ಲುರವಣಿಸಿ ಕವಿದಿಟ್ಟು ಕಱಿದರು ಕಲ್ಲ ಮಳೆಗಳನು ೧೫

ಪಿಂಡಭಾರದ ದೇಹಿಯನು ಮೈ
ಗಂಡು ನೋಯಿಸಬಲ್ಲುವಲ್ಲದೆ
ಖಂಡಿಸುವುವೇ ಬಯಲ ದೇಹಿಯನಾವ ಕೈದುಗಳು
ಕಂಡುದುಂಟೇನಲ್ಲಮನ ನಿಡು
ಗುಂಡುಗಳು ಮೈಗಾಣಿಸದೆ ಭೂ
ಮಂಡಲದಲುರುಳಿದುವು ನೋಡುವರೆಲ್ಲ ಬೆಱಗಾಗೆ ೧೬

೧೪. "ಇನ್ನು ಈತನನ್ನು ನೆಲಕ್ಕೆ ಉರುಳಿಸಿರಿ. ಒಡೆಯನನ್ನು ಗದರಿಸಿ ನುಡಿದ ನುಡಿ ಇನ್ನು ಕೈಮೀರಿ ಹೋಗಬಹುದಲ್ಲವೇ? ಇಕೋ, ಹಿಡಿದುಕೊಳ್ಳಿ" ಎಂದು ಶಿಷ್ಯರುಗಳ ದೊಡ್ಡ ಸಮೂಹವು ಬಿಡದೆ ತಮ್ಮ ಅಪ್ಪುಗೆಯಲ್ಲಿ ನಿರ್ದೇಹಿಯಾದ ಅಲ್ಲಮನನ್ನು ಬಂಧಿಸಲು ಪ್ರಯತ್ನಿಸಲಾಗಿ ಅವರ ಹಿಡಿತಕ್ಕೆ ಅಲ್ಲಮನು ಸಿಕ್ಕದಿರಲು, ಅದನ್ನು ಕಂಡು [ಅವರು] ಬೆರಗಾದರು. ೧೫. ಗುಂಪಿನಲ್ಲಿ ತಾನಾಗಿಯೇ ಇರುವನು. ಬಂಧಿಸ ಹೊರಟರೆ [ಗುಂಪಿನಿಂದ] ಹೊರಗೆ ಬಂದಿರುವನು. ದೂರ ಸರಿದರೂ ಹೊರಟು ಹೋಗನು. ಅಪ್ಪುಗೆಗೆ ಸಿಕ್ಕನು. ಈ ರೀತಿ ಹಲವು ವಿಧಾಯದಿಂದ [ಅವರನ್ನು] ಸತ್ವಹೀನರನ್ನಾಗಿಸಲು ಅನಂತರ ಶಿಷ್ಯರು ಕೋಪಕೊಂಡು ಕೆಳಗೆ ಬೀಳಿಸು ಎನ್ನುತ್ತಾ ಉದ್ಧಟತನದಿಂದ ವರ್ತಿಸಿ ಸುತ್ತುವರಿದು ಕಲ್ಲಿನಿಂದ ಹೊಡೆದು ಕಲ್ಲ ಮಳೆ ಸುರಿಸಿದರು. ೧೬. ಕೊಬ್ಬಿದ ದೇಹವುಳ್ಳವನನ್ನು ಕಲ್ಲುಗಳು ತಾಗಿ ನೋಯಿಸಬಲ್ಲುವಲ್ಲದೆ ನಿರ್ದೇಹಿಯಾದವನನ್ನು ಯಾವ ಆಯುಧಗಳು ತಾನೆ ನೋಯಿಸಬಲ್ಲುವು? ನಿರ್ದೇಹಿಯಾದ ಅಲ್ಲಮನನ್ನು ಕಂಡದ್ದುಂಟೇ? ದಪ್ಪ ಗುಂಡುಗಳು ಅಲ್ಲಮನ ದೇಹಕ್ಕೆ ತಾಗದೆ ನೋಡುವವರೆಲ್ಲಾ ಆಶ್ಚರ್ಯಗೊಳ್ಳುವಂತೆ ಭೂಮಂಡಲದಲ್ಲಿ ಉರುಳಿ ಬಿದ್ದುವು.

ನೊಂದು ಸೈರಿಸದವ ಕನಿಷ್ಠನು
ನೊಂದು ಸೈರಿಸುವವನು ಮಧ್ಯಮ
ನೊಂದೆನೆಂಬುದು ನೆನಹಿಗಿಲ್ಲದೊಡಾತನುತ್ತಮನು
ಎಂದು ಬಗೆಯುತೆ ತನ್ನ ಮನದಲಿ
ನೊಂದೆನಾದೊಡೆ ಮೂಜಗಂಗಳು
ಬೆಂದು ಹೋಹುವೆನುತ್ತೆ ನಸುನಗುತಿರ್ದನಲ್ಲಮನು ೧೭

ಆಳು ನೆರೆದುದು ಲಕ್ಕ ಸಂಖ್ಯೆಗೆ
ಮೇಳವಿಸಿ ಕವಿದಿಡುತಲಲ್ಲಮ
ಹೂಳಿ ಹೋದನು ಕವಣೆಗಲ್ಲಲಿ ಕೈದುಗಳಲೆನಲು
ಹೇಳಲೇನದ ಕಲ್ಲರಾಶಿಯ
ಮೇಲೆ ನಿಂದನು ಮತ್ತೆ ತನ್ನಯ
ಲೀಲೆಯಲಿ ನಿರ್ಲೇಪನಿರ್ದನು ನಗುತೆ ಪ್ರಭುರಾಯ ೧೮

ಮುನಿದು ಮುತ್ತಿಯೆ ಸೆಣಸಿ ಹೋರುವ
ಜನಕೆ ಪ್ರತ್ಯೇಕದಲಿ ಬಹುರೂ
ಪನೆ ವಿರಾಜಿಸಿ ಹಲಬರಲ್ಲಮರಾದರೆಂಬಂತೆ
ಎನಿತು ಜನ ಮಾಱಾಂತು ನಿಂದೊಡೆ
ಯನಿತು ರೂಪಿನಲಾಂತು ನಿಂದನು
ಘನಮಹಿಮನೆಮ್ಮಲ್ಲಮಪ್ರಭು ಲಿಂಗಲೀಲೆಯಲಿ ೧೯

ಛಾಯೆಯೊಳು ಕಾಳಗವ ಮಾಡುವ
ಮಾಯವಶರುಗಳಂತೆ ಕಡೆತನ
ಕಾಯಸವೆ ಕೈಗಟ್ಟ ಹೋಯಿತು ಕದನಮುಖದೊಳಗೆ
ಕಾಯವಿರಹಿತನಲ್ಲಮಪ್ರಭು
ರಾಯನಾರೆಂದಱಿಯಲಱಿಯದೆ
ಸಾಯಸವನಾಳಿದರು ಗುಡ್ಡಗಳಿಕ್ಕೆವಿಂಡುಗಳು ೨೦

೧೭. "ನೊಂದು ಸೈರಿಸದವನು ಕನಿಷ್ಠನು. ನೊಂದು ಸೈರಿಸುವವನು ಮಧ್ಯಮನು. ನೊಂದೆನೆನ್ನುವುದು ನೆನಹಿಗೆ ಇಲ್ಲದಿದ್ದರೆ ಆತನು ಉತ್ತಮನು" ಎಂದು ಅಲ್ಲಮನು ಆಲೋಚಿಸಿ ನನ್ನ ಮನಸ್ಸಿನಲ್ಲಿ ನಾನು ನೊಂದೆನಾದರೆ ಮೂರು ಲೋಕಗಳು ಬೆಂದು ಹೋಗುತ್ತವೆ ಎಂದು ನಸುನಗುತ್ತಲಿದ್ದನು. ೧೮. ಲಕ್ಷಸಂಖ್ಯೆಯಲ್ಲಿ ಸೇವಕರು ಸೇರಿದರು. ಗುಂಪುಗೂಡಿ ಆವರಿಸಿ ಅಲ್ಲಮನು ಕವಣೆಕಲ್ಲಿನಿಂದ, ಆಯುಧಗಳಿಂದ ಮುಚ್ಚಿಹೋದನು ಎನ್ನುವಂತೆ ಹೊಡೆದರು. ಆದರೆ ಅದನ್ನೇನು ಹೇಳಲಿ? ತನ್ನ ಲೀಲೆಯಲ್ಲಿ ನಿರ್ಲೇಪಿಯಾದ ಪ್ರಭುರಾಯನು ಕಲ್ಲ ರಾಶಿಯ ಮೇಲೆ ನಗುತ್ತ ನಿಂತನು. ೧೯. ಕೋಪಗೊಂಡು ಮುತ್ತಿ ಸೆಣಸಿ ಕಾದಾಡುವ ಜನರಿಗೆ ಪ್ರತ್ಯೇಕವಾಗಿ ಅನೇಕ ಅಲ್ಲಮರಾದರು ಎನ್ನುವಂತೆ ಬಹುರೂಪುಗಳಿಂದ ಶೋಭಿಸಿದನು. ಎಷ್ಟುಜನ ಎದುರಿಸಿ ನಿಂತರೂ ಅಷ್ಟೂ ಸಂಖ್ಯೆಯ ರೂಪನ್ನು ಧರಿಸಿ ಘನಮಹಿಮನಾದ ನಮ್ಮ ಅಲ್ಲಮಪ್ರಭುವು ಲಿಂಗಲೀಲೆಯಲ್ಲಿ ನಿಂತನು. ೨೦. ನೆರಳಿನ ಕೂಡ ಯುದ್ಧ ಮಾಡುವ ರೀತಿಯಲ್ಲಿ ಯುದ್ಧಮಾಡಿ ಆಯಾಸಗೊಂಡ

ಪರಿಕಿಸಲು ಹರಿಯಾದೊಡಾಗಳೆ
ತಿರುಹಿ ಚಕ್ರದೊಳಿಡುವ ಮೇಣ್ ಪುರ
ಹರನು ಮುಳಿದೊಡೆ ಭಾಳನೇತ್ರದ ಕಿಡಿಯ ಕೆದರುವನು
ಅರಿಗಳನು ನೋಯಿಸನು ತಾನೂ
ಕೆರಳನೆನುತಲ್ಲಮನ ಮಹಿಮೆಗೆ
ಶರಣು ಶರಣೆನುತಿರ್ದರೆಲ್ಲರು ಕೂಡೆ ನೋಟಕರು ೨೧

ನಮ್ಮ ಸಿದ್ಧನ ಸೆಣಸಿದಾತಂ
ಗೊಮ್ಮೆ ಶಿಕ್ಷೆಯ ಮಾಡದನ್ನಕ
ನಮ್ಮ ಕೋಪಾಟೋಪ ನಿಲ್ಲದೆನುತ್ತೆ ಪರಿತಂದು
ಸುಮ್ಮನೆಯ್ತಂದೊಬ್ಬ ಜಂಗಮ
ಹೆಮ್ಮೆಗೆಡಿಸಿಯೆ ಹಳಿದು ನುಡಿದನು
ನಿಮ್ಮನೆಂದಱುಹಿದರು ಹದನನು ಸಿದ್ಧರಾಮಂಗೆ ೨೨

ಆರು ನಮ್ಮನು ಜಱೆದವನು ಜಂ
ಭಾರಿಯೋ ದನುಜಾರಿಯೋ ಕಾ
ಮಾರಿಯೋ ತೋಱವನ ಹೆಡತಲೆಗುಗಿವೆ ನಾಲಗೆಯ
ಬೇರುಸಹಿತವೆ ಕೀಳುವೆನು ಕೈ
ವಾರವೇಕೆನುತೆದ್ದು ಬಂದನು
ಧೀರತನದಲಿ ಸಿದ್ಧರಾಮನು ಗಜಱಿ ಗರ್ಜಿಸುತೆ ೨೩

ಅವರ ಕೈ ಸೋತಿತು. ಕಡೆಯ ತನಕ ದೇಹವಿಲ್ಲದ ಅಲ್ಲಮಪ್ರಭುರಾಯನು ಯಾರೆಂದು ತಿಳಿಯಲಾರದೆ ಶಿಷ್ಯರುಗಳ ಸಮೂಹವು ಆಶ್ಚರ್ಯವನ್ನು ಹೊಂದಿತು. ೨೧. ಪರೀಕ್ಷಿಸಲು ವಿಷ್ಣುವಾಗಿದ್ದರೆ ಚಕ್ರವನ್ನು ತಿರುಗಿಸಿ ಹೊಡೆಯುತ್ತಿದ್ದನು. ಮತ್ತು ಶಿವನು ಕೋಪಗೊಂಡರೆ ಹಣೆಗಣ್ಣಿನ ಕಿಡಿಯನ್ನು ಕೆದರುವನು. ಅಲ್ಲಮನು ಶತ್ರುಗಳನ್ನು ನೋಯಿಸನು ತಾನೂ ಕೆರಳನು ಎಂದು ಆತನ ಮಹಿಮೆಗೆ [ಮನಸೋತ] ನೋಟಕರೆಲ್ಲಾ ಸೇರಿ ಶರಣು, ಶರಣು ಎನ್ನುತ್ತಿದ್ದರು. ೨೨. ನಮ್ಮ ಸಿದ್ಧನೊಂದಿಗೆ ಕಾದಾಡಲು ಬಂದಿರುವವನಿಗೆ ಒಂದು ಸಾರಿ ಶಿಕ್ಷೆಯನ್ನು ಮಾಡುವವರೆವಿಗೆ ನಮ್ಮ ಕೋಪಾಟೋಪ ನಿಲ್ಲದು ಎನ್ನುತ್ತ [ಗುರುವಿದ್ದಲ್ಲಿಗೆ] ಓಡಿ ಬಂದು "ವಿನಾಕಾರಣ ನಮ್ಮಲ್ಲಿಗೆ ಬಂದ ಒಬ್ಬ ಜಂಗಮನು ನಿಮ್ಮ ಹಿರಿಮೆ ಕೆಡುವಂತೆ ನಿಂದಿಸಿ ನುಡಿದನು" ಎಂದು ಸುದ್ದಿಯನ್ನು ಶಿಷ್ಯರು ಸಿದ್ಧರಾಮನಿಗೆ ಮುಟ್ಟಿಸಿದರು. ೨೩. "ನಮ್ಮನ್ನು ನಿಂದಿಸಿದವನಾವನು? ದೇವೇಂದ್ರನೊ, ವಿಷ್ಣುವೊ? ಶಿವನೊ? ಅವನನ್ನು ನನಗೆ ತೋರಿಸಿ, ಅವನ ತಲೆಯನ್ನು ಹೊಡೆಯುತ್ತೇನೆ, ಅವನ ನಾಲಗೆಯನ್ನು ಬೇರುಸಹಿತ ಕೀಳುವೆ, ಹೊಗಳಿಕೆ ಯೇಕೆ?" ಎನ್ನುತ್ತ ಧೀರತನದಿಂದ ಸಿದ್ಧರಾಮ ಗಜರಿ ಗರ್ಜಿಸುತ್ತ ಎದ್ದು ಬಂದನು.

ಲೇಸು ಲೇಸೈ ಸಿದ್ಧರಾಮನ
ವಾಸಿ ಸಂಸಾರಿಗಳಿಗಿಂದಲಿ
ಸಾಸಿರಕೆ ವೆಗ್ಗಳಿಸಿತಲ್ಲಾ ಸುಡು ಯತಿತ್ವವನು
ಈಸು ಕೋಪಾಟೋಪ ರೋಷಾ
ವೇಶವೇತಕೆ ಯೋಗಿಯಾದ ನಿ
ರಾಸಿವಂತಂಗೆನುತಲಿದ್ದನು ನಗುತೆ ಪ್ರಭುರಾಯ ೨೪

ಆವ ಪರಿಯಿಂದಾದೊಡೆಯು ಸುಖ
ಸೇವೆಯನು ಸೂಚಿಸುವನಲ್ಲದೆ
ಸಾವ ಹುಟ್ಟುವ ಕರ್ಮಬಂಧದ ನುಡಿಯನುಸುರುವನೆ
ದೇವನಲ್ಲಮು ನುಡಿದು ತೋಱಿದ
ಭಾವ ಸೊಗಸದೆ ಕೋಪದುರಿಯಲಿ
ತೀವಿ ಕಿಡಿಕಿಡಿವೋಗುತಿರ್ದನು ಸಿದ್ಧರಾಮಯ್ಯ ೨೫

ಸಾಕು ಸಾಕು ಮಹೇಂದ್ರಜಾಲವ
ನೀ ಕಲಿತು ಬಂದೆಮ್ಮ ಮಂದಿಯ
ಕಾಕುತನದಲಿ ಕಾಡಿದಾ ಮೊಗ್ಗಿನ್ನು ನಮ್ಮೊಡನೆ
ನೂಕಲಱಿಯದು ನಿನಗೆನುತಲು
ದ್ರೇಕದಿಂದಲಿ ಸಿದ್ಧರಾಮನ
ನೇಕವಹಣಿಯಲಣಕವಾಡುತಲಿರ್ದನಲ್ಲಮನ ೨೬

ಭಾಪುರೇ ಮಝು ಪೂತು ನೀನಹು
ದೀ ಪರಿಯಲಿರಬೇಕು ಮನದಾ
ಳಾಪದಂಗವಣೆಗಳು ಮಿಗೆ ಮಾಯಾಪ್ರಪಂಚನಲಿ
ಕೋಪ ನಿಮ್ಮಯ ಸಂಪ್ರದಾಯಕ
ಳಾಪದಲಿ ಶಾಶ್ವತವಲಾ ನಿ
ರ್ಲೇಪಗೀ ಪರಿಯುಚಿತವೇ ರಾಮಯ್ಯ ಕೇಳೆಂದ ೨೭

೨೪. "ಒಳ್ಳೆಯದು, ಒಳ್ಳೆಯದಯ್ಯಾ, ಸಿದ್ಧರಾಮನ ಪ್ರತಿಜ್ಞೆ ಸಂಸಾರಿಗಳಿಗಿಂತಲೂ ಸಾವಿರಪಾಲು ಹೆಚ್ಚಾಯಿತಲ್ಲಾ! ಸುಡು ನಿನ್ನ ಯತಿತ್ವವನ್ನು! ಸರ್ವಪರಿತ್ಯಾಗಿಯಾದ ಯೋಗಿಗೆ ಇಷ್ಟು ಕೋಪಾಟೋಪ, ರೋಷಾವೇಶಗಳೇಕೆ?" ಎಂದು ಪ್ರಭುರಾಯನು ನಗುತ್ತಾ ಹೇಳುತ್ತಿದ್ದನು. ೨೫. ದೇವನು ಯಾವ ರೀತಿಯಿಂದಾದರೂ ಸುಖಜೀವನವನ್ನು ಹೊಂದಿಸಿಕೊಡುವನಲ್ಲದೆ ಭವಪಾಶದ ಮಾತನ್ನಾಡುವನೆ? ಅಲ್ಲಮನು ನುಡಿದು ತೋರಿದ ಭಾವವು ಮನಸ್ಸಿಗೆ ಸೊಗಸದೆ ಕೋಪಾಗ್ನಿ ತುಂಬಿ ಸಿದ್ಧರಾಮಯ್ಯನು ಕಿಡಿಕಿಡಿಯಾಗುತ್ತಿದ್ದನು. ೨೬. "ಸಾಕು ಸಾಕು, ಮಹೇಂದ್ರಜಾಲವನ್ನು ನೀನು ಕಲಿತು ಬಂದು ನಮ್ಮ ಮಂದಿಯನ್ನು ಕೀಳುತನದಲ್ಲಿ ಕಾಡಿದ ಸಾಮರ್ಥ್ಯವನ್ನು ಇನ್ನು ನಮ್ಮಲ್ಲಿ ಪ್ರದರ್ಶಿಸಬೇಡ" ಎಂದು ಉದ್ರೇಕಗೊಂಡ ಸಿದ್ಧರಾಮನು ಆಡಂಬರದಿಂದ ಅನೇಕ ಬಗೆಯಲ್ಲಿ ಅಲ್ಲಮನನ್ನು ಹಾಸ್ಯಮಾಡಿದನು. ೨೭. "ಭಳಿರೆ, ಭಲಾ ಭೇಷ್! ಮಾಯಾ ಪ್ರಪಂಚದಲ್ಲಿ [ಸಿಕ್ಕಿದ ಮಾನವನ] ಮನಸ್ಸಿನ ಆಲಾಪದ ಸಾಮರ್ಥ್ಯ ಹೀಗೆ ತಾನೆ ಇರಬೇಕು!

ಕೆಣಕದಿರು ನೀ ಸಂಪ್ರದಾಯಗ
ಳೆಣಿಕೆ ನಿನಗೇಕಕಟ ಲೋಕವ
ನಣಕವಾಡಿಯೆ ಹೋಹೆಯಲ್ಲದೆ ಯೋಗಮಾರ್ಗದಲಿ
ಸೆಣಸದಿರು ನೀನಾಚೆಯೀಚೆಯ
ಬಣಗರಂದದಲೆಮ್ಮನೆಂದಡೆ
ಹಣೆಯ ಕಣ್ಣಿನ ಕಿಡಿಯ ಕೆದಱುವೆನೆಂದ ರಾಮಯ್ಯ ೨೮

ಚಾಗು ಚಾಗುರೆ ನೊಸಲುಗಣ್ಣಿನ
ಬೇಗೆಯಲಿ ಮುನ್ನೆನಿತ ಕೊಂದೆಯೊ
ಯೋಗಿಯಹುದೈ ನೀನು ಹಿಂಸಾಧರ್ಮಕರ್ಮದಲಿ
ರಾಗದಿಂದುರಿದೇಳುತಿಹ ಭವ
ರೋಗಿ ನಿನ್ನೊಳು ಮಾತನಾಡಲಿ
ಕಾಗದೆಮಗೆನುತಿರ್ದನಲ್ಲಮ ಸಿದ್ಧರಾಮಂಗೆ ೨೯

ಜಡಿದು ನುಡಿವುದನೀತನಾದೊಡೆ
ಬಿಡನೆನುತ್ತಲಿ ಸಿದ್ಧರಾಮನು
ಘುಡುಘುಡಿಸಿ ಘೂರ್ಮಿಸುತೆ ಕೋಪಿಸಿ ನೊಸಲ ಕಣ್ದೆಱೆಯೆ
ಸಿಡಿಲುಗಿಡಿಗಳು ಸೂಸೆಯಲ್ಲಮ
ನಡಿಗಳೆಡೆಯನು ಹೊದ್ದಲಮ್ಮದೆ
ಸಿಡಿದು ಸೀಕರಿಗರಸುತಿರ್ದುವು ಸಕಲ ಜೀವರನು ೩೦

ನಿಮ್ಮ ಸಂಪ್ರದಾಯದವರ ಗುಂಪಿನಲ್ಲಿ ಕೋಪವು ಶಾಶ್ವತವಲ್ಲವೇ? ಪ್ರಪಂಚಕ್ಕೆ ಅಂಟದವನಿಗೆ ಈ ರೀತಿಯು ಯೋಗ್ಯವೆ? ರಾಮಯ್ಯ ಕೇಳು" ಎಂದು ಅಲ್ಲಮನು ನುಡಿದನು. ೨೮. "ನೀನು ಕೆಣಕದಿರು. ಸಂಪ್ರದಾಯಗಳ ಎಣಿಕೆ ನಿನಗೇಕೆ? ಅಯ್ಯೋ, ಲೋಕದ ಜನರನ್ನು ಹಾಸ್ಯಮಾಡಿ ಹೋಗಬಹುದಲ್ಲದೆ, ಯೋಗಮಾರ್ಗದಲ್ಲಿ ನನ್ನೊಡನೆ ಹೋರಾಡದಿರು. ಆಚೆ ಈಚಿನ ಕ್ಷುಲ್ಲಕರ ರೀತಿಯಲ್ಲಿ ನಮ್ಮನ್ನು ನೀನು ಆಡಿದ ಹಣೆಗಣ್ಣಿನ ಕಿಡಿಯನ್ನು ಕೆದರುವೆನು" ಎಂದು ರಾಮಯ್ಯನು ಪ್ರಭುವಿನೊಂದಿಗೆ ನುಡಿದನು. ೨೯. "ಭಲಾ, ಭಲಾ! ಹಣೆಗಣ್ಣಿನ ಬೆಂಕಿಯಿಂದ ಹಿಂದೆ ಎಷ್ಟು ಜೀವಗಳನ್ನು ಕೊಂದೆಯೊ? ನೀನು ಹಿಂಸಾಧರ್ಮಕ್ರಿಯೆಯಲ್ಲಿ ಯೋಗಿಯಾಗಿರುವೆ. ವ್ಯಾಮೋಹದಿಂದ ಉರಿದೇಳುತ್ತಿರುವ ಭವರೋಗಿ ನೀನಾಗಿರುವೆ. ನಿನ್ನಲ್ಲಿ ಮಾತನಾಡಲಿಕ್ಕೆ ನಮಗಾಗದು" ಎಂದು ಅಲ್ಲಮನು ಸಿದ್ಧರಾಮನಿಗೆ ಹೇಳಿದನು. ೩೦. ಈತನಾದರೊ ಗದರಿಸಿ ನುಡಿಯುವುದನ್ನು ಬಿಡನು ಎನ್ನುತ್ತ ಸಿದ್ಧರಾಮನು ಘುಡುಘುಡಿಸಿ ಗರ್ಜಿಸಿ ಕೋಪಗೊಂಡು ಹಣೆಗಣ್ಣನ್ನು ತೆರೆಯಲು ಅಲ್ಲಿಂದ ಸಿಡಿಲಿನ ಕಿಡಿಗಳು ಹೊರಚೆಲ್ಲಿ [ಅಲ್ಲಮನು ಚಾಚಿದ] ಪಾದಗಳನ್ನೂ ಸೇರಲು ಅವು ಸಮರ್ಥವಾಗದೆ ಸಿಡಿದು ಸಕಲ ಜೀವರಾಶಿಯನ್ನು ಸುಟ್ಟುಹಾಕುತ್ತಿದ್ದುವು.

ಮಾಡಿಕೊಂಡನು ಪರಮಪುರಷನ
ಕೂಡೆ ತೋಟಿಯ ಸಿದ್ಧರಾಮನು
ಮೂಢತನದಲಿ ಹವಣನಜೆಯದೆ ಶಿವ ಮಹಾದೇವ
ನೋಡೆ ಬಡವನ ಕೋಪವವುಡಿಗೆ
ಕೇಡು ತಹವೊಲ್ ತನ್ನ ಪುರವನೆ
ಕೂಡೆ ಸುಡುತಿದೆ ಕಿಚ್ಚುಗಣ್ಣಿಂದೊದಜೆತಖಿಳಜನ ೩೧

ಕಡಲನತಿಮಥನವನು ಮಾಡಲು
ಸುಡುತೆ ಬಹ ಹಾಲಾಹಲಾಗ್ನಿಯ
ಕಡುಹ ನಿಲಿಸಿ ಜಗಂಗಳನು ರಕ್ಷಿಸಿದ ಶಿವನಂತೆ
ತೊಡೆದನಾಗಳೆ ನೊಸಲ ಕಣ್ಣಿನ
ಕಿಡಿಯನೆಲ್ಲರನುಳುಹಿದನು ತ
ನ್ನಡಿಯ ಕೃಪೆಯಿಂದಲ್ಲಮಪ್ರಭುರಾಯ ನಿಮಿಷದಲಿ ೩೨

ಕಲ್ಲ ತಾಗಿದ ಮಿಟ್ಟೆಯಂದದ
ಲೆಲ್ಲ ಮುರಿದುವು ನೊಸಲಗಣ್ಣಿನ
ದಳ್ಳುರಿಯ ನಾಲಗೆಗಳೊಯ್ಯನೆ ಹುಟ್ಟಿದೆಡೆಗಾಗಿ
ಬಳ್ಳಿ ಮರನನು ಹಬ್ಬುವಂದದಿ
ನಿಲ್ಲದಡರಲು ಬಳಿಕ ತಾ ತ
ನ್ನಲ್ಲಿ ಸಿಡಿಮಿಡಿವೋಗುತಿರ್ದನು ಸಿದ್ಧರಾಮಯ್ಯ ೩೩

ನೊಸಲ ಕಣ್ಣನು ತೋಱುವವರಿಗೆ
ವಿಷಮತರದಂಗಾಲ ಕಣ್ಣನು
ಪಸರಿಸುವರುಂಟಕಟ ಮರುಳೇ ನಿನ್ನ ಹವಣೇನು
ಸಸಿನೆ ಮಾಣೆನ್ನಾದೊಡೆಯು ಗ
ರ್ವಿಸುವ ಬುದ್ಧಿಯನೆನುತೆ ಮಿಗೆ ಬೋ
ಧಿಸಿದನೊಲವಿಂದಲ್ಲಮಪ್ರಭು ಸಿದ್ಧರಾಮಂಗೆ ೩೪

೩೧. ಸಿದ್ಧರಾಮನು ಮೂಢತನದಿಂದ ತನ್ನ ಮಟ್ಟವನ್ನು ತಿಳಿಯದೆ ಪರಮಪುರುಷನ ಜೊತೆ ಜಗಳ ಮಾಡಿಕೊಂಡನು. ಶಿವ ಮಹಾದೇವಾ! ನೋಡಲು, ಬಡವನ ಕೋಪ [ಅವನ] ದವಡೆಗೆ ಕೇಡು ತರುವಂತೆ ಉರಿಗಣ್ಣು ಅವನ ಪುರವನ್ನೇ ಸುಡುತ್ತಿದೆ ಎಂದು ಎಲ್ಲ ಜನರು ಬೊಬ್ಬೆಯಿಟ್ಟರು. ೩೨. ಕ್ಷೀರಸಮುದ್ರವನ್ನು [ದೇವತೆಗಳೂ ರಾಕ್ಷಸರೂ ಸೇರಿ] ಕಡೆಯಲು ಸುಡುತ್ತಾ ಬಂದ ವಿಷಾಗ್ನಿಯ ದರ್ಪವನ್ನು ನಿಲ್ಲಿಸಿ ಜಗತ್ತನ್ನು ರಕ್ಷಿಸಿದ ಶಿವನಂತೆ, ಆಗಲೇ ನೊಸಲ ಕಣ್ಣಿನ ಕಿಡಿಯನ್ನು ತನ್ನ ಪಾದಗಳ ಕೃಪೆಯಿಂದ ನಿಮಿಷದಲ್ಲೇ ಅಲ್ಲಮನು ತೊಡೆದು ಎಲ್ಲರನ್ನೂ ಕಾಪಾಡಿದನು. ೩೩. ಕಲ್ಲು ತಾಗಿದ ಮಣ್ಣಹೆಂಟೆಯ ರೀತಿಯಲ್ಲಿ ನೊಸಲುಗಣ್ಣಿನ ದಟ್ಟವಾದ ಉರಿಯ ನಾಲಗೆಗಳು ಎಲ್ಲ ಮುರಿದುವು; [ಮತ್ತು] ಮೆಲ್ಲನೆ ತಾವು ಜನಿಸಿದ ಸ್ಥಳಕ್ಕೆ ಹಿಂತಿರುಗಿದುವು. ಬಳ್ಳಿ ಮರವನ್ನು ಹಬ್ಬುವಂತೆ ಅವು ಬಿಡದೆ [ಸಿದ್ಧರಾಮನ ದೇಹವನ್ನು] ಹಬ್ಬಲು ಅನಂತರ ಸಿದ್ಧರಾಮಯ್ಯ ತನ್ನಲ್ಲೇ ಸಿಡಿಮಿಡಿಗೊಳ್ಳುತ್ತಲಿದ್ದನು. ೩೪. ಹಣೆಗಣ್ಣು ತೋರುವವರಿಗೆ ಭೀಕರವಾದ ಅಂಗಾಲಿನ ಕಣ್ಣ ಕಿಡಿಗಳನ್ನು ಹರಡುವವರುಂಟು. ಅಯ್ಯೋ, ಮರುಳೇ ನಿನ್ನ ಹೆಚ್ಚಳಿಕೆಯೇನು?

ನಾಚಿದುದು ಮನ ನೊಸಲ ಕಣ್ಣಿಗೆ
ಚಾಚಿದುವು ಬಳಿಕೆವೆಯ ಕದಗಳು
ಸೂಚಿಸಿತು ಪರಿಪಾಕಭಾವನೆ ಚಿತ್ತವೃತ್ತಿಯಲಿ
ಆಚರಿಸಿತನುತಾಪ ಗರ್ವಕೆ
ಮೋಚನವೆ ಮುಖವಾಯ್ತು ಯೋಗದ
ಶೌಚತೆಗೆ ಬೇರೂಱುತಿರ್ದುದು ಸಿದ್ಧರಾಮನಲಿ ೩೫

ತ್ರಿಪುರಸಂಹರನೀತನೆಂಬೊಡೆ
ಕುಪಿತನಾತನು ಶಾಂತನೀತನು
ಚಪಳ ಕಾಮವಿರೋಧಿಯಾದೊಡೆಯರ್ಧನಾರೀಶ
ಉಪಮಿಸುವೊಡೀ ಮಹಿಮನಾದೊಡೆ
ವಿಪುಳತರ ನಿರ್ಲೇಪನೀತನು
ಕಪಿಲಸಿದ್ಧಮಲ್ಲೇಶನಹನೆನುತಿರ್ದ ರಾಮಯ್ಯ ೩೬

ಕುಱಿಗಳಾದೊಡೆ ಸಲಹಿದೊಡೆಯನ
ನಱಿದು ಬೆಂಬಿಡವರರೆ ಶಿವಶಿವ
ಕುಱಿಗಳಿಂದಾ ಕಷ್ಟನಲ್ಲಾ ಎನ್ನ ರಕ್ಷಿಸುವ
ಎಱೆಯನೈತರಲೆನ್ನ ಮದದಲಿ
ಮಱೆದೆನೆನುತೊಳಗೊಳಗೆ ಮನದಲಿ
ಮಱುಗುತಲ್ಲಮನೆಡೆಗೆ ಬಂದನು ಸಿದ್ಧರಾಮಯ್ಯ ೩೭

ನೆಟ್ಟಗೆ ಇನ್ನಾದರೂ ಅಹಂಕರಿಸುವ ಬುದ್ಧಿಯನ್ನು ಬಿಡು'' ಎಂದು ಅಲ್ಲಮಪ್ರಭು ಸಿದ್ಧರಾಮನಿಗೆ ವಿಶೇಷವಾದ ಪ್ರೀತಿಯಿಂದ ಬೋಧಿಸಿದನು. ೩೫. ಸಿದ್ಧರಾಮನ ಮನ ನಾಚಿತು. ಬಳಿಕ ಹಣೆಗಣ್ಣಿನ ರೆಪ್ಪೆಯ ಕದಗಳು ಮುಚ್ಚಿದುವು. ಪರಿಪಕ್ವಭಾವನೆ ಮನಸ್ಸಿನಲ್ಲಿ ಸೂಚಿತವಾಯಿತು. ಪಶ್ಚಾತ್ತಾಪ ಉಂಟಾಯಿತು. ಗರ್ವವಿಮೋಚನೆ [ಪಶ್ಚಾತ್ತಾಪಗೊಂಡ] ಮುಖದಲ್ಲಿ ಕಾಣಿಸಿತು. ಯೋಗದಲ್ಲಿ ಶುಚಿತ್ವ ಬೇರುಬಿಟ್ಟಿತು. ೩೬. ಸಿದ್ಧರಾಮನು, "ಈತ ತ್ರಿಪುರ ಸಂಹಾರಕ [ಶಿವ]ನೆನ್ನುವುದಾದರೆ ಆತ ಕೋಪಿ, ಈತ ಶಾಂತ. ಆತನು ಅರ್ಧನಾರೀಶ್ವರನಾದರೆ ಈತನು ಕಾಮನ ವಿರೋಧಿ. ಹೋಲಿಸುವುದಾದರೆ ಈ ಮಹಿಮನು ಹೆಚ್ಚಾಗಿ ಅಂಟದೇ ಇರುವವನು. ಈತನು ಕಪಿಲಸಿದ್ಧ ಮಲ್ಲಿಕಾರ್ಜುನನೇ ಆಗಿರುವನು'' ಎನ್ನುತ್ತಿದ್ದನು. ೩೭. "ಕುರಿಗಳಾದರೂ ತಮ್ಮನ್ನು ಕಾಪಾಡಿದ ಒಡೆಯನ ಬೆನ್ನುಬಿಡವು. ನಾನು ಆ ಕುರಿಗಳಿಗಿಂತ ಕನಿಷ್ಠನಾದೆನಲ್ಲಾ. ನನ್ನನ್ನು ಕಾಪಾಡುವ ಒಡೆಯನು ನನ್ನಲ್ಲಿಗೆ ಬರಲು ನಾನು ಅಹಂಕಾರದಿಂದ ಮರೆದೆನು'' ಎನ್ನುತ್ತಾ ಮನಸ್ಸಿನೊಳಗೆ ದುಃಖಿಸುತ್ತಾ ಸಿದ್ಧರಾಮಯ್ಯನು ಅಲ್ಲಮನಿದ್ದಲ್ಲಿಗೆ ಬಂದನು.

ತ್ರಾಹಿ ಕರುಣಾಕರನೆ ಸರ್ವ
ದ್ರೋಹವೆನ್ನದು ನಿನ್ನನಱಿಯದೆ
ಮೋಹ ಮಾಯಾಡಂಬರಕೆ ಮರುಳಾದೆನಿನ್ನೆಬರ
ಊಹೆಗೇಡುಗನವಗುಣದ ಸಂ
ದೋಹವನು ನೀ ಮಱೆದು ಕರುಣಿಸ
ಬೇಹುದೆನುತಾ ರಾಮನಲ್ಲಮನಂಘ್ರಿಗೆರಗಿದನು ೨೮

ಮನದೊಳಗೆ ನಸುನಗುತಲೀ ಮೂ
ರ್ಖನ ಗುಣಂಗಳನೇನ ನೋಡುವೆ
ನೆನುತಲಲ್ಲಮ ಸರ್ವಜೀವದಯಾಪ್ರದಾಯಕನು
ತನುಜ ಸಾಕೇಳೇಳು ಖಾತಿಯ
ನೆನಹು ನಮ್ಮೊಳಗಿಲ್ಲವೆನುತಲಿ
ವಿನಯದಿಂದೆತ್ತಿದನು ರಾಮನ ವಿಮಲ ಮಸ್ತಕವ ೩೯

ದೇವ ನೀನೀ ಪರಿಯ ಜಂಗಮ
ಭಾವಭಣಿತೆಯ ಧರಿಸಿ ಬಂದೊಡೆ
ಗಾವಿಲರು ನಾವೆತ್ತ ಬಲ್ಲೆವು ನಿಮ್ಮ ಮಹಿಮೆಯನು
ಜಾವಳಿಗ ನೀನೆಂದು ಬಗೆದಕ
ಟಾವು ಬಳಲಿದೆವಿನ್ನು ಕರುಣಿಸಿ
ಕಾವುದೆನುತಲಿ ಸಿದ್ಧರಾಮನು ನುಡಿದನಲ್ಲಮಗೆ ೪೦

ಹರಸಿಕೊಳ್ಳದೆ ಕೆಲರು ಸಚರಾ
ಚರರಿಗೊಳ್ಳಿತ ಪಕ್ಷಪಾತದಿ
ಹರಸಿ ಗೋ ಬ್ರಾಹ್ಮರಿಗೆ ಶಾಂತಿಗಳಾಗಲೆಂಬಂತೆ
ಹಿರಿಯರನು ಸತ್ಕರಿಸಿ ಮಿಕ್ಕಾ
ದರನು ಧಿಕ್ಕರಿಸುವುದು ಯೋಗೀ
ಶ್ವರರಿಗನುಚಿತವೆಂಬರೈ ರಾಮಯ್ಯ ಕೇಳೆಂದ ೪೧

೩೮. "ಕರುಣಾಕರನೆ ರಕ್ಷಿಸು, ಎಲ್ಲಾ ತಪ್ಪೂ ನನ್ನದು. ನಿನ್ನನ್ನು ತಿಳಿಯದೆ ಇಲ್ಲಿಯವರೆವಿಗೂ ಮೋಹ ಮಾಯಾಡಂಬರಕ್ಕೆ ಮರುಳಾದೆ. ಊಹೆಮಾಡಲಾಗದಷ್ಟು ಕೇಡನ್ನು ಮಾಡಿರುವ ನನ್ನ ಅವಗುಣಗಳ ಮೊತ್ತವನ್ನು ನೀನು ಮರೆತು ಕರುಣಿಸಬೇಕು" ಎಂದು ಸಿದ್ಧರಾಮನು ಅಲ್ಲಮನ ಪಾದಗಳಿಗೆ ನಮಸ್ಕರಿಸಿದನು. ೩೯. ಮನದೊಳಗೆ ನಸುನಗುತ್ತ, ಈ ಮೂರ್ಖನ ಗುಣಗಳನ್ನೇನು ನೋಡಲಿ ಎನ್ನುತ್ತ, ಸರ್ವಜೀವಿಗಳಿಗೆ ದಯೆಯನ್ನು ಅನುಗ್ರಹಿಸುವ ಅಲ್ಲಮನು ವಿನಯದಿಂದ "ಮಗನೇ ಸಾಕು ಏಳೇಳು, ಕೋಪದ ನೆನಹು ನಮ್ಮೊಳಗೆ ಇಲ್ಲ" ಎಂದು ಸಿದ್ಧರಾಮನ ಪರಿಶುದ್ಧವಾದ ಶಿರಸ್ಸನ್ನು ಮೇಲೆತ್ತಿದನು. ೪೦. "ದೇವಾ, ನೀನು ಹೀಗೆ ಜಂಗಮರೀತಿಯ ವೇಷವನ್ನು ಧರಿಸಿ ಬಂದರೆ ಸಾಮಾನ್ಯರಾದ ನಾವೆಲ್ಲಿ ನಿಮ್ಮ ಮಹಿಮೆಯನ್ನು ತಿಳಿದೇವು? ನೀನು ಸಾಮಾನ್ಯಮನುಷ್ಯ ಎಂದು ಭಾವಿಸಿ, ಅಯ್ಯೋ, ನಾವು ಬಳಲಿದೆವು. ಇನ್ನು ಕರುಣಿಸಿ ರಕ್ಷಿಸುವುದು" ಎಂದು ಸಿದ್ಧರಾಮ ಅಲ್ಲಮನಿಗೆ ಹೇಳಿದನು. ೪೧. "ಪ್ರಾರ್ಥಿಸದೆಯೆ ಕೆಲವರು ಗೋ ಬ್ರಾಹ್ಮಣರಿಗೆ ಶಾಂತಿಯಾಗಲಿ ಎಂದು, ಸಚರಾಚರರಿಗೆ ಒಳ್ಳೆಯದಾಗಲಿ ಎಂದು ಹರಸುವುದಿಲ್ಲವೆ? ಹಿರಿಯರನ್ನು

ಚಿತ್ತವಿಸು ಗುರುರಾಯ ನಮ್ಮಯ
ಚಿತ್ತದೊಳಗಿನ್ನೂ ವಿಚಾರಿಸ
ಲುತ್ತಮಾಧಮ ಪಕ್ಷಪಾತ ಭ್ರಮೆಗಳಿಡಿದಿಹವು
ಎತ್ತ ಬಲ್ಲೆವು ಸರ್ವರನು ಸಮ
ಚಿತ್ತದಲಿ ಕಾಂಬಜೀವ ನೀನೊಲಿ
ದಿತ್ತೊಡೆಮಗಿನ್ನಾದೊಡಗಲಿ ದೇವ ಕೇಳೆಂದ ೪೨

ಆಗಲದಕೇನೊಂದು ಬಾರಿಯ
ಲಾಗುವುದೆ ಸಮಬುದ್ಧಿ ಮೆಲ್ಲನೆ
ಲಾಗಿಸುವುದಿರುತಿರುತಲೀ ಪರಿ ಚಿತ್ತಶುದ್ಧಿಯಲಿ
ಯೋಗಮಾರ್ಗವನರಿವೊಡಖಿಳನಿ
ಯೋಗಿಯಾದೊಡೆ ಬಳಿಕಲಾತಗೆ
ಬೇಗ ಸಮತೆ ಸಮಾಧಿಯಹುದೈ ರಾಮ ಕೇಳೆಂದ ೪೩

ಎನಗೆ ನಿಮ್ಮಯ ದರ್ಶನ ಸ್ಪ
ರ್ಶನವೆ ಸರ್ವಸಮಾಧಿಯೆನಗಾ
ಮನುಮುನಿ ತ್ರಿದಶರುಗಳಿದಿರೇ ದೇವ ಕೇಳಿನ್ನು
ಮನವೊಲಿದು ನೀವಿನ್ನು ಮಲ್ಲಿಕಾ
ರ್ಜುನನ ನೋಡಲು ಬಿಜಯಮಾಡುವು
ದೆನುತೆ ತನ್ನಯ ಮಠಕೆ ಕರೆದನು ರಾಮನಲ್ಲಮನ ೪೪

ಸತ್ಕರಿಸಿ ಉಳಿದವರನ್ನು ಪಕ್ಷಪಾತದಿಂದ ತಿರಸ್ಕರಿಸುವುದು ಯೋಗೀಶ್ವರರಿಗೆ ಅನುಚಿತ ಎನ್ನುವರು ರಾಮಯ್ಯ, ಕೇಳು" ಎಂದು ಅಲ್ಲಮನು ನುಡಿದನು. ೪೨. "ಗುರುರಾಯ ಆಲಿಸು, ನಮ್ಮ ಮನದಲ್ಲಿ ವಿಚಾರ ಮಾಡಲು ಇನ್ನೂ ಉತ್ತಮ ಅಧಮ ಎಂಬ ಪಕ್ಷಪಾತದ ತಪ್ಪು ತಿಳುವಳಿಕೆ ತುಂಬಿರುವುವು. ಎಲ್ಲರನ್ನೂ ಸಮಭಾವದಿಂದ ಕಾಣುವ ತಿಳುವಳಿಕೆಯನ್ನು ನಾವೆಲ್ಲಿ ಬಲ್ಲೆವು? [ಆ ತಿಳುವಳಿಕೆಯನ್ನು] ನೀನು ಒಲಿದು ಕೊಡುವಂತಾಗಲಿ" ಎಂದು ಸಿದ್ಧರಾಮನು ಹೇಳಿದನು. ೪೩. "ಆಗಲಿ ಅದಕ್ಕೇನು, ಒಮ್ಮಿಂದೊಮ್ಮೆಗೆ ಸಮಬುದ್ಧಿ ಪ್ರಾಪ್ತವಾಗುವುದೆ? ಚಿತ್ತಶುದ್ಧಿಯಿಂದ ಇರುತ್ತಲಿರುತ್ತಾ ಮೆಲ್ಲಮೆಲ್ಲನೆ ಮುಂದುವರಿಯುವುದು. ಯೋಗಮಾರ್ಗವನ್ನು ತಿಳಿದು ವಿಶೇಷ ಯೋಗಿಯಾದರೆ ಬಳಿಕ ಆತನಿಗೆ ಬೇಗನೆ ಸಮತೆ ಸಮಾಧಿ ಪ್ರಾಪ್ತವಾಗುವುದು, ಸಿದ್ಧರಾಮ, ಕೇಳು" ಎಂದನು. ೪೪. "ದೇವಾ ಕೇಳು, ಇನ್ನು ನನಗೆ ನಿಮ್ಮ ದರ್ಶನ ಸ್ಪರ್ಶನವೇ ಸರ್ವಸಮಾಧಿ. ನನಗೆ ಮನುವೇ ಮೊದಲಾದ ಮೂವತ್ತು ಮಂದಿ ಮುನಿಗಳು ಎದುರಾಗಬಲ್ಲರೆ? ಮನವೊಲಿದು ನೀವು ಇನ್ನು ಮಲ್ಲಿಕಾರ್ಜುನನನ್ನು ನೋಡಲು ದಯಮಾಡಿಸುವುದು" ಎಂದು ತನ್ನ ಮಠಕ್ಕೆ ಅಲ್ಲಮನನ್ನು ಸಿದ್ಧರಾಮ ಆಹ್ವಾನಿಸಿದನು.

ಬಿಡು ಮರುಳೆ ಮನೆಯೇನು ಮಠವೇ
ನಡವಿಯೇನೂರೇನು ಬೇಱೊಂ
ದೆಡೆಗಳುಂಟೇ ಸರ್ವಗತನಾದಾ ಮಹಾತ್ಮಂಗೆ
ನುಡಿದುದೇ ಶಿವತತ್ವದಾಗಮ
ನಡೆದುದೇ ಶಿವಮಾರ್ಗ ಶರಣರ
ಬೆಡಗು ತಾನೀ ಪರಿ ಕಣಾ ರಾಮಯ್ಯ ಕೇಳೆಂದ ೪೫

ಅಹುದು ನಿಮ್ಮಯ ಚಿತ್ತ ಬಂದ
ಲ್ಲಿಹುದು ನಾವದನೇನ ಬಲ್ಲೆವು
ಸಹಜವಾದೊಡೆ ಸರ್ವತೋಮುಖ ಶರಣರನುಮತವ
ವಿಹಿತವೆಮಗಿನ್ನೇನು ಗತಿ ಘನ
ಮಹಿಮ ಕರುಣಿಸೆನುತ್ತೆ ಕಿಂಕಲ
ಸಹಿತ ಬಿನ್ನಹ ಮಾಡುತಿರ್ದನು ರಾಮನಲ್ಲಮಗೆ ೪೬

ಚಿತ್ತದಲಿ ಪರಿಪಾಕವಾದ ಮ
ಹೋತ್ತಮಂಗಲ್ಲದೆ ನಿರರ್ಥಕೆ
ಬಿತ್ತಲಾಗದು ತತ್ವಬೀಜವ ಬದ್ಧ ಭವಿಗಳಲಿ
ಹೊತ್ತು ಹೋಗದೆ ಗೋಷ್ಠಿಮಾಡುವ
ಕೃತ್ಯವಲ್ಲಿದು ಸಕಲ ಸಂಗನಿ
ವೃತ್ತನಾದಂಗಲ್ಲದಾಗದು ರಾಮ ಕೇಳೆಂದ ೪೭

ಹಲವು ಬಿನ್ನಹಕಂಜುವೆನು ಕೋ
ಟಲೆಗೆ ನಾನಿನ್ನಾಱೆ ಕರ್ಮದ
ಕಳವಳಕೆ ಬೇಸತ್ತೆ ಖಂಡಜ್ಞಾನಮಾರ್ಗದಲಿ
ಹೊಲಬುಗೆಟ್ಟೆನು ನಿನ್ನ ಪಾದದ
ನೆಲೆಯ ಕಾಣದೆ ದೇವ ನೀನೇ
ಸಲಹೆನುತಲಲ್ಲಮಗೆ ಮೆಯ್ಯಿಕ್ಕಿದನು ರಾಮಯ್ಯ ೪೮

೪೫. "ಹುಚ್ಚಪ್ಪಾ [ನಿನ್ನ ಅಜ್ಞಾನವನ್ನು] ಬಿಡು. ಎಲ್ಲೆಡೆಯೂ ಇರುವ ಮಹಾತ್ಮನಿಗೆ ಮನೆಯೇನು, ಮಠವೇನು, ಅಡವಿಯೇನು, ಊರೇನು? ಪ್ರತ್ಯೇಕವಾದ ಸ್ಥಳಗಳುಂಟೇ? ಶರಣರು ನುಡಿದುದೇ ಶಿವತತ್ವ, ಶಿವಾಗಮ; ನಡೆದುದೇ ಶಿವಮಾರ್ಗ. ಶರಣರ ತೋರಿಕೆ ಈ ರೀತಿಯದು ಕಣಾ, ರಾಮಯ್ಯ, ಕೇಳು" ಎಂದು ಅಲ್ಲಮನು ನುಡಿದನು. ೪೬. "ಸರಿ, ನಿಮ್ಮ ಮನಸ್ಸಿಗೆ ತೋರಿದಂತೆ ಇರುವುದು. ನಾವು ಅದನೇನು ಬಲ್ಲೆವು? ಸರ್ವತೋಮುಖರಾದ ಶರಣರ ಸಮ್ಮತಿಯೆ ಸಹಜವಾಗಿ ವಿಹಿತವು. ನಮಗೆ ಬೇರೆ ಗತಿಯೇನು? ಘನಮಹಿಮ ಕರುಣಿಸು" ಎಂದು ತುಂಬಿದ ಮನದಿಂದ ಗುಂಪಿನೊಡನೆ ಸಿದ್ಧರಾಮನು ಅಲ್ಲಮನಲ್ಲಿ ಬಿನ್ನಹ ಮಾಡುತ್ತಿದ್ದನು. [ಟಿ. ಕಿಂಕಲ = ಜನಸಮೂಹ] ೪೭. "ಮನದಲ್ಲಿ ಪರಿಪಕ್ವತೆಯನ್ನು ಹೊಂದಿದ ಶ್ರೇಷ್ಠ ಪುರುಷನಿಗಲ್ಲದೆ ವ್ಯರ್ಥವಾಗಿ ತತ್ವಬೀಜವನ್ನು ಬದ್ಧಭವಿಗಳಿಗೆ ಬಿತ್ತಲಾಗದು. ಇದು ಹೊತ್ತುಹೋಗದೆ ಚರ್ಚೆಮಾಡುವ ಕಾರ್ಯವಲ್ಲ. ಸರ್ವಸಂಗಪರಿತ್ಯಾಗಿಗಲ್ಲದೆ ಉಳಿದವರಿಗೆ ಇದು ಆಗದು, ಸಿದ್ಧರಾಮ ಕೇಳು" ಎಂದು ಪ್ರಭು ನುಡಿದನು. ೪೮. "ಹಲವು ಪ್ರಾರ್ಥನೆಗಳಿಗೆ ನಾನು ಅಂಜುವೆನು. ನಾನಿನ್ನು ಚಿಂತಿಸುವುದಿಲ್ಲ. ಕರ್ಮದ ಕಳವಳಕ್ಕೆ ಬೇಸತ್ತಿರುವೆನು. ಅಲ್ಪಜ್ಞಾನಮಾರ್ಗದಲ್ಲಿ

ಮತ್ತೆ ಕರುಣಿಸಿ ಹೆಜಿನೊಸಲ ಹಿಡಿ
ದೆತ್ತಿ ಬಾರೆಂದೆನುತ ತನ್ನಯ
ಹತ್ತಿರಕೆ ಕರೆದಾತನನು ಕೈವಿಡಿದು ಕುಳ್ಳಿರಿಸಿ
ಹೆತ್ತ ತಂದೆಯದಾವ ಪರಿಯಲಿ
ಪುತ್ರನನು ಬೋಳೈಸುವಂತಿರೆ
ನಿತ್ಯನಲ್ಲಮ ಸಿದ್ಧರಾಮನನೊಲಿದು ಮನ್ನಿಸಿದ ೪೯

ಲಕ್ಷಿಸುವೊಡೆಂಬತ್ತುನಾಲುಕು
ಲಕ್ಷದೇಹಿಗಳೊಳಗೆ ಮಾನವ
ಪಕ್ಷದೇಹಿಯೆ ಸಕಲಕರ್ಮಕೆ ಕರ್ತನಾಗಿಹನು
ಮೋಕ್ಷಸಾಧಕರಾದವರುಗಳು
ಪೇಕ್ಷಿಸದೆ ಸರ್ವೇಂದ್ರಿಯಂಗಳ
ಶಿಕ್ಷಿಸಲು ಸುಖಿಯಪ್ಪರೈ ರಾಮಯ್ಯ ಕೇಳೆಂದ ೫೦

ಇಂದ್ರಿಯಂಗಳನಾವ ಪರಿಯಲಿ
ಬಂಧಿಸುವ ತೆರ ಮೊಲನ ಕಂಡೊಡೆ
ನಿಂದುದುಂಟೇ ನಾಯಿಗಳು ದಿಟವಾ ಪ್ರಕಾರದಲಿ
ಮುಂದುವರಿವುವು ವಿಷಯದಿಚ್ಛೆಗೆ
ಕೊಂದು ಕೂಗುವವತಿಮಹಾಬಳ
ದಿಂದ್ರಿಯಕೆ ನಾನೇಗುವೆನು ಗುರುರಾಯ ಕೇಳೆಂದ ೫೧

ನಿನ್ನ ಪಾದಗಳ ನೆಲೆ ಕಾಣದೆ ದಾರಿತಪ್ಪಿರುವೆನು. ದೇವಾ ನೀನೇ ರಕ್ಷಿಸು" ಎಂದು ಸಿದ್ಧರಾಮಯ್ಯನು ಅಲ್ಲಮನಿಗೆ ಅಡ್ಡಬಿದ್ದನು. ೪೯. ಮತ್ತೆ ಕರುಣಿಸಿ, ಚಂದ್ರನಂತಿರುವ ಹಣೆಯನ್ನು ಹಿಡಿದೆತ್ತಿ ಬಾರಾ ಎಂದು ಹೇಳಿ ತನ್ನ ಹತ್ತಿರಕ್ಕೆ ಕರೆದು, ಕೈಹಿಡಿದು ಕುಳ್ಳಿರಿಸಿ, ಹೆತ್ತ ತಂದೆ ಯಾವ ರೀತಿಯಲ್ಲಿ ಮಗನನ್ನು ಸಮಾಧಾನಿಸುವನೋ ಆ ರೀತಿಯಲ್ಲಿ ನಿತ್ಯನಾದ ಅಲ್ಲಮನು ಸಿದ್ಧರಾಮನಿಗೆ ಒಲಿದು ಅವನನ್ನು ಕ್ಷಮಿಸಿದನು. ೫೦. "ಗಮನಿಸಿದರೆ ಎಂಬತ್ತುನಾಲ್ಕುಲಕ್ಷ ದೇಹಿಗಳೊಳಗೆ ಮಾನವದೇಹಿಯೇ ಸಕಲಕರ್ಮಗಳಿಗೆ ಮೂಲನಾಗಿರುವನು. ಮೋಕ್ಷಸಾಧಕರಾದವರುಗಳು ಕಡೆಗಣಿಸದೆ ಸರ್ವಇಂದ್ರಿಯ ಗಳನ್ನು ಶಿಕ್ಷಿಸಿದರೆ ಅವರು ಸುಖಿಯಾಗುವರು. ರಾಮಯ್ಯ, ಕೇಳು" ಎಂದನು. ೫೧. "ಇಂದ್ರಿಯಗಳನ್ನು ಯಾವ ರೀತಿಯಲ್ಲಿ ಬಂಧಿಸಬೇಕು? ಮೊಲವನ್ನು ನಾಯಿಗಳು ಕಂಡರೆ ನಿಲ್ಲುವುದುಂಟೆ? ನಿಜವಾಗಿ ಆ ಪ್ರಕಾರದಲ್ಲಿ ಇಂದ್ರಿಯಗಳು ಮುಂದುವರಿಯುವುವು; ವಿಷಯದ ಇಚ್ಛೆಗೆ ಕೊಂದು ಕೂಗುವುವು. ಅತಿಶಕ್ತಿಶಾಲಿಯಾದ ಇಂದ್ರಿಯಗಳಿಗೆ ನಾನೇನು ಮಾಡಲಿ? ಗುರುರಾಯ, ಹೇಳು" ಎಂದನು.

ಊಹಿಸುವೊಡಿಂದ್ರಿಯಕೆ ಮನವೇ
ಬೇಹ ನಾಯಕನದಱ ಗಮಕದ
ಗಾಹು ಶಬ್ದ ಸ್ಪರ್ಶ ರೂಪು ರಸ ಪ್ರಗಂಧದಲಿ
ಮೋಹದಂತಿರೆ ಸೆಳೆದು ಸಮತೆಯ
ಸಾಹಸದಲಿರಲಿಂದ್ರಿಯಂಗಳ
ಕಾಹುರಂಗಳು ಕೆಡುವುವೈ ರಾಮಯ್ಯ ಕೇಳೆಂದ ೫೨

ಮನದ ಹರವರಿ ಹೊನ್ನ ಮಣ್ಣಿನ
ವನಿತೆಯರ ಮೇಲಿರದೆ ಸದ್ವ
ರ್ತನೆಯಲಿರ್ದೊಡೆ ದೋಷವೇನದಱಿಂದೆ ಯತಿಯಾಗಿ
ಜನಕೆ ಬೇಡಿದನಿತ್ತು ಸುಖದಲಿ
ಘನದ ಪುಣ್ಯವನಾರ್ಜಿಸಿರ್ದೊಡೆ
ತನಗೆ ನಿಜಪದವಾಗದೇ ಗುರುರಾಯ ಹೇಳೆಂದ ೫೩

ಖ್ಯಾತಿ ಪೂಜಾ ಲಾಭದಾಶಾ
ಪ್ರೀತಿಯಿಂದಲಿ ದಾನಧರ್ಮ
ವ್ರಾತವನು ಮಾಡಿದಡೆ ಬಿತ್ತಿದ ಬೆಳೆಯನುಂಬಂತೆ
ಆತು ಬಂದ ಸಮಸ್ತಭೋಗವ
ನೋತು ಭೋಗಿಸುತಿಪ್ಪನಲ್ಲದೆ
ಮಾತುಮಾತಿಗೆ ನಿತ್ಯವುಂಟೇ ರಾಮ ಕೇಳೆಂದ ೫೪

ತೊಱೆದು ಸತಿ ಸುತ ಮಾತೆ ಪಿತರುಗ
ಳೆಱಕವನು ಯತಿಯಾಗಿ ಸುಖದಲಿ
ಕೆಱೆಗಳಾರವೆ ಬಾವಿ ದೇಗುಲಗಳನು ರಚಿಸಿದರೆ
ಅಱಿಯಬಾರದು ಕಂಡ ಬಳಿಕಿ
ನ್ನಱಿವ ಪರಿಯೆಂತಯ್ಯ ನಿಜವನು
ಬಱಿದೆ ಬಣ್ಣಿಸಬೇಡವೈ ಗುರುರಾಯ ಕೇಳೆಂದ ೫೫

೫೨. "ಊಹಿಸುವುದಾದರೆ, ಇಂದ್ರಿಯಗಳಿಗೆ ಮನವೇ ಸಮರ್ಥನಾಯಕನು. ಶಬ್ದ ಸ್ಪರ್ಶ ರೂಪು ರಸ ಗಂಧಗಳಲ್ಲಿ ಅದರ ರೀತಿ ಕಪಟತನದಿಂದ ಕೂಡಿರುವುದು. ಮೋಹದಂತೆ ಸಮತೆಯನ್ನು ಸ್ವಾಧೀನಪಡಿಸಿಕೊಂಡು ಸಾಹಸದಿಂದ ಇರಲು ಇಂದ್ರಿಯಗಳ ಕಾತುರಗಳು ನಾಶವಾಗುವುವು, ರಾಮಯ್ಯ ಕೇಳು" ಎಂದನು. ೫೩. "ಮನಸ್ಸಿನ ಪ್ರಕಟಣೆ ಹೊನ್ನು ಮಣ್ಣು ಹೆಣ್ಣುಗಳ ಮೇಲಿರದೆ ಸನ್ಯಾಸಿಯಾಗಿ ಜನಗಳಿಗೆ ಸಂತೋಷದಿಂದ ಬೇಡಿದುದನ್ನು ಕೊಟ್ಟು, ಹಿರಿದಾದ ಪುಣ್ಯವನ್ನು ಸಂಪಾದಿಸಿದರೆ ನನಗೆ ಮುಕ್ತಿ ಸಿಗದೆ? ಗುರುರಾಯ ಹೇಳು" ಎಂದು ಸಿದ್ಧರಾಮ ಪ್ರಶ್ನಿಸಿದನು. ೫೪. "ಖ್ಯಾತಿ ಪೂಜೆ ಲಾಭ ಆಸೆ ಪ್ರೀತಿಗಳಿಂದ ದಾನಧರ್ಮಗಳನ್ನು ಮಾಡಿದರೆ, ಬಿತ್ತಿದ ಬೆಳೆಯನ್ನು ಉಂಡಂತೆ, ಒದಗಿಬಂದ ಸರ್ವಭೋಗಗಳನ್ನು ಒಲಿದು ಅನುಭವಿಸುತ್ತಿರುವನು. ಬರಿಯ ಮಾತನಾಡಿದರೆ ಮುಕ್ತಿ ದೊರಕುತ್ತದೆಯೆ? ಸಿದ್ಧರಾಮ ಕೇಳು" ಎಂದನು. ೫೫. "ಸತಿ ಸುತ ಮಾತೆ ಪಿತ ಇವರುಗಳ ಮೇಲಿನ ಪ್ರೀತಿಯನ್ನು ತೊರೆದು ಸನ್ಯಾಸಿಯಾಗಿ ಸುಖದಿಂದ ಕೆರೆಗಳು, ಉದ್ಯಾನ, ಬಾವಿ, ದೇಗುಲಗಳನ್ನು ನಿರ್ಮಿಸಿದರೆ

ಕಾರಣಿಕವೇ ಮನಸು ಮನಸೇ
ಬೇರು ಬಿಟ್ಟಿಹುದನ್ಯಕರ್ಮದ
ಕಾರಿಯಂಗಳಲಂತರಂಗವೆ ಹಾಳುಬಿದ್ದಿಹುದು
ಆರು ಬಲ್ಲರು ಬಳಿಕ ಸುಖವಸು
ಮಾರಿ ಮಂಡಿಸಿಯವರ ತನುವನು
ಹೀರಿ ಹಿಪ್ಪೆಯ ಮಾಡದಿಹಳೇ ರಾಮ ಕೇಳೆಂದ ೫೬

ಆದೊಡಿನ್ನಾ ಸಾವು ತಪ್ಪುವ
ಭೇದವಾವುದು ಮುಕ್ತಿಮಾರ್ಗದ
ಹಾದಿ ಯಾವುದು ನಿತ್ಯನಹ ಪರಿಯಾವುದೈ ಗುರುವೆ
ವಾದವೇತಕೆ ನಮಗೆ ನಿಮ್ಮಯ
ಪಾದ ಶರಣೆನಬಲ್ಲೆವಲ್ಲದೆ
ಬೋಧಿಸುವುದೆನಗೆನುತಲಿರ್ದನು ಸಿದ್ಧರಾಮಯ್ಯ ೫೭

ಹಸನ ಮಾಡಿಯೆ ಹರಗಿ ಹೊಲನಲಿ
ಕಸವ ಬಿತ್ತುವ ಮರುಳನಂತಿರೆ
ಮಿಸುಗುವಂತರ್ಮಾರ್ಗದೋಜೆಗೆ ಬಂದ ತನುಮನವ
ಕಿಸುಕುಳದ ಬಹಿರಂಗದಿಚ್ಛೆಯ
ಬೆಸನದಲಿ ಬೇಯಿಸದೆ ನಿನ್ನಯ
ವಸವ ಮಾಡಲು ನೀನೆ ಸುಖಿಯೈ ರಾಮ ಕೇಳೆಂದ ೫೮

[ಪರಮಪದವನ್ನು] ತಿಳಿಯಲಾಗುವುದಿಲ್ಲ. ಜ್ಞಾನಿಯಾದ ಮೇಲೆ ಮುಕ್ತಿಯನ್ನು ಹೊಂದುವ ರೀತಿ ಹೇಗೆ? ಸುಮ್ಮನೆ ವರ್ಣಿಸಬೇಡ, ಗುರುರಾಯ ಹೇಳು" ಎಂದನು. ೫೬. "ಮನಸ್ಸೇ ಕಾರಣಪುರುಷ. ಇತರ ಕರ್ಮದ ಕಾರ್ಯಗಳಲ್ಲಿ ಮನಸ್ಸು ಬೇರುಬಿಟ್ಟಿರುವುದು; ಅಂತರಂಗವೆ ಹಾಳುಬಿದ್ದಿರುವುದು. ಆ ಬಳಿಕ ಸುಖವನ್ನು ಯಾರು ಬಲ್ಲರು? ಮಾರಿಯು [ಅರಿಷಡ್ವರ್ಗಗಳು] ಕುಳಿತು ಅವರ ದೇಹವನ್ನು ಹೀರಿ ಹಿಪ್ಪೆಯ ಮಾಡದಿರುವಳೆ? ಸಿದ್ಧರಾಮ ಕೇಳು" ಎಂದನು. ೫೭. "ಹಾಗಾದರೆ ಗುರುವೆ, ಇನ್ನು ಸಾವನ್ನು ತಪ್ಪಿಸುವ ರೀತಿ ಯಾವುದು? ಮುಕ್ತಿಯ ದಾರಿ ಯಾವುದು? ಜನನಮರಣರಹಿತನಾಗುವ ರೀತಿ ಯಾವುದು? [ಇನ್ನು] ನಿಮ್ಮ ಪಾದವೇ ಶರಣು ಎನಬಲ್ಲೆವಲ್ಲದೆ ನಿಮ್ಮಲ್ಲಿ ವಾದ ನಮಗೇಕೆ? ನನಗೆ ತತ್ವಬೋಧೆ ಮಾಡುವುದು" ಎಂದು ಸಿದ್ಧರಾಮಯ್ಯನು [ಅಲ್ಲಮನನ್ನು] ಕೇಳಿಕೊಂಡನು. ೫೮. ಹಸನುಮಾಡಿ, ಹೆಂಟೆಯೊಡೆದು ಸಿದ್ಧಮಾಡಿದ ಹೊಲದಲ್ಲಿ ಕಸವನ್ನು ಬಿತ್ತುವ ಹುಚ್ಚನಂತೆ ಪ್ರಕಾಶಿಸುವ ಅಂತರ್‌ಜ್ಞಾನದ ಹಾದಿಯಲ್ಲಿ ಬಂದಂತಹ ತನು ಮನಗಳನ್ನು ತುಚ್ಛವಾದ ಬಹಿರಂಗದ ಬಯಕೆಯ ಕಾರ್ಯಗಳಲ್ಲಿ ಬೇಯಿಸದೆ ನಿನ್ನ ವಶ ಮಾಡಿಕೊಳ್ಳಲು ನೀನೇ ಸುಖಿಯಾಗುವೆ, ರಾಮಯ್ಯ ಕೇಳು" ಎಂದನು.

ಆವನಾದೊಡೆಯಂತರಂಗದ
ಭಾವದಲಿ ಬಗೆವುಗಲು ಬಹುವೈ
ಬೇವಸಂಗಳು ಮೊದಲಲವನೆಂತಾನು ತಪ್ಪಿಸಿದೊಡೆ
ದೇವತಾಭೋಗಾದಿಗಳು ಸಂ
ಭಾವಿಸುವುವವಕೊಲಿದು ಸಿಕ್ಕದ
ದೀವಸಿಯೆ ಸುಖಿಯಪ್ಪನೈ ರಾಮಯ್ಯ ಕೇಳೆಂದ ೫೯

ಶಕ್ರನಹನಜನಹನು ತತ್ತಡೆ
ಚಕ್ರಿಯಹನನುಭಾವ ಭರದಲಿ
ನಕ್ರಕೇತನವೈರಿಯಹ ಭಾಳಾಕ್ಷ ತಾನಹನು
ಈ ಕ್ರಮಂಗಳಿವೆಲ್ಲ ಮುಕ್ತಿಗೆ
ವಕ್ರವಾಗಿಹುವಿವನು ಬಗೆಯಧ
ವಿಕ್ರಮನೆ ಸುಖಿಯಪ್ಪನೈ ರಾಮಯ್ಯ ಕೇಳೆಂದ ೬೦

ಕೀಳುಮಾಂಸದ ಸವಿಗೆ ಗಂಟಲ
ಗಾಳವನು ಮಿಗೆ ಕಚ್ಚಿ ದುಷ್ಟನ
ದಾಳಿಗೊಳಗಹ ಮೀನಿನಂತಿರೆ ವಿಷಯಸುಖಗಳಿಗೆ
ಲೋಲರಾದರು ಹರಿ ಹರ ಬ್ರ
ಹ್ಮಾಳಿಗಳು ಮೊದಲಾಗಿ ಕಾಲನ
ಕಾಳಬಾಯಿಗೆ ಬೀಳ್ವರೈ ರಾಮಯ್ಯ ಕೇಳೆಂದ ೬೧

೫೯. "ಯಾವಾತನಿಗೇ ಆಗಲಿ ಅಂತರಂಗದ ಭಾವದಂತೆ ಮನಸ್ಸು ಪ್ರವೇಶಿಸಲು ಸಂಕಟಗಳು ಬರುವುವು. ಮೊದಲಿಗೆ ಅವನ್ನು ಹೇಗಾದರೂ ಮಾಡಿ ತಪ್ಪಿಸಿದರೆ ದೇವ ಲೋಕದ ಭೋಗಾದಿಗಳು ಪ್ರಾಪ್ತವಾಗುವುವು. ಅವುಗಳಿಗೆ ಒಲಿದೂ ಒಳಗಾಗದ ಧೀರನು ಸುಖಿಯಾಗುವನು, ರಾಮಯ್ಯ ಕೇಳು" ಎಂದನು. ೬೦. "ಅನುಭಾವದ ತೀವ್ರತೆಯಿಂದ ದೇವೇಂದ್ರನಾಗುವನು, ಬ್ರಹ್ಮನಾಗುವನು, ಸಂಭವಿಸಿದರೆ ವಿಷ್ಣುವಾಗುವನು, ಶಿವನೇ ತಾನಾಗುವನು. ಈ ರೀತಿಯ ಇವೆಲ್ಲ ಮುಕ್ತಿಗೆ ವಕ್ರವಾಗಿರುವುವು. ಇವನ್ನು ಲಕ್ಷಿಸದೆ ಇರುವ ಶೂರನು ಸುಖಿಯಾಗುವನು, ರಾಮಯ್ಯ ಕೇಳು" ಎಂದನು. ೬೧. "ಕೀಳುಮಾಂಸದ ರುಚಿಗೆ ಗಂಟಲಗಾಳವನ್ನು ಚೆನ್ನಾಗಿ ಕಚ್ಚಿ ದುಷ್ಟನ ದಾಳಿಗೆ ಒಳಗಾಗುವ ಮೀನಿನಂತೆ ವಿಷಯಸುಖಗಳನ್ನು ಹರಿ ಹರ ಬ್ರಹ್ಮಾದಿಗಳು ಮೊದಲಾಗಿ ಬಯಸಿದರು. [ಅವನ್ನು ಬಯಸಿದವರೆಲ್ಲಾ] ಯಮನ ಭೀಕರವಾದ ಬಾಯಿಗೆ ಬೀಳುವರು, ರಾಮಯ್ಯ ಕೇಳು" ಎಂದನು.

ದೇಹಿಂಗೊಳಹೊಱಗೆಂಬ ನೆಲೆಯಲಿ
ಬಾಹಿರಂಗವೆ ಸಕಲಮಾಯಾ
ಮೋಹದಿಂದಿಹುದಂತರಂಗವೆ ನಿಷ್ಪ್ರಪಂಚದಲಿ
ಬೇಹುದಾಗಿಹುದಂತು ಕಾರಣ
ಸಾಹಸಿಗತನದಿಂದಲಾ ನಿ
ರ್ಮೋಹದಲಿ ನಿಲುವವನೆ ನಿತ್ಯನು ರಾಮ ಕೇಳೆಂದ ೬೨

ಒಳಗು ಹೊಱಗೆಂಬೆರಡು ಬಟ್ಟೆಗ
ಳೊಳಗೆ ನೀತಿ ಪ್ರೀತಿ ಮಾರ್ಗಗ
ಳೊಳವು ತಾವೆರಡೆರಡು ಪಥದಲಿ ಕವಲುವಟ್ಟೆಗಳು
ತಿಳಿವೊಡವಱೊಳು ಮಧ್ಯಮಾರ್ಗದ
ಬಳಿವಿಡಿವ ಬಗೆಯುಳ್ಳೊಡಾತನೆ
ನೆಲೆಯ ಕಾಂಬನು ನಿತ್ಯನಪ್ಪನು ರಾಮ ಕೇಳೆಂದ ೬೩

ವಿಷವ ಹೊಱಮೈಗಿಕ್ಕಿದೊಡೆ ವ
ರ್ಜಿಸಲು ಬಹುದೆಂತಾದೊಡೆಯು ತ
ದ್ವಿಷವನೊಳಮೈಗಿಕ್ಕಿದೊಡೆ ಬಳಿಕಾರು ಕಾವವರು
ವಿಷಯವಂತರ್ಮಾರ್ಗದಲಿ ಮೋ
ಹಿಸಿದನಾದೊಡೆ ಬಳಿಕಲಾತನ
ಘಸಣೆ ದುಃಖವನೀವುದೈ ರಾಮಯ್ಯ ಕೇಳೆಂದ ೬೪

ಸಿದ್ಧ ಸಾಧಕರುಗಳನೇಕರು
ಬದ್ದುಸಿಕ್ಕಿದರಂತರಂಗದ
ಹೊದ್ದಿಗೆಯಲಿದಿರಿಟ್ಟು ತೋಱುವ ಸುಖಮುಖಂಗಳಲಿ
ಬುದ್ಧಿವಂತನದಾವವನು ಹೊಗ
ದಿರ್ದನಾದೊಡೆ ಬಳಿಕ ಬಗೆವೊಡೆ
ಸಿದ್ಧನೆನಿಸುವನಾತನೈ ರಾಮಯ್ಯ ಕೇಳೆಂದ ೬೫

೬೨. "ದೇಹಿಯಾದವನಿಗೆ ಇರುವ ಅಂತರಂಗ ಬಹಿರಂಗ ಎಂಬ ಸ್ಥಾನಗಳಲ್ಲಿ ಬಹಿರಂಗವು ಸಕಲ ಮಾಯಾ ಮೋಹಗಳಿಂದ (ಕೂಡಿ) ಇರುವುದು; ಅಂತರಂಗವು ನಿಸ್ಸಂಗ ಬೆಹ್ನೆಯಾಗಿ ಇರುವುದು. ಆದಕಾರಣ ಸಾಹಸಿಗತನದಿಂದ ಆ ನಿರ್ಮೋಹದಲ್ಲಿ ನಿಲ್ಲುವವನೇ ನಿತ್ಯನು, ರಾಮ ಕೇಳು" ಎಂದನು. ೬೩. "ಒಳಗು ಹೊರಗೆ ಎಂಬ ಎರಡು ಮಾರ್ಗಗಳಲ್ಲಿ ನೀತಿ ಪ್ರೀತಿಗಳೆಂಬ ಮಾರ್ಗಗಳಿರುವುವು. ಅವೆರಡು ಮಾರ್ಗಗಳಲ್ಲಿ ಕವಲುದಾರಿಗಳುಂಟು. ತಿಳಿಯುವುದಾದರೆ, ಅವುಗಳಲ್ಲಿ ಮಧ್ಯಮಾರ್ಗವನ್ನು ಅನುಸರಿಸುವ ಮನಸ್ಸಿದ್ದರೆ ಆತನು ಸುಖದ ಸ್ಥಿತಿಯನ್ನು ಕಾಣುವನು. ಜನನಮರಣರಹಿತನಾಗುವನು, ರಾಮ ಕೇಳು" ಎಂದನು. ೬೪. "ವಿಷವನ್ನು ಹೊರಮೈಗೆ ಹಾಕಿದರೆ ಹೇಗಾದರೂ ಮಾಡಿ ತೆಗೆಯಬಹುದು. ಆ ವಿಷವನ್ನು ದೇಹದ ಒಳಹೊಗಿಸಿದರೆ ಬಳಿಕ ಯಾರು ರಕ್ಷಿಸುವವರು? ವಿಷಯಗಳನ್ನು ಅಂತರಂಗದಲ್ಲಿ ಮೋಹಿಸಿದವನಾದರೆ ಬಳಿಕ ಆತನ ಕಾರ್ಯ ದುಃಖವನ್ನು ಕೊಡುವುದು, ರಾಮಯ್ಯ ಕೇಳು" ಎಂದನು. ೬೫. ಸಿದ್ಧಿಯನ್ನು ಸಾಧಿಸಲು ತೊಡಗಿದ ಅನೇಕರು ಅಂತರಂಗದ ಮೇಲ್ಮುಸುಕಿನಲ್ಲಿ ಕಾಣಿಸುವ ಸುಖಮುಖಗಳಲ್ಲಿ ಸಿಕ್ಕಿಬಿದ್ದರು. ಯಾವನು

ಆನೆ ಕೆಸಱೊಳಗದ್ದಿ ಬಿದ್ದೊಡೆ
ತಾನೆ ತನ್ನಯ ಭುಜಬಲದ ಸುಯಿ
ದಾನದಿಂದೊಡದೇಳ್ವುದಲ್ಲದೆ ಯಾರು ನೆಗಹುವರು
ನೀನೆ ತಪ್ಪಿದ ನಿನ್ನ ನಿಜವನು
ನೀನೆ ಸಾಧಿಸಿ ಕಂಡೆಯಾದೊಡೆ
ನೀನೆ ಸದ್ಯೋನ್ಮುಕ್ತನೈ ರಾಮಯ್ಯ ಕೇಳೆಂದ ೬೬

ರಾಮನಾರೋಗಿಸುವ ಸುಧೆಯನು
ನಾಯಿಗಿಕ್ಕದೆ ನಿನ್ನ ಚಿತ್ತೋ
ಪಾಯವನು ಕೇಡುಳ್ಳ ಕರ್ಮದ ಕೋಟಿಕೋಟಲೆಗೆ
ಬೀಯಮಾಡದೆಯಾತ್ಮಲಿಂಗದ
ಬಾಯಲರ್ಪಿಸಲಾಪೆಯಾದೊಡೆ
ಮಾಯೆಯನು ನೀ ಗೆಲುವೆಯೈ ರಾಮಯ್ಯ ಕೇಳೆಂದ ೬೭

ಕರಣಗಳು ಕೈಗೂಡಿದಾಗಳೆ
ಮರಣವನು ಗೆಲಕಲಿತು ಸಂತತ
ಶರಣಪದದಲಿ ನಿಂದು ಪರಮಾನಂದ ಸುಖದಿಂದೆ
ಪರಿಣಮಿಸಿ ನಿರ್ಲೇಪನಾಗಿರು
ತಿರಲು ಬಲ್ಲೊಡೆ ಬಳಿಕ ನೀನೇ
ಪರಮನಪ್ಪುದು ತಪ್ಪದೈ ರಾಮಯ್ಯ ಕೇಳೆಂದ ೬೮

ಬುದ್ಧಿವಂತನೋ ಅವನು [ಆ ವಿಷಯಸುಖಗಳಲ್ಲಿ] ಪ್ರವೇಶಿಸದಿದ್ದರೆ ಬಳಿಕ ವಿಚಾರಮಾಡಲು ಆತನೇ ಸಿದ್ಧನೆನಿಸುವನು, ರಾಮಯ್ಯ ಕೇಳು" ಎಂದನು. ೬೬. "ಆನೆ ಕೆಸರಿನೊಳಗೆ ಮುಳುಗಿ ಬಿದ್ದರೆ ತಾನೇ ತನ್ನ ಭುಜಬಲದ ರಕ್ಷಣೆಯಿಂದ ಕೆಸರನ್ನು ಒದೆದು ಮೇಲೇಳುವುದಲ್ಲದೆ ಅದನ್ನು ಯಾರು ಮೇಲಕ್ಕೆ ಎತ್ತುವರು? ನೀನೇ ತಪ್ಪಿಹೋದ ನಿನ್ನ ಆತ್ಮಸಾಕ್ಷಾತ್ಕಾರವನ್ನು ಸಾಧಿಸಿ ಕಂಡೆಯಾದರೆ ನೀನು ಜೀವನ್ಮುಕ್ತನಾಗುವೆ, ರಾಮಯ್ಯ ಕೇಳು" ಎಂದನು. ೬೭. "ರಾಜನು ಸೇವಿಸುವ ಅಮೃತವನ್ನು ನಾಯಿಗೆ ಹಾಕದೆ [ಇರುವಂತೆ] ನಿನ್ನ ಮನದ ಆಲೋಚನೆಗಳನ್ನು ಕೇಡುಳ್ಳ ಕರ್ಮದ ಕೋಟಿಸಂಖ್ಯೆಯ ಚಿಂತೆಗಳಿಗೆ ವ್ಯಯಮಾಡದೆ ನಿನ್ನ ಲಿಂಗಮುಖದಲ್ಲಿ ಅರ್ಪಿಸಬಲ್ಲೆಯಾದರೆ ಮಾಯೆಯನ್ನು ನೀನು ಗೆಲ್ಲುವೆ, ರಾಮಯ್ಯ ಕೇಳು" ಎಂದನು. ೬೮. "ಇಂದ್ರಿಯಗಳನ್ನು ಕೈವಶಮಾಡಿಕೊಂಡು ಮರಣವನ್ನು ಗೆಲ್ಲಲು ಕಲಿತು ಸದಾ ಶರಣಸ್ಥಿತಿಯಲ್ಲಿ ನಿಂತು ಪರಮಾನಂದಸುಖದಿಂದ ತೃಪ್ತನಾಗಿ ನಿಸ್ಸಂಗನಾಗಿರಲು ಬಲ್ಲೆಯಾದರೆ ಬಳಿಕ ನೀನೇ ದೇವನಾಗುವುದು ತಪ್ಪದು, ರಾಮಯ್ಯ ಕೇಳು" ಎಂದನು.

ಹಲವು ಮುಖದಲಿ ಹರಿವ ಮನವನು
ನಿಲಿಸುವುದು ಲಿಂಗದಲಿ ಲಿಂಗದ
ಹೊಲಬ ತಿಳಿದಾ ಪ್ರಾಣಲಿಂಗವನರಿದು ಚೆನ್ನಾಗಿ
ತಿಳಿದು ತೃಪ್ತಿಸ್ಥಾನದಲಿ ನಿ
ರ್ಮಳದ ಜ್ಯೋತಿರ್ಲಿಂಗವನು ನೆಲೆ
ಗೊಳಿಸ ಕಲಿತೊಡೆ ನೀನೆ ಸುಖಿಯೈ ರಾಮ ಕೇಳೆಂದ ೬೯

ಕಾಗುದುರೆಗತ್ಯಂತ ಶಿಕ್ಷೆಗ
ಳಾಗಬೇಕಲ್ಲದೆ ವಿಚಾರಿಸ
ಲಾ ಗರುವ ಜಾತ್ಯಶ್ವಗೊಂದೇ ರಾಯ ರಾವುತನ
ರಾಘೇ ವಾಘೆಯೆ ಸಾಲದೇ ಸಬು
ದಾಗಮಂಗಳ ಶಿಕ್ಷೆ ನಿನಗಿ
ನ್ನೇಗುವುವು ಸಂಸ್ಕಾರಿ ನೀನೇ ರಾಮ ಕೇಳೆಂದ ೭೦

ಎಂದು ಬಳಿಕೇಕಾಂತದಲಿ ಮುದ
ದಿಂದಲೊಪ್ಪುವ ಕಾಯಕರಣದ
ಸಂದು ಸಂಬಂಧವನು ಸೂಚಿಸಿ ಜೀವಪರಮರನು
ಒಂದು ಮಾಡುವ ಶಕ್ತಿ ಭಕ್ತಿಯ
ಹೊಂದಿಕೆಯನುಪದೇಶ ಮಾಡಿದ
ನಂದು ಕರಣದೊಳಲ್ಲಮಪ್ರಭು ಸಿದ್ಧರಾಮಂಗೆ ೭೧

೬೯. "ಹಲವು ದಾರಿಗಳಲ್ಲಿ ಚಲಿಸುವ ಮನಸ್ಸನ್ನು ಲಿಂಗದಲ್ಲಿ ನೆಲೆಗೊಳಿಸುವುದು. ಲಿಂಗದ ದಾರಿ ತಿಳಿದು, ಆ ಪ್ರಾಣಲಿಂಗವನ್ನು ಚೆನ್ನಾಗಿ ತಿಳಿದು, ತೃಪ್ತಿಸ್ಥಾನವನ್ನು ಅರಿತು, ನಿರ್ಮಲವಾದ ಜ್ಯೋತಿರ್ಲಿಂಗವನ್ನು ನೆಲೆಗೊಳಿಸ ಕಲಿತರೆ ನೀನೇ ಸುಖಿಯು, ರಾಮ ಕೇಳು" ಎಂದನು. ೭೦. "ನೀಚಜಾತಿಯ ಕುದುರೆಗೆ ಅತ್ಯಂತ [ಹೆಚ್ಚಿನ] ಶಿಕ್ಷೆಗಳಾಗಬೇಕಲ್ಲದೆ ವಿಚಾರಮಾಡಲು ಉತ್ತಮ ಜಾತಿಯ ಕುದುರೆಗೆ ಒಬ್ಬನೇ ರಾಜನ ಅಥವಾ ಕುದುರೆಸವಾರನ ತೊಡೆಕಡಿವಾಣಗಳು ಸಾಲವೆ? ಗ್ರಂಥಸ್ಥನಾದ ಆಗಮಗಳ ಉಪದೇಶ ನಿನ್ನಂಥವನಿಗೆ ಇನ್ನು ಅಗತ್ಯವಿಲ್ಲ. ನೀನು ಸುಸಂಸ್ಕಾರಿಯಾಗಿರುವೆ, ರಾಮ ಕೇಳು" ಎಂದನು. ೭೧. ಹೀಗೆಂದು ಹೇಳಿ, ಏಕಾಂತದಲ್ಲಿ ಶೋಭಿಸುವ ದೇಹೇಂದ್ರಿಯಾದಿಗಳ ವ್ಯಾಪಾರಕ್ಕೆ ಮೂಲಭೂತವಾದ, ಆಯಾಸ್ಥಾನ ಗಳಲ್ಲಿರುವ ಲಿಂಗಚೈತನ್ಯಗಳ ಸಂಬಂಧಗಳನ್ನು ಪ್ರೀತಿಯಿಂದ ತಿಳಿಸಿ ಜೀವಾತ್ಮ ಪರಮಾತ್ಮರನ್ನು ಸಮರಸಗೊಳಿಸುವ ಶಕ್ತಿ ಭಕ್ತಿಗಳ ಜೋಡಣೆಯನ್ನು ಅಲ್ಲಮ ಪ್ರಭು, ಸಿದ್ಧರಾಮನಿಗೆ ಅಂದು ಕರುಣೆಯಿಂದ ಉಪದೇಶಮಾಡಿದನು.

ತಿಳಿದುದಾಗಳೆ ಬಳಿಕ ಹೃದಯ
ಸ್ಥಳದ ಮತಿ ಮಾನಸಸರೋವರ
ಹೊಳೆದುದಾಗಳೆ ಪರಮಹಂಸನ ನೆಳಲು ನೆಲೆಗೊಂಡು
ತಳಿತ ನವ ಚಕ್ರಾಂಬುಜಂಗಳ
ಕುಳವನಜಿದನು ಮನದ ಸಂಶಯ
ವಳಿಯಿತಲ್ಲಮಲಿಂಗನೊಲಿದೊಡೆ ಸಿದ್ಧರಾಮಂಗೆ ೭೨

ಗುರುವೆ ನಿನ್ನಯ ಚಾರು ಚರಣಾಂ
ಬುರುಹಮಕರಂದದಲಿ ಮಿಗೆ ಮಧು
ಕರನ ಪರಿ ನಾನಾದ ಕಾರಣವೆನ್ನ ಭವತಿಮಿರ
ಹರಿವ ದಿವ್ಯಜ್ಞಾನ ದೀಪಾಂ
ಕುರವನಜಿದೆನು ನಿನ್ನ ಕೃಪೆಯಲಿ
ಪರಮ ಪಾವನನಾದೆನೈ ಪ್ರಭುರಾಯ ಕೇಳೆಂದ ೭೩

ಎತ್ತ ಹೋದುದೊ ಸಿದ್ಧರಾಮನ
ಮತ್ತತನವಾ ಬಾಹಿರಂಗದ
ಕೃತ್ಯದಲ್ಲಿಹ ಮೋಹ ಕೀರ್ತಿಯ ಮೇಲಣಭಿಲಾಷೆ
ಕಿತ್ತು ಕೆಡೆದುವು ಸಕಲ ಭಾವನೆ
ಚಿತ್ತ ಚಿತ್ತುವನಪ್ಪುತಿರ್ದುದು
ತತ್ತಡುತ್ತಮಸಂಗವೀಯದೆ ಸುಖವ ನಿಖಿಳರಿಗೆ ೭೪

ಶುದ್ಧರಾಗದರಾರು ಸಮತೆಯ
ಸಿದ್ಧಿಯಾಗದರಾರು ನಿರುಪಮ
ಸಿದ್ಧಿಯಾಗದರಾರು ನಿತ್ಯವ ಪಡೆಯದವರಾರು
ಸಿದ್ಧರಾಗದರಾರು ಸೌಖ್ಯಸ
ಮೃದ್ಧಿಯಾಗದರಾರು ಪರಮಾ
ರಾಧ್ಯರೆಮ್ಮಯ ಗುರು ಗುಹೇಶ್ವರಲಿಂಗಲೀಲೆಯಲಿ ೭೫

೭೨. ಕೂಡಲೇ ಬುದ್ಧಿಯೆಂಬ ಮಾನಸಸರೋವರವು ತಿಳಿಯಾಯಿತು. ಜ್ಞಾನಿಯ ಛಾಯೆ ಅವನಿಗೆ ಆಗಲೇ ಹೊಳೆಯಿತು. ಹೃದಯವನ್ನು ಹೊಂದಿದ ಒಂಬತ್ತು ಬಗೆಯ ಚಕ್ರಕಮಲಗಳ ಸಮೂಹವನ್ನು ತಿಳಿದನು. [ಹೀಗೆ] ಅಲ್ಲಮಲಿಂಗನು ಒಲಿಯಲು ಸಿದ್ಧರಾಮನಿಗೆ ಮನದ ಸಂಶಯಗಳು ನಿವಾರಣೆಗೊಂಡುವು. ೭೩. "ಗುರುವೇ, ನಿನ್ನ ಮನೋಹರವಾದ ಪಾದಕಮಲಗಳ ಮಕರಂದದಲ್ಲಿ ಹೆಚ್ಚಾಗಿ ದುಂಬಿಯ ರೀತಿ ನಾನಾದೆನು. ಅದು ಕಾರಣ ನನ್ನ ಭವದ ಕತ್ತಲೆ ನಿವಾರಣೆಯಾಗುವ ದಿವ್ಯಜ್ಯೋತಿಯ ಕುಡಿಯನ್ನು ತಿಳಿದೆನು. ಪ್ರಭುರಾಯ, ನಿನ್ನ ಕೃಪೆಯಿಂದ ಪರಮಪಾವನನಾದೆ, ಕೇಳು" ಎಂದನು. ೭೪. ಸಿದ್ಧರಾಮನ ಗರ್ವ ಹಾಗೂ ಬಹಿರಂಗದ ಕಾರ್ಯಗಳಲ್ಲಿರುವ ಮೋಹ ಕೀರ್ತಿಗಳ ಮೇಲಣ ಅಭಿಲಾಷೆಗಳು ಎಲ್ಲಿ ಹೋದುದೊ! ಅವನ ಸಕಲ ಭಾವನೆಗಳು ಕಿತ್ತುಬಿದ್ದುವು. ಮನ ಮನವನ್ನು ಅಪ್ಪುತ್ತಿದ್ದಿತು. ಒದಗಿದ ಉತ್ತಮರ ಸಹವಾಸವು ಸರ್ವರಿಗೆ ಸುಖವನ್ನು ಕೊಡುವುದಿಲ್ಲವೇ! ೭೫. ನಮ್ಮ ಗುರುಗುಹೇಶ್ವರಲಿಂಗನ ಲೀಲೆಯಲ್ಲಿ ಪರಮ ಆರಾಧಕರಾದವರಲ್ಲಿ ಶುದ್ಧರಾಗದೆ ಇರುವವರಾರು? ಸಮತೆಯಲ್ಲಿ ಶ್ರದ್ಧೆ ಹೊಂದದವರಾರು? ನಿರುಪಮಸಿದ್ಧಿಯನ್ನು ಪಡೆಯದವರಾರು? ನಿತ್ಯತ್ವವನ್ನು ಹೊಂದದವರಾರು?

# ೧೪. ಪ್ರಭುದೇವರು ಕಲ್ಯಾಣಕ್ಕೆ ಬಂದುದು

**ಗತಿ ೧೪**

**ಸೂಚನೆ :** ಬಸವ ಮೊದಲಾಗಿರ್ದ ಭಕ್ತರ
ನಸಮುನಲ್ಲಮ ಬಂದು ಕಂಡನು
ವಸುಮತಿಗೆ ಚೆಲುವಾದ ವರಕಲ್ಯಾಣಪುರದೊಳಗೆ

ಶರಣರೆಲ್ಲರು ಕೇಳುವುದು ಸ
ತ್ಕರಿಸಿ ಮುಂದಣ ಸಂಗತಿಯ ಸಡ
ಗರಣೆಯನು ಸಲೆ ಸಿದ್ಧರಾಮನ ಬೋಧಿಸಿದ ಬಳಿಕ
ಗುರು ಗುಹೇಶ್ವರನೊಲಿದು ಭಕ್ತರಿ
ಗೊರೆದ ಶಿವಪಥದಾದಿ ಗತಿಯನು
ವರಮನೋಹರವೆನಿಸುವೀ ಪ್ರಭುಲಿಂಗಲೀಲೆಯಲಿ ೧

ಬಸವರಾಜನ ಚಾರುಚರಿತೆಯ
ಬಿಸಿಲಿಗಖಿಲರ ಮನದ ಭಕ್ತಿಯ
ಬಿಸರುಹಂಗಳು ವಿಕಸಿತವನೈದಿರಲು ತಾನಜಿದು
ವಸುಮತಿಗೆ ಕಲಿಕಾಲದೊಳಗಿದು
ಪೊಸತಲಾ ಎಂದೆನುತೆ ಸಂತೋ
ಷಿಸುತಲಿರ್ದನು ಗುರುಗುಹೇಶ್ವರಲಿಂಗಲೀಲೆಯಲಿ ೨

ಕಾಡಲೇಕಿನ್ನೆನ್ನ ಭಕ್ತರು
ಬೇಡಿದಿಷ್ಟಾರ್ಥಂಗಳನು ಕೈ
ಗೂಡಿಸುವೆನೆಂದೆನುತೆ ಕರುಣರಸಾರ್ದ್ರಚಿತ್ತದಲಿ
ಹಾಡುತಾಡುತೆ ಸಿದ್ಧರಾಮನ
ಕೂಡಿಕೊಳುತಲಿ ಬಸವರಾಜನ
ನೋಡಲಿಕೆಯಲ್ಲಮನು ಸೊನ್ನಲಪುರದ ಹೊಱವಂಟ ೩

ಸೂ : ಎಣೆಯಿಲ್ಲದ ಅಲ್ಲಮನು ಭೂಮಿಯಲ್ಲಿ ಚೆಲುವೂ ಶ್ರೇಷ್ಠವೂ ಆದ ಕಲ್ಯಾಣಪುರದೊಳಗೆ ಬಂದು ಬಸವ ಮೊದಲಾದ ಭಕ್ತರನ್ನು ಕಂಡನು. ೧. ಸಿದ್ಧರಾಮನಿಗೆ ಚೆನ್ನಾಗಿ ಬೋಧಿಸಿದ ಅನಂತರದ ಸಂಗತಿಯ ಸಂಭ್ರಮವನ್ನು ಶರಣರೆಲ್ಲರೂ ಗೌರವಿಸಿ ಕೇಳುವುದು. ಗುರುಗುಹೇಶ್ವರನು ಒಲಿದು ಶಿವಭಕ್ತರಿಗೆ ಹೇಳಿದ ಶಿವಪಥದ ಪ್ರಾರಂಭದ ದಿಕ್ಕನ್ನು ಶ್ರೇಷ್ಠವೂ ಮನೋಹರವೂ ಎನ್ನಿಸಿರುವ ಈ ಪ್ರಭುಲಿಂಗಲೀಲೆಯಲ್ಲಿ ಶರಣರೆಲ್ಲ ಕೇಳುವುದು. ೨. ಬಸವರಾಜನ ಮನೋಹರವಾದ ಚರಿತೆಯ ಬಿಸಿಲಿಗೆ ಸರ್ವರ ಮನದ ಭಕ್ತಿಯ ಕಮಲಗಳು ಅರಳಿರಲು ಅದನ್ನು ತಿಳಿದು ಭುವಿಯಲ್ಲಿ ಕಲಿಕಾಲದಲ್ಲಿ ಇದು ಹೊಸತು ಎಂದೆನ್ನುತ್ತಾ ಗುರುಗುಹೇಶ್ವರಲಿಂಗನು ಲೀಲೆಯಿಂದ ಸಂತೋಷಿಸುತ್ತಿದ್ದನು. ೩. ಇನ್ನು ಕಾಡುವುದೇಕೆ? ನನ್ನ ಭಕ್ತರು ಬೇಡಿದ ಇಷ್ಟಾರ್ಥಗಳನ್ನು ಕೈಗೂಡಿಸುವೆನೆಂದು ಕರುಣರಸದಿಂದ ಒದ್ದೆಯಾದ ಮನದಿಂದ ಹಾಡುತ್ತಾಡುತ್ತ ಸಿದ್ಧರಾಮನೊಂದಿಗೆ ಬಸವರಾಜನನ್ನು ನೋಡಲಿಕ್ಕೆಂದು ಅಲ್ಲಮನು ಸೊನ್ನಲಾಪುರದಿಂದ ಹೊರಟನು.

ಕೆಱೆ ಸರೋವರ ಬಾವಿ ಕಾಲುವೆ
ಯೊಱತೆ ಪೂಗಿಡು ತೋಟ ಕಿಕ್ಕಿಱೆ
ಗಿಱಿದ ಮಾದಲ ಮಾವು ನೇಱಿಲ ಹಲಸು ನಾರಂಗ
ಅಱವಟಿಗೆ ಛತ್ರಗಳು ಪಥದಲಿ
ತುಱುಗಿದುವು ಬಸವೇಶ ಮಾಡಿಸೆ
ಮೆಱೆದುವಾ ಕಾನನದ ಪಥಿಕರ ಡಗೆಯನಾಱಿಸುತೆ ೪

ಲೇಸೆನಿಸಿ ವಿಶ್ರಮಿಸುವರಿಗೆ ನಿ
ವಾಸ ಗೇಹಗಳಲ್ಲಿಗಲ್ಲಿಗೆ
ಹಾಸುಗಳು ಹಲವಂದದುಪಚಾರದ ಪದಾರ್ಥಗಳು
ಭಾಸುರತೆಯೆನಿಸಿರ್ದುವಾ ಬಸ
ವೇಶ ಮಾಡಿಸಲಡವಿಯಲಿ ಸಂ
ತೋಷವನೆ ಸಲೆ ಬೀಱುತಿರ್ದುವು ಸಕಲ ಪಥಿಕರಿಗೆ ೫

ಕೂಡಿ ವಿಪಿನದ ಬಟ್ಟೆ ಸುಖವನೆ
ತೀಡುತಿರಲಾ ಸಿದ್ಧರಾಮನ
ಕೂಡೆ ಹೇಳುತಲಲ್ಲಮಪ್ರಭು ಲಿಂಗಲೀಲೆಯಲಿ
ನೋಡಿದನು ಕಣ್ ತುಂಬಿ ಮಿಗೆ ಕೊಂ
ಡಾಡಿದನು ಬಾಯ್ ತುಂಬಿ ಹರುಷವ
ಮಾಡಿದನು ಮನ ತುಂಬಿ ಬಸವನ ಧರ್ಮದುನ್ನತಿಗೆ ೬

ಬರುತ ಬರುತಲಿ ತನ್ನ ಪಾದ
ಸ್ಪರುಶನಕೆ ಸಯವಾದ ಸಚರಾ
ಚರರನೆಲ್ಲರ ಪಾವನವ ಮಾಡುತೆ ಮಹಾತ್ಮೆಯಲಿ
ಹರುಷದಿಂದಲಿ ಬಂದು ಕಂಡನು
ಪರಮಜಂಗಮ ಲಿಂಗವಾಗಿಯೆ
ಗುರುಗುಹೇಶ್ವರನೊಲಿದು ಕಲ್ಯಾಣವನು ಕರುಣದಲಿ ೭

೪. ಕೆರೆ, ಸರೋವರ, ಬಾವಿ, ಕಾಲುವೆ, ಹಳ್ಳ-ಕೊಳ್ಳ; ಹೂಗಿಡಗಳು, ತೋಟ; ಇಡಿಕಿರಿದು ತುಂಬಿದ ಮಾದಲ, ಮಾವು, ನೇರಿಲ, ಹಲಸು, ನಾರಂಗ [ಇವೇ ಮೊದಲಾದ ಮರಗಿಡಗಳು] ಅರವಟ್ಟಿಗೆ, ಛತ್ರಗಳು ದಾರಿಯಲ್ಲಿ ತುಂಬಿದ್ದುವು. [ಇವೆಲ್ಲವುಗಳನ್ನು] ಬಸವೇಶ ನಿರ್ಮಿಸಿರಲು ಕಾಡಿನ [ಹಾಗೂ] ದಾರಿಹೋಕರ ಬಿಸಿಲಿನ ತಾಪವನ್ನು ಹೋಗಲಾಡಿಸುತ್ತಾ ಅವು ಶೋಭಿಸಿದುವು. ೫. ಒಳ್ಳೆಯದೆನ್ನಿಸಿ ವಿಶ್ರಮಿಸುವವರಿಗೆ ಅಲ್ಲಿಗಲ್ಲಿಗೆ ವಾಸದ ಮನೆಗಳು, ಹಾಸಿಗೆಗಳು, ಹಲವು ಬಗೆಯ ಉಪಚಾರದ ಪದಾರ್ಥಗಳು- ಇವನ್ನು ಅಡವಿಯಲ್ಲಿ ಬಸವೇಶ ಮಾಡಿಸಲು ಶೋಭಿಸುವ ಇವುಗಳು ಎಲ್ಲ ಪಥಿಕರಿಗೂ ಸಂತೋಷವನ್ನುಂಟುಮಾಡುತ್ತಿದ್ದುವು. ೬. ಕಾಡಿನ ಮಾರ್ಗವು ಸುಖವನ್ನು ಹರಡುತ್ತಿರಲು ಅಲ್ಲಮಪ್ರಭುಲಿಂಗನು ಲೀಲೆಯಿಂದ ಸಿದ್ಧರಾಮನೊಂದಿಗೆ ಸಂಭಾಷಿಸುತ್ತಾ ಬಸವನ ಧರ್ಮದ ಏಳಿಗೆಯನ್ನು ಕಣ್ತುಂಬ ನೋಡಿ, ಅತಿಶಯವಾಗಿ ಬಾಯ್ತುಂಬ ಕೊಂಡಾಡಿ ಸಂತೋಷವನ್ನು ವ್ಯಕ್ತಪಡಿಸಿದನು. ೭. ಬರುತ್ತ ಬರುತ್ತಾ ತನ್ನ ಪಾದಸ್ಪರ್ಶಕ್ಕೆ ಪಾತ್ರವಾದ ಸಚರಾಚರಗಳನ್ನೆಲ್ಲಾ ತನ್ನ ಮಹಿಮೆಯಿಂದ ಪಾವನವನ್ನಾಗಿ ಮಾಡುತ್ತ,

ಎತ್ತ ನೋಡಿದಡತ್ತ ನಗರದ
ಸುತ್ತ ಹೊಱವಳಯದಲಿ ಕಾಣಿಸಿ
ಕತ್ತಲಿಸುವ ಸಮಸ್ತ ಭೋಗಾರುಹದ ತರುಲತೆಯ
ಮುತ್ತಿ ಮೋಹಿಸಿ ಮಿಗೆ ವಿಳಾಸತೆ
ವೆತ್ತ ಶುಕ ಪಿಕ ಕೇಕಿ ಕೋಕದ
ಮೊತ್ತಗಳ ನಡೆನುಡಿಗಳುದ್ಯಾನವನು ಪ್ರಭು ಕಂಡ ೮

ಪುರದೊಳಗೆ ಚರಿಯಿಸುವಸಂಖ್ಯಾ
ತರ ಮಹೋನ್ನತ ಭಕ್ತಿರಸವಾ
ಪುರದೊಳಗೆ ನೆಗೆದುಕ್ಕಿ ವಿಸಟಂಬರಿದು ಚೆಲುವಾಗಿ
ಪುರದ ಹೊಱವಳಯದಲಿ ಬಳಸಿತೊ
ಹಿರಿದು ಗಂಭೀರತೆಯಲೆನಲಾ
ಪರಿಖೆ ಕಲ್ಯಾಣದಲಿ ಕಣ್ಗೆದಿರಾಯಿತಲ್ಲಮಗೆ ೯

ನಲವಿನಲಿ ಗಿರಿರಾಜನತಿನಿ
ಶ್ಚಲದ ಶಿವಭಕ್ತರ ಚರಿತ್ರಂ
ಗಳ ವಿಳಾಸವ ಸುತ್ತ ನೋಡುವೆನೆಂದು ಮಂಡಳಿಸಿ
ನೆಲಸಿದನೊ ಪೇಳೆನಲು ಕೋಟೆಯ
ವಳಯ ವರ್ತಿಸಿ ಮೆಱೆದು ತೋಱುವ
ತೊಳತೊಳಪ ಕಲ್ಯಾಣ ಕಣ್ಗೆದಿರಾಯಿತಲ್ಲಮಗೆ ೧೦

ಹರುಷದಿಂದ ಶ್ರೇಷ್ಠವಾದ ಜಂಗಮಲಿಂಗವಾಗಿಯೆ ಒಲಿದು ಬಂದು ಗುರುಗುಹೇಶ್ವರನು ಕರುಣದಿಂದ ಕಲ್ಯಾಣವನ್ನು ಕಂಡನು. ೮. ನಗರದ ಸುತ್ತ ಹೊರಭಾಗದಲ್ಲಿ ಎತ್ತ ನೋಡಿದರೂ ಆಕಡೆ ಕಾಣಿಸಿ ಕಣ್ಣುಕತ್ತಲಿಸುವ ಭೋಗದ ತಿಳುವಳಿಕೆಯನ್ನುಂಟು ಮಾಡುವ ವೃಕ್ಷಗಳು ಬಳ್ಳಿಗಳು. ಕವಿದು ಮೋಹಿಸಿ ಅತಿಶಯವಾಗಿ ಶೋಭೆಯನ್ನು ಪಡೆದ ಗಿಳಿ, ಕೋಗಿಲೆ, ನವಿಲು, ಚಕ್ರವಾಕ ಸಮೂಹಗಳ ನಡೆನುಡಿಗಳಿಂದ [ಕೂಡಿರುವ] ಉದ್ಯಾನವನ್ನು ಪ್ರಭುವು ಕಂಡನು. ೯. ಪುರದೊಳಗೆ ಓಡಾಡುವ ಅಸಂಖ್ಯಾತರ ಮಹೋನ್ನತ ಭಕ್ತಿರಸವು ಆ ನಗರದಲ್ಲಿ ನೆಗೆದು ಉಕ್ಕಿ, ಎಲ್ಲೆಡೆ ಚೆಲುವಾಗಿ ಹರಡಿ, ಪುರದ ಹೊರಭಾಗದಲ್ಲಿ ಹಿರಿದಾದ ಗಂಭೀರತೆಯಿಂದ ಸುತ್ತುಗಟ್ಟಿತೊ ಎನ್ನುವಂತೆ ಕಂದಕವು ಕಲ್ಯಾಣದಲ್ಲಿ ಅಲ್ಲಮನ ಕಣ್ಣಿಗೆ ಇದಿರಾಯಿತು. ೧೦. ಸಂತೋಷದಿಂದ ಗಿರಿರಾಜನು ಚಾಂಚಲ್ಯವಿಲ್ಲದ ಶಿವಭಕ್ತರ ಚರಿತ್ರಗಳ ವಿಳಾಸವನ್ನು ಸುತ್ತಲೂ ನೋಡುವೆನೆಂದು ಚಕ್ರಾಕಾರವಾಗಿ ನೆಲಸಿದನೊ ಹೇಳು ಎನ್ನುವಂತೆ ಕೋಟೆಯ ಆವರಣದಿಂದ ಸುತ್ತಲ್ಪಟ್ಟು ಶೋಭಾಯಮಾನವಾಗಿ ತೋರುವ, ತನ್ನ ಪ್ರಕಾಶಮಾನವಾದ ಕಾಂತಿಯಿಂದ ಕೂಡಿ ಬೆಳಗುವ ಕಲ್ಯಾಣವು ಅಲ್ಲಮನ ಕಣ್ಣಿಗೆ ಇದಿರಾಯಿತು.

ಬಸವಚಾದಗೆವಕ್ಕಿಗಲ್ಲಮ
ವೆಸರ ಘನ ನಿಜ ಕರುಣ ವರುಷವ
ನೊಸೆದು ಸುರಿದಪುದಲ್ಲಿಯೊಕ್ಕುದನುಂಬೆವಾವೆನುತೆ
ಮುಸುಕಿದಮರರ ವರ ವಿಮಾನ
ಪ್ರಸರಗಳೊ ಪೇಳೆನಲು ಗಗನದೊ
ಳೆಸೆದುವಟ್ಟಳೆಯೋಳಿ ಕಲ್ಯಾಣದಲಿ ಚೆಲುವಾಗಿ ೧೧

ಹುಲಿಮುಖಂಗಳ ವಂಕದಾರದ
ಹಲವು ನೆಲೆಯುಪ್ಪರಿಗೆಗಳ ಬಾ
ಗಿಲಗಳಂಗಡಿಗಳ ಬೀದಿಗಳ ಸಂಪದದ ಜನಪದದ
ಕಳಕಳದ ಕಲ್ಯಾಣಪಟ್ಟಣ
ದೊಳಗೆ ನೋಡುತೆ ಬಸವರಾಜನ
ನಿಳಯಕಲ್ಲಮ ಸಿದ್ಧರಾಮರು ಬಂದರೊಲವಿನಲಿ ೧೨

ಬಂದು ಮೆಲ್ಲನೆ ಬಸವರಾಜನ
ಮಂದಿರಕೆ ಚೆಲುವಾದ ಬಾಗಿಲ
ಮುಂದೆ ನಿಂದಿರಲಲ್ಲಮಪ್ರಭು ಸಿದ್ಧರಾಮರನು
ಅಂದು ಭಾವಿಸಿ ನೋಡಿಯಿವರೇ
ನಿಂದುಮೌಳಿಯ ಸಗುಣ ನಿರ್ಗುಣ
ದಂದವಿಗರೋ ಶಿವಶಿವಾ ಎನುತಿದ್ದುದಖಿಳಜನ ೧೩

ಹಡಪದಪ್ಪಣ್ಣಗಳು ಕಾಣುತೆ
ತಡೆದಿರದೆ ಹರಿತಂದುಮಾಗಣ
ದೊಡನೆ ಶಿವಲಿಂಗಾರ್ಚನೆಯ ವಿರಚಿಸುವ ಕಾಲದಲಿ
ಮೃಡನ ದೃಶ್ಯಾದೃಶ್ಯ ರೂಪುಗ
ಳೊಡೆಯರಿಬ್ಬರು ಬಂದರೆನುತಲಿ
ಸಡಗರಿಸಿ ಬಿನ್ನೈಸುತಿರ್ದನು ಬಸವರಾಜಂಗೆ ೧೪

೧೧. ಬಸವನೆಂಬ ಚಾತಕಪಕ್ಷಿಗೆ ಅಲ್ಲಮನೆಂಬ ಹೆಸರಿನ ಮೋಡವು ತನ್ನ ಕರುಣೆಯ ಮಳೆಯನ್ನು ಪ್ರೀತಿಯಿಂದ ಅಲ್ಲಿ ಸುರಿಸುವುದು. ಅಲ್ಲಿ ಹೊರಸೂಸಿದುದನ್ನು ನಾವು ತಿನ್ನುವೆವು ಎಂದು ಆಕಾಶದಲ್ಲಿ ಮುತ್ತಿದ ದೇವತೆಗಳ ಶ್ರೇಷ್ಠವಾದ ವಿಮಾನಗಳ ಮೊತ್ತವೊ ಹೇಳು ಎನ್ನುವಂತೆ ಬುರುಜುಗಳ ಸಾಲು ಕಲ್ಯಾಣದಲ್ಲಿ ಚೆಲುವಾಗಿ ಶೋಭಿಸಿತು. ೧೨. ಕೋಟೆಯೊಳಗಿನ ಕಿರುದಾರಿ, ವಕ್ರದ್ವಾರ; ಹಲವು ಅಂತಸ್ತುಗಳ ಮಹಡಿಗಳು; ಅಂಗಡಿಬೀದಿಗಳು ಇವುಗಳ ಸಂಪತ್ತಿನಿಂದ ಕೂಡಿದ, ಜನಭರಿತವಾಗಿ ಕಲಕಲಧ್ವನಿಯಿಂದ ಕೂಡಿದ ಕಲ್ಯಾಣಪುರದೊಳಗೆ [ಸುತ್ತಾಡಿ] ನೋಡುತ್ತಾ ಬಸವರಾಜನ ಮನೆಗೆ ಅಲ್ಲಮ ಸಿದ್ಧರಾಮರು ಸಂತೋಷದಿಂದ ಬಂದರು. ೧೩. ಸಿದ್ಧರಾಮ ಅಲ್ಲಮರು ಬಸವರಾಜನ ಮನೆಗೆ ಸಾವಧಾನವಾಗಿ ಬಂದು ಸುಂದರವಾಗಿರುವ ಬಾಗಿಲ ಮುಂದೆ ನಿಂತಿರಲು [ಅವರನ್ನು] ಆಗ ನೋಡಿದ ಜನರೆಲ್ಲಾ "ಇವರೇನು ಚಂದ್ರಮೌಳಿಯ ಸಗುಣ ನಿರ್ಗುಣದ ಚೆಲುವಿಗರೋ ಶಿವಶಿವಾ" ಎನ್ನುತ್ತಿದ್ದರು. ೧೪. [ಇವರನ್ನು] ಕಂಡು ಹಡಪದ ಅಪ್ಪಣ್ಣಗಳು

ಕರತಳದೊಳೆಡೆಗೊಂಡು ಪೂಜಾ
ತುರತೆಯಿಂದಿರುತೊಲಿದು ತಾನೇ
ಚರವನಂಗೀಕರಿಸಿ ಬಂದೊಡೆ ಲೇಸು ಲೇಸೆನುತೆ
ಕರೆಯಿರೇ ಇನ್ನೊಳಯಕೆನ್ನೊಡೆ
ಯರನು ತಳುವೇಕೆನುತೆ ಬಸವನು
ಹರುಷದಿಂದಲಿ ಹಡಪದಪ್ಪಣಂಗೆ ನೇಮಿಸಿದ ೧೫

ಬಸವರಾಜನು ಭಕ್ತಿಯಿಂದಲಿ
ಬೆಸಸಿದರೆಯಪ್ಪಣ್ಣನತಿಭರ
ವಸದಲೆಯ್ತಂದಲ್ಲಮಪ್ರಭು ಸಿದ್ಧರಾಮರಿಗೆ
ಒಸೆದು ಮಿಗೆ ಶರಣಾರ್ಥಿಯೆನುತವೆ
ಸಸಿನೆ ಸಮ್ಮುಖದಲ್ಲಿ ಕರಯುಗ
ಬಿಸರುಹಂಗಳ ಮುಗಿದು ಬಿನ್ನಹ ಮಾಡಲನುಗೆಯ್ದು ೧೬

ದೇವ ಕರುಣಾಕರನೆ ಬಿಜಯಂ
ಗೈವುದೊಳಕಡೆಗೊಂದೊಡೆಮಗೊಳ
ಗಾವ ತತ್ತವಸರವು ನಮಗೇಕರಸುಮನೆಗಳಲಿ
ಭಾವಿಸಲು ಸಂಚಾರವೆನುತಲಿ
ದೇವನಲ್ಲಮ ನುಡಿಯಲದ ತಂ
ದಾವರಿಸಿಯಪ್ಪಣ್ಣನಜುಹಿದ ಬಸವರಾಜಂಗೆ ೧೭

ತಡಮಾಡದೆ ನಡೆದುಬಂದು ಮಹಾಗಣದೊಂದಿಗೆ ಬಸವರಾಜನು ಶಿವಲಿಂಗಾರ್ಚನೆ ಮಾಡುತ್ತಿದ್ದ ವೇಳೆಯಲ್ಲಿ "ಶಿವನ ದೃಶ್ಯ ಅದೃಶ್ಯ ರೂಪುಗಳ ಧಣಿಗಳಿಬ್ಬರು ಬಂದರು" ಎಂದು ಸಡಗರದಿಂದ ಬಿನ್ನವಿಸುತ್ತಿದ್ದನು. ೧೫. ಅಂಗೈಯಲ್ಲಿ ಇಷ್ಟಲಿಂಗವನ್ನು ಬಿಜಯಮಾಡಿಸಿ ಪೂಜಾತುರತೆಯಿಂದಿರುತ್ತಿದ್ದ ಬಸವಣ್ಣನು "ತಾನೇ [ಲಿಂಗದೇವನು] ಜಂಗಮರೂಪವನ್ನು ತಾಳಿ ಬಂದರೆ ಒಳ್ಳೆಯದು, ಒಳ್ಳೆಯದು, ಇನ್ನು ಒಡೆಯರನ್ನು ಒಳಗಡೆಗೆ ಕರೆಯಿರೇ, ತಡವೇಕೆ?" ಎಂದು ಹರುಷದಿಂದ ಹಡಪದಪ್ಪಣ್ಣನಿಗೆ [ಆ ಕಾರ್ಯವನ್ನು] ನೇಮಿಸಿದನು. ೧೬. ಬಸವರಾಜನು ಭಕ್ತಿಯಿಂದ ಹೇಳಲು ಅಪ್ಪಣ್ಣನು ಬೇಗಬೇಗನೆ ಬಂದು ಪ್ರೀತಿಯಿಂದ ಉಬ್ಬಿ ಅಲ್ಲಮಪ್ರಭು ಸಿದ್ಧರಾಮರಿಗೆ ಶರಣಾರ್ಥಿ ಎಂದು ಹೇಳಿ ಮುಂದೆ ಕೈ ಜೋಡಿಸಿ ನಿಂತು ಹೀಗೆ ಬಿನ್ನಹಮಾಡಲು ತೊಡಗಿದನು. ೧೭. "ದೇವಾ, ಕರುಣಾಕರನೇ, ಒಳಗೆ ದಯಮಾಡಿಸುವುದು" ಎನ್ನಲು "ನಮಗೆ ಒಳಗೆ ಇರುವ ಕೆಲಸವಾದರೂ ಏನು? ವಿಚಾರಮಾಡಲು, ನಮಗೇಕೆ ಅರಸರ ಮನೆಗಳಲ್ಲಿ ಸಂಚಾರ" ಎಂದು ದೇವನಾದ ಅಲ್ಲಮ

ಹರಹರಾ ನಾನಕಟ ಗರ್ವದ
ಗಿರಿಯನೇನ್ನಡರಿರ್ದೆನೋ ಮೇಣ್
ದುರುಳತನದಲಿಯೆನ್ನ ನಡೆನುಡಿ ತಪ್ಪನಪ್ಪಿದುವೊ
ಗುರುವೆ ಕರುಣಿಸಿ ಬಂದು ಬಾರದೆ
ತರಹರಿಸಲೇಕೆನುತೆ ಚಿಂತಾ
ಶರಧಿಯೊಳಗದ್ದಿದನು ಕೇಳುತೆ ಬಸವ ಮನದೊಳಗೆ ೧೮

ತನಗೆ ತಾನೇ ಭಕ್ತರೆಲ್ಲರ
ಮನವ ನೋಡಿಹೆನೆಂದು ಕರುಣಿಸಿ
ಮನೆಯ ಬಾಗಿಲಿಗಾ ಮಹಾಘನಮಹಿಮನೈತರಲು
ಅನುವನಱಿಯದೆ ರಾಜಸದ ಹ
ಮ್ಮಿನಲಿ ಬಳಿಯಟ್ಟುವುದು ಬಸವಾ
ನಿನಗಿದುಚಿತವೆ ಎಂದನಾ ಮಡಿವಾಳ ನಾಚಯ್ಯ ೧೯

ಕಡಲನೀಸಾಡುವಗೆ ತಾಮಸ
ವಡರಿದಂತಾಯ್ತಕ್ಕಟಕ್ಕಟ
ಮಡಿವಳಯ್ಯನ ಮಾತಹುದು ತಪ್ಪೆನ್ನದೆಂದೆನುತೆ
ನಡೆದು ಶಿವಗಣಸಹಿತವಲ್ಲಮ
ನಡಿಯೊಳತಿ ಭಯಭಕ್ತಿಯಲಿ ತ
ನ್ನೊಡಲನೀಡಾಡಿದನು ಭರದಲಿ ಬಸವದಂಡೇಶ ೨೦

ನಾನು ಮಱವೆಯ ಮರುಳು ಸಂತತ
ನೀನೆಯಱಿವಿನ ತಿರುಳು ತಿಳಿವೊಡೆ
ನಾನು ರಂಜಕನಖಿಳರಱಿಯಲು ನೀ ನಿರಂಜಕನು
ನಾನು ಭಾವಿಸೆ ಪಶು ವಿಚಾರಿಸೆ
ನೀನು ಪಶುಪತಿಯೆನ್ನ ತಪ್ಪನು
ನೀನೆ ತಿದ್ದುವುದೆನುತೆ ಮೈಯಿಕ್ಕಿದನು ಬಸವಣ್ಣ ೨೧

ನುಡಿದನು. ಆ ಮಾತನ್ನು ಬಸವರಾಜನಿಗೆ ಅಪ್ಪಣ್ಣನು ಗುಟ್ಟಾಗಿ ಹೇಳಿದನು. ೧೮. [ಆ ಮಾತನ್ನು] ಕೇಳಿ, "ಶಿವಶಿವಾ! ಅಯ್ಯೋ, ನಾನು ಗರ್ವದ ಪರ್ವತವನ್ನು ಹತ್ತಿದೆನೊ ಅಥವಾ ದುಷ್ಟತನದಿಂದ ನನ್ನ ನಡೆನುಡಿ ತಪ್ಪನ್ನು ಅಪ್ಪಿದುವೊ? ಗುರುವೇ, ನನ್ನ ಮೇಲೆ ಕರುಣೆಯಿಟ್ಟು ಬಂದು ಒಳಗೆ ಬಾರದೆ ನಿಧಾನಿಸಿದುದೇಕೆ?" ಎಂದು ಬಸವನು ಮನದಲ್ಲಿ ಚಿಂತೆಯೆಂಬ ಸಮುದ್ರದಲ್ಲಿ ಮುಳುಗಿದನು. ೧೯. "ತನ್ನಲ್ಲಿ ತಾನೇ ಭಕ್ತರೆಲ್ಲರ ಅಂತರಂಗವನ್ನು ನೋಡಿ ತಿಳಿದಿರುವೆನೆಂದು [ನಿನ್ನ ಮೇಲೆ] ಕರುಣಿಸಿ ಮನೆಯ ಬಾಗಿಲಿಗೆ ಆ ಮಹಾಘನಮಹಿಮನು ಬರಲು, ಆ ವಾತ್ಸಲ್ಯವನ್ನು ತಿಳಿಯದೆ ರಾಜಸಗುಣದ ಅಹಂಕಾರದಿಂದ ಅಪ್ಪಣ್ಣನನ್ನು ಮೊದಲಿಗೇ ಅಟ್ಟುವುದು, ಬಸವಾ, ನಿನಗೆ ಯೋಗ್ಯವೆ?" ಎಂದು ಮಡಿವಾಳ ಮಾಚಯ್ಯ ಆಕ್ಷೇಪಿಸಿದನು. ೨೦. "ಸಮುದ್ರದಲ್ಲಿ ಈಸಾಡುವವನಿಗೆ ಕತ್ತಲೆ ಕವಿದಂತಾಯಿತು. ಅಯ್ಯಯ್ಯೋ ಮಡಿವಳಯ್ಯನ ಮಾತು ನಿಜ. ತಪ್ಪು ನನ್ನದು" ಎಂದೆನ್ನುತ್ತಾ ಬಸವದಂಡೇಶನು ಶಿವಗಣಸಹಿತ ನಡೆದು ಅತಿಭಯಭಕ್ತಿಗಳಿಂದ ಅಲ್ಲಮನ

ಭ್ರಮಿಸಿದೆನು ನಾನೆನ್ನ ಮದದಲಿ
ಕ್ಷಮಿಸುವುದು ನೀ ನಿನ್ನ ಗುಣದಲಿ
ರಮಣರಾದವರೆನ್ನ ಕೊಱತೆಯ ನೋಡಬೇಡೆನುತೆ
ವಿಮಳಮತಿ ಭಯಭಕ್ತಿಸಹಿತ
ಲ್ಲಮನ ಪಾದಪಯೋಜದಲಿ ನೆಱೆ
ನಮಿಸುತಿರ್ದನು ಬಸವದಂಡಾಧೀಶನಡಿಗಡಿಗೆ ೨೨

ಶಿಶುಗಳಲಿ ಗುಣದೋಷವನು ಭಾ
ವಿಸುವರೇ ಕರುಣದಲಿ ಮಿಗೆ ರ
ಕ್ಷಿಸುವ ಮೋಹದ ತಂದೆ ತಾಯಿಗಳಾ ಪ್ರಕಾರದಲಿ
ಬಸವರಾಜಗೆ ಮಾತೆ ಪಿತ ನೀ
ನೊಸೆದು ಕರುಣಿಸಬೇಕೆನುತೆ ವಂ
ದಿಸುತಲಿದ್ದನು ಚೆನ್ನಬಸವನು ಅಲ್ಲಮನ ಪದಕೆ ೨೩

ಅರಿಗಳಿದಿರಲಿ ತಪ್ಪಿದೊಡೆ ಸಂ
ಗರದೊಳೂಣೆಯವಪ್ಪುದಲ್ಲದೆ
ಗರುಡಿಯಲಿ ಕೈಮಱೆದೊಡಾವುದು ಕೊಱತೆಯದಱಿಂದೆ
ಗುರುವೆ ಬಾಲಾಭ್ಯಾಸ ಭಕ್ತಿಯ
ಪರಿಚರಿಯದೂಣೆಯವ ನೋಡದೆ
ಕರುಣಿಸೆನುತಲ್ಲಮಗೆ ಮೈಯಿಕ್ಕಿದನು ಮಾಚಯ್ಯ ೨೪

ಪಾದಗಳಲ್ಲಿ ಬೇಗನೆ ತನ್ನ ದೇಹವನ್ನು ಚೆಲ್ಲಿದನು. ೨೧. "ನಾನು ಜ್ಞಾಪಕಶಕ್ತಿಯಿಲ್ಲದ ಹುಚ್ಚ, ನೀನು ಸದಾ ಜ್ಞಾನದ ತಿರುಳು; ತಿಳಿಯುವುದಾದರೆ ನಾನು ವೇಷಧಾರಿ, ನೀನು ಸರ್ವರೂ ತಿಳಿದಂತೆ ಸಹಜಸ್ವರೂಪನು; ವಿಚಾರ ಮಾಡಲು ನಾನು ಪಶು, ನೀನು ಪಶುಪತಿ. ನನ್ನ ತಪ್ಪನ್ನು ನೀನೇ ಸರಿಪಡಿಸುವುದು" ಎಂದು ಬಸವಣ್ಣನು [ಪ್ರಭುವಿನ ಪಾದಗಳಿಗೆ] ಅಡ್ಡಬಿದ್ದನು. ೨೨. "ನಾನು ನನ್ನ ಗರ್ವದಿಂದ ಮತಿವಿಹೀನನಾದೆನು. ನಿನ್ನ ಸದ್ಗುಣದಿಂದ ನನ್ನನ್ನು ನೀನು ಕ್ಷಮಿಸುವುದು. ಪ್ರಭುಗಳು ನನ್ನ ಕೊರತೆಯನ್ನು ನೋಡಬಾರದು" ಎಂದು ಪರಿಶುದ್ಧ ಬುದ್ಧಿಯ ಬಸವದಂಡಾಧೀಶನು ಭಯಭಕ್ತಿಗಳಿಂದ ಅಲ್ಲಮನ ಪಾದಕಮಲಗಳಲ್ಲಿ ಪದೇಪದೇ ಅತಿಶಯವಾಗಿ ನಮಸ್ಕರಿಸುತ್ತಿದ್ದನು. ೨೩. "ತಂದೆ ತಾಯಿಯರು ಕರುಣೆಯಿಂದ ಅತಿಶಯವಾಗಿ ರಕ್ಷಿಸುವ ಮೋಹದ ತಮ್ಮ ಮಕ್ಕಳಲ್ಲಿ ಗುಣ ದೋಷಗಳನ್ನು ಕಾಣುವರೆ? ಆ ಪ್ರಕಾರದಲ್ಲಿ ಬಸವರಾಜನಿಗೆ ತಾಯಿ ತಂದೆಯಾದ ನೀನು ಪ್ರೀತಿಯಿಂದ ಕರುಣಿಸಬೇಕು" ಎಂದು ಚನ್ನಬಸವಣ್ಣನು ಅಲ್ಲಮನ ಪಾದಗಳಿಗೆ ನಮಸ್ಕರಿಸುತ್ತಲಿದ್ದನು. ೨೪. "ಯುದ್ಧರಂಗದಲ್ಲಿ ಶತ್ರುಗಳ ಇದಿರಿನಲ್ಲಿ ತಪ್ಪಿದರೆ ಕುಂದು. ಅದಲ್ಲದೆ ಗರುಡಿಯಲ್ಲಿ ಕೈಯ ಬಳಕೆ ಮರೆತರೆ ಕೊರತೆಯಾಗುವುದು. ಆದ್ದರಿಂದ ಗುರುವೆ ಬಾಲಕನ 'ಅಭ್ಯಾಸಭಕ್ತಿ'ಯ ಸೇವೆಯಲ್ಲಿನ ಕೊರತೆಯನ್ನು ಗಮನಿಸದೆ ಕೃಪೆಮಾಡು" ಎಂದು ಮಾಚಯ್ಯನು ಅಲ್ಲಮನಿಗೆ ಅಡ್ಡಬಿದ್ದನು.

ತನ್ನ ಕಾಯವೆ ಲಿಂಗ ನೆಟ್ಟನೆ
ತನ್ನ ಜೀವವೆ ಚಾರುಜಂಗಮು
ತನ್ನ ತಾನೇ ತಿಳಿದ ಬಸವಣ್ಣಂಗೆ ನಿಮ್ಮಡಿಗೆ
ಭಿನ್ನಭಾವನೆ ಯಾವುದೈ ಸಾ
ಕಿನ್ನು ಕೃಪೆಮಾಡೆನುತಲಾಗಳು
ಕಿನ್ನರಿಯ ಬೊಮ್ಮಣ್ಣ ಬಿನ್ನಪಗೈದನಲ್ಲಮಗೆ ೨೫

ಶ್ರುತಿಗೆ ನಿಲುಕದ ಸಕಲಶಾಸ್ತ್ರ
ಸ್ಮೃತಿಗೆ ಸಿಕ್ಕದ ದಿವಿಜ ಮುನಿಗಳ
ಮತಿಗೆ ಮೈದೋಱದ ಮಹಾಘನಮಹಿಮ ನೀನೊಲಿದು
ಕ್ಷಿತಿಗೆ ಬಸವ ನಿಮಿತ್ತ ಬಂದಿ
ನ್ನತಿಗಳೆಯಬೇಡೆನುತೆ ದೇವಗೆ
ಸ್ತುತಿಸಿ ಮೈಯಿಕ್ಕಿದರು ಶಿವಗಣವೆಯ್ದೆ ತಮತಮಗೆ ೨೬

ನೋಡಿದೈ ರಾಮಯ್ಯ ಭಕ್ತರು
ಮಾಡುವುದು ತಾನೊಂದು ಮಿಗೆ ಮಾ
ತಾಡುವುದು ಬೇಱೊಂದು ಜಂಗಮವೊಲಿದು ನಡೆತರಲು
ಪಾಡನೇ ಪರುಠವಿಸಿ ನುಡಿವ ಸ
ಗಾಡಿಕೆಯನೊಡ್ಡಯಿಸಿ ತಮ್ಮಯಿ
ಖೋಡಿಯನು ತಾವಱಿಯರೆಂದನು ನಗುತೆ ಪ್ರಭುರಾಯ ೨೭

ಸಲಹಬೇಕೆಂದಖಿಳಭಕ್ತರಿ
ಗೊಲಿದು ನೀನೇ ಲೀಲೆಯಿಂದಲಿ
ಸುಲಭವಾಗಿಯೆ ಸುಳಿದ ಬಳಿಕಿನ್ನವರ ಗತಿಮತಿಯ
ಹಳಿವನೆಣಿಸುವುದೇನು ಕಾರಣ
ವೆಲೆ ಮಹಾತ್ಮನೆ ಕರುಣಿಸೆನುತಲಿ
ಸಲುಗೆಯಲಿ ಬಿನ್ನೈಸುತಿರ್ದನು ಸಿದ್ಧರಾಮಯ್ಯ ೨೮

೨೫. "ತನ್ನ ದೇಹವೇ ಲಿಂಗ. ನೇರವಾಗಿ ತನ್ನ ಜೀವವೇ ಮನೋಹರ ಜಂಗಮ. [ಹೀಗೆಂದು] ತನ್ನನ್ನು ತಾನೇ ತಿಳಿದ ಬಸವಣ್ಣನಿಗೂ ತಮಗೂ ಭಿನ್ನಭಾವನೆ ಯಾವುದು? ಸಾಕು, ಇನ್ನು ಕೃಪೆಮಾಡು" ಎಂದು ಕಿನ್ನರಿಯ ಬೊಮ್ಮಣ್ಣನು ಅಲ್ಲಮನಿಗೆ ಬಿನ್ನವಿಸಿದನು. ೨೬. "ವೇದಗಳಿಗೆ ಒಳಗಾಗದ, ಸಕಲ ಶಾಸ್ತ್ರ ಸ್ಮೃತಿಗಳಿಗೆ ಸಿಕ್ಕದ, ದೇವತೆ ಮುನಿಗಳ ಬುದ್ಧಿಗೆ ದರ್ಶನ ಕೊಡದ, ಮಹಾಘನಮಹಿಮನಾದ ನೀನು ಒಲಿದು ಬಸವನ ಕಾರಣ ವಾಗಿ ಭೂಮಿಗೆ ಬಂದೆ. ಇನ್ನು ತಿರಸ್ಕರಿಸಬೇಡ" ಎಂದು ಅಲ್ಲಮದೇವನನ್ನು ಚೆನ್ನಾಗಿ ಸ್ತುತಿಸಿ ಶಿವಗಣಗಳು ತಾವು ತಾವೇ ಅಡ್ಡಬಿದ್ದರು. ೨೭. "ನೋಡಿದೆಯಾ ಸಿದ್ಧರಾಮಯ್ಯ, ಭಕ್ತರು ಮಾಡುವುದೊಂದು; ಅತಿಶಯವಾಗಿ ಮಾತನಾಡುವುದು ಮತ್ತೊಂದು. ಜಂಗಮವು ಪ್ರೀತಿಯಿಂದ ನಡೆದು ಬರಲು ತಮ್ಮ ಸ್ಥಿತಿಯನ್ನೇ ವಿವರಿಸಿ ಹೆಚ್ಚಾಗಿ ಹೊಂದುವಂತೆ ಮಾತನಾಡಿದ ಅವರು ತಮ್ಮ ತಪ್ಪನ್ನು ತಾವೇ ತಿಳಿಯರು" ಎಂದು ನಗುತ್ತಾ ಪ್ರಭುರಾಯನು ನುಡಿದನು. ೨೮. "ಸರ್ವಭಕ್ತರನ್ನು ರಕ್ಷಿಸಬೇಕೆಂದು ಒಲಿದು ನೀನೇ ಲೀಲೆಯಿಂದ ಸುಲಭವಾಗಿ ಕಾಣಿಸಿಕೊಂಡ ಬಳಿಕ ಅವರ ಗತಿ ಮತಿ ನಿಂದೆಗಳನ್ನು ಭಾವಿಸುವುದೇಕೆ?

ದೇವ ದೇವಾ ಸಿದ್ಧರಾಮಯ
ದೇವರೆಂದೋಪಾದಿಯಲಿ ಮು
ನ್ನಾವ ಭಕ್ತಿಯ ಕಂಡು ಬಿಜಯಂಗೆಯ್ದೆ ನಮಗೊಲಿದು
ಪಾವನವ ಮಾಡಲಿಕೆ ಬಂದಿ
ನ್ನಾವ ಕೊಱತೆಯನೆಣಿಸದೆಮ್ಮನು
ಕಾವುದೆನುತಲಿ ಮತ್ತೆ ಮಣಿದನು ಬಸವನಲ್ಲಮಗೆ ೨೯

ಮುನ್ನ ನಿರುಪಾಧಿಯಲಿ ಕರುಣಿಸಿ
ನಿನ್ನ ಲೀಲೆಯಲೊಲಿದು ನೀ ಬಂ
ದಿನ್ನುಪಾಧಿಯನಱಸುವುದು ಮರಿಯಾದೆಯಲ್ಲೆನುತೆ
ಚೆನ್ನಬಸವನು ಹಿರಿಯ ಬಸವನು
ಮನ್ನಣೆಯ ಶಿವಭಕ್ತರೆಲ್ಲರು
ಬಿನ್ನಹವ ಮಾಡಿದರು ಮಹಿಮರು ಮತ್ತೆ ತಮತಮಗೆ ೩೦

ಮಾತನೇ ಮಕರಿಸಿದರಲ್ಲದೆ
ಜಾತಿಭಕ್ತಿಯ ಹೋದ ಹೊಲಬಿನ
ರೀತಿಯನು ತಾವಱಿಯರಾವಿನ್ನುಚಿತ ಭಕ್ತಿಯನು
ಈತಗಳಿಗಱುಹಿಸಲು ಬೇಕೆನು
ತೋತು ಬಳಿಕೆಮ್ಮಲ್ಲಮಪ್ರಭು
ವಾತಗಳಿಗಿಂತೆಂದು ನುಡಿದನು ಮತ್ತೆ ಕರುಣದಲಿ ೩೧

ಎಲೆ ಮಹಾತ್ಮನೆ ಕರುಣಿಸು" ಎಂದು ಸಲುಗೆಯಿಂದ ಸಿದ್ಧರಾಮಯ್ಯನು ಅರಿಕೆ ಮಾಡುತ್ತಿದ್ದನು. ೨೯. ದೇವದೇವಾ, ಸಿದ್ಧರಾಮಯ್ಯ ದೇವರು ಹೇಳಿದ ರೀತಿಯಲ್ಲಿ ಹಿಂದೆ ಯಾವ ಭಕ್ತಿಯನ್ನು ಕಂಡು ನೀನು ದಯಮಾಡಿಸಿದ್ದೆ? ನಮಗೆ ಒಲಿದು ನಮ್ಮನ್ನು ಪವಿತ್ರರನ್ನಾಗಿ ಮಾಡಲಿಕ್ಕೆ ಬಂದೆ. ಮತ್ತಾವ ಕೊರತೆಯನ್ನೂ ಭಾವಿಸದೆ ನಮ್ಮನ್ನು ರಕ್ಷಿಸುವುದು" ಎಂದು ಮರಳಿ ಬಸವನು ಅಲ್ಲಮನಿಗೆ ಬಾಗಿ ನಮಸ್ಕರಿಸಿದನು. ೩೦. "ಮೊದಲು ತೊಂದರೆಯಿಂದ ಬಿಡುಗಡೆ ಮಾಡಿ ಕರುಣಿಸಲು ನೀನು ನಿನ್ನ ಲೀಲೆಯಲ್ಲಿ ಒಲಿದು ಬಂದು ಇನ್ನು ತೊಂದರೆಯನ್ನು ಹುಡುಕುವುದು ಗೌರವವಲ್ಲ" ಎಂದು ಚನ್ನಬಸವ, ಹಿರಿಯನಾದ ಬಸವಣ್ಣ, ಗೌರವಾನ್ವಿತರಾದ ಶಿವಭಕ್ತರೆಲ್ಲ, ಮಹಿಮಾಪುರುಷರೆಲ್ಲ ಮತ್ತೆ ತಾವು ತಾವೇ ಅರಿಕೆ ಮಾಡಿದರು. ೩೧. ತಾವು [ಆಡಿದ] ಮಾತನ್ನೇ ಒತ್ತಿ ಹೇಳಿದರಲ್ಲದೆ ಶ್ರೇಷ್ಠವಾದ ಭಕ್ತಿಯ ದಾರಿಯನ್ನು ತಿಳಿಯಲಿಲ್ಲ. ನಾವಿನ್ನು ಯೋಗ್ಯವಾದ ಭಕ್ತಿಮಾರ್ಗವನ್ನು ಇವರುಗಳಿಗೆ ತಿಳಿಸಬೇಕೆಂದು ಪ್ರೀತಿಪಟ್ಟು, ಅನಂತರ ನಮ್ಮ ಅಲ್ಲಮಪ್ರಭುವು ಇವರುಗಳಿಗೆ ಮತ್ತೆ ಕರುಣೆಯಿಂದ ಹೀಗೆಂದು ನುಡಿದನು.

ನಡೆವಳಿಗಳೇನಾದೊಡಾಗಲಿ
ನುಡಿವಳಿಯಲತಿ ಜಾಣರಾದಿರಿ
ಪೊಡವಿಯಲಿ ನೀವಹುದು ಮಝು ಭಾಪೆನುತೆ ನಸುನಗುತೆ
ನಡೆಯಿರೈ ಶಿವಲಿಂಗ ಭಕ್ತಿಯ
ಬೆಡಗನೇಕಾಂತದಲಿ ನಿಮಗೊಡ
ಬಡಿಸಿ ಹೇಳುವೆನೆನುತೆ ಬಂದನು ಬಳಿಕ ಪ್ರಭುರಾಯ ೩೨

ಅಂತು ಗತಿ ೧೪೩ಕ್ಕಂ ಪದ ೬೪೪೩ಕ್ಕಂ ಮಂಗಳಂ

೩೨. "ನಡತೆಗಳೇನಾದರಾಗಲಿ ಮಾತಿನಲ್ಲಿ ಅತಿ ಜಾಣರಾದಿರಿ, ಭುವಿಯಲ್ಲಿ ನೀವು ಹೊಗಳಿಕೆಗೆ ಪಾತ್ರರಾದಿರಿ ಎಂದು ನಸುನಗುತ್ತಾ ಹೇಳಿ, [ಇನ್ನು ] ನಡೆಯಿರಿ. ಶಿವಲಿಂಗ ಭಕ್ತಿಯ ಬೆಡಗನ್ನು ಏಕಾಂತದಲ್ಲಿ ನಿಮಗೆ ಒಪ್ಪುವಂತೆ ಹೇಳುವೆನು" ಎಂದು [ತಿಳಿಸಿ] ಬಳಿಕ ಪ್ರಭುರಾಯನು ಬಂದನು.

## ೧೫ ಮರುಳು ಶಂಕರದೇವರು

### ಗತಿ ೧೫

ಸೂಚನೆ : ಮರುಳು ಶಂಕರದೇವರಿಗೆ ನಿಜ
ಪರಮಪದವಿಯನಿತ್ತು ಮೆಱೆದನು
ಧರಣಿಯಱಿಯಲು ಗುರುಗುಹೇಶ್ವರ ಲಿಂಗಲೀಲೆಯಲಿ

ಕರುಣವೆಲ್ಲವು ಕರಗಿಯಂತಃ
ಕರಣಶುದ್ಧಿಯ ಪಡೆದು ಸಲೆ ಶಂ
ಕರನ ಸಾಧಕರೊಕ್ಕುಮಿಕ್ಕುದನುಂಬ ಮಹಿಮಂಗೆ
ಗುರುವೆ ಪ್ರತ್ಯಕ್ಷದಲಿ ಕರುಣಿಸಿ
ಪರಮ ಪದವಿಯನೀವ ಭೇದವ
ಶರಣರೆಲ್ಲರು ತಿಳಿವುದೀ ಪ್ರಭುಲಿಂಗಲೀಲೆಯಲಿ ೧

ನಿಂದು ನಿಲ್ಲದ ನೆಲಕೆ ನೆಟ್ಟನೆ
ಹೊಂದಿ ಹೊಂದದ ರೂಪುರೇಖೆಗೆ
ಬಂದು ಬಾರದ ಸಂಚ್ಚಿದಾನಂದೈಕರಸಮಯನ
ವಂದಿಸುತೆ ನಾನಾ ಪ್ರಕಾರಗ
ಳಿಂದಲೊಳಕಡೆಗಾಗಿ ತನ್ನಯ
ಮಂದಿರಕೆ ನಡೆಗೊಳಿಸಿದನು ಬಸವಣ್ಣ ಭಕ್ತಿಯಲಿ ೨

ಬರುತೆ ಕಂಡನು ಪರಮಪಾವನ
ಕರದ ಪಾಪಕ್ಷಯದ ಭವಭೀ
ಕರವನಳಿದ ಮಹಾಪ್ರಸಾದದ ಕುಂಡತೀರದಲಿ
ಇರುಳು ಹಗಲೆಡೆವಿಡದೆ ಸೇವಿಪ
ಮರುಳು ಶಂಕರದೇವರನು ನಿಜ
ಕರುಣದಲಿ ಬಸವಣ್ಣನರಮನೆಯೊಳಗೆ ಪ್ರಭುರಾಯ ೩

ಸೂ : ಗುರು ಗುಹೇಶ್ವರಲಿಂಗನು ಲೀಲೆಯಿಂದ ಮರುಳುಶಂಕರದೇವರಿಗೆ ಸಹಜ ಪರಮಪದವಿಯನ್ನು ಲೋಕಕ್ಕೆ ತಿಳಿಯುವಂತೆ ಅನುಗ್ರಹಿಸಿ ಶೋಭಿಸಿದನು. ೧. ಇಂದ್ರಿಯಗಳೆಲ್ಲ ಕರಗಿ ಅಂತಃಕರಣಶುದ್ಧಿಯನ್ನು ಪಡೆದು ವಿಶೇಷವಾಗಿ ಶಂಕರನ ಭಕ್ತರು ಸೇವಿಸಿ ಮಿಕ್ಕ ಪ್ರಸಾದವನ್ನು ಉಣ್ಣುವ ಮಹಿಮನಾದ ಮರುಳು ಶಂಕರದೇವರಿಗೆ ಗುರುವಾದ ಅಲ್ಲಮಪ್ರಭುವೇ ಪ್ರತ್ಯಕ್ಷವಾಗಿ ಮುಕ್ತಿಪದವನ್ನು ಕರುಣಿಸಿ ತೋರುವ ರೀತಿಯನ್ನು ಈ ಪ್ರಭುಲಿಂಗಲೀಲೆಯಲ್ಲಿ ಶರಣರೆಲ್ಲರೂ ತಿಳಿಯುವುದು. ೨. ನೆಲದಲ್ಲಿ ನಿಂತೂ ನಿಲ್ಲದಂತಿರುವ, ನೇರವಾಗಿ ಹೊಂದಿಯೂ ಹೊಂದದಂತಿರುವ, ರೂಪರೇಖೆಗೆ ನಿಲುಕಿಯೂ ನಿಲುಕದಂತಿರುವ, ಸತ್-ಚಿತ್-ಆನಂದಗಳೆಲ್ಲವೂ ಒಂದೇ ಆಗಿರುವ ಪ್ರಭುವನ್ನು ನಾನಾ ಬಗೆಯಲ್ಲಿ ಭಕ್ತಿಯಿಂದ ನಮಸ್ಕರಿಸುತ್ತಾ ಬಸವಣ್ಣ ತನ್ನ ಮನೆಯೊಳಗೆ ಕರೆದೊಯ್ದನು. ೩. ಬಸವಣ್ಣನವರ ಮನೆಯೊಳಗೆ ಬರುತ್ತಾ ಪ್ರಭುದೇವನು ಮಹಾಪ್ರಸಾದಕುಂಡದ ಸಮೀಪದಲ್ಲಿ ರಾತ್ರಿ ಹಗಲು ಎಡೆಬಿಡದೆ ಸೇವೆಮಾಡುವ ಅತ್ಯಂತ

ಅಲ್ಲಮಪ್ರಭು ಬರುತೆ ಕಾಣುತೆ
ಮೆಲ್ಲಮೆಲ್ಲನೆ ಬಂದು ತನುಮನ
ವೆಲ್ಲವನು ಕವಿದೊಕ್ಕು ಸಾಷ್ಟಾಂಗಪ್ರಣತನಾಗಿ
ಪಲ್ಲವಿಸಿ ಪರಿಣಮದ ಪಸರಣೆ
ಯಲ್ಲಿ ಹಿಗ್ಗುತೆ ಭಕ್ತಿಭಾವದ
ಬುಲ್ಲವಣೆಯಲಿ ಮರುಳು ಶಂಕರದೇವನಿಂತೆಂದ ೪

ಗುರುವ ಕಂಡೆನು ಎನ್ನ ಭಾಗ್ಯದ
ತರುವ ಕಂಡೆನು ಎನ್ನ ಮುಕ್ತಿಯ
ಸಿರಿಯ ಕಂಡೆನು ಚಾಗು ಮಝ್ಝು ಭಾಪೆನುತಲಡಿಗಡಿಗೆ
ಕರಣಗಳು ಪರಿಣಮಿಸಿ ಹರ್ಷೋ
ತ್ಕರುಷದಲಿ ಹಾರಯ್ಸಿ ಹೆಚ್ಚುತೆ
ಮರುಳು ಶಂಕರದೇವ ಸ್ತುತಿಸಿದನಲ್ಲಮಪ್ರಭುವ ೫

ಶಿಲೆಯ ಮಱೆಯಲಿ ಹೊನ್ನು ನೆಟ್ಟನೆ
ತಿಲದ ಮಱೆಯಲಿ ತೈಲ ಭಾವಿಸೆ
ನೆಲದ ಮಱೆಯೆ ನಿಧಾನವಿಹವೊಲು ಮರುಳ ವೇಷದಲಿ
ಬಳಿಯಲಿರೆ ಸಾಕಾರ ಶಂಕರ
ನೆಲಸಿ ತನ್ನಂಗಣದಲಾತನ
ಹೊಲಬನಱಿಯನು ಬಸವನೆನುತಲ್ಲಮನು ಬೆಱಗಾದ ೬

ಪವಿತ್ರವಾದ ಕೈಯುಳ್ಳ ಪಾಪ ಮತ್ತು ಭೀಕರವಾದ ಹುಟ್ಟು ಸಾವುಗಳನ್ನು ನಾಶ ಮಾಡಿದ ಮರುಳುಶಂಕರದೇವರನ್ನು ಕೃಪೆಯಿಟ್ಟು ನೋಡಿದನು. ೪. ಅಲ್ಲಮಪ್ರಭು ಬರುತ್ತಿರಲು ಅವನನ್ನು ಕಂಡು ಮರುಳು ಶಂಕರದೇವನು ಮೆಲ್ಲ ಮೆಲ್ಲನೆ ಬಂದು ದೇಹ ಮನಗಳೆಲ್ಲವನ್ನು ಒಟ್ಟುಗೂಡಿಸಿ ಸಾಷ್ಟಾಂಗ ಪ್ರಣಾಮ ಮಾಡಿ ಸಂತೋಷಗೊಂಡು ತೃಪ್ತಿಯ ಹಬ್ಬುಗೆಯಲ್ಲಿ ಹಿಗ್ಗಿ ಹೆಚ್ಚಾದ ಭಕ್ತಿಭಾವದಿಂದ ಹೀಗೆಂದು ನುಡಿದನು. ೫. "ಗುರುವನ್ನು ಕಂಡೆನು. ನನ್ನ ಭಾಗ್ಯದ ತರುವನ್ನು ಕಂಡೆನು. ನನ್ನ ಮುಕ್ತಿಶ್ರೀಯನ್ನು ಕಂಡೆನು. ನನ್ನ ಪುಣ್ಯವೇ ಪುಣ್ಯ!" ಎಂದು ಹೊಗಳಿ ಮೇಲಿಂದ ಮೇಲೆ ಇಂದ್ರಿಯಗಳು ತೃಪ್ತಿ ಹೊಂದಲು ಸಂತೋಷದ ಆಧಿಕ್ಯದಿಂದ ಇದಿರು ನೋಡಿ ಹಿಗ್ಗಿ ಮರುಳು ಶಂಕರದೇವನು ಅಲ್ಲಮಪ್ರಭುವನ್ನು ಸ್ತುತಿಸಿದನು. ೬. "ಶಿಲೆಯ ಮರೆಯಲ್ಲಿ ಚಿನ್ನವೂ, ಎಳ್ಳಿನ ಮರೆಯಲ್ಲಿ ಎಣ್ಣೆಯೂ, ವಿಚಾರಮಾಡಲು ನೆಲದ ಮರೆಯಲ್ಲಿ ಐಶ್ವರ್ಯವೂ ಇರುವ ರೀತಿಯಲ್ಲಿ ಮೂಢನ ವೇಷದ ಆಕಾರ ತಾಳಿದ ಶಂಕರನು ಸಮೀಪದಲ್ಲಿ ತನ್ನ ಅಂಗಣದಲ್ಲಿಯೇ ಇರುತ್ತಿರಲು ಆತನ ರೀತಿಯನ್ನು ಬಸವನು ತಿಳಿಯಲಿಲ್ಲವಲ್ಲಾ!" ಎಂದು ಅಲ್ಲಮ ಅಚ್ಚರಿಗೊಂಡನು.

ಪ್ರೇಮದಿಂದಲಿ ಮರುಳು ಶಂಕರ
ನಾಮದಲಿ ಶಂಕರನೆ ಬಂದಿರೆ
ಭೂಮಿಜರು ತಾವಱಿಯರಾಡಂಬರದ ಭಕ್ತಿಯಲಿ
ತಾಮಸವ ತಕ್ಕೈಸಿ ಸಾತ್ವಿಕ
ಸೀಮೆಯನು ತಾವಱಿಯಲಱಿಯರು
ರಾಮ ನೋಡೆನುತಲ್ಲಮಪ್ರಭುರಾಯನಿಂತೆಂದ ೭

ಭಾವಿಸಲು ಶಿವಲಿಂಗ ಭಕ್ತಿಯ
ನಾವ ಪರಿಯಲಿ ಮಾಡಬೇಕೆಂ
ಬಾ ವಿಧಾನವನಱಿಯದುದ್ದೇಶದಲಿ ಮಾಡಿದೊಡೆ
ಹಾವಸೆಯಲಡಿಯಿಡುವನಂತೆಯ
ದಾವ ಪಾರವನೈದಬಲ್ಲುದು
ದೇವನೀ ಪರಿ ಸಿಕ್ಕುವನೆ ರಾಮಯ್ಯ ಕೇಳೆಂದ ೮

ಅಱಿಯಬೇಕಾರಾವ ವೇಷದ
ಮಱೆಯಲಿಹರೋ ಮೇಣು ಲಿಂಗದ
ಬೆಱಗಿನಲಿ ಕಂಡವರ ಕಣ್ಣಿಗೆ ಮರುಳರಾಗಿಹರೊ
ಮೆಱೆವ ಭಕ್ತರ ಮನವ ನೋಡಲು
ಮಱೆಸಿಹರೊ ದಿಟವಿವನು ತಿಳಿಯದೆ
ಬಱಿದೆ ಬಹುದೇ ಭಕ್ತಿಸುಖ ರಾಮಯ್ಯ ಕೇಳೆಂದ ೯

ಗುರುವೆ ಬಿನ್ನಹ ನಿನ್ನನೊಲಿಸುವ
ಪರಿಯ ಭಕ್ತಿಯ ಮಾಡಿ ಮೆಚ್ಚಿಸಿ
ವರವ ಪಡೆಯಲದಾರು ಬಲ್ಲರು ಭಾವಿಸಲು ನಿನಗೆ
ಶರಣು ಶರಣೆಂದೆಂಬ ಶಬ್ದ
ಸ್ಮರಣೆಯಿಂದಲಿ ಶುದ್ಧರಲ್ಲದೆ
ಹಿರಿದು ಮಾತೇಕೆನುತಲಿದ್ದನು ಸಿದ್ಧರಾಮಯ್ಯ ೧೦

೭. "ಪ್ರೇಮದಿಂದ ಮರುಳುಶಂಕರನೆಂಬ ಹೆಸರಿನಿಂದ ಶಿವನೇ ಬಂದಿರಲು ಮರ್ತ್ಯಲೋಕದವರು ಅದನ್ನು ತಿಳಿಯರು. ಆಡಂಬರದ ಭಕ್ತಿಯಿಂದ ತಾಮಸಭಾವವನ್ನು ಅಪ್ಪಿದ ಅವರು ಸಾತ್ವಿಕಭಾವದ ಎಲ್ಲೆಯನ್ನು ತಿಳಿಯಲು ಅಸಮರ್ಥರು. ಸಿದ್ಧರಾಮ, ನೋಡು" ಎಂದು ಅಲ್ಲಮಪ್ರಭುರಾಯನು ಹೇಳಿ [ಮತ್ತೆ] ಹೀಗೆಂದನು. ೮. "ವಿಚಾರ ಮಾಡಲು, ಶಿವಲಿಂಗಭಕ್ತಿಯನ್ನು ಯಾವ ರೀತಿಯಲ್ಲಿ ಆಚರಿಸಬೇಕೆಂಬ ಕ್ರಮವನ್ನರಿಯದೆ ಮನದಲ್ಲಿ ಒಂದು ಉದ್ದೇಶವನ್ನು ಹೊಂದಿ ಮಾಡಿದರೆ, ಪಾಚಿಯ ಮೇಲೆ ಕಾಲುಗಳನ್ನಿಡುವವನಂತೆ, ಯಾವ ದಡವನ್ನು ಮುಟ್ಟಲು ಸಾಧ್ಯ? ಶಿವನು ಈ ವಿಧದಿಂದ ಲಭಿಸುತ್ತಾನೆಯೆ? ರಾಮಯ್ಯ, ಕೇಳು" ಎಂದು ಅಲ್ಲಮಪ್ರಭುವು ನುಡಿದನು. ೯. "ಯಾರು ಯಾವ ವೇಷದ ಮರೆಯಲ್ಲಿರುವರೊ ಮತ್ತು ಲಿಂಗದ ದಾಕ್ಷಿಣ್ಯದಿಂದ ನೋಡುವವರ ಕಣ್ಣಿಗೆ ಹುಚ್ಚರಾಗಿರುವರೊ; ಮೆರೆಯ ತಕ್ಕ ಭಕ್ತರ ಮನಸ್ಸನ್ನು ನೋಡಲು ಆಗದಂತೆ ಮರೆಸಿ ಇರುವರೊ ಏನೊ [ಇದನ್ನು ] ತಿಳಿಯಬೇಕು. ನಿಜವಾಗಿ ಇದನ್ನು ತಿಳಿಯದೆ ಭಕ್ತಿಸುಖ ಸುಮ್ಮನೇ ಲಭಿಸುತ್ತದೆಯೆ? ರಾಮಯ್ಯ ಕೇಳು" ಎಂದು ಅಲ್ಲಮ ಪ್ರಭುವು ನುಡಿದನು. ೧೦. "ಗುರುವೇ [ನಿನ್ನಲ್ಲೊಂದು] ಪ್ರಾರ್ಥನೆ. ನಿನ್ನನ್ನು ಒಲಿಸುವ ರೀತಿಯಲ್ಲಿ ಭಕ್ತಿಯನ್ನು ಆಚರಿಸಿ, ನಿನ್ನನ್ನು ಮೆಚ್ಚಿಸಿ, ನಿನ್ನಿಂದ ವರವನ್ನು ಪಡೆಯುವುದನ್ನು

ನಿನ್ನ ಕೃಪೆಯುಳ್ಳವನೆ ಭಕ್ತನು
ನಿನ್ನ ಕೃಪೆಯುಳ್ಳವನೆ ಯುಕ್ತನು
ನಿನ್ನ ಕೃಪೆಯುಳ್ಳವನೆ ಮುಕ್ತನು ದಿಟ ವಿಚಾರಿಸೊಡೆ
ನಿನ್ನ ಕೃಪೆಯೊಂದಿಲ್ಲದಿರೆ ಮಿ
ಕ್ಕನ್ನಭಕ್ತಿಯೊಳೇನು ಫಲವೈ
ನಿನ್ನ ಕರುಣವೆ ಕಾರಣವಲಾ ಗುರುವೆ ಕೇಳೆಂದ ೧೧

ಲೇಸು ಭಕ್ತಿಯ ಬಂಧುತನದಭಿ
ಲಾಷೆಯಿಂತಿರಬೇಕು ಮರ್ತ್ಯರ
ಹೂಸಿ ಹುಂಡರ ನಡೆವಳಿಯ ನೀನೊಪ್ಪವಿಟ್ಟೆಯಲಾ
ಐಸೆ ಮತ್ತೇನಹುದು ದಿಟ ನೀ
ನೀಸುವೊಲಪರಕಾಜಿವೆಂಬುದ
ನೀಸುದಿನ ನಾವರಿಯೆವೈ ರಾಮಯ್ಯ ಕೇಳೆಂದ ೧೨

ವಸುಮತಿಯ ಶಿವಭಕ್ತರೆಸಗುವ
ಕುಸಲದೊಯ್ಯಾರವನು ನಮ್ಮೀ
ಮಸುಳಿಸಿದ ಮತಿಗರಿಯಬಹುದೇ ಸಾಕದಂತಿರಲಿ
ಅಸಮ ಶಂಕರನೆಂಬ ಮಹಿಮನ
ಹೊಸಪರಿಯ ರೀತಿಯನು ನಮಗರು
ಹಿಸಲುಬೇಕೆನುತಲ್ಲಮನ ಕೇಳಿದನು ರಾಮಯ್ಯ ೧೩

ಯಾರು ತಾನೇ ಬಲ್ಲರು? ವಿಚಾರಮಾಡಲು, ನಿನಗೆ ಶರಣು ಶರಣು ಎಂಬ ಶಬ್ದಸ್ಮರಣೆಯಿಂದಲೇ ಶುದ್ಧರಲ್ಲವೆ, ಹೆಚ್ಚಿನ ಮಾತೇಕೆ?" ಎಂದು ಸಿದ್ಧರಾಮಯ್ಯ [ಪ್ರಭುವಿಗೆ] ಹೇಳಿದನು. ೧೧. "ನಿನ್ನ ಕೃಪೆಯುಳ್ಳವನೆ ಭಕ್ತನು ನಿನ್ನ ಕೃಪೆಯುಳ್ಳವನೆ ಯೋಗ್ಯನು. ನಿನ್ನ ಕೃಪೆಯುಳ್ಳವನೆ ಮುಕ್ತನು ಇದು ಸತ್ಯ. ವಿಚಾರಮಾಡಲು ನಿನ್ನ ಕೃಪೆಯೊಂದಿಲ್ಲದಿರಲು ಉಳಿದ ಭಕ್ತಿಯಿಂದೇನು ಫಲ? ನಿನ್ನ ಕರುಣೆಯೆ [ಇವೆಲ್ಲಕ್ಕೂ] ಕಾರಣವಲ್ಲವೆ! ಗುರುವೆ, ಕೇಳು" ಎಂದು ಸಿದ್ಧರಾಮನು [ಪ್ರಭುವಿಗೆ] ನುಡಿದನು. ೧೨. "ಒಳ್ಳೆಯ ಭಕ್ತಿಯು ಬಾಂಧವ್ಯದ ಮೇಲಣ ಆಸೆಯಂತಿರಬೇಕು. ಲೌಕಿಕರ ಡಂಭಾಚಾರಿಗಳ ನಡತೆಯನ್ನು ನೀನು ಪುಟಕ್ಕೆ ಹಾಕಿದೆ. ಅಷ್ಟೇ, ಮತ್ತೇನಾಗುವುದು? ನಿಜವಾಗಿಯೂ ನೀನು ಇಷ್ಟು ಪಕ್ಷಪಾತಿ ಎಂಬುದನ್ನು ಇಷ್ಟುದಿವಸಗಳವರೆವಿಗೆ ನಾವು ತಿಳಿದಿರಲಿಲ್ಲ, ರಾಮಯ್ಯ ಕೇಳು" ಎಂದು ಅಲ್ಲಮಪ್ರಭುವು ನುಡಿದನು. ೧೩. "ಭೂಮಿಯಲ್ಲಿನ ಶಿವಭಕ್ತರ ಯೋಗ್ಯವಾದ ಆಚರಣೆಯ ಅಂದವನ್ನು ನಮ್ಮ ಈ ಮಂದಬುದ್ಧಿ ತಿಳಿಯಲು ಸಾಧ್ಯವೇ? ಸಾಕು, ಅದು ಅಂತಿರಲಿ, ಎಣೆಯಿಲ್ಲದ ಶಂಕರನೆಂಬ ಮಹಿಮಾಪುರುಷನ ಹೊಸಬಗೆಯ ರೀತಿಯನ್ನು ನಮಗೆ ತಿಳಿಸಬೇಕು" ಎಂದು ರಾಮಯ್ಯ ಅಲ್ಲಮನನ್ನು ಪ್ರಾರ್ಥಿಸಿದನು.

ಮರುಳು ಶಂಕರನೆಂಬನಜೀವಿನ
ತಿರುಳು ಅಂಗಾಗಮದ ಹೊಳಹಿನ
ಹುರುಳು ನಿರ್ಮಳಧರ್ಮಮರ್ಮದ ಚಾರುಚಾರಿತ್ರ
ನಿರುತ ಶಾಂತಿಯ ಚಿತ್ತವೃತ್ತಿಯ
ಪರಮ ಪಾವನಮೂರ್ತಿಯಾತನ
ಪರಿಗಳನುಪಮತರ ಕಣಾ ರಾಮಯ್ಯ ಕೇಳೆಂದ ೧೪

ತೀವಿ ತನ್ನೊಂದುದರಕೋಸುಗ
ದಾವ ಕೃತ್ಯವ ಮಾಡುತಿರ್ದೊಡೆ
ಜೀವಜಾಳಕೆ ನೋವು ತಪ್ಪದೆನುತ್ತೆ ಕರುಣದಲಿ
ಭಾವಿಸುತೆ ಶಿವಲಿಂಗಭಕ್ತರು
ಸೇವಿಸಿದ ಶೇಷಪ್ರಸಾದವ
ನಾವರಿಸಿದ ಮಹಾತ್ಮನೀತನು ರಾಮ ಕೇಳೆಂದ ೧೫

ಕಾಮದಲಿ ಕಂಗೆಡದೆ ಕ್ರೋಧ
ಸ್ತೋಮದಲಿ ಮುಂಗೆಡದೆ ಲೋಭದ
ಸೀಮೆಯಲಿ ಸಿಕ್ಕದೆ ವಿಮೋಹದ ಬಲೆಗೆ ಬಗೆಗುಡದೆ
ಆ ಮದೋನ್ನತ ಮತ್ಸರಂಗಳ
ನೇಮಿಸದೆ ಲಿಂಗಪ್ರಸಾದ
ಪ್ರೇಮಿಯಾದ ಮಹಾತ್ಮನೀತನು ರಾಮ ಕೇಳೆಂದ ೧೬

ಕೇಳುವಾಳೋಕಿಸುವ ರುಚಿಸುವ
ಲೀಲೆಯಿಂ ಕಂಪಜಿವ ಸೋಂಕುವ
ಕಾಳು ವಿಷಯೇಂದ್ರಿಯದ ತವಕವ ತೆಗೆದು ತರಹರಿಸಿ
ಚಾಳಿಕೆಗೆ ನಿರ್ಬಾಧಕದ ಸ
ಮ್ಮೇಳವೆಂದೀ ಪ್ರಸಾದದ
ಮೇಲೆ ಮಚ್ಚಿದ ಮಹಿಮನೀತನು ರಾಮ ಕೇಳೆಂದ ೧೭

೧೪. "ಮರುಳು ಶಂಕರನೆಂಬವನು ಜ್ಞಾನದ ತಿರುಳು. ಶಿವಾಗಮದ ಶೋಭಾಯಮಾನವಾದ ಅರ್ಥ. ಪರಿಶುದ್ಧವಾದ ಧರ್ಮದ ಗೂಢವಾದ ಸುಂದರ ಚಾರಿತ್ರ. ಸದಾ ಪ್ರಶಾಂತಿಯಿಂದ ಕೂಡಿದ ಚಿತ್ತವೃತ್ತಿಯುಳ್ಳ ಪರಮಪಾವನಮೂರ್ತಿ. ಆತನ ರೀತಿಗಳು ಉಪಮಿಸಬಾರದಂಥವು, ರಾಮಯ್ಯ ಕೇಳು" ಎಂದು ಅಲ್ಲಮಪ್ರಭುವು ನುಡಿದನು. ೧೫. "ತನ್ನ ಒಂದು ಹೊಟ್ಟೆಯನ್ನು ತುಂಬಿಸಿ ಪೋಷಣೆ ಮಾಡಿಕೊಳ್ಳುವುದಕ್ಕಾಗಿ ಯಾವ ಕಾರ್ಯವನ್ನು ಮಾಡಿದರೂ ಜೀವಸಮೂಹಕ್ಕೆ ನೋವು ತಪ್ಪುವುದಿಲ್ಲ ಎಂದು ಕರುಣೆಯಿಂದ ವಿಚಾರಮಾಡುತ್ತಾ ಶಿವಲಿಂಗಭಕ್ತರು ಸೇವಿಸಿ ಉಳಿಸಿದ ಪ್ರಸಾದವನ್ನು ಸಂಗ್ರಹಿಸಿಕೊಂಡ ಮಹಾತ್ಮನೀತನು ಸಿದ್ಧರಾಮ, ಕೇಳು" ಎಂದು ಅಲ್ಲಮನು ನುಡಿದನು. ೧೬. "ಕಾಮದಲ್ಲಿ ಕಂಗೆಡದೆ, ಕ್ರೋಧಗಳ ಸಮೂಹದಲ್ಲಿ ಮುಂದೆ ಬೀಳದೆ, ಲೋಭದ ಗಡಿಯಲ್ಲಿ ಸಿಲುಕಿಕೊಳ್ಳದೆ, ವ್ಯಾಮೋಹದ ಬಲೆಗೆ ಮನಸ್ಸನ್ನು ಕೊಡದೆ, ಹೆಚ್ಚಾದ ಮದ ಮತ್ಸರಗಳನ್ನು ಕೆಲಸಕ್ಕೆ ಹಚ್ಚದೆ ಲಿಂಗಪ್ರಸಾದಪ್ರೇಮಿಯಾದ ಮಹಾತ್ಮನೀತನು, ಸಿದ್ಧರಾಮ ಕೇಳು" ಎಂದು ಅಲ್ಲಮಪ್ರಭುವು ನುಡಿದನು. ೧೭. "ಕೇಳುವ, ನೋಡುವ, ರುಚಿ ನೋಡುವ,

ತರಣಿಯುದಯಿಸೆ ರತ್ನಕಾಂತಿ
ಸ್ಫುರಣೆ ಕಣ್ಗಿದಿರಾಗಿ ತೋಱುವ
ಪರಿಯಲಾನೀ ಮರುಳು ಶಂಕರನೆಂಬ ಮಹಿಮನನು
ಗುರುವೆ ನೀನೈತರಲು ಕಂಡೆನು
ಪರಮ ಪಾವನ ನಾನಲಾ ಹರ
ಹರ ಎನುತೆ ಪರಿಣಮಿಸುತಿರ್ದನು ಬಸವದಂಡೇಶ ೧೮

ಬಸವ ನಿನ್ನಯೆ ಭಕ್ತಿವೃಕ್ಷದ
ಪಸರಣೆಯನಾಶ್ರೈಸಬೇಕೆಂ
ದೊಸೆದು ಬಂದು ಮಹಾತ್ಮರಗಣಿತವವರೊಳೀತಂಗೆ
ವಸುಮತಿಯೊಳೆಣೆಗಾಣೆನಿಂತ
ಪ್ಪಸಮರೆಲ್ಲರು ನಿನ್ನ ಬಾಗಿಲ
ಮುಸುಕಿಕೊಂಡಿಹರಾಗಿ ನಾನೆ ಕೃತಾರ್ಥನಹುದೆಂದ ೧೯

ದೇವ ನೀನೊಲಿದನೆ ಕೃತಾರ್ಥನು
ಭಾವಿಸಲು ನೀನಾಡಿಸುವ ಸೂ
ತ್ರಾವಳಿಯ ಬೊಂಬೆಗಳು ನಮಗುಂಟೇ ಸ್ವತಂತ್ರಗುಣ
ನೀವೆ ಬಲ್ಲಿರಿ ನಿಮ್ಮ ಮಹಿಮೆಯನು
ನಾವು ಬಲ್ಲೆವೆ ಎನುತಲಲ್ಲಮ
ದೇವರಿಗೆ ಬಿನ್ನೈಸುತಿರ್ದನು ಬಸವದಂಡೇಶ ೨೦

ಲೀಲೆಯಿಂದ ವಾಸನೆಯನ್ನು ತಿಳಿಯುವ, ಸ್ಪರ್ಶಿಸುವ ಪಂಚೇಂದ್ರಿಯಂಗಳ ಕೆಟ್ಟವಿಷಯಗಳ ಮೇಲಿನ ಉತ್ಸಾಹವನ್ನು ನಿವಾರಿಸಿ, ಶಾಂತನಾಗಿ ಬದುಕಿರಲು ನಿರ್ಬಾಧಕವಾದ ಆಹಾರವಿದು ಎಂದು ಶಿವಪ್ರಸಾದದ ಮೇಲೆ ಪ್ರೀತಿಯಿಟ್ಟ ಮಹಿಮನು ಈತನು. ಸಿದ್ಧರಾಮ ಕೇಳು" ಎಂದು ಅಲ್ಲಮಪ್ರಭುವು ನುಡಿದನು. ೧೮. ಸೂರ್ಯೋದಯವಾಗಲು ರತ್ನದ ಪ್ರಕಾಶಮಾನವಾದ ಕಿರಣಗಳು ಕಣ್ಣಿಗೆ ಇದಿರಾಗಿ ತೋರುವ ರೀತಿಯಲ್ಲಿ "ಗುರುವೇ, ನೀನು [ಇಲ್ಲಿಗೆ] ಬರಲು ಮರುಳು ಶಂಕರನೆಂಬ ಮಹಿಮನನ್ನು ಕಂಡೆನು. ನಾನು ಪರಮಪಾವನನಲ್ಲವೆ? ಹರ ಹರ ಎಂದು ಬಸವದಂಡೇಶನು ಹೇಳುತ್ತಿದ್ದನು. ೧೯. "ಬಸವಾ ನಿನ್ನಯ ಭಕ್ತಿಯೆಂಬ ವೃಕ್ಷದ ನೆರಳನ್ನು ಆಶ್ರಯಿಸಬೇಕೆಂದು ಪ್ರೀತಿಯಿಂದ ಬಂದ ಮಹಾತ್ಮರು ಲೆಕ್ಕವಿಲ್ಲದಷ್ಟು ಮಂದಿ. ಅವರಲ್ಲಿ ಈತನಿಗೆ ಭೂಮಿಯಲ್ಲಿ ಸಮಾನರಾದವರನ್ನು ಕಾಣೆನು. ಇಂತಹ ಅಸಾಮಾನ್ಯರೆಲ್ಲರೂ ನಿನ್ನ ಬಾಗಿಲನ್ನು ಮುತ್ತಿಕೊಂಡಿರುವರಾದ ಕಾರಣ ನೀನೇ ಧನ್ಯನಾಗಿರುವೆ" ಎಂದು ಅಲ್ಲಮಪ್ರಭುವು ನುಡಿದನು. ೨೦. "ದೇವಾ, ನೀನು ಒಲಿದವನೆ ಧನ್ಯನು. ವಿಚಾರ ಮಾಡಲು ನಾವು ನೀನಾಡಿಸುವ ಸೂತ್ರದ ಬೊಂಬೆಗಳು. ನಮಗೆ ಸ್ವಾತಂತ್ರ್ಯವಿದೆಯೇ? ನಿಮ್ಮ ಮಹಿಮೆಯನ್ನು ನೀವೇ ಬಲ್ಲಿರಿ, ನಾವು ತಿಳಿ

ಮನವ ನೋಡುವೆನೆಂದು ನಿನ್ನನು
ಕನಲಿದೆವು ನಾವಿನ್ನೆಬರ ನಿನ
ಗಿನಿತು ಮುನಿಸಿನ ಮೊಳಕೆ ಮೈದೋಚಿಸದ ಪರಿ ಲೇಸು
ಘನಮಹಿಮ ನೀನಹುದು ಸಮತೆಯ
ನೆನಹು ನೆಲಸಿತು ಚಾಗು ಚಾಗೆಂ
ದೆನುತೆ ಬಸವನ ಹೊಗಳುತಲ್ಲಮಲಿಂಗನಿಂತೆಂದ ೨೧

ಕಾರಣವ ಬಲ್ಲವರಿಗಱಿಯಲು
ಧಾರಣಿಯಲೀ ಬಸವನಂಗಣ
ವಾರಣಾಸಿ ವಿಮುಖ್ಯ ತೀರ್ಥಕ್ಷೇತ್ರದಿಂದಧಿಕ
ಆರು ಪಡೆವರು ಭಕ್ತರಿಕ್ಕೆಯ
ಸಾರಿ ಸದ್ಗತಿ ಪಡೆವುದನು ನಿ
ರ್ಧಾರಿಸಲು ಸಾಮಾನ್ಯವೇ ರಾಮಯ್ಯ ಕೇಳೆಂದ ೨೨

ದೇವ ನಿನ್ನಯ ಕರುಣವೇ ಸಂ
ಭಾವಿಸಿದ ಕಾರಣದಲಾನೀ
ಭೂವಳಯದಲಿ ಬಸವಮುಖ್ಯ ಸಮಸ್ತ ಭಕ್ತರನು
ತೀವಿ ಕಂಡು ಕೃತಾರ್ಥನಾದೆನಿ
ದಾವ ಪುಣ್ಯದ ಫಲವೊ ಶಿವ ಮಾ
ದೇವ ಎನುತಲಿ ಹಿಗ್ಗುತಿರ್ದನು ಸಿದ್ಧರಾಮಯ್ಯ ೨೩

ಬಸವರಾಜನ ಭಕ್ತಿಯನು ಬ
ಣ್ಣಿಸುವೊಡಾತನ ಭಕ್ತಿಯನು ಲೆ
ಕ್ಕಿಸುವೊಡರಿದಗಣಿತವಲಾ ಕೇಳ್ ಸಿದ್ಧರಾಮಯ್ಯ
ಪಸರಿಸುವದಂತಿರಲಿ ನಾವಿ
ನ್ನಸಮ ಶಂಕರಗೈಕ್ಯಪದವಿಯ
ನೊಸೆದು ಕೊಡಬೇಕೆನುತಲಲ್ಲಮಲಿಂಗನಿಂತೆಂದ ೨೪

ದಿದ್ದೇವೆಯೆ?" ಎಂದು ಬಸವದಂಡಾಧಿಪತಿಯು ಅಲ್ಲಮದೇವರಿಗೆ ಹೇಳುತ್ತಿದ್ದನು. ೨೧. "ಇಲ್ಲಿಯವರೆವಿಗೆ ನಿನ್ನ ಮನಸ್ಸನ್ನು ಪರೀಕ್ಷಿಸಲೆಂದು ನಾವು ನಿನ್ನ ಮೇಲೆ ರೇಗಿದೆವು. ಸ್ವಲ್ಪ ಮಾತ್ರವೂ ಕೋಪದ ಮೊಳಕೆ ತೋರಿಸದ ನಿನ್ನ ರೀತಿ ಒಳ್ಳೆಯದು. ಘನಮಹಿಮ ನೀನಾಗಿರುವೆ. [ನಿನ್ನ ಮನದಲ್ಲಿ] ಸಮತೆಯ ಅರಿವು ನೆಲಸಿತು. ಭೇಷ್!" ಎಂದು ಬಸವನನ್ನು ಹೊಗಳುತ್ತ ಅಲ್ಲಮಲಿಂಗನು ಹೀಗೆಂದನು. ೨೨. "ಕಾರಣವನ್ನು ತಿಳಿಯಲು ಬಲ್ಲವರಿಗೆ ಭೂಮಿಯಲ್ಲಿ ಬಸವನ ಮನೆಯ [ಮನೆಯ] ಅಂಗಣವು ವಾರಣಾಸಿ [ಯೇ ಮೊದಲಾದ] ಅತ್ಯಂತ ಮುಖ್ಯ ತೀರ್ಥಕ್ಷೇತ್ರಗಳಿಗಿಂತ ಅಧಿಕವು. ಭಕ್ತರ ಆಶ್ರಯಸ್ಥಾನವನ್ನು ಹೊಂದಿ ಸದ್ಗತಿ ಪಡೆಯುವುದನ್ನು ಯಾರು ಬಲ್ಲರು? [ಬಸವನ ಮಹಿಮಾತಿಶಯವನ್ನು] ನಿರ್ಧರಿಸುವುದು ಸಾಮಾನ್ಯವೇ? ರಾಮಯ್ಯ ಕೇಳು" ಎಂದು ಅಲ್ಲಮನು ನುಡಿದನು. ೨೩. ದೇವಾ, ನಿನ್ನಯ ಕರುಣವೇ ರಕ್ಷಿಸಿದ ಕಾರಣದಿಂದ ನಾನು ಈ ಭೂವಲಯದಲ್ಲಿ ಪ್ರಮುಖವಾಗಿ ತುಂಬಿರುವ ಬಸವಾದಿ ಭಕ್ತರನ್ನು ನೋಡಿ ಧನ್ಯನಾದೆನು. ಇದು ಯಾವ ಪುಣ್ಯದ ಫಲವೊ, ಶಿವ ಮಹಾದೇವ!" ಎಂದು ಸಿದ್ಧರಾಮನು ಪ್ರಭುವಿಗೆ ಹೇಳುತ್ತ ಹಿಗ್ಗುತ್ತಲಿದ್ದನು. ೨೪. "ಬಸವರಾಜನ ಭಕ್ತಿಯನ್ನು ಬಣ್ಣಿಸುವುದು, ಭಾವಿಸುವುದು ಅಸಾಧ್ಯ.

ಇಂದ್ರಿಯವನತಿಗಳೆದನಳುಪಿನ
ದಂದುಗವ ಧಿಕ್ಕರಿಸಿದನು ಭವ
ಬಂಧನದ ಬೇರಿಂಗೆ ಕಿಚ್ಚಿಕ್ಕಿದನಲಾ ಎನುತೆ
ಅಂದು ಬಳಿಕಾ ಮರುಳು ಶಂಕರ
ತಂದೆಯನು ತಾನೊಲಿದು ಪರಮಾ
ನಂದದಿಂ ನೋಡಿದನು ನಮ್ಮಯ ಗುರು ಗುಹೇಶ್ವರನು ೨೫

ಹಲವು ಯುಗಯುಗ ಜನ್ಮಜನ್ಮಂ
ಗಳಲಿ ಸಾಧಿಸಿ ಭೇದಿಸುವ ನಿ
ರ್ಮಳ ನಿರಾಕುಳ ಸಿದ್ಧಶಿವತತ್ವಾನುಭಾವನೆಯ
ಫಲವನೊಂದೇ ನಿಮಿಷದಲಿ ನೆಱೆ
ನಿಲಿಸಿ ನಿಜಪದವಿಯನು ಕೊಟ್ಟನು
ಸುಲಭದಲಿ ಶಂಕರಗೆ ನಮ್ಮಯ ಗುರು ಗುಹೇಶ್ವರನು ೨೬

ಆಡಿ ಕೆಲರಿಗೆ ಕರುಣದಲಿ ಮಾ
ತಾಡಿ ಕೆಲರಿಗೆ ನುಡಿಸಿ ಕೆಲರಿಗೆ
ನೋಡಿ ಕೆಲರಿಗೆ ಜಜೆದು ಕೆಲರಿಗೆ ಜಡಿದು ಕೆಲಬರಿಗೆ
ಹಾಡಿ ಕೆಲರಿಗೆ ಹರಸಿ ಕೆಲರಿಗೆ
ಕೂಡಬಲ್ಲನು ನಿತ್ಯಸುಖವನು
ರೂಢಿಯೊಳು ಘನಮಹಿಮನೆಮ್ಮಯ ಗುರು ಗುಹೇಶ್ವರನು ೨೭

ಗತಿ ೧೫೫ಕ್ಕಂ ಪದ ೬೭೧ಕ್ಕಂ ಮಂಗಳಂ

ಅವನ ಭಕ್ತಿಯ ಕಾರ್ಯಗಳು ಲೆಕ್ಕವಿಲ್ಲದಷ್ಟು. ವಿಸ್ತರಿಸುವುದು ಹಾಗಿರಲಿ. ಅಸಮಾನವಾದ ಮರುಳು ಶಂಕರನಿಗೆ ನಾನಿನ್ನು ಐಕ್ಯಪದವಿಯನ್ನು ಪ್ರೀತಿಯಿಂದ ಕೊಡಬೇಕು" ಎಂದು ನುಡಿದು [ಮತ್ತೆ] ಅಲ್ಲಮಲಿಂಗನು ಹೀಗೆಂದನು. ೨೫. "ಆ ಮರುಳು ಶಂಕರತಂದೆಯು ಪಂಚೇಂದ್ರಿಯಗಳನ್ನು ತಿರಸ್ಕರಿಸಿದನು. ಆಸೆಯ ಚಿಂತೆಯನ್ನು ಧಿಕ್ಕರಿಸಿದನು. ಹುಟ್ಟು ಸಾವುಗಳ ಬಂಧನದ ಬೇರಿಗೆ ಬೆಂಕಿಯಿಕ್ಕಿದನು" ಎಂದು ಹೇಳಿ ಆ ಬಳಿಕ ಅವರನ್ನು ಪ್ರೀತಿಯಿಂದಲೂ ಪರಮಾನಂದದಿಂದಲೂ ನಮ್ಮ ಗುರು ಗುಹೇಶ್ವರನು ನೋಡಿದನು. ೨೬. ನಮ್ಮ ಗುರು ಗುಹೇಶ್ವರನು ಅನೇಕ ಯುಗಗಳಲ್ಲಿಯೂ ಜನ್ಮಗಳಲ್ಲಿಯೂ ಸಾಧಿಸಿ ಪಡೆಯುವ ನಿರ್ಮಳವೂ ಶಾಂತವೂ ಆದ ಸಿದ್ಧಿಯನ್ನು ಕೊಡುವ ಶಿವತತ್ವಾನುಭವದ ಫಲವನ್ನು ಒಂದೇ ನಿಮಿಷದಲ್ಲಿ ಮರುಳು ಶಂಕರದೇವನಿಗೆ ಚೆನ್ನಾಗಿ ಹೊಂದಿಸಿ ಸುಲಭದಲ್ಲಿ ಮೋಕ್ಷಪದವಿಯನ್ನು ದೊರಕಿಸಿಕೊಟ್ಟನು. ೨೭. ಘನಮಹಿಮನಾದ ನಮ್ಮ ಗುರುಗುಹೇಶ್ವರನು ಕೆಲವರೊಡನೆ ಆಡಿಯೂ, ಕರುಣೆಯಿಂದ ಮಾತಾಡಿಯೂ, ಕೆಲವರಿಂದ ಮಾತನಾಡಿಸಿಯೂ, ಕೆಲವರನ್ನು ನೋಡಿಯೂ, ಕೆಲವರನ್ನು ನಿಂದಿಸಿಯೂ, ಕೆಲವರನ್ನು ಜಡಿದೂ, ಕೆಲವರನ್ನು ಹೊಗಳಿಯೂ, ಕೆಲವರನ್ನು ಆಶೀರ್ವದಿಸಿಯೂ ಮುಕ್ತಿಯನ್ನು ಅನುಗ್ರಹಿಸಬಲ್ಲನು.

# ೧೬. ಇಷ್ಟಲಿಂಗ

**ಗತಿ ೧೬**

ಸೂಚನೆ : ಬಸವ ಮೊದಲಾಗಿರ್ದ ಭಕ್ತರಿ
ಗೊಸೆದು ಲಿಂಗದ ಮಾರ್ಗವನು ಬೋ
ಧಿಸಿದನೆಮ್ಮಯ ಗುರು ಗುಹೇಶ್ವರ ಲಿಂಗಲೀಲೆಯಲಿ

ನಿಷ್ಠೆ ನೆಲಸಿರೆ ಮೊಟ್ಟಮೊದಲಲಿ
ಯಿಷ್ಟಲಿಂಗದ ಭಕ್ತಿಮಾರ್ಗದ
ಶಿಷ್ಟತೆಯ ಶೀಲವನು ಸಕಲಾಗಮದ ಸಾರವನು
ಕಷ್ಟಕರ್ಮಭ್ರಮೆಯ ಕೇಡನು
ದೃಷ್ಟಜನ್ಮದೊಳಿರ್ದು ಕಾಂಬರೆ
ಶ್ರೇಷ್ಠಭಕ್ತರು ತಿಳಿವುದೀ ಪ್ರಭುಲಿಂಗಲೀಲೆಯಲಿ ೧

ಮರುಳು ಶಂಕರಗೈಕ್ಯಪದವಿಯ
ಪರುಟವಿಸಿ ಕೊಟ್ಟೊಲವಿನಿಂದಲಿ
ಪರಿಮಿತಾಲಯಕೆಯ್ದಿ ಪರಮಾನಂದಲೀಲೆಯಲಿ
ಕರುಣೆ ಮಿಗೆ ನಡೆತಂದು ಬಸವೇ
ಶ್ವರನು ಮಾಡುವ ಭಕ್ತಿಯುಕ್ತಾ
ದರಣೆಯನು ಕೈಕೊಳುತಲಿರ್ದನು ಗುರು ಗುಹೇಶ್ವರನು ೨

ಮಣಿಖಚಿತ ಮಂಗಳದ ಪರುಷದ
ಕಣಿಯ ಪೀಠದ ಮೇಲೆ ನೆಜಿ ನಿ
ರ್ಗುಣದ ಸಗುಣದ ನಿರ್ಮಲದ ನಿರ್ವಾಣಗುರುವಿರಲು
ಎಣಿಸಬಾರದ ಬಹುಳಭಕ್ತಿಯ
ಗಣನೆಯಲಿ ಕೈಮುಗಿದು ಮೌಳಿಯ
ಮಣಿದು ಮಹಿಮೆಗೆ ಬಸವ ಬಿನ್ನಹಮಾಡಲನುಗೆಯ್ದು ೩

ಸೂ : ಬಸವನೇ ಮೊದಲಾದ ಭಕ್ತರಿಗೆ ಪ್ರೀತಿಯಿಂದ ಇಷ್ಟಲಿಂಗದ ಭಕ್ತಿ ಮಾರ್ಗವನ್ನು ನಮ್ಮ ಗುರು ಗುಹೇಶ್ವರಲಿಂಗನು ಲೀಲೆಯಿಂದ ಬೋಧಿಸಿದನು. ೧. ಮೊಟ್ಟ ಮೊದಲಲ್ಲಿ ಇಷ್ಟಲಿಂಗದಲ್ಲಿ ನಿಷ್ಠೆ ನೆಲೆಗೊಂಡಿರಲು ಭಕ್ತಿಮಾರ್ಗದ ಶ್ರೇಷ್ಠವಾದ ನಡತೆಯನ್ನು ಸಕಲ ಶಿವಾಗಮಗಳ ಸಾರವನ್ನು ಕಷ್ಟಕರವಾದ ಕರ್ಮದ ಭ್ರಮೆಯ ನಾಶವನ್ನು ಈ ಜನ್ಮದಲ್ಲೇ ಕಾಣಬಯಸುವುದಾದರೆ ಈ ಪ್ರಭುಲಿಂಗಲೀಲೆಯಲ್ಲಿ ಅದನ್ನು ಶ್ರೇಷ್ಠ ಭಕ್ತರು ತಿಳಿಯುವುದು. ೨. ಗುರು ಗುಹೇಶ್ವರನು ಮರುಳು ಶಂಕರನಿಗೆ ಐಕ್ಯಪದವಿಯನ್ನು ಉತ್ಸಾಹದಿಂದ ಕೊಟ್ಟು ಪರಮಾನಂದಲೀಲೆಯಿಂದಲೂ [ಬಸವಾದಿಗಳ ಮೇಲುಂಟಾದ] ಹೆಚ್ಚಿನ ಕರುಣೆಯಿಂದಲೂ ಮಿತಗೋಷ್ಠಿಯ ಮನೆಗೆ ಹೋದನು. ಮತ್ತು ಬಸವೇಶ್ವರನು ಬಂದು ಮಾಡುವ ಭಕ್ತಿಯಿಂದ ಕೂಡಿದ ಗೌರವವನ್ನು ಸ್ವೀಕರಿಸುತ್ತಲಿದ್ದನು. ೩. ರತ್ನಖಚಿತವಾದ ಮಂಗಳಕರವಾದ ಪರುಷದ ಗಣೆಯ ಪೀಠದ ಮೇಲೆ ಹೆಚ್ಚಾಗಿ ನಿರ್ಗುಣ ಸಗುಣಗಳಿಂದ ಕೂಡಿದ ಪರಿಶುದ್ಧನಾದ ಮೋಕ್ಷಗುರು [ಅಲ್ಲಮನು] ಇರುತ್ತಿರಲು

ಕುರುಡ ಕನ್ನಡಿವಿಡಿದ ಮಾಟದ
ಪರಿಯಲಿದೆ ಶಿವಭಕ್ತಿಯೆಂಬುದು
ಮರುಳು ಕಂಡಾ ಕನಸಿನಂತಿರೆ ಮಾತಿಗರಿದಾಯ್ತು
ಗುರುವೆ ನಾನಿದನಱಿವವೊಲು ವಿ
ಸ್ತರಿಸಿ ಪೇಳೆಂದೆನುತಲಾ ವರ
ಗುರು ಗುಹೇಶಗೆ ಬಿನ್ನಹವ ಮಾಡಿದನು ಬಸವಣ್ಣ ೪

ಚಾಗು ಭಲರೇ ನೀನಹುದು ನಿಗ
ಮಾಗಮಂಗಳಸತ್ವಸಾರವ
ನಾಗುಮಾಡಲು ಬಂದ ಕಾರಣಪುರುಷ ನೀನೆನುತೆ
ಆಗಳಾ ಪ್ರಶ್ನೆಗೆ ಮನೋಮುದ
ವಾಗಿ ಮೆಚ್ಚುತಲಲ್ಲಮಪ್ರಭು
ವಾ ಗುಣಾರ್ಣವ ಬಸವದಂಡಾಧೀಶಗಿಂತೆಂದ ೫

ಭಾವಿಸಲು ಭಾಸ್ಕರನ ಬಟ್ಟೆಗೆ
ದೀವಿಗೆಯ ಹಂಗೇಕೆ ತಿಳಿವೊಡೆ
ಪಾವಕನ ಪಸಿವಿಂಗೆ ಪಚನಾರಂಭವಿಧಿಯೇಕೆ
ಆ ವಿಚಾರತೆಯಂತೆ ನಿನಗಿ
ನ್ನಾವ ಬೋಧೆಗಳಪ್ರಯೋಜನ
ದೈವಪುರುಷನು ನೀ ಕಣಾ ಬಸವಣ್ಣ ಕೇಳೆಂದ ೬

ಹೆಚ್ಚಾದ ಭಕ್ತಿಯಿಂದ ಕೈಮುಗಿದು ಶಿರ ಬಾಗಿಸಿ ಬಸವೇಶನು ವಿನಯದಿಂದ ಮಹಿಮಾಪುರುಷನಾದ ಅಲ್ಲಮನಿಗೆ [ಮುಂದೆ ಬರುವಂತೆ] ಹೇಳಲು ಸಿದ್ಧನಾದನು. ೪. "ಶಿವಭಕ್ತಿಯೆಂಬುದು ಕುರುಡನು ಕನ್ನಡಿ ಹಿಡಿದ ಕಾರ್ಯದ ರೀತಿಯಂತಾಯಿತು. ಹುಚ್ಚನು ಕಂಡ ಕನಸಿನಂತಾಯಿತು. ಮಾತಿನ ವಿವರಣೆಗೆ ಅಸಾಧ್ಯವಾಯಿತು. ಗುರುವೆ ನಾನಿದನ್ನು ತಿಳಿಯುವ ರೀತಿಯಲ್ಲಿ ವಿವರಿಸಿ ಹೇಳಿ" ಎಂದು ಶ್ರೇಷ್ಠನಾದ ಗುರುಗುಹೇಶ್ವರನನ್ನು ಬಸವಣ್ಣನು ವಿನಯದಿಂದ ಕೇಳಿದನು. ೫. ಆಗ ಬಸವಣ್ಣನ ಆ ಪ್ರಶ್ನೆಗೆ ಪ್ರಭುವು ಸಂತೋಷಗೊಂಡು ಮೆಚ್ಚುತ್ತಾ "ಭೇಷ್! ಭಲಾ! ವೇದ ಆಗಮಗಳ ಸತ್ವಸಾರವನ್ನು ಉಂಟುಮಾಡಲು ಬಂದ ಕಾರಣಪುರುಷ ನೀನಾಗಿರುವೆ" ಎಂದು ಅಲ್ಲಮಪ್ರಭುವು ಆ ಸದ್ಗುಣಗಳ ಸಮುದ್ರನಾದ ಬಸವದಂಡಾಧೀಶನಿಗೆ ಹೀಗೆಂದನು. ೬. "ವಿಚಾರಮಾಡಲು ಸೂರ್ಯನ ದಾರಿಗೆ ದೀಪದ ಹಂಗು ಬೇಕಿಲ್ಲ. ತಿಳಿಯುವುದಾದರೆ ಸರ್ಪನ ಹಸಿವೆಗೆ ಅಡುಗೆಮಾಡುವ ಕ್ರಿಯೆಯೇಕೆ? ಆ ವಿಚಾರದಂತೆ ನಿನಗೆ ಇನ್ನಾವ ಬೋಧೆಗಳು ಪ್ರಯೋಜನ? ಬಸವಣ್ಣಾ, ನೀನು ದೇವಪುರುಷನಾಗಿರುವೆ, ಕೇಳು" ಎಂದು

ಹರಹರಾ ನಾನಾರು ನಿನ್ನಯ
ಚರಣಶರಣರ ಶರಣರೊಳು ಕಿಂ
ಕರರ ಕಿಂಕರ ನಾನೆಲೈ ಎನಗಿಲ್ಲಿ ಪರಿಯಂತ
ಗುರುವೆ ಭರಭಾರವನು ಹೊಚಿಸಲು
ಕರುಣವಿಲ್ಲವೆ ನಿನಗೆಯೆನುತಲಿ
ನಿರುತನಿರಹಂಕಾರನಿಧಿ ಬಸವಣ್ಣನಿಂತೆಂದ ೭

ಬಿತ್ತಿ ಬೆಳೆಯದ ಮುನ್ನ ಮೊಳಕೆಯ
ಕಿತ್ತು ನೋಡುವರೇ ವೃಥಾ ನಾ
ನೆತ್ತಲೀ ಸ್ತುತಿಯೆತ್ತ ಶಿವಶಿವ ಗುರುವೆ ನೀ ಬಲ್ಲೆ
ಚಿತ್ತವಿಸು ಮನ್ಮನದ ಮಧ್ಯದ
ಕತ್ತಲೆಯ ಕಳೆದಜೆವಿನರ್ಕನ
ತೆತ್ತಿಸೆನ್ನೊಳಗೆನುತಲಿರ್ದನು ಬಸವದಂಡೇಶ ೮

ಸುಧೆಯ ನಿರುಪಮ ರುಚಿಗೆ ಬೇಱೊಂ
ದಿದಿರ ಸವಿಗಲಿಸುವರೆ ಆದರೆ
ಹದನ ನೀ ಕೇಳಿದರೆ ನಾವದನಲ್ಲವೆನಲೇಕೆ
ವಿದಿತ ನಿರಹಂಕಾರಿ ನಿನಗ
ಲ್ಲದೆ ಬಳಿಕ್ಕಿನಾರಿಗೈ ಲಿಂ
ಗದ ಮಹಾಸೇವಾನುಭವಸುಖ ಬಸವ ಕೇಳೆಂದ ೯

ತಿಳಿವೊಡೀ ಮಾಯಕದ ಜನ್ಮಂ
ಗಳ ಶರೀರಗಳಪ್ರಯೋಜನ
ಕುಲಗಳಾಗಿಹುವಲ್ಲಿ ಮಾನವ ದೇಹವವಱೊಳಗೆ
ಸಲುವ ಕರ್ಮಂಗಳಿಗೆ ಕರ್ತನು
ಗಳಿಸಿಕೊಡುವುದು ಪುಣ್ಯ ಪಾಪಂ
ಗಳನು ಮುಂದಕೆ ಬಸವದಂಡಾಧೀಶ ಕೇಳೆಂದ ೧೦

ಅಲ್ಲಮಪ್ರಭುವು ಹೇಳಿದನು. ೭. "ಶಿವ ಶಿವಾ, ನಾನಾರು! ನಿನ್ನ ಪಾದಗಳನ್ನು ನಂಬಿರುವ ಶರಣರೊಳಗೆ ನಾನು ಸೇವಕರಲ್ಲಿ ಸೇವಕನಾಗಿರುವೆನು. ಗುರುವೆ, ಇಲ್ಲಿಯವರೆವಿಗೆ ನನಗೆ ಹೆಚ್ಚಾದ ಭಾರವನ್ನು ಹೊರಿಸಲು ನಿನಗೆ ಕರುಣೆಯಿಲ್ಲವೆ?" ಎಂದು ಸದಾ ವಿನಯನಿಧಿಯಾಗಿರುವ ಬಸವಣ್ಣನು ಅಲ್ಲಮಪ್ರಭುವಿಗೆ ನುಡಿದನು. ೮. "ಬಿತ್ತಿದ ಕಾಳು ಬೆಳೆಯುವುದಕ್ಕೆ ಮುನ್ನ ಮೊಳಕೆಯನ್ನೇ ವ್ಯರ್ಥವಾಗಿ ಪರೀಕ್ಷಿಸುತ್ತಾರೆಯೇ? ನಾನೆಲ್ಲಿ, ಈ ಹೊಗಳಿಕೆಯೆಲ್ಲಿ? ಶಿವಶಿವಾ! ಗುರುವೆ ನೀ ಬಲ್ಲೆ. ಮನವಿಟ್ಟು ಕೇಳು. ನನ್ನ ಮನದೊಳಗಿನ ಕತ್ತಲೆಯನ್ನು ನಿವಾರಿಸಿ ತಿಳಿವೆಂಬ ಸೂರ್ಯನನ್ನು ನನ್ನಲ್ಲಿ ಮೂಡಿಸು" ಎಂದು ಬಸವದಂಡೇಶನು ಅಲ್ಲಮಪ್ರಭುವನ್ನು ಪ್ರಾರ್ಥಿಸುತ್ತಲಿದ್ದನು. ೯. ಹೋಲಿಕೆಯಿಲ್ಲದ ಅಮೃತದ ರುಚಿಗೆ ಪ್ರತಿಯಾಗಿ ಮತ್ತೊಂದರ ಸವಿಯನ್ನು ಕಲಿಸುತ್ತಾರೆಯೆ? ಆದರೆ ಸಂಗತಿಯನ್ನು ನೀನು ಕೇಳಿದರೆ ನಾವು ಅದನ್ನು ಅಲ್ಲವೆನ್ನುವುದೇಕೆ? ಪ್ರಖ್ಯಾತ ವಿನಯಿಯಾದ ನಿನಗಲ್ಲದೆ ಲಿಂಗದ ಮಹಾ ಸೇವಾನುಭವಸುಖವು ಮತ್ತಿನ್ನಾರಿಗೆ? ಬಸವಾ, ಕೇಳು" ಎಂದು ಪ್ರಭುವು ನುಡಿದನು. ೧೦. "ತಿಳಿವುದಾದರೆ ಇಲ್ಲದ ಭ್ರಾಂತಿಯನ್ನು ಹುಟ್ಟಿಸುವ ಶರೀರಗಳು ಅಪ್ರಯೋಜಕ ಗುಂಪುಗಳಾಗಿವೆ. ಮನುಷ್ಯದೇಹವು ಅವುಗಳೊಳಗೆ ಸಲ್ಲುವ

ಮನುಜದೇಹಿಗಳಾದರೆಯು ತನು
ಮನಗಳಲಿ ಪಟುವಾಗಿ ದುರ್ವಾ
ಸನೆಯ ಬುದ್ಧಿಗೆ ನಿಲುಕದಿಹುದರಿದಾ ಶರೀರದಲಿ
ಅನಿತಱೊಳಗೆಚ್ಚತ್ತು ಜನ್ಮದ
ಜಿನುಗಿಗಾನಿನ್ನಾಱೆನೆಂಬಾ
ಮನುಜನೇ ಕೃತಕೃತ್ಯನಹನೈ ಬಸವ ಕೇಳೆಂದ ೧೧

ಹಾಲು ಹಯನುಳ್ಳಲ್ಲಿ ಹಬ್ಬವ
ಹೇಳದೆಯು ಕೇಳದೆಯು ಸವೆವುದು
ಗಾಳಿ ಬೀಸುವ ದಿನದಲೇ ತೂಱುವುದು ಹೊಟ್ಟುಗಳ
ಕಾಲು ಕೈ ಕಣ್ಣುಗಳು ತನುವಿಹ
ಕಾಲದಲಿ ಕಾಲನ ನಿವಾರಿಸಿ
ಮೇಲುಗತಿಯಱಸುವನೆ ಜಾಣನು ಬಸವ ಕೇಳೆಂದ ೧೨

ಅದು ನಿಮಿತ್ತದಲಾಗಮಂಗಳ
ಹೃದಯದಲಿ ಹುರುಳಱಿದು ತನ್ಮಾ
ರ್ಗದಲಿ ಬುದ್ಧಿಯನಿಕ್ಕಿ ಗುರುಕಾರುಣ್ಯವನು ಪಡೆದು
ಮೊದಲು ತನು ಮನ ಧನದ ಮೇಲಣ
ಮದ ವಿಮೋಹಾದಿಗಳನೆಲ್ಲವ
ಕೆದಱೆ ಕೆಡಿಸುವವನೆ ಜಾಣನು ಬಸವ ಕೇಳೆಂದ ೧೩

ಕರ್ಮಗಳಿಗೆ ಅನುಗುಣವಾಗಿ ಜೀವನಿಗೆ ಪುಣ್ಯ ಪಾಪಗಳನ್ನು ಮುಂದೆ ಗಳಿಸಿಕೊಡುವುದು, ಬಸವದಂಡಾಧೀಶ ಕೇಳು" ಎಂದು ಪ್ರಭುವು ನುಡಿದನು. ೧೧. "ಮನುಷ್ಯದೇಹಿಗಳಾದರೊ ತನು ಮನಗಳಲ್ಲಿ ಸಮರ್ಥರಾಗಿ ಆ ಇಂದ್ರಿಯವಿಷಯಗಳಿಗೆ ಸಿಕ್ಕದಿರುವುದು ಅಸಾಧ್ಯ. ಅಷ್ಟರೊಳಗೆ ಎಚ್ಚತ್ತು ಕ್ಷುದ್ರವಾದ ಜನ್ಮಕ್ಕೆ ಇಷ್ಟಪಡಲಾರ ಎನ್ನುವ ಮನುಷ್ಯನೇ ಕೃತಾರ್ಥನಾಗುವನು, ಬಸವ ಕೇಳು" ಎಂದು ಪ್ರಭುವು ನುಡಿದನು. ೧೨. "ಹಾಲು ಬೆಣ್ಣೆಯುಳ್ಳಲ್ಲಿ ಹಬ್ಬವನ್ನು ಹೇಳದೆ ಕೇಳದೆ ಆಚರಿಸುವುದು. ಗಾಳಿ ಬೀಸುವ ದಿನದಲ್ಲೇ ಹೊಟ್ಟನ್ನು ತೂರುವುದು. ಕಾಲು ಕೈ ಕಣ್ಣುಗಳು ದೇಹ-ಇವು ಚೆನ್ನಾಗಿರುವ ಕಾಲದಲ್ಲೇ ಯಮನ [ಭಯವನ್ನು] ನಿವಾರಿಸಿ ಉತ್ತಮಗತಿಯನ್ನು ಹುಡುಕುವವನೇ ಬುದ್ಧಿವಂತನು, ಬಸವ ಕೇಳು" ಎಂದನು. ೧೩. "ಆ ಕಾರಣದಿಂದ ಶಿವಾಗಮಗಳ ತಿರುಳನ್ನು ಅಂತರಂಗದಲ್ಲಿ ತಿಳಿದು ಆ ಮಾರ್ಗದಲ್ಲಿ ಬುದ್ಧಿಯನ್ನು ತೊಡಗಿಸಿ ಗುರುಕರುಣೆಯನ್ನು ಪಡೆದು ಮೊದಲಿಗೆ ತನು ಮನ ಧನಗಳ ಮೇಲಿನ ಮದವಿಮೋಹ ಇವೇ ಮೊದಲಾದವುಗಳನ್ನೆಲ್ಲಾ ನಾಶಮಾಡುವವನೇ ಜಾಣನೆನಿಸುವನು, ಬಸವ ಕೇಳು" ಎಂದನು.

ಪ್ರಾಣವಿದು ನೋಡೆಂದ ಪ್ರತಿಗುರು
ವಾಣತಿಯನಿದಿರಿಡಲು ಕಣ್ಣಿಗೆ
ಕಾಣಿಸುವ ತನ್ನಿಷ್ಟಲಿಂಗವನತಿಸಮೇಳದಲಿ
ಮಾಣದಾಗಳು ಹಿಡಿದು ಹಿಂಗದೆ
ಕೇಣವಿಲ್ಲದೆ ನಿಂದ ನಿಷ್ಠೆಯ
ಜಾಣನೇ ಶಿವಭಕ್ತನಹನೈ ಬಸವ ಕೇಳೆಂದ ೧೪

ಕೆಯ್ಯೊಳಗೆ ಶಿವಲಿಂಗವಿರ್ದೊಡೆ
ಮೆಯ್ಯ ಸೋಂಕಿರಬೇಕು ವಸ್ತ್ರದ
ಹುಯ್ಯಲಿಗೆ ಹೂ ಪತ್ರೆಗಳ ಜಂಜಡಕೆ ಜೊಂಪಿಸದೆ
ಒಯ್ಯನೀಕ್ಷಿಸಿ ತನ್ನಲಿಹ ಮೂ
ಮೆಯ್ಯ ವಸ್ತ್ರವ ಮಾಡುವೆನೆ ಜಗ
ದಯ್ಯನೆನಿಸುವ ಭಕ್ತನಹನೈ ಬಸವ ಕೇಳೆಂದ ೧೫

ಲಿಂಗದೇವಗೆ ತನ್ನಲಿಹ ಮೂ
ಱಂಗವೇ ವಸ್ತ್ರಂಗಳಾದೊಡೆ
ಲಿಂಗನೆನಹಿನಲಹುದು ಸಕಲಾರಂಭವನು ಮಱೆದು
ಅಂಗಸುಖವನೆ ಬಯಸುವೊಡೆ ಶಿವ
ಲಿಂಗಪೂಜೆಯ ಮಾಡುತಿಹುದಾ
ಲಿಂಗಪೂಜೆಯ ಮಾಡುವಂದವ ಬಸವ ಕೇಳೆಂದ ೧೬

ಕರಣದಲಿ ಸಲೆ ಸಕಲ ಸಚರಾ
ಚರಚಯಂಗಳ ಮೇಲೆ ಕರಗುವ
ಕರುಣಿಯಾಗಿಯೆ ಬಳಿಕ ಲಿಂಗಕೆ ಮಜ್ಜನಕ್ಕೆಱೆದು
ಪರಮಶಾಂತಿಯ ಚಿತ್ತ ತನಗಾ
ವರಿಸಿದೊಡೆ ಲಿಂಗಕ್ಕೆ ಗಂಧವ
ನೊರೆಯಬಲ್ಲೊಡೆ ಭಕ್ತನಹನೈ ಬಸವ ಕೇಳೆಂದ ೧೭

೧೪. "ಗುರುವು ಇದು ಪ್ರಾಣಲಿಂಗವು ನೋಡು ಎಂಬುದಾಗಿ ಹೇಳಿ ಇದನ್ನು ಪ್ರಾಣದಂತೆ ತಿಳಿದು ಶರೀರದಿಂದ ಅಗಲಿರದೆ ಇರು, ಎಂದು ಆಜ್ಞೆಮಾಡಲು, ಕಣ್ಣಿಗೆ ಕಾಣಿಸುವ ಆ ಇಷ್ಟಲಿಂಗವನ್ನು ಎಂದಿಗೂ ಬಿಡದೆ ಹಿಡಿದು ಹಿಂದೆ ಸರಿಯದೆ ಮತ್ಸರವಿಲ್ಲದೆ ನಿಂತ ನಿಷ್ಠಾವಂತ ಜಾಣನೇ ಶಿವಭಕ್ತನಾಗಿರುವನು, ಬಸವ ಕೇಳು" ಎಂದನು. ೧೫. "ಕೈಯಲ್ಲಿ ಶಿವಲಿಂಗವಿದ್ದರೆ ಅದು ದೇಹವೆಲ್ಲವನ್ನು ಸೋಂಕಿದಂತೆ ಭಾವನೆ ಇರಬೇಕು. ವಸ್ತ್ರ ಹೂ ಪತ್ರೆಗಳ ದೊಡ್ಡ ಮೊತ್ತಕ್ಕೆ ಮೈಮರೆಯದೆ ಮೆಲ್ಲನೆ ನೋಡಿ ತನ್ನಲ್ಲಿ ಇರುವ ಸ್ಥೂಲ ಸೂಕ್ಷ್ಮ ಕಾರಣ ಶರೀರಗಳನ್ನೇ ವಸ್ತ್ರವನ್ನಾಗಿ ಮಾಡುವವನೇ ಜಗದ ಗುರುವೆನ್ನಿಸುವ ಭಕ್ತನಾಗುವನು, ಬಸವ ಕೇಳು" ಎಂದು ನುಡಿದನು. ೧೬. "ಮೂರು ಅಂಗಗಳೇ ಲಿಂಗದೇವನಿಗೆ ವಸ್ತ್ರಗಳಾದರೆ ಲಿಂಗಸ್ಮರಣೆಗೆ ಬರುವುದು. ಸಕಲ ಕಾರ್ಯಗಳನ್ನು ಬಿಟ್ಟು ಅಂಗಕ್ಕೆ ಸುಖವನ್ನು ಬಯಸುವುದಾದರೆ ಇಷ್ಟಲಿಂಗಪೂಜೆಯನ್ನು ಮಾಡುತ್ತಿರುವುದು. ಲಿಂಗಪೂಜೆ ಮಾಡುವ ರೀತಿಯನ್ನು ಬಸವಾ ಕೇಳು" ಎಂದನು. ೧೭. "ಮನಸ್ಸಿನಲ್ಲಿ ಸಮಸ್ತ ಸಚರಾಚರ ಸಮೂಹಗಳ ಮೇಲೆ ಕರುಣೆಯನ್ನು ತೋರುತ್ತಾ ಲಿಂಗಕ್ಕೆ ಮಜ್ಜನ

ಕರ್ಮಗಳ ಕಡೆಗಣಿಸಿ ಯುಕ್ತಿಯ
ಮರ್ಮವನು ತಾನಱಿದು ಸಲೆ ಶಿವ
ಧರ್ಮದಲಿ ನೆಱೆ ನಿಲುವೊಡಕ್ಷತೆಯಿಂದಲರ್ಚಿಪುದು
ಕೂರ್ಮೆಯಿಂದಲಿ ತನ್ನ ಬಗೆಯನು
ನಿರ್ಮಲತೆಯೆನಿಸುವೊಡೆ ಪುಷ್ಪದ
ಮರ್ಮಪೂಜೆಯ ಮಾಡ ಕಲಿವುದು ಬಸವ ಕೇಳೆಂದ ೧೮

ಒಡಲ ದುರ್ಗುಣಗಣವನೆಲ್ಲವ
ಸುಡುವೊಡೀವುದು ಧೂಪಧೂಮವ
ನಿಡಿದ ತನುವಿನ ತಮವನಳಿಯಲು ಬಲ್ಲೊಡರ್ತಿಯಲಿ
ಬಿಡದೆ ಬಗೆ ಬಂದಿನಿತು ದೀಪದ
ಗಡಣಗಳನೆತ್ತುವುದು ಭಕ್ತಿಯ
ಬೆಡಗನಱಿವಂಗಿನಿತು ಬೇಹುದು ಬಸವ ಕೇಳೆಂದ ೧೯

ರುಚಿಪದಾರ್ಥವ ಲಿಂಗನೆನಹಿನ
ರಚನೆಯಲಿ ರಂಜಿಸಿದ ಬೋನವ
ಶುಚಿತನದಲಾಗೆನಿಸಿ ನೈವೇದ್ಯವನು ಮುಟ್ಟಿಸುತೆ
ಪ್ರಚುರವೆನಿಪಾನಂದಸಹವಾ
ದುಚಿತದಗ್ಗವಣಿಗಳನೀಂಟಿಸ
ಲಚಲಭಕ್ತಿಯನಱಿವಾತನು ಬಸವ ಕೇಳೆಂದ ೨೦

ಎರೆಯಬೇಕು. ಹೆಚ್ಚಾದ ಶಾಂತಿಸುಖವನ್ನು ಮನಸ್ಸು ತುಂಬಿಕೊಂಡಿದ್ದರೆ ಲಿಂಗಕ್ಕೆ ಗಂಧವನ್ನು ಹಚ್ಚಬೇಕು. ಹಾಗೆ ಮಾಡುವುದಾದರೆ [ಆತ] ಭಕ್ತನಾಗುವನು, ಬಸವಾ ಕೇಳು" ಎಂದನು. ೧೮. "ಕರ್ಮಗಳನ್ನು ತಿರಸ್ಕರಿಸಿ ತಂತ್ರದ ರಹಸ್ಯವನ್ನು ತಾನು ತಿಳಿದು ಹೆಚ್ಚಾಗಿ ಶಿವಧರ್ಮದಲ್ಲಿ ನೆಲೆಯಾಗಿ ನಿಂತರೆ ಅಕ್ಷತೆಯಿಂದ ಪೂಜಿಸುವುದು. ಪ್ರೀತಿಯಿಂದ ತನ್ನ ಮನಸ್ಸನ್ನು ನಿರ್ಮಲಗೊಳಿಸುವುದಾದರೆ ಪುಷ್ಪದ ಸೊಗಸಾದ ಪೂಜೆಯನ್ನು ಮಾಡಲು ಕಲಿಯುವುದು, ಬಸವ ಕೇಳು" ಎಂದನು. ೧೯. "ದೇಹದ ಕೆಟ್ಟ ಗುಣಗಳ ಸಮೂಹವನ್ನೆಲ್ಲಾ ಸುಡುವುದಾದರೆ ಧೂಪದ ಹೊಗೆಯನ್ನು ಕೊಡುವುದು. ದೇಹವನ್ನು ಕವಿದಿರುವ ಅಜ್ಞಾನವನ್ನು ನಾಶಮಾಡಲು ತಿಳಿದಿದ್ದರೆ ಪ್ರೀತಿಯಿಂದ ತಪ್ಪದೆ ಮನಬಂದಷ್ಟು ದೀಪಸಮೂಹಗಳ ಆರತಿಯನ್ನು ಬೆಳಗುವುದು. ಭಕ್ತಿಯ ಬೆಡಗನ್ನು ತಿಳಿಯುವವನಿಗೆ ಇವಿಷ್ಟು ಬೇಕು, ಬಸವಾ ಕೇಳು" ಎಂದನು. ೨೦. ಲಿಂಗಸ್ಮರಣೆ ಮಾಡುತ್ತಾ ರುಚಿಕಟ್ಟಾದ ಪದಾರ್ಥಗಳನ್ನು ಶುಚಿಯಾಗಿ ಅಡಿಗೆಮಾಡಿ ನೈವೇದ್ಯ ಮಾಡುತ್ತ ಅತಿಶಯವಾದ ಆನಂದದಿಂದ ಕೂಡಿದ ಯೋಗ್ಯವಾದ ಪವಿತ್ರೋದಕವನ್ನು ಅರ್ಪಿಸಲು ಆತನು ಅಚಲವಾದ ಭಕ್ತಿಯನ್ನು ತಿಳಿಯುತ್ತಾನೆ, ಬಸವ ಕೇಳು" ಎಂದನು.

ಬಿಟ್ಟು ಸತ್ವರಜಸ್ತಮೋಗುಣ
ದೊಟ್ಟಿಲನು ಬಳಿಕಲ್ಲಿ ಲಿಂಗಕೆ
ಮುಟ್ಟಿಸುಗೆ ತಾಂಬೂಲವನು ವಿತ್ತಾನುಸಾರದಲಿ
ನೆಟ್ಟನೀ ಪರಿ ಲಿಂಗನೆನಹೇ
ಗಟ್ಟಿಯಾದರೆ ಪ್ರಾಣಲಿಂಗದ
ಬಟ್ಟೆಯನು ಭೇದಿಸುವಾತನು ಬಸವ ಕೇಳೆಂದ ೨೧

ಪ್ರಾಣವೆಂತಾ ಮೂಱು ತನುವಿನ
ಕೋಣೆಯೊಳಗಿಪ್ಪಂತೆ ಲಿಂಗಕೆ
ಮಾಣದೊಂದೊಳವಸ್ತ್ರವಿಮ್ಮಡಿ ಸಜ್ಜೆ ಸೇರಿಸಿದ
ಕಾಣಿಸುವ ಶಿವದಾರ ಸಹ ನಿ
ರ್ವಾಣದೊಳಗಳವಡಿಸಬಲ್ಲೊಡೆ
ಜಾಣಭಕ್ತಿಯನಱಿವನಾತನು ಬಸವ ಕೇಳೆಂದ ೨೨

ತಿಳಿವೊಡಾ ಶಿವದಾರ ಸಜ್ಜೆಗ
ಳಳವಡುವೊಡಾ ಮೂಱು ತನುವಿನ
ಮಲುಕಿನಂತಿರಲೊಂದಱಿಂದೊಂದು ಪಿರಿದಾಗಿ
ಲಲಿತವಸ್ತ್ರತ್ರಯವನೊಂದಿಸಿ
ಬಳಿಕಲವಱೊಳಗಿಷ್ಟಲಿಂಗವ
ನಿಲಿಸುವನೆ ಶಿವಭಕ್ತನಹನ್ಯೆ ಬಸವ ಕೇಳೆಂದ ೨೩

ಪರಿವಿಡಿಯಲಿಂತಿಷ್ಟಲಿಂಗವ
ನಿರಿಸಿ ಗಂಟೆರಡೆರಡನಿಂತೀ
ಪರಿಯಲಿಕ್ಕುವುದೆರಡು ವಸ್ತ್ರಕೆ ಮೇಲುವಸ್ತ್ರವನು
ನಿರುತ ತನ್ನಂಗದಲಿ ಬಿಡದವ
ಧರಿಸಿಕೊಂಡಿರಬಲ್ಲನಾದೊಡೆ
ಪರಮಭಕ್ತಿಯನಱಿವನಾತನು ಬಸವ ಕೇಳೆಂದ ೨೪

೨೧. "ಸಾತ್ವಿಕ ರಾಜಸಿಕ ತಾಮಸಿಕ ಗುಣಗಳ ಸಮೂಹವನ್ನು ಬಿಟ್ಟು ಅನಂತರ ಅಲ್ಲಿ ಲಿಂಗಕ್ಕೆ ದಕ್ಷಿಣೆಯೊಂದಿಗೆ ತಾಂಬೂಲವನ್ನು ಮುಟ್ಟಿಸಲಿ. ನೇರವಾಗಿ ಈ ರೀತಿ ಲಿಂಗದ ಸ್ಮರಣೆಯೇ ಬಲವಾದರೆ ಆತನು ಪ್ರಾಣಲಿಂಗದ ದಾರಿಯನ್ನು ಭೇದಿಸುವನು, ಬಸವ ಕೇಳು" ಎಂದನು. ೨೨. "ಪ್ರಾಣವು ಆ ಸ್ಥೂಲ, ಸೂಕ್ಷ್ಮ, ಕಾರಣಗಳೆಂಬ ಮೂರು ಬಗೆಯ ಶರೀರದ ಕೋಣೆಯೊಳಗೆ ಇರುವಂತೆ ಲಿಂಗಕ್ಕೆ ತಪ್ಪದೆ ಒಂದೊಂದು ಒಳವಸ್ತ್ರ ಎರಡು ಮಡಿಕೆಯ ಹಾಸು ಸೇರಿಸಿ ಮೇಲೆದ್ದು ಕಾಣಿಸುವ ಶಿವದಾರದೊಡನೆ ಲಿಂಗಕ್ಕೆ ಸೇರಿಸಬರುವುದಾದರೆ [ಆತ] ಜಾಣನು. ಆತನು ಭಕ್ತಿಯ ರೀತಿಯನ್ನು ತಿಳಿಯುವನು, ಬಸವ ಕೇಳು" ಎಂದನು. ೨೩. "ತಿಳಿಯುವಾದರೆ, ಆ ಶಿವದಾರ, ಹಾಸುಗಳು ಹೊಂದುವಂತೆ ಆ ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳು ಒಂದಕ್ಕಿಂತ ಒಂದು ದೊಡ್ಡದಾಗಿ ಮಡಿಕೆಯಂತಿರಲು ಕೋಮಲವಾದ ಮೂರುವಸ್ತ್ರಗಳನ್ನು ಸೇರಿಸಿ ಅನಂತರ ಅವುಗಳೊಳಗೆ ಇಷ್ಟಲಿಂಗವನ್ನು ನೆಲೆಗೊಳಿಸುವವನೇ ಶಿವಭಕ್ತನಾಗುವನು, ಬಸವ ಕೇಳು" ಎಂದನು. ೨೪. "ಈ ಕ್ರಮವಾಗಿ ಇಷ್ಟಲಿಂಗವನ್ನು ಇರಿಸಿ ಎರಡು ವಸ್ತ್ರಗಳ ಮೇಲೆ ಮೇಲುವಸ್ತ್ರವನ್ನು

ಮೂಱು ತನುವಿನಲಾ ಷಡುಸ್ಥಳ
ತೋಱುವಂತಿರೆ ಮೂಱು ವಸ್ತ್ರವ
ಬೇಱೆ ಮಾಡದೆ ಬಲಿದ ಬಳಿಕಿದಿದಾಱುಗಂಟುಗಳು
ಮೀಱೆದಳವಡುತಿರ್ದುವಾದೊಡೆ
ಸಾಱೆ ಶಾಶ್ವತ ಭಕ್ತಿ ನೆಲೆಗೊಂಡ
ಡೇಱಿತೊಡಗುವುದಾತನಲಿ ಬಸವಣ್ಣ ಕೇಳೆಂದ ೨೫

ಅಂಗವಿಸಲೀ ಪ್ರಾಣವಿದು ಶಿವ
ಲಿಂಗಪದಕೆ ತನುತ್ರಯಂಗಳ
ಸಂಗ್ರಹವೆ ವಸ್ತ್ರ ತ್ರಯಂಗಳು ಸಲೆ ಷಡುಸ್ಥಳದ
ಇಂಗಿತದಲಾ ಗ್ರಂಥಿಗಳು ವ
ಸ್ತ್ರಂಗಳಲಿ ಬಲಿದಂಗದಲಿ ನಿಲೆ
ಲಿಂಗಪದವನು ಕಾಂಬನಾತನು ಬಸವ ಕೇಳೆಂದ ೨೬

ಲಿಂಗವೇ ಪ್ರಾಣಸ್ವರೂಪೆಂ
ದಂಗವಿಸಿ ತಾನೋತು ಬಳಿಕಾ
ಲಿಂಗವನು ಬೇಱೆರಿಸಲಾಗದು ಭಕ್ತಿಭಾವುಕರು
ಅಂಗಸಂಗದಲಗಲದಂತಿರೆ
ಲಿಂಗಧಾರಣವಾದುದಾದರೆ
ಮಂಗಳಾತ್ಮಕನಾತನೇ ಬಸವಣ್ಣ ಕೇಳೆಂದ ೨೭

ಸೇರಿಸಿ ಎರಡು ಗಂಟುಗಳನ್ನು ಹಾಕುವುದು. [ಇಷ್ಟಲಿಂಗವನ್ನು] ಸದಾ ತನ್ನ ದೇಹದಲ್ಲಿ ಬಿಡದೆ ಧರಿಸಿಕೊಂಡಿರಬಲ್ಲವನಾದರೆ ಆತ ಶ್ರೇಷ್ಠವಾದ ಭಕ್ತಿಯನ್ನು ತಿಳಿಯುವನು, ಬಸವ ಕೇಳು" ಎಂದನು. ೨೫. "ಸ್ಥೂಲ, ಸೂಕ್ಷ್ಮ, ಕಾರಣ ಶರೀರದಲ್ಲಿ ಆ ಭಕ್ತ ಮಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯ ಎಂಬ ಷಟ್‌ಸ್ಥಲಗಳು ತೋರುವಂತೆ ಮೂರೂ ವಸ್ತ್ರಗಳನ್ನು ಬೇರೆ ಮಾಡದೆ ಬಿಗಿ ಮಾಡಿದ ಮೇಲೆ ಆರು ಗಂಟುಗಳನ್ನು ಹಾಕಿದರೆ [ಆತನಲ್ಲಿ] ಶಾಶ್ವತಭಕ್ತಿಯು ಸೇರಿ ಸ್ಥಿರವಾಗಿ ನಿಂತು ವೃದ್ಧಿಹೊಂದಲು ಪ್ರಾರಂಭಿಸುವುದು, ಬಸವಣ್ಣ ಕೇಳು" ಎಂದನು. ೨೬. ಶಿವಲಿಂಗದಲ್ಲಿ ಪ್ರಾಣವನ್ನು ಸೇರಿಸಲು ಸ್ಥೂಲ ಸೂಕ್ಷ್ಮ ಕಾರಣಗಳೆಂಬ ಮೂರು ಶರೀರಗಳನ್ನೇ ಮೂರು ವಸ್ತ್ರಗಳನ್ನಾಗಿ ಭಾವಿಸಿಕೊಂಡು ಚೆನ್ನಾಗಿ ಷಟ್‌ಸ್ಥಲದ ಆಶಯದಂತೆ ಆ ಆರುಗಂಟುಗಳು ವಸ್ತ್ರಗಳಲ್ಲಿ ಬಿಗಿಗೊಂಡು ಶರೀರದಲ್ಲಿ ನಿಲ್ಲಲು ಅವನು ಲಿಂಗಸ್ಥಾನವನ್ನು ಕಾಣುತ್ತಾನೆ [ಲಿಂಗಜ್ಞಾನಿಯಾಗುತ್ತಾನೆ], ಬಸವ ಕೇಳು" ಎಂದನು. ೨೭. "ಭಕ್ತಿಯನ್ನು ಆಚರಿಸುವುದರಲ್ಲಿ ಪಂಡಿತರಾದವರು ಲಿಂಗವೇ ಪ್ರಾಣಸ್ವರೂಪವೆಂದು ಅರಿತು ಪ್ರಾಣವನ್ನು ಲಿಂಗದಲ್ಲಿ ಸೇರಿಸಿದ ಮೇಲೆ ಮುಂದೆ ಆ ಲಿಂಗವನ್ನು ಶರೀರದಿಂದ ಅಗಲಿಸಬಾರದು. ಲಿಂಗಕ್ಕೂ ಅಂಗಕ್ಕೂ ಸಂಬಂಧವಾದಂತೆ ಲಿಂಗಧಾರಣೆ ಯಾದುದಾದರೆ ಆತನೇ ಮಂಗಳಾತ್ಮಕನೆನಿಸುವನು, ಬಸವಣ್ಣ ಕೇಳು" ಎಂದನು.

ಪ್ರಾಣಲಿಂಗಕೆಯಿಷ್ಟಲಿಂಗದ
ಕಾಣಿಸಿದ ಷಡುರುಚಿಯ ದ್ರವ್ಯ
ಶ್ರೇಣಿಯನು ನಿಜ ಲಿಂಗನೆನಹಿಂನೊಳಿತ್ತು ತನ್ನೊಳಗೆ
ಮಾಣದಾ ಸಂತುಷ್ಟಿ ಸೌಖ್ಯ
ತ್ರಾಣವನು ಮಿಗೆ ತೃಪ್ತಿಲಿಂಗಕೆ
ಜಾಣಿಕೆಯಲೀವವನು ಚದುರನು ಬಸವ ಕೇಳೆಂದ ೨೮

ವರಸಮಾಧಿಯಲೊಳಗೆ ಫಲಿಸುವ
ಪರಿಯಲೀ ಗುರು ಲಿಂಗ ಜಂಗಮ
ಕರುಣಿಸಿದ ಪಾದೋದಕವನಾ ಸುಪ್ರಸಾದವನು
ಧರಿಸುತಿರ್ದೊಡೆ ಸತ್ಯಭಕ್ತಿಯ
ಪರುಟವಣೆಗಧಿಕಾರಿಯಾಗಿಯೆ
ಪರಮಪದವಿಯನು ಪಡೆವನ್ಮೆ ಬಸವಣ್ಣ ಕೇಳೆಂದ ೨೯

ಇಷ್ಟ ಗುರುವಿಗೆ ತನುವ ಸಲಿಸುತ
ಲಿಷ್ಟಲಿಂಗಕೆ ಮನವ ಸಲಿಸುತ
ಲಿಷ್ಟಜಂಗಮಕರ್ಥವನು ಸಲೆ ಸಲಿಸ ಕಲಿತಂಗೆ
ದೃಷ್ಟವಹ ಗುರು ಲಿಂಗ ಜಂಗಮ
ಶ್ರೇಷ್ಠವಾಗಿಯೆ ತನ್ನೊಳಗೆಯು
ತೃಷ್ಟವಾಗಿಯೆ ಕಾಣಿಸುವುದೈ ಬಸವ ಕೇಳೆಂದ ೩೦

ಇದ್ದ ನೆಲೆಗಳವಡುವ ಭಕ್ತಿಯ
ಶ್ರದ್ಧೆಯಲಿ ವಿತ್ತಾನುಸಾರದ
ಹೊದ್ದಿಗೆಯನರಿದರಿದು ನಿರ್ವಂಚನೆಯನನುಕರಿಸಿ
ಬುದ್ಧಿಯಲಿ ತನುಮನದ ತವಕದ
ತಿದ್ದಿ ತಿಳಿದಳವಟ್ಟೊಡಾತನೆ
ಶುದ್ಧಭಕ್ತಿಯನರಿವನೈ ಬಸವಣ್ಣ ಕೇಳೆಂದ ೩೧

೨೮. "ಇಷ್ಟಲಿಂಗಕ್ಕೆ ನೈವೇದ್ಯಮಾಡಿದ ಸಿಹಿ, ಕಹಿ, ಒಗರು, ಉಪ್ಪು, ಖಾರ, ಹುಳಿ-ಈ ಆರು ರಸಗಳಿರುವ ಪದಾರ್ಥವನ್ನು ಹೆಚ್ಚಾದ ಲಿಂಗದ ಸ್ಮರಣೆಯಲ್ಲಿ ಕೊಟ್ಟು ಅದರಿಂದ ಉಂಟಾದ ಸಂತೃಪ್ತಿ ಸುಖಗಳನ್ನು ತೃಪ್ತಿಲಿಂಗವಾದ ಪ್ರಾಣಲಿಂಗಕ್ಕೆ ಜಾಣತನದಿಂದ ಅರ್ಪಿಸುವವನು ಬುದ್ಧಿವಂತನು, ಬಸವ ಕೇಳು" ಎಂದನು. ೨೯. "ಶ್ರೇಷ್ಠವಾದ ಸಮಾಧಿಯಲ್ಲಿದ್ದಾಗ ಅಂತರಂಗವು ಪಕ್ವವಾಗುವ ರೀತಿಯಲ್ಲಿ ಗುರು ಲಿಂಗ ಜಂಗಮಗಳು ಅನುಗ್ರಹಿಸಿದ ಪಾದೋದಕಪ್ರಸಾದಗಳನ್ನು ಸ್ವೀಕರಿಸುತ್ತಿದ್ದರೆ ಸತ್ಯ ಹಾಗೂ ಭಕ್ತಿಗಳ ಅಭಿವೃದ್ಧಿಗೆ ಅವನು ಅಧಿಕಾರಿಯಾಗಿ ಕೈವಲ್ಯವನ್ನು ಪಡೆಯುವನು, ಬಸವಣ್ಣ ಕೇಳು" ಎಂದನು. ೩೦. "ಇಷ್ಟಗುರುವಿಗೆ ದೇಹವನ್ನು, ಇಷ್ಟಲಿಂಗಕ್ಕೆ ಮನಸ್ಸನ್ನು, ಇಷ್ಟ ಜಂಗಮಕ್ಕೆ ಧನವನ್ನು ಚೆನ್ನಾಗಿ ಸಲ್ಲಿಸಲು ಕಲಿತವನಿಗೆ ಬಾಹ್ಯದಲ್ಲಿ ಕಾಣಿಸುವ ಉತ್ತಮ ಗುರು ಲಿಂಗ ಜಂಗಮರು ತನ್ನ ಅಂತರಂಗದಲ್ಲಿಯೂ ಉತ್ಕೃಷ್ಟರಾಗಿಯೇ ಕಾಣಿಸುವರು, ಬಸವ ಕೇಳು" ಎಂದನು. ೩೧. "ಪರಿಸ್ಥಿತಿಗೆ ಹೊಂದುವ ಭಕ್ತಿಯ ಶ್ರದ್ಧೆಗೆ ಹೊಂದಿಕೊಂಡ ಆವರಣದಲ್ಲಿ ತಿಳಿದೂ ತಿಳಿದು ನಿರ್ವಂಚನೆಯನ್ನು ಅನುಕರಿಸುತ್ತ ಜಾಣತನದಿಂದ ದೇಹ ಮನಸ್ಸುಗಳ

ದಿಟವಿಚಾರಿಸಲಿಷ್ಟಲಿಂಗದ
ಘಟಣೆಯೆಂಬುದು ಸರ್ವಸಂಗವ
ನಟಮಟಿಸಬೇಕಾಗಿಯಂತರ್ಮಾರ್ಗದೋವರಿಗೆ
ಪಟುವೆನಲು ಪತಿಯಾಗಿ ಮಾಯೆಯ
ನಟಣೆಯನು ನೈವಾರಿಸುವ ಸಂ
ಘಟಕೆ ಸಾಧನವೆನಿಸುವುದು ಬಸವಣ್ಣ ಕೇಳೆಂದ ೩೨

ಅದು ನಿಮಿತ್ತದಲಿಷ್ಟಲಿಂಗವೆ
ಮೊದಲು ಬೇಹುದು ನಿತ್ಯನಿರ್ಮಲ
ಪದವ ಪಡೆದಹೆನೆಂಬ ಪಾವನ ಬುದ್ಧಿವಂತಂಗೆ
ಹೃದಯದೊಳಗಾ ಪ್ರಾಣಲಿಂಗದ
ಹದನನರಿವೊಡೆ ಸಚ್ಚಿದಾನಂ
ದದಲಿ ನಿಲುವೊಡೆ ಮುಖ್ಯವಿದು ಬಸವಣ್ಣ ಕೇಳೆಂದ ೩೩

ತನ್ನ ತಾನಿಂತರಿವ ಭಕ್ತಿಯ
ಬಿನ್ನಣವ ತಾನರಿಯಲರಿಯದೆ
ಭಿನ್ನಭಾವಭ್ರಮೆಯಲೊಂದಾನೊಂದು ಕಲ್ಪನೆಯ
ಗನ್ನಗತಕದೊಳಿದ್ದನಾದೊಡೆ
ಮುನ್ನಿನಿಂ ಮಿಗಿಲಾಗಿ ಭವದೊಳು
ಬನ್ನಬಡುತಿಹನಾತನೈ ಬಸವಣ್ಣ ಕೇಳೆಂದ ೩೪

ಶಿವಯುತರ ಸಂಗವನು ಮಾಡದ
ಶಿವಯುತರ ಸಂಗತಿಯ ಕೇಳದ
ಶಿವಯುತರ ಸವಿದೊಕ್ಕುಮಿಕ್ಕುದ ಹಾರಿಕೊಂಡಿರದ
ಶಿವಯುತರ ನೆರೆ ನಂಬಿ ನಚ್ಚದ
ಶಿವಯುತರ ದಾಸೋಹಿಯಾಗದ
ಭವವಿಕಾರಿಗೆ ಭಕ್ತಿಯಹುದೇ ಬಸವ ಕೇಳೆಂದ ೩೫

ಆಸೆಯನ್ನು ತಿದ್ದಿ, ಅವನ್ನು ಸ್ವಚ್ಛಗೊಳಿಸಿ ಚೆನ್ನಾಗಿ ಹೊಂದಿಸಿದಾತನು ಶುದ್ಧಭಕ್ತಿಯನ್ನು ತಿಳಿಯುವನು, ಬಸವಣ್ಣ ಕೇಳು" ಎಂದನು. ೩೨. "ಚೆನ್ನಾಗಿ ವಿಚಾರಮಾಡಿದರೆ ಸರ್ವಸಂಗಪರಿತ್ಯಾಗಿಯಾಗಿ, ಅಂತರಂಗದ ಕೋಣೆಗೆ ಸಮರ್ಥನೆನ್ನುವ ಒಡೆಯನಾಗಿ ಮಾಯೆಯ ನಟನೆಯನ್ನು ನಿವಾರಿಸುವ ಹೋರಾಟಕ್ಕೆ ಇಷ್ಟಲಿಂಗಸಂಬಂಧವು ಸಾಧನವೆನಿಸುವುದು, ಬಸವಣ್ಣ ಕೇಳು" ಎಂದನು. ೩೩. ಆ ಕಾರಣದಿಂದ ಕೈವಲ್ಯಪದವನ್ನು ಪಡೆಯಬೇಕೆಂಬ ಪರಿಶುದ್ಧ ಬುದ್ಧಿವಂತನಿಗೆ ಮೊದಲಿಗೆ ಇಷ್ಟಲಿಂಗವು ಬೇಕು. ಹೃದಯದೊಳಗಿನ ಆ ಪ್ರಾಣಲಿಂಗದ ನೆಲೆಯನ್ನು ತಿಳಿಯಲು, ಸಚ್ಚಿದಾನಂದದ ಸ್ಥಿತಿಯಲ್ಲಿ ನಿಲ್ಲಲು ಇದು ಮುಖ್ಯ, ಬಸವಣ್ಣ ಕೇಳು" ಎಂದನು. ೩೪. "ಹೀಗೆ ತನ್ನನ್ನು ತಾನು ತಿಳಿಯುವ ಭಕ್ತಿಯ ವಿಶೇಷಜ್ಞಾನವನ್ನು ಅರಿಯದೆ ತಾನು ಬೇರೆ ಲಿಂಗ ಬೇರೆ ಎಂಬ ಭಿನ್ನಭಾವನೆಯ ಭ್ರಮೆಯಲ್ಲಿ ಯಾವುದೋ ಒಂದು ಕಲ್ಪನೆಯ ಮೋಸದಲ್ಲಿ ಇದ್ದನಾದರೆ ಹಿಂದಿಗಿಂತ ಹೆಚ್ಚಾಗಿ ಆತ ಹುಟ್ಟು-ಸಾವುಗಳ ಬಂಧನದಲ್ಲಿ ಸಿಕ್ಕಿಬಿದ್ದು ಕಷ್ಟವನ್ನು ಅನುಭವಿಸುವನು, ಬಸವಣ್ಣ ಕೇಳು" ಎಂದನು. ೩೫. "ಲಿಂಗಸಂಗಿಗಳ ಸ್ನೇಹವನ್ನು ಮಾಡದ, ಲಿಂಗಸಂಗಿಗಳ ವಿಚಾರವನ್ನು ಕೇಳದ, ಲಿಂಗಸಂಗಿಗಳ ಮಿಕ್ಕ ಪ್ರಸಾದವನ್ನು

ಕಾಲನಿಯಮಗಳೆಂಬ ಕರ್ಮದ
ಕಾಲಸರ್ಪನ ಬಾಯ್ಗೆ ಸಿಲ್ಕುವ
ಶೀಲಶೀಲಗಳೆಂಬ ಶೂಲಕೆ ಸಿಕ್ಕಿ ಸೆಱೆಯಾಗಿ
ಹಾಳು ಸಂಕಲ್ಪವ್ರತಂಗಳ
ಕಾಳಕಿಚ್ಚಿನಲುರಿವುತಿಹ ದು
ಶ್ಶೀಲವಂತಗೆ ಭಕ್ತಿಯಹುದೇ ಬಸವ ಕೇಳೆಂದ ೩೬

ವಂದನೆಗೆ ಮೈಗೊಟ್ಟು ನಿಲ್ಲದೆ
ನಿಂದೆಗೆಡೆಗೊಟ್ಟೋಡಿ ಹೋಗದೆ
ಬಂದ ತಾಗು ನಿರೋಧದಲಿ ಕಳವಳಿಸಿ ಕಂಗೆಡದೆ
ಹಿಂದು ಮುಂದಣ ನೆರವ ಹಾರದೆ
ನಿಂದ ಧೀರೋದ್ಧಾರಗಲ್ಲದೆ
ಹಂದೆಗಹುದೇ ಭಕ್ತಿಯೆಂಬುದು ಬಸವ ಕೇಳೆಂದ ೩೭

ಭುಲ್ಲವಣೆಯಲಿ ಮಾತನಾಡಲು
ಬಲ್ಲೆನೆನುತಲಿಯನುಭವಂಗಳ
ಸೊಲ್ಲುಸೊಲ್ಲಿಗೆ ಮತ್ಸರಿಗೆ ಮಿಗೆ ಮತ್ತತನದಿಂದೆ
ಹೊಳ್ಳುಗಳೆದನ್ಯರನು ಮಿಗೆ ಮದ
ದಲ್ಲಿ ಬೆಬ್ಬನೆ ಬೆಱೆತು ಬೀಗುವ
ಖುಲ್ಲಗಹುದೇ ಭಕ್ತಿಯೆಂಬುದು ಬಸವ ಕೇಳೆಂದ ೩೮

ಕೋಪದುರಿಯಲಿ ಕೊರಗಿ ದರ್ಪದ
ತಾಪದಲಿ ಲಯವಾಗಿ ಮತ್ಸರ
ಕೂಪದಲಿ ಕುಕ್ಕುರಿಸಿ ಡಂಬಿನ ಸೀಮೆಯಲಿ ಸಿಲುಕಿ
ಲೋಪಬುದ್ಧಿಗೆ ಲೋಲನಾಗಿ ಮ
ಹಾಪರಾಧದಲುಕ್ಕಿ ಸೊಕ್ಕುವ
ಪಾಪಿಗಹುದೇ ಭಕ್ತಿಯೆಂಬುದು ಬಸವ ಕೇಳೆಂದ ೩೯

ನಿರೀಕ್ಷಿಸಿಕೊಂಡಿರದ, ಲಿಂಗಸಂಗಿಗಳ ಹೆಚ್ಚಾಗಿ ನಂಬಿ ವಿಶ್ವಾಸಿಸದ, ಲಿಂಗಸಂಗಿಗಳ ಸೇವಾವೃತ್ತಿಯಲ್ಲಿರದ ಹುಟ್ಟು ಸಾವುಗಳ ವಿಕಾರಕ್ಕೊಳಗಾದವರಿಗೆ ಭಕ್ತಿ ಬರುವುದೆ? ಬಸವ ಕೇಳು" ಎಂದನು. ೩೬. "ಕಾಲ ನಿಯಮಗಳೆಂಬ ಕರ್ಮದ ಕಾಳಿಂಗನ ಬಾಯಿಗೆ ಸಿಗುವ, ಶೀಲ ಶೀಲಗಳೆಂಬ ಶೂಲಕ್ಕೆ ಸಿಕ್ಕಿ ಬಂಧಿಯಾಗುವ, ಕೆಟ್ಟ ಸಂಕಲ್ಪದಿಂದ ಕೂಡಿದ ವ್ರತಗಳ ಕಾಳ್ಗಿಚ್ಚಿನಲ್ಲಿ ಬೇಯುತ್ತಿರುವ ಕೀಳುನಡತೆಯುಳ್ಳವನಿಗೆ ಭಕ್ತಿ ಬರುವುದೆ? ಬಸವ ಕೇಳು" ಎಂದನು. ೩೭. "ಸ್ತೋತ್ರಕ್ಕೆ ಮನಗೊಟ್ಟು ನಿಲ್ಲದೆ, ನಿಂದೆಗೆ ಅವಕಾಶ ಮಾಡಿಕೊಟ್ಟು ಓಡಿಹೋಗದೆ, ಬಂದಂತಹ ಅಪವಾದ ವ್ಯಥೆಗಳಿಗೆ ಕಳವಳಪಟ್ಟು ಕಂಗೆಡದೆ, ಹಿಂದುಮುಂದಿನ ಸಹಾಯವನ್ನು ನಿರೀಕ್ಷಿಸದೆ ನಿಂತಂತಹ ಧೀರನಿಗಲ್ಲದೆ ಹೇಡಿಗೆ ಭಕ್ತಿಯೆಂಬುದು ಬರುವುದೆ? ಬಸವ ಕೇಳು" ಎಂದನು. ೩೮. "ಚೆನ್ನಾಗಿ ಮಾತನಾಡಲು ಬಲ್ಲೆನೆಂದು ಅನುಭವಿಗಳ ಪ್ರತಿಯೊಂದು ಮಾತಿಗೂ ಅಸೂಯೆಪಡುತ್ತಾ, ಅತಿಶಯವಾದ ಮದದಿಂದ ಬೇರೆಯವರನ್ನು ನಿಂದಿಸಿ ಹೆಚ್ಚಿನ ಹೆಮ್ಮೆಯಿಂದ ಉಬ್ಬುವ ನೀಚನಿಗೆ ಭಕ್ತಿಯೆಂಬುದು ಬರುವುದೆ? ಬಸವ ಕೇಳು" ಎಂದನು. ೩೯. "ಕೋಪದ ಬೆಂಕಿಯಲ್ಲಿ ಸೊರಗಿ, ಗರ್ವದ ಬೇಗೆಯಲ್ಲಿ ಲಯವಾಗಿ, ಮತ್ಸರದ ಬಾವಿಯಲ್ಲಿ ಕುಸಿದು

ಹಿಸುಣತೆಯ ಹಿಂಗಿಸಿ ಮನಸ್ಸಿನ
ಮಸಕವನು ಮಾಣಿಸಿ ವಿಕಾರದ
ವಿಷಯವಿಧಿಗಳನುರೆ ವಿಸರ್ಜಿಸಿ ಭವಿಯ ಪರಿಹರಿಸಿ
ಮುಸುಱಿ ಮುತ್ತಿದ ಸಟೆಯ ಸಡಿಲಿಸಿ
ಸಸಿನೆ ಸತ್ಯವ ನುಡಿವಗಲ್ಲದೆ
ಹುಸಿಯ ನುಡಿವಗೆ ಭಕ್ತಿಯಹುದೇ ಬಸವ ಕೇಳೆಂದ ೪೦

ಹುಟ್ಟಿದೆಡೆಯನು ಹೂಳಿ ಹೊಂದುವ
ಬಟ್ಟೆಯನು ನೆಱೆ ಕೆಡಿಸಿ ಕರ್ಮದ
ಕಟ್ಟಳೆಯನೊಡಮೆಟ್ಟಿ ಸಂತತ ಲಿಂಗಸೇವೆಯಲಿ
ಮುಟ್ಟಿ ಹಸುತೃಷೆ ನಿದ್ರೆಯೆಂಬಿವ
ನಿಟ್ಟೊರಸಿದಾ ಧೀರಗಲ್ಲದೆ
ಹೊಟ್ಟೆಹೊರಕಗೆ ಭಕ್ತಿಯಹುದೇ ಬಸವ ಕೇಳೆಂದ ೪೧

ಅದುನಿಮಿತ್ತದಲಿಷ್ಟಲಿಂಗದ
ಸದಮಲದ ಸೇವಾನುಭಾವನೆ
ಹೃದಯದಲಿ ನೆಲೆಗೊಂಡು ಬಿಡದೆಳವಟ್ಟು ಬಲಿದಿರಲು
ವಿದಿತವೆನಿಪಾ ಪ್ರಾಣಲಿಂಗದ
ವಿಧಿಯನಱಿವಂಜನವು ನೇತ್ರಕೆ
ಹುದುವಹುದೆಲ್ಲೈ ತನಗೆ ತಾನೇ ಬಸವ ಕೇಳೆಂದ ೪೨

ಬಿದ್ದು, ಒಣಪ್ರತಿಷ್ಠೆಯ ಗಡಿಯಲ್ಲಿ ಸಿಲುಕಿ, ಬುದ್ಧಿಯ ದಡ್ಡತನದಲ್ಲಿ ಆಸಕ್ತನಾಗಿ, ಮಹಾಪರಾಧದಲ್ಲಿ ಉಕ್ಕಿ ಗರ್ವಪಡುವ ಪಾಪಿಗೆ ಭಕ್ತಿಯೆಂಬುದು ಬರುವುದೆ? ಬಸವ ಕೇಳು" ಎಂದನು. ೪೦. "ನೀಚತನವನ್ನು ಹಿಂದೆ ಸರಿಸಿ, ಮನದ ಕೋಪವನ್ನು ನಿವಾರಿಸಿ, ವಿಕಾರವನ್ನು ಮಾಡುವ ವಿಷಯವಾಸನೆಯನ್ನು ತ್ಯಜಿಸಿ, ಶಿವಭಕ್ತನಲ್ಲದವನನ್ನು ತೊಲಗಿಸಿ, ಮೇಲೆ ಬಿದ್ದು ಕವಿದ ಸುಳ್ಳನ್ನು ಸಡಿಲಿಸಿ, ನೆಟ್ಟಗೆ ಸತ್ಯವನ್ನು ನುಡಿಯುವವನಿ ಗಲ್ಲದೆ ಸುಳ್ಳು ಹೇಳುವವನಿಗೆ ಭಕ್ತಿ ಬರುವುದೆ? ಬಸವ ಕೇಳು" ಎಂದನು. ೪೧. "ಭವವನ್ನು ನಾಶಮಾಡಿ [ಅವನು] ಹೊಂದತಕ್ಕ ದಾರಿಯನ್ನು ಚೆನ್ನಾಗಿ ಕೆಡಿಸಿ, ಕರ್ಮದ ನಿಯಮವನ್ನು ಉಲ್ಲಂಘಿಸಿ, ಸದಾ ಲಿಂಗಸೇವೆಯಲ್ಲಿ ನಿರತನಾಗಿ, ಹಸಿವೆ ಬಾಯಾರಿಕೆ ನಿದ್ರೆ ಎಂಬಿವುಗಳನ್ನು ಹೆಚ್ಚಾಗಿ ನಿವಾರಿಸಿದ ಧೀರನಿಗಲ್ಲದೆ ಹೊಟ್ಟೆ ಹೊರೆಯುವುದೇ ಪ್ರಮುಖ ಗುರಿಯಾಗುಳ್ಳವನಿಗೆ ಭಕ್ತಿಯು ಬರುವುದೆ? ಬಸವ ಕೇಳು" ಎಂದನು. ೪೨. "ಆ ಕಾರಣದಿಂದ ಇಷ್ಟಲಿಂಗದ ಪವಿತ್ರವಾದ ಸೇವಾನುಭಾವ ಮನದಲ್ಲಿ ನೆಲೆಗೊಂಡು, ಬಿಡದೆ ಚೆನ್ನಾಗಿ ಹೊಂದಿಕೊಂಡು, ಬಲಗೊಂಡು ಇರುತ್ತಿರಲು ಪ್ರಖ್ಯಾತವಾದ ಆ ಪ್ರಾಣಲಿಂಗವೆಂಬ ಗುಪ್ತಧನವನ್ನು ತಿಳಿಯುವ ಕಾಡಿಗೆಯು ಕಣ್ಣಿಗೆ ತನಗೆ ತಾನೇ ಹೊಂದಿಕೊಳ್ಳುತ್ತದಲ್ಲವೆ? ಬಸವ ಕೇಳು" ಎಂದನು.

ಹಲವು ಪರಿಯಿಂದೀ ಪ್ರಕಾರದ
ಲೊಲಿದು ತೋಱಿಸುತಿಷ್ಟಲಿಂಗದ
ಸಲುವ ಮಾರ್ಗಕ್ರಿಯೆಯನಱಿವಂತಿರೆ ನಿರೂಪಿಸಲು
ಸಲೆ ಹಸಾದವ ಸಲಿಸಿ ಬಗೆ ಮಿಗೆ
ತುಳುಕಲಲ್ಲಮಲಿಂಗದೇವಗೆ
ಬಳಿಕಲೊಯ್ಯನೆ ಬಸವದಂಡಾಧೀಶನಿಂತೆಂದ ೪೩

ಗುರುವೆ ನೀವೀ ಪೇಳ್ದ ಮಾರ್ಗಾ
ಚರಣೆಯನು ಕೇಳಿದೊಡೆ ಸಾಲದೆ
ಪರಿವಿಡಿಯನಿದನೆಲ್ಲ ಮುಟ್ಟಲಿ ಮಾಡುತಿರಬೇಕು
ಪರಿಕಿಸಲು ಸಾವಲ್ಲಿ ಪರಿಯಂ
ತರವು ಸಾಧನೆ ಮಾಡಿ ಸಮರಕೆ
ಗರುವನಹ ದಿನವಿನ್ನದಾವುದು ದೇವ ಹೇಳೆಂದ ೪೪

ಈಸುವನುವನು ಕೇಳಿದರೆ ಮೇ
ಣೇಸುದಿನ ತಾ ಕಂಡರೇನ
ಭ್ಯಾಸಿಯಾಗದೆ ಯಾರು ತೇಲುವ ತೆಱನ ತಿಳಿವವರು
ಗಾಸಿಯಾಗದೆ ತನುಮನದ ಮೇ
ಲಾಸೆ ಹಿಂಗದೆ ಭಕ್ತಿಮಾಡದೆ
ಹೂಸಿಹುಂಡನಲೇನು ಫಲವೈ ಬಸವ ಕೇಳೆಂದ ೪೫

೪೩. ಈ ಪ್ರಕಾರ ಹಲವು ಬಗೆಯಿಂದ ಇಷ್ಟಲಿಂಗಕ್ಕೆ ಹೊಂದಿಕೊಳ್ಳುವ ಮಾರ್ಗವನ್ನು ಹಾಗೂ ಆ ಮಾರ್ಗದಲ್ಲಿ ಆಚರಿಸಬೇಕಾದ ಕ್ರಿಯೆಗಳನ್ನು ತಿಳಿಯುವಂತೆ ಹೇಳಲು, ಚೆನ್ನಾಗಿ ಗುರುವಿನ ಅನುಗ್ರಹವಾಗಲು ಮನದುಂಬಿ, ಅನಂತರ ಅಲ್ಲಮಲಿಂಗದೇವನಿಗೆ ಸಾವಧಾನವಾಗಿ ಬಸವ ದಂಡಾಧೀಶನು ಹೀಗೆಂದು ನುಡಿದನು. ೪೪. "ಗುರುವೇ, ನೀನೀಗ ಹೇಳಿದ ಇಷ್ಟಲಿಂಗದ ಭಕ್ತಿಮಾರ್ಗಾಚರಣೆಯನ್ನು ಕೇಳಿದರೆ ಸಾಲದು, ಕ್ರಮವಾಗಿ ಇದನ್ನೆಲ್ಲಾ ಕಡೆತನಕ ಮಾಡುತ್ತಿರಬೇಕು. ಆಲೋಚಿಸಲು, ಸಾಯುವವರೆವಿಗೆ ಸಾಧನೆ ಮಾಡಿ ಇನ್ನೂ ಯುದ್ಧಕ್ಕೆ ಯೋಗ್ಯನಾಗುವ ದಿನವದಾವುದು? ದೇವ ಹೇಳು" ಎಂದು [ಅಲ್ಲಮನನ್ನು ಬಸವಣ್ಣನು] ಕೇಳಿದನು. ೪೫. "ಈಜುವುದನ್ನು ಎಷ್ಟುದಿನ ಕೇಳಿದರೇನು? ಕಂಡರೇನು? ಸ್ವತಃ ಅಭ್ಯಾಸ ಮಾಡದೆ ಯಾರು ಈಜುವ ರೀತಿಯನ್ನು ತಿಳಿಯುವರು? ಹಾನಿಯಾಗದೆ, ದೇಹ ಮನಸ್ಸುಗಳ ಮೇಲಿನ ಆಸೆ ಹಿಂಗದೆ, ಭಕ್ತಿಯನ್ನು ಆಚರಿಸದೆ ಡಾಂಭಿಕಾಚಾರಿಯಾದರೇನು ಫಲ? ಬಸವ ಕೇಳು" ಎಂದು ಅಲ್ಲಮ ನುಡಿದನು.

ಹೊನ್ನಿನೊಳಗೊಂದೊರೆಯ ವಸ್ತ್ರದ
ಮನ್ನಣೆಯಲೊಂದೆಳೆಯನಥವಾ
ಧಾನ್ಯದೊಳಗಣಮಾತ್ರವೆನಗೆನ್ನವರಿಗಿರಲೆಂದು
ದೈನ್ಯತೆಯಲಾ ಜಂಗಮವನತಿ
ಮನ್ನಿಸದೆ ಮಲೆತಿರ್ದೆನಾದೊಡೆ
ನಿನ್ನ ಪಾದಕೆ ದೂರ ನಾನಹೆ ದೇವ ಕೇಳೆಂದ ೪೬

ಕನಕಗಿರಿ ರಜತಾದ್ರಿ ಹಾಲಿನ
ವನಧಿ ಸುರಕುಜ ಕಾಮಧೇನುಗ
ಳಿನಿತು ನಿರುಪಮದಷ್ಟಮಹದೈಶ್ವರ್ಯ ಮೊದಲಾದ
ವಿನುತವಸ್ತುಗಳೆಲ್ಲವಾ ಲಿಂ
ಗನವು ಪ್ರಮಥರವಕಟ ಮರುಳೇ
ನಿನಗವೆಲ್ಲಿಯವೇನನಿತ್ತೈ ಬಸವ ಕೇಳೆಂದ ೪೭

ದೇವ ನಾನಾ ಪರಿಗಳಲಿ ಮೇ
ಗಾವ ಮುಖದಲಿ ಬಂದು ಬೇಡಿದೊ
ಡೀವೆ ನೀ ದಣಿವಂತೆಯೆನ್ನಯ ಧನವ ತನುಮನವ
ಈ ವಿಚಾರಕೆ ಹುಸಿದೆನಾದೊಡೆ
ಭಾವಿಸಲು ಬಳಿಕಾನೆ ನಿನ್ನಯ
ಸೇವೆಗತಿ ದೂರಸ್ಥನೈ ಗುರುರಾಯ ಕೇಳೆಂದ ೪೮

ಧನವ ಕೊಟ್ಟೆನು ತನುವ ಕೊಟ್ಟೆನು
ಮನವ ಕೊಟ್ಟೆನು ಕೊಟ್ಟೆನೆಂಬೀ
ಬಿನುಗು ಬಿಂಕವನಾಡಲಾ ಧನ ತನು ಮನಂಗಳನು
ನಿನಗೆ ಕೊಟ್ಟವರಾರು ನೀನಾ
ರಿನಿತನರಿಯದೆ ಬರಿದೆ ನುಡಿವುದು
ನಿನಗಿದುಚಿತವೆ ಬಸವದಂಡಾಧೀಶ ಕೇಳೆಂದ ೪೯

೪೬. "ಚಿನ್ನದಲ್ಲಿ ಒಂದು ಚೂರನ್ನು, ಬೆಲೆಬಾಳುವ ವಸ್ತ್ರದಲ್ಲಿ ಒಂದು ಎಳೆಯನ್ನು ಇಲ್ಲವೇ ಧಾನ್ಯದಲ್ಲಿ ಒಂದು ಸಣ್ಣ ಕಣಮಾತ್ರವನ್ನು ನನಗೆ ನನ್ನವರಿಗೆ ಇರಲೆಂಬ ಆಸೆಯಿಂದ, [ನನ್ನಲ್ಲಿಗೆ ಬಂದ] ಜಂಗಮನನ್ನು ವಿಶೇಷವಾಗಿ ವಿನಯದಿಂದ ಗೌರವಿಸದೆ ಸೊಕ್ಕಿನಿಂದ ನಡೆದೆನಾದರೆ, ದೇವಾ ಕೇಳು, ನಾನು ನಿನ್ನ ಪಾದಕ್ಕೆ ದೂರನಾಗುವೆ" ಎಂದು ಅಲ್ಲಮನಿಗೆ ಬಸವಣ್ಣನು ನುಡಿದನು. ೪೭. "ಪೊಂಬೆಟ್ಟ, ಬೆಳ್ಳಿಯ ಬೆಟ್ಟ, ಹಾಲಿನ ಸಮುದ್ರ, ಕಲ್ಪವೃಕ್ಷ, ಕಾಮಧೇನುಗಳು ಹೋಲಿಕೆಗೆ ಅಸದಳವಾದ ಅಣಿಮಾದಿ ಐಶ್ವರ್ಯಗಳೇ ಮೊದಲಾದ ಪ್ರಸಿದ್ಧ ವಸ್ತುಗಳೆಲ್ಲವೂ ಲಿಂಗಕ್ಕೆ ಸೇರಿದುವು, ಪ್ರಮಥರವು. ಅಯ್ಯೋ ಹುಚ್ಚಪ್ಪಾ, ನಿನಗೆ ಅವು ಹೇಗೆ ಲಭ್ಯ? ನೀನೇನು ಕೊಡುವೆ? ಬಸವ ಕೇಳು" ಎಂದು ಪ್ರಭು ನುಡಿದನು. ೪೮. "ದೇವಾ, ನಾನಾ ರೀತಿಗಳಲ್ಲಿ ಮತ್ತಾವ ಮುಖದಲ್ಲಿ ಬಂದು ಬೇಡಿದರೂ ನೀನು ದಣಿಯುವಂತೆ ನನ್ನ ಧನ ತನು ಮನಗಳನ್ನು ಕೊಡುವೆನು. ಈ ವಿಚಾರದಲ್ಲಿ ಸುಳ್ಳು ಹೇಳಿದೆನಾದರೆ, ವಿಚಾರಮಾಡಲು, ಮುಂದೆ ನಾನು ನಿನ್ನ ಸೇವೆಗೆ ಬಹಳ ದೂರನಾಗುವೆನು, ಗುರುರಾಯ ಕೇಳು" ಎಂದು ಅಲ್ಲಮನಿಗೆ ಬಸವಣ್ಣ ಹೇಳಿದನು. ೪೯. "ಧನವ ಕೊಟ್ಟೆನು, ತನುವ ಕೊಟ್ಟೆನು, ಮನವ ಕೊಟ್ಟೆನು, ಕೊಟ್ಟೆನೆಂಬ ಈ

ಅಂತು ಕಾರಣವಿದನು ಹಮ್ಮಿನ
ಭ್ರಾಂತಿಯನು ಬಜೆದೆನಿಸಿ ತಾನೋ
ರಂತೆ ನಿಜನಿರ್ಲೇಪಭಕ್ತಿಯನಜೆಯಬೇಕಾಗಿ
ಮುಂತೆ ಕಾಣಿಸುವಿಷ್ಟಲಿಂಗದ
ಚಿಂತೆಯಲಿ ಚಿರನಾಗಿ ತನ್ನಯ
ಚಿಂತಿತಾರ್ಥವ ಪಡೆಯಬೇಹುದು ಬಸವ ಕೇಳೆಂದ ೫೦

ದೇವ ಬಿನ್ನಹವಿಷ್ಟಲಿಂಗದ
ಸೇವೆಯನು ಸಲೆ ಮಾಡುತ್ತಿದ್ದರೆ
ಭಾವಿಸಲು ಶಿವಭಕ್ತನಹ ಪರಿ ಬಳಿಕಲಹುದೆಂದು
ನೀವು ಚಿತ್ತೈಸಿದಿರಿ ದಿಟವಿ
ನ್ನಾವ ಪರಿಯಲಿ ಭಕ್ತಿಯನುವನು
ತೀವಿ ತಿಳಿವಂತೆನಗೆ ವರಗುರುರಾಯ ಹೇಳೆಂದ ೫೧

ಕುಸುಮಸೌರಭವಿಂತುಟೆಂದಾ
ರುಸುರಬಲ್ಲರು ತುಂಬಿಯೊಳು ಭಾ
ವಿಸಲು ಭಕ್ತಿಯ ಮಾರ್ಗವಂತಿಂತೆಂದು ನಿನ್ನೊಳಗೆ
ಬೆಸಸಬಲ್ಲವರಿಲ್ಲವೈ ಪರಿ
ಕಿಸಲು ನೀನೇ ಪರಮಪುರುಷನು
ಬಸವ ಕೇಳೆಸುತಲ್ಲಮಪ್ರಭುರಾಯನಿಂತೆಂದ ೫೨

ಕೇಳುಜಂಭವನ್ನು ಆಡಿ ತೋರಲು ಧನ ತನು ಮನಗಳನ್ನು ನಿನಗೆ ಕೊಟ್ಟವರಾರು? ನೀನಾರು? ಇವುಗಳನ್ನು ತಿಳಿಯದೆ ವ್ಯರ್ಥವಾಗಿ ನುಡಿಯುವುದು ನಿನಗೆ ಯೋಗ್ಯವೆ? ಬಸವದಂಡಾಧೀಶ ಕೇಳು'' ಎಂದು ಅಲ್ಲಮನು ನುಡಿದನು. ೫೦. ''ಅದು ಕಾರಣ ಇದನ್ನು, ಅಹಂಭಾವದ ಹುಚ್ಚಾಟವನ್ನು ನಿವಾರಿಸಿ ಒಂದೇ ಸಮನೆ ತನಗೆ ಲೌಕಿಕದ ಯಾವ ಸಂಬಂಧವೂ ಇಲ್ಲದಂತೆ ಭಕ್ತಿಯನ್ನು ತಿಳಿಯಬೇಕಲ್ಲದೆ ಮುಂದೆ ಕಾಣಿಸತಕ್ಕಂತಹ ಇಷ್ಟಲಿಂಗದ ಚಿಂತೆಯಲ್ಲಿ ಸ್ಥಿರನಾಗಿ ತನ್ನ ಮನೋಭಿಲಾಷೆಯನ್ನು ಪಡೆಯಬೇಕು, ಬಸವ ಕೇಳು'' ಎಂದು ಅಲ್ಲಮ ನುಡಿದನು. ೫೧. ''ದೇವಾ, ನನ್ನ ವಿನಂತಿಯಿದು. ಇಷ್ಟಲಿಂಗದ ಸೇವೆಯನ್ನು ಚೆನ್ನಾಗಿ ಮಾಡುತ್ತಿದ್ದರೆ, ವಿಚಾರಮಾಡಲು ಶಿವಭಕ್ತನಾಗುವ ಸ್ಥಿತಿ ಅನಂತರ ಪ್ರಾಪ್ತವಾಗುವುದು ಎಂದು ನೀವು ಹೇಳಿದಿರಿ. ಇದು ಸತ್ಯ. ಭಕ್ತಿ ಯಾವ ರೀತಿಯಲ್ಲಿ ಇರುವುದು? ಅದರ ಸ್ಥಿತಿಯನ್ನು ನನಗೆ ಚೆನ್ನಾಗಿ ತಿಳಿಯುವಂತೆ ಹೇಳಿ'' ಎಂದು ಬಸವನು ಅಲ್ಲಮನನ್ನು ಕೇಳಿದನು. ೫೨. ''ದುಂಬಿಯೊಂದಿಗೆ ಮಾಧುರ್ಯ ಹೀಗೆ ಎಂದು ಹೇಳಲು ಯಾರಿಗೆ ಸಾಧ್ಯ? ವಿಚಾರಮಾಡಲು ಭಕ್ತಿಯ ಮಾರ್ಗ ಹಾಗೆ ಹೀಗೆ ಎಂದು ನಿನ್ನೊಂದಿಗೆ ಹೇಳಬಲ್ಲವರಿಲ್ಲ. ಪರೀಕ್ಷಿಸಲು ನೀನೇ ಶ್ರೇಷ್ಠ ಪುರುಷನು, ಬಸವ ಕೇಳು'' ಎಂದು ಅಲ್ಲಮ ನುಡಿದನು.

ಕೇಳಿದೈ ಬಸವಣ್ಣ ಮೊದಲಲಿ
ಕೋಲುವಿಡಿದಭ್ಯಾಸ ಮಾಡಿಯೆ
ಮೇಲೆ ರಣರಂಗದಲಿ ಕೈದುವ ಹಿಡಿದು ಹಗೆಗಳನು
ಸೋಲಿಸುವನಂತಿಷ್ಟಲಿಂಗದ
ಕೀಲಣೆಯನರಿದಲ್ಲದಾಗದು
ಹೇಳುವೊಡೆ ಶಿವಭಕ್ತಿಯದು ಸಾಮಾನ್ಯವಲ್ಲೆಂದ ೫೩

ಗುರುವೆ ಅಮೃತವನುಂಡ ಬಳಿಕೇ
ನರುಚಿಯಱುದಿಂಗಳಿಗೆ ಹೋಹುದೆ
ನಿರುತ ನಿನ್ನ ಕಟಾಕ್ಷ ವಿಕ್ಷೇಪಂಗಳೆಮ್ಮೊಳಗೆ
ಬೆರಸಿ ಬಳಿಕಿನ್ನೆಲ್ಲಿ ಪರಿಯಂ
ತರವು ಕಾಲಕ್ಷೇಪವನು ವಿ
ಸ್ತರಿಪ ಕಾರಣವಾವುದೈ ಪ್ರಭುರಾಯ ಹೇಳೆಂದ ೫೪

ಶಶಿಕಳಾಲಂಕಾರವೆಂತಾ
ಶಶಿಧರಂಗಳವಟ್ಟುದಂತಾ
ಶಶಿಕಳಾಮೃತಸೇವನಾ ಸದ್ಭಕ್ತಿ ಸಾರಾಯ
ಬಸವ ನಿನಗೊಚ್ಚತವಲಾ ಭಾ
ವಿಸಲು ಬಳಿಕಿನ್ನಾರಿಗದು ವೇ
ದಿಸುವುದೇ ಕೇಳೆನುತಲಾ ಪ್ರಭುರಾಯನಿಂತೆಂದ ೫೫

ನಿನ್ನ ಹೆಸರನು ಕೇಳಿದೊಡೆ ಮೇಣ್
ನಿನ್ನ ಮೂರ್ತಿಯ ನೋಡಿ ಕಂಡೊಡೆ
ನಿನ್ನ ನೆನೆದೊಡೆ ನಿನ್ನ ನೆಱಿದೊಡೆ ನಿನ್ನ ಹೊಗಳಿದೊಡೆ
ನಿನ್ನ ಭಜಿಸಿದೊಡವರು ಭಕ್ತಿಯ
ಬಿನ್ನಣವನಱಿದೈಕ್ಯರಹರೆನೆ
ನಿನ್ನ ಮಹಿಮೆಯನೇನನೆಂಬೆನು ಬಸವ ಕೇಳೆಂದ ೫೬

೫೩. "ಇದನ್ನು ಕೇಳು, ಬಸವಣ್ಣ ಮೊದಲಿಗೆ ಕೋಲನ್ನು ಹಿಡಿದು ಅಭ್ಯಾಸಮಾಡಿ, ಅನಂತರ ಯುದ್ಧರಂಗದಲ್ಲಿ ಆಯುಧವನ್ನು ಹಿಡಿದು ಶತ್ರುಗಳನ್ನು ಸೋಲಿಸುವವನಂತೆ, ಇಷ್ಟಲಿಂಗದ ಕ್ರಮವನ್ನು ತಿಳಿದಲ್ಲದೆ [ಭಕ್ತಿಯ ರೀತಿಯನ್ನು] ತಿಳಿಯಲಾಗದು. ಹೇಳುವುದಾದರೆ ಶಿವಭಕ್ತಿ ಸಾಮಾನ್ಯವಲ್ಲ" ಎಂದು ಅಲ್ಲಮನು ನುಡಿದನು. "೫೪. ಗುರುವೆ, ಅಮೃತವನ್ನು ಉಂಡ ಬಳಿಕ ಏನು ಅದರ ಸವಿಯು ಆರು ತಿಂಗಳಿಗೆ ಹಿಂಗುವುದೆ? ನಿನ್ನ ಕಡೆಗಣ್ಣಿನ ಕುಡಿನೋಟವು ಸದಾ ನನ್ನಲ್ಲಿ ಕೂಡಿದ ಬಳಿಕ ಇನ್ನೆಲ್ಲಿಯವರೆವಿಗೆ ಕಾಲ ದೂಡುವುದು? [ಅದನ್ನು] ವಿಸ್ತರಿಸುವ ಕಾರಣವಾವುದು? ಪ್ರಭುರಾಯ ಹೇಳು" ಎಂದು ಬಸವಣ್ಣನು ಕೇಳಿದನು. ೫೫. "ಚಂದ್ರಕಲೆಯ ಅಲಂಕಾರವು ಹೇಗೆ ಚಂದ್ರಧರನಾದ ಶಿವನಿಗೆ ಹೊಂದಿಕೊಂಡಿತೊ ಹಾಗೆಯೇ ಚಂದ್ರಕಳಾಮೃತವೆಂಬ ಸದ್ಭಕ್ತಿಸಾರವು, ಬಸವಾ, ನಿನಗೆ ಹೊಂದಿಕೊಂಡಿದೆ. ವಿಚಾರ ಮಾಡಲು, ಇನ್ನಾರಿಗಾದರೂ ಅದು ತಿಳಿಯಬರುವುದೆ? ಕೇಳು" ಎಂದು ಆ ಪ್ರಭುರಾಯ ಹೀಗೆಂದು ನುಡಿದನು. ೫೬. "ನಿನ್ನ ಹೆಸರನ್ನು ಕೇಳಿದರೆ ಅಥವಾ ನಿನ್ನ ಮೂರ್ತಿಯನ್ನು ನೋಡಿ ದರ್ಶನಪಡೆದರೆ, ನಿನ್ನನ್ನು ನೆನೆದರೆ, ನಿನ್ನ

ಹುಸಿವುದೇ ಕೈ ನೆಲನ ಹೊಯ್ದರೆ
ಹುಸಿವುದೇ ಕಣೆ ಗಿರಿಯನೆಚ್ಚೊಡೆ
ಹುಸಿವುದೇ ಕೇಳೆನ್ನನಱಿದಿಹೆನೆಂಬ ನಿನ್ನಱಿವು
ಹುಸಿಯಲಱಿವುದೆ ನನ್ನ ಕಾರಣ
ವಸುಮತಿಗೆ ನೀ ಬಂದೆಯದಱಿಂ
ಹುಸಿಯ ಮಾಯೆಯ ಹುಸಿಸಿ ತೋಱುವೆ ಬಸವ ಕೇಳೆಂದ ೫೭

ಈ ತೆಱದೊಳಱಿದಿಷ್ಟಲಿಂಗ
ಪ್ರೀತಿ ಮಾರ್ಗಾಚಾರವನು ವಿ
ಖ್ಯಾತಿಯುತ ಬಸವಣ್ಣ ಮೊದಲಾದಖಿಳಭಕ್ತರಿಗೆ
ಓತು ನಿಯಮಿಸಿ ನಿರ್ವಿಕಾರದ
ನೀತಿ ನಿಶ್ಚಯ ಭಕ್ತಿಮಾರ್ಗದ
ರೀತಿದಾಯಕನೊಪ್ಪುತಿರ್ದನು ಗುರು ಗುಹೇಶ್ವರನು ೫೮

ಅಂತು ಗತಿ ೧೬ಕ್ಕಂ ಪದ ೭೯ಕ್ಕಂ ಮಂಗಳಂ

ಜೊತೆಗೂಡಿದರೆ, ನಿನ್ನನ್ನು ಹೊಗಳಿದರೆ, ನಿನ್ನನ್ನು ಭಜಿಸಿದರೆ ಅಂತಹವರು ಭಕ್ತಿಯ ಹಿರಿಮೆಯನ್ನು ತಿಳಿದು ಐಕ್ಯರಾಗುವರು ಎನ್ನಲು ನಿನ್ನ ಮಹಿಮೆಯನ್ನು ಏನೆಂದು ಹೇಳಲಿ! ಬಸವ ಕೇಳು" ಎಂದು ಅಲ್ಲಮ ನುಡಿದನು. ೫೭. "ನೆಲವನ್ನು ಬಡಿದರೆ ಕೈ ಸದ್ದುಮಾಡದಿರುವುದೆ? ಪರ್ವತಕ್ಕೆ ಬಾಣ ಪ್ರಯೋಗಿಸಿದರೆ [ಬಾಣ] ತಪ್ಪುವುದೆ? ಕೇಳು, ನನ್ನನ್ನು ತಿಳಿದಿರುವೆನೆಂಬ ನಿನ್ನ ಜ್ಞಾನ ಸುಳ್ಳಾಗುವುದೆ? ಸುಳ್ಳಾಡಲು ತಿಳಿವುದೆ? ನನ್ನ ಕಾರಣದಿಂದ ಭೂಮಿಗೆ ನೀನು ಬಂದೆ. ಆದಕಾರಣ ಸುಳ್ಳಿನ ಮಾಯೆಯನ್ನು ಸುಳ್ಳಾಗಿಸಿ ಕಾಣಿಸುವೆ, ಬಸವಾ ಕೇಳು" ಎಂದು ಅಲ್ಲಮ ನುಡಿದನು. ೫೮. ಈ ರೀತಿಯಲ್ಲಿ ಇಷ್ಟಲಿಂಗದಲ್ಲಿ ಪ್ರೀತಿಯನ್ನು, ಇಷ್ಟಲಿಂಗದ ಭಕ್ತಿಮಾರ್ಗಾಚಾರವನ್ನು ವಿಶೇಷವಾಗಿ ಪ್ರಸಿದ್ಧನಾದ ಬಸವಣ್ಣನೇ ಮೊದಲಾದ ಸರ್ವಭಕ್ತರಿಗೆ ಪ್ರೀತಿಯಿಂದ ನೇಮಿಸಿ ನಿರ್ವಿಕಾರನೂ, ನೀತಿಪರವಾದ ಭಕ್ತಿಮಾರ್ಗದ ರೀತಿಯನ್ನು ತಿಳಿಸಿಕೊಡುವವನೂ ಆದ ಗುರುಗುಹೇಶ್ವರನು ಶೋಭಿಸುತ್ತಿದ್ದನು.

# ೧೭. ಮಹಾದೇವಿಯಕ್ಕನಿಗೆ ಪ್ರಭು ಪ್ರಸನ್ನವಾದುದು

ಗತಿ ೧೭

ಸೂಚನೆ : ಶರಣರಱಿಯಲು ಪ್ರಾಣಲಿಂಗಾ
ಚರಣೆಯಲಿ ಮಾದೇವಿಯಕ್ಕಗೆ
ಕರುಣಿಸಿಯೆ ಕಳುಹಿದನು ನಮ್ಮಯ ಗುರುಗುಹೇಶ್ವರನು

ಇಷ್ಟಲಿಂಗದ ಮಾರ್ಗದಲಿ ಸಂ
ತುಷ್ಟರಾಗಿ ಶಿವಾನುಭಾವದ
ಗೋಷ್ಠಿಯನು ಸಲೆ ಕೇಳಿ ಕೇಳಿ ಮನೋನುರಾಗದಲಿ
ದುಷ್ಟ ದುರ್ವಾಸನೆಯ ನೀಗಿ ವಿ
ಶಿಷ್ಟವೆನಿಪಾ ಪ್ರಾಣಲಿಂಗದ
ನಿಷ್ಠರಪ್ಪರು ತಿಳಿವುದೀ ಪ್ರಭುಲಿಂಗಲೀಲೆಯಲಿ ೧

ಗುರುವನಱಸುವೆನೆಂದು ತಿಱ್ರನೆ
ತಿರುಗಿದಳು ಗಿರಿಗಹ್ವರಂಗಳ
ಗುರುವನಱಸುವೆನೆಂದು ತೊಟ್ಟನೆ ತೊಳಲಿದಳು ಧರೆಯ
ಗುರುವನಱಸುವೆನೆಂದು ಕಾಯವ
ಕರಗುತಿರ್ದಳು ಕಾತರಿಸಿ ಸದ್
ಗುರುವನಱಸುವ ವೇಧೆಯಲಿ ಮೆಱೆದಳು ಮಹಾದೇವಿ ೨

ಹೊಂಪುಳಿಯ ಘನ ಸೌಖ್ಯ ಮಿಕ್ಕಳಿ
ಗಂಪುಗಳಲಿಲ್ಲೆನುತೆ ತನ್ನೊಳು
ಜೊಂಪಿಸುವ ಮನವೆಂಬ ತುಂಬಿಯ ಭಾವ ಮಿಗೆ ತುಂಬಿ
ಸಂಪಗೆಯ ಸಾರ್ವಂತೆ ಬಂದಳ
ಲಂಪಿನಲಿ ಮಾದೇವಿ ಮುಕ್ತಿಯ
ಸೊಂಪು ಶೋಭಿಸುವಲ್ಲಮಪ್ರಭುರಾಯನಿದ್ದೆಡೆಗೆ ೩

ಸೂ : ಪ್ರಾಣಲಿಂಗಾಚರಣೆಯನ್ನು ಶರಣರು ತಿಳಿಯಲು, ಮಾದೇವಿಯಕ್ಕನಿಗೆ ನಮ್ಮ ಗುರುಗುಹೇಶ್ವರನು ಅನುಗ್ರಹಿಸಿ ಕಳುಹಿಸಿದನು. ೧. ಇಷ್ಟಲಿಂಗದ ಭಕ್ತಿಮಾರ್ಗದಲ್ಲಿ ಹೆಚ್ಚಿನ ತೃಪ್ತಿಹೊಂದಿ, ಮನಸ್ಸಿನಲ್ಲಿ ಉಂಟಾದ ಪ್ರೀತಿಯಿಂದ ಶಿವಾನುಭಾವದ ಗೋಷ್ಠಿಯ ಮಾತುಕತೆಗಳನ್ನು ಚೆನ್ನಾಗಿ ಕೇಳಿ ಕೇಳಿ, ದುಷ್ಟವಾದ ವಿಷಯವಾಸನೆಯನ್ನು ನೀಗಿ, ವಿಶೇಷವೆನ್ನಿಸಿಕೊಂಡ ಪ್ರಾಣಲಿಂಗದಲ್ಲಿ ನಿಷ್ಠರಾಗಿರುವವರು ಈ ಪ್ರಭುಲಿಂಗ ಲೀಲೆಯಲ್ಲಿ ತಿಳಿಯುವುದು. ೨. ಮಹಾದೇವಿಯು ಗುರುವನ್ನು ಹುಡುಕುವೆನೆಂದು ಪರ್ವತ ಹಾಗೂ ಕಾಡುಗಳ ಸುತ್ತಮುತ್ತ ತಿರುಗಿದಳು. ಗುರುವನ್ನು ಹುಡುಕುವೆನೆಂದು ಬೇಗಬೇಗನೆ ಭೂಮಿಯಲ್ಲಿ ಸುತ್ತಾಡಿದಳು. ಗುರುವನ್ನು ಹುಡುಕುವೆನೆಂದು ದೇಹವನ್ನು ಸವೆಸುತ್ತಿದ್ದಳು. ಕಾತರಗೊಂಡು ಸದ್ಗುರುವನ್ನು ಹುಡುಕುವ ಗುರಿಯನ್ನು ಹೊಂದಿ ಹೀಗೆ ಅವಳು ಶೋಭಿಸಿದಳು. ೩. ರೋಮಾಂಚನದ ಹಿರಿಸುಖ ಉಳಿದ ಸಾಮಾನ್ಯವಾದ ಸುಗಂಧಗಳಲ್ಲಿ ಇಲ್ಲವೆಂದು ತನ್ನಲ್ಲೆ ಮೈಮರೆಯುವ ತುಂಬಿಯು ಸಂಪಗೆಯ ಹೂವನ್ನು ಸಮೀಪಿಸುವಂತೆ, ಮಾದೇವಿ ಸಂತೋಷದಿಂದ ಮುಕ್ತಿಯ ಚೆಲುವು ಶೋಭಿಸುವ ಅಲ್ಲಮ ಪ್ರಭುರಾಯನಿದ್ದ ಸ್ಥಳಕ್ಕೆ ಬಂದಳು.

ಅಱಲುಗೊಂಡವನಿದಿರಲಮೃತದ
ತೊಱೆಯನೇ ಕಂಡಂತೆ ಕುರುಡಗೆ
ಮೆಱೆವ ಕೂಡಲ ಕೂಪವೆಲ್ಲವು ಕಂಗಳಾದಂತೆ
ನೆಱೆ ನಿರಂತರ ನಿರ್ವಿಕಾರದ
ನಿಱೆಗೆಯಮಲಜ್ಞಾನವನು ಕ
ಣ್ದೆಱಸುವಾ ಪ್ರಭುರಾಯನನು ಕಂಡಳು ಮಹಾದೇವಿ ೪

ನೋಡಿ ಕಂಡಳು ವೇದತತಿ ಮೈ
ನೀಡಿದರೆ ಕೈ ನಿಲುಕದಾತನ
ಹಾಡಿ ಹೊಗಳುತಲೊಡಲನೀಡಾಡಿದಳು ಚರಣದಲಿ
ಕೂಡೆ ಶರಣೆನೆ ಶಿವಗಣಕೆ ಕೈ
ಗೂಡಿ ಶರಣೆಂದೆನುತೆ ಭಕ್ತಿಯ
ಗೂಡು ತಾನೆಂಬಂತೆ ಕಾಣಿಸಿದಳು ಮಹಾದೇವಿ ೫

ಬಸವ ನೋಡಾ ಭಕ್ತಿ ಬೇಟದ
ಬೆಸನದಲಿ ಮೈಮರೆತು ಲಜ್ಜೆಯ
ಹೆಸರ ಹೆಮ್ಮೆಯ ಕೆಡಿಸಿ ತನುಮೋಹವನು ಪಲ್ಲಟಿಸಿ
ಹಸು ತೃಷೆಯ ಹರವರಿಗಳನು ಭಂ
ಗಿಸಿ ದಿಗಂಬರೆಯಾಗಿ ಮಿಗೆ ಕಾ
ಣಿಸುವ ಮಾದೇವಿಯರನೆನುತಾ ಪ್ರಭು ನಿರೀಕ್ಷಿಸಿದ ೬

ಬತ್ತಲೆಯ ಬಗೆಗೊಂಡು ಹೆಂಗೂ
ಸಿತ್ತಲೇತಕೆ ಬಂದೆ ಕಾಮದ
ಕತ್ತಲೆಯು ಕಳೆಯದೆ ವೃಥಾ ವೈರಾಗ್ಯವೇಷದಲಿ
ಹತ್ತಿರಿದ್ದರೆ ನಮ್ಮ ಶರಣರು
ಚಿತ್ತದಲಿ ಕೆರಳುವರು ಕೇಳೆನು
ತೊತ್ತಿ ನೋಡಿದನಾಕೆಯಂತಸ್ಥವನು ಪ್ರಭುರಾಯ ೭

೪. ಬಾಯಾರಿಕೆಗೊಂಡವನು [ತನ್ನ] ಮುಂದೆ ಅಮೃತದ ಪ್ರವಾಹವನ್ನೇ ಕಂಡಂತೆ, ಕುರುಡನಿಗೆ ಕೂದಲಿನ ಕುಳಿಯೆಲ್ಲವೂ ಕಣ್ಣುಗಳಾದಂತೆ, ಮಹಾದೇವಿ ಅತ್ಯಾನಂದದಿಂದ ಸಂಪೂರ್ಣವಾಗಿ ಸದಾ ನಿರ್ವಿಕಾರದ ಹೊಂದಿಕೆಯನ್ನು [ಪಡೆದ] ಪರಿಶುದ್ಧಜ್ಞಾನವನ್ನು ಕಣ್ತೆರೆಸುವ ಪ್ರಭುರಾಯನನ್ನು ಕಂಡಳು. ೫. ವೇದಗಳ ಸಮೂಹಕ್ಕೂ ಸಿಕ್ಕದಿರುವವನನ್ನು [ಅಲ್ಲಮನನ್ನು] ಮಹಾದೇವಿ ಕಂಡಳು; ಹಾಡಿ ಹೊಗಳುತ್ತ ಆತನ ಪಾದಗಳಲ್ಲಿ ದೇಹವನ್ನು ಚೆಲ್ಲಿದಳು; [ಬಳಿದೆ] ಶರಣೆಂದ ಶಿವಗಣಗಳಿಗೆ ಕೈ ಮುಗಿದು ಶರಣೆಂದು ಹೇಳುತ್ತ ತಾನು ಭಕ್ತಿಯ ನೆಲೆ ಎಂಬ ರೀತಿಯಲ್ಲಿ ಕಾಣಿಸಿದಳು. ೬. "ಭಕ್ತಿಯನ್ನು ಅರಸುವ ಚಿಂತೆಯಲ್ಲಿ ಮೈಮರೆತು, ನಾಚಿಕೆಯನ್ನು ತೊರೆದು ದೇಹದ ಮೇಲಿನ ಮೋಹವನ್ನು ಮಾರ್ಪಾಡಿಸಿ, ಹಸಿವೆ ಬಾಯಾರಿಕೆಗಳ ಹೆಚ್ಚಳವನ್ನು ತಗ್ಗಿಸಿ, ದಿಗಂಬರಳಾಗಿ ಅತಿಶಯ ವಾಗಿ ಕಾಣಿಸುವ ಮಾದೇವಿಯನ್ನು ಬಸವ ನೋಡು" ಎಂದು ಹೇಳುತ್ತಾ ಪ್ರಭುವು ಅವಳನ್ನು ನಿಟ್ಟಿಸಿದನು. ೭. "ಕಾಮದ ಕತ್ತಲೆಯನ್ನು ನಿವಾರಿಸದೆ ಸುಮ್ಮನೆ ವಿರಾಗಿಣಿಯಾಗಿ ಹೆಂಗುಸಾದ ನೀನು ದಿಗಂಬರಳಾಗಿ ಇಲ್ಲಿಗೇಕೆ ಬಂದೆ? ನೀನು ಸಮೀಪದಲ್ಲಿದ್ದರೆ ನಮ್ಮ

ಜಗಭರಿತಗೊಲಿದವಳಿಗುಡಿಗೆಯ
ತೊಗಲದೇತಕೆ ತನುಮನಂಗಳ
ನಗಲದೀಶಂಗಿತ್ತೆನಗೆ ಸತಿ ಕಾಮವೆಂಬೆಂಬ
ಬಗೆಯದೇತಕೆ ಎನ್ನ ಕಂಡರೆ
ಭುಗಿಲಿಡಲದೇಕಯ್ಯ ಶರಣರ
ಮಿಗಿಲು ನುಡಿಗಾನಮ್ಮನೆನುತಿರ್ದಳು ಮಹಾದೇವಿ ೮

ಕಾಣಿಸುತೆ ನೀನಿದ್ದು ನೆಟ್ಟನೆ
ಕಾಣಬಾರದ ಶಿವನನೊಲಿಸುವ
ಜಾಣತನವೆಂತವ್ವ ವಾಗದ್ವೈತ ಭಕ್ತಿಯಲಿ
ಕೇಣಿಕಾಱರು ನೀವು ನಿಮ್ಮೊಳು
ಹೂಣಿಸಲು ಹುರುಳಿಲ್ಲವೆನುತಲಿ
ಮಾಣದಾಕೆಯ ಮತ್ತೆ ಜಱೆದನು ನಗುತ ಪ್ರಭುರಾಯ ೯

ರೂಪುವಿಡಿದಿರ್ದಲ್ಲದೆಂತು ನಿ
ರೂಪ ಬೆರೆಸುವ ಭೇದವಱೆದೊಡೆ
ರೂಪಿನೊಳಗೆ ನಿರೂಪು ತಿಳಿಯೆ ನಿರೂಪಿನೊಳು ರೂಪು
ಈ ಪರಿಯನೊಂದೊಂದನಗಲದೆ
ವ್ಯಾಪಿಸಿಹುವೆಂದಱೆದು ನಾನಾ
ರೂಪನನು ನೆಲೆಗೊಂಡೆನೆಂದಳು ಮತ್ತೆ ಮಾದೇವಿ ೧೦

ಶರಣರು ಮನದಲ್ಲಿ ಕೋಪಗೊಳ್ಳುವರು, ಕೇಳು" ಎಂದು ಅವಳ ಒಳಮನವನ್ನು ಪ್ರಭುರಾಯ ಪರೀಕ್ಷಿಸಲು ನುಡಿದನು. ೮. "ಜಗತ್ತನ್ನೇ ಆವರಿಸಿರುವ ಶಿವನನ್ನು ಒಲಿದವಳಿಗೆ ವಸ್ತ್ರದ ಚರ್ಮವೇಕೆ? ದೇಹ ಮನಸ್ಸುಗಳನ್ನು ಸಂಪೂರ್ಣವಾಗಿ ಶಿವನಿಗೆ ಕೊಟ್ಟ ನನಗೆ ಹೆಣ್ಣು ಕಾಮಗಳೆಂಬ ವಿಚಾರವದೇತಕ್ಕೆ? ನನ್ನನ್ನು ಕಂಡರೆ ಕೋಪಗೊಳ್ಳುವುದೇಕಯ್ಯ? ಶರಣರ ಅತಿಶಯವಾದ ಮಾತಿಗೆ ನಾನು ಅರ್ಹಳಲ್ಲ" ಎಂದು ಮಹಾದೇವಿ ಪ್ರಭುವಿಗೆ ಹೇಳಿದಳು. ೯. "ನೀನು ಗೋಚರಳಾಗಿ ಅಗೋಚರನಾದ ಶಿವನನ್ನು ನೇರವಾಗಿ ಒಲಿಸುವ ಜಾಣತನವು ಹೇಗವ್ವ? ನೀವು ಬಾಯಿಮಾತಿನ ಅದ್ವೈತದಲ್ಲಿ ಚತುರರು. ಪ್ರತಿಜ್ಞೆಗೊಳ್ಳಲು ನಿಮ್ಮಲ್ಲಿ ತಿರುಳಿಲ್ಲ" ಎಂದು ನಗುತ್ತಾ ಅಲ್ಲಮಪ್ರಭುವು ಅವಳನ್ನು ಬಿಡದೆ ನಿಂದಿಸಿದನು. ೧೦. "ಮೊದಲು ಆಕಾರವಿಲ್ಲದಿದ್ದರೆ, ನಿರಾಕಾರ ದಲ್ಲಿ ಅಡಗುವುದೆಂದರೇನು? ತಿಳಿವುದಾದರೆ, ಆಕಾರದಲ್ಲಿ ನಿರಾಕಾರ, ನಿರಾಕಾರದಲ್ಲಿ ಆಕಾರ. ಈ ರೀತಿ ಒಂದನ್ನೊಂದು ಅಗಲದೆ ವ್ಯಾಪಿಸಿರುವುವು ಎಂದು ತಿಳಿದು ನಾನು ಆ ರೂಪದಲ್ಲಿ ನೆಲೆಗೊಂಡೆನು" ಎಂದು ಹೇಳಿ, ಮತ್ತೆ ಮಾದೇವಿ ಹೀಗೆಂದಳು.

ಹಾಲಿನೊಳು ನೆಱೆ ತುಪ್ಪವಿಪ್ಪುದ
ಹೇಳಿದಡೆ ಹಱೆಯದು ತದಂಗದ
ಕೀಲನಱಿಯದೆ ಬಱೆಯ ನುಡಿಯಲಿ ಬಸಿಱು ತುಂಬುವುದೆ
ಕಾಳುಮಾತು ನಿರೂಪು ರೂಪಿನ
ಮೇಳವಿಲ್ಲದ ಮಹಿಮನಲಿ ಸಂ
ಮೇಳ ನಿನಗೆಂತಾದುದೌ ಮಾದೇವಿ ಹೇಳೆಂದ ೧೧

ಸಾರೆಯಲಿ ಶಿವಸಂಗವೆಂದೇ
ಹಾರವಿಸಿಕೊಂಡಿದ್ದೆನಂತದ
ದೂರ ದೂರವದೆಂದು ನೀನೇ ಹೆದಱಿಸಿದೊಡೆನಗೆ
ಆರು ಕರುಣಿಸಿ ಕಾಣಿಸುವರೆನ
ಗಾರು ಗತಿಮತಿಯೆನುತೆ ಕರುಣಾ
ಕಾರಗಾ ಮಾದೇವಿ ಬಿನ್ನೈಸಿದಳು ಭಕ್ತಿಯಲಿ ೧೨

ಆರು ನನ್ನನು ತಿಳಿವೆನೆನುತಲಿ
ಸಾರೆಯೆಂದಿದಿರಿಟ್ಟು ನೋಡಲು
ದೂರವಾಗಿಹೆನಲ್ಲದಿರ್ದೊಡೆ ದೂರವೆಂದೆನಲು
ಸಾರೆಯಾಗಿಹೆನೀ ಪರಿಯನಿದ
ನಾರಿಗುಪಮಿಸಬಹುದು ಭಕ್ತಿವಿ
ಚಾರವನು ಬಸವಣ್ಣನಲಿ ಮಾದೇವಿ ಕೇಳೆಂದ ೧೩

೧೧. ಹಾಲಿನಲ್ಲಿ ತುಪ್ಪವಿದೆಯೆಂದು ಹೇಳಿದರೆ ಅದು ಹೆರೆದುಪ್ಪವಾಗಿ ಹೊರಗೆ ಬರದು. ಹೊಟ್ಟೆಯ ಹಸಿವಿನ ರಹಸ್ಯವನ್ನರಿಯದೆ ಸುಮ್ಮನೆ ಮಾತುಗಳಿಂದ ಹೊಟ್ಟೆ ತುಂಬಲು ಸಾಧ್ಯವೆ? [ನಿನ್ನವು] ವ್ಯರ್ಥವಾದ ಮಾತು. ಮಹಾದೇವಿ, ಆಕಾರ ನಿರಾಕಾರಗಳ ಸಂಬಂಧವಿಲ್ಲದ ಮಹಿಮಾಪುರುಷನಲ್ಲಿ ಕೂಡಿಕೆ ನಿನಗೆ ಹೇಗಾಯಿತು? ಹೇಳು" ಎಂದು ಅಲ್ಲಮನು ಕೇಳಿದನು. ೧೨. "ಸಮೀಪದಲ್ಲಿಯೇ ಶಿವಸಂಗವಾಗುವುದೆಂದು ನಿರೀಕ್ಷಿಸಿ ಕೊಂಡಿದ್ದೆನು. ಅಂತದನ್ನು ದೂರ, ಬಹು ದೂರವೆಂದು ನೀನೇ ನನ್ನನ್ನು ಹೆದರಿಸಿದರೆ ಇನ್ನು ನನಗೆ ಯಾರು ಕರುಣಿಸಿ ಕಾಣಿಸುವರು? ನನಗಿನ್ನಾರು ಗತಿಮತಿ?" ಎಂದು ಭಕ್ತಿಯಿಂದ ಕರುಣಾಕರನಾದ ಅಲ್ಲಮನಿಗೆ ಮಾದೇವಿಯು ವಿನಂತಿ ಮಾಡಿದಳು. ೧೩. "ಯಾರು ನನ್ನನ್ನು ಅರಿಯೋಣವೆಂದು, ಹತ್ತಿರವೆಂದು ಕಣ್ಣಿಟ್ಟು ನೋಡುವರೋ ಅವರಿಗೆ ದೂರವಾಗಿ ನಾನು ಇರುವೆನು ಅಲ್ಲದಿದ್ದರೆ ದೂರವೆನ್ನಲು ಹತ್ತಿರವಾಗುವೆನು ಈ ಕ್ರಮವನ್ನು ಯಾರಿಗೆ ಹೋಲಿಸಲು ಸಾಧ್ಯ? ಭಕ್ತಿ ವಿಚಾರವನ್ನು ಮಾದೇವಿ ಬಸವಣ್ಣನಲ್ಲಿ ಕೇಳು" ಎಂದು ಅಲ್ಲಮನು ನುಡಿದನು.

ಎನ್ನಱಿವು ಬಸವಣ್ಣನೆನಗಾ
ಚೆನ್ನಬಸವನೆ ಗುರುವೆಲೈ ದಿಟ
ವೆನ್ನ ಲಿಂಗವೆ ನೀನು ಜಂಗಮವೆನಗೆ ರಾಮಯ್ಯ
ಎನ್ನ ತನುವೇ ಮಡಿವಳನು ನಾ
ನಿನ್ನು ಸುಖಿಯಹುದೇನು ಸೋಜಿಗ
ನಿನ್ನ ದಾಸರ ದಾಸಿಯಾನೆಂದಳು ಮಹಾದೇವಿ ೧೪

ಲೋಕದೊಳು ಸತಿ ಜನ್ಮವನು ತಾ
ಸ್ವೀಕರಿಸಿ ತನುಮೋಹಲೋಭವ
ನೂಕಿ ನಿಸ್ಪೃಹೆಯಾಗಿ ನಿಲುವವರಾರು ಸೃಷ್ಟಿಯಲಿ
ಈಕೆಗಾರೆಣೆ ಶಿವಶಿವಾ ಎನು
ತಾಕೆಯನು ಬಸವಣ್ಣ ಮುಖ್ಯರ
ನೇಕಪರಿಯಲಿ ಹೊಗಳುತಿರ್ದರು ಶರಣು ಶರಣೆನುತ ೧೫

ಕರಣಗಳು ಸಲೆ ಶುದ್ಧವಾದುವು
ಶರಣರನು ನೆನೆನೆನೆದು ಸಂತತ
ಶರಣರಿಗೆ ಶರಣೆಂದು ಕಾಯ ಪುನೀತಮಯವಾಯ್ತು
ಶರಣರಿಂದಾನಿಂದು ಶುಚಿಯಾ
ಗಿರಲು ತನುಮನಗಳ ವಿಕಾರದ
ಭರಕೆ ನಾನಂಜುವೆನೆ ಎಂದಳು ಮತ್ತೆ ಮಾದೇವಿ ೧೬

ಇಂತು ನಿರಹಂಕಾರದಿಂದೋ
ರಂತೆ ಕಾಯಮನೋವಿಕಾರದ
ಸಂತತಿಯ ಸೈತಿಟ್ಟು ಪರಿಪಾಕಪ್ರಭಾವದಲಿ
ಸಂತಗೊಂಡು ಸಮಸ್ತ ಭಾವ
ಭ್ರಾಂತಿಯಳಿದೊಮ್ಮುಖವನೈದಿ ನಿ
ರಂತರದಲತಿ ಮೆಱೆವುತಿರ್ದಳು ಮತ್ತೆ ಮಾದೇವಿ ೧೭

೧೪. “ಎನ್ನ ತಿಳಿವು ಬಸವಣ್ಣ. ನನಗೆ ಆ ಚನ್ನಬಸವನೆ ಗುರುವು. ಎಲೈ ಪ್ರಭುವೆ ನಿಜವಾಗಿಯೂ ನೀನು ನನ್ನ ಲಿಂಗವು. ರಾಮಯ್ಯನು ನನಗೆ ಜಂಗಮವು. ಮಡಿವಳನೇ ನನ್ನ ದೇಹ. ನಾನಿನ್ನು ಸುಖಿಯಾಗುವುದರಲ್ಲಿ ಆಶ್ಚರ್ಯವೇನು? ನಿನ್ನ ದಾಸರ ದಾಸಿ ನಾನು” ಎಂದು ಮಹಾದೇವಿಯು ಪ್ರಭುವಿಗೆ ನುಡಿದಳು. ೧೫. ಲೋಕದಲ್ಲಿ ಸ್ತ್ರೀಜನ್ಮವನ್ನು ಸ್ವೀಕರಿಸಿ, ದೇಹದ ಮೇಲಿನ ಮೋಹ ಲೋಭಗಳನ್ನು ನೂಕಿ, ಆಶಾರಹಿತರಾಗಿ ಲೋಕದಲ್ಲಿ ನಿಲ್ಲುವವರಾರು? ಇವಳಿಗೆ ಯಾರು ಸಮಾನರು? ಶಿವಶಿವಾ!” ಎಂದು ಅವಳನ್ನು ಬಸವಣ್ಣನೇ ಮೊದಲಾಗಿ ಮುಖ್ಯರಾದ ಶರಣರು ಶರಣು ಶರಣೆಂದು ಅನೇಕ ಬಗೆಯಾಗಿ ಹೊಗಳುತ್ತಿದ್ದರು. ೧೬. “ಶರಣರನ್ನು ನೆನೆನೆನೆದು ಇಂದ್ರಿಯಗಳು ಚೆನ್ನಾಗಿ ಶುದ್ಧವಾದುವು. ಸದಾ ಶರಣರಿಗೆ ಶರಣೆಂದು ದೇಹವು ಪವಿತ್ರವಾಯಿತು. ಶರಣರಿಂದಲೇ ನಾನು ಶುಚಿಯಾಗಿರಲು ದೇಹ ಮನಸ್ಸುಗಳ ವಿಕಾರದ ಅತಿಶಯತೆಗೆ ನಾನಂಜುತ್ತೇನೆಯೆ?” ಎಂದು ಮತ್ತೆ ಮಾದೇವಿಯು ಹೇಳಿದಳು. ೧೭. ಹೀಗೆ ನಿರಹಂಕಾರದಿಂದ ಒಂದೇ ಸಮನಾಗಿ ದೇಹ ಮನಸ್ಸುಗಳ ವಿಕಾರ ಪರಂಪರೆಯನ್ನು ಸ್ವಪುಣ್ಯಪ್ರಭಾವದಿಂದ ಸರಿಗೊಳಿಸಿ,

ನೆರೆತೆರಗಳಿಡಿದಡರಿ ತನು ಜ
ರ್ಜರಿತವಾಗಿಯನೇಕದಿನದಲಿ
ಹಿರಿಯರೆಂದೆನಿಸಿದರೆ ಹಿರಿಯರೆ ಬೆಟ್ಟದಂದದಲಿ
ಹಿರಿದು ದಿನವಿರೆ ಹಿರಿಯರಹರೆ
ನಿರುತ ನಿರಹಂಕಾರವಿಲ್ಲದೆ
ಹಿರಿಯತನ ಮಾದೇವಿಗಾಯಿತ್ತೆಂದು[illegible] ೧೮

ಬಳಿಕಲಾಕೆಯ ಚಿತ್ತವತಿ ನಿ
ರ್ಮಳತೆಯಾದುದನಜೆದು ತಾ ತ
ನ್ನೊಳಗೆ ಸಂತೋಷಿಸುತೆ ಹೋ ಮಝು ಮಾಯೆ ಎಂದೆನುತೆ
ತಿಳಿಯಬೇಕೆಂದೆನ್ನ ಕಾರಣ
ತೊಳಲಿ ಬಳಲಿದಳಿನ್ನು ಕರುಣಿಸಿ
ನಿಲಿಸಬೇಕೆಂದಲ್ಲಮಪ್ರಭುರಾಯನಿಂತೆಂದ ೧೯

ಆಯತವನಳವಡಿಸಿ ದಿಟವಾ
ಸ್ವಾಯತವನವಗಯಿಸಬೇಕೆಂ
ಬಾಯತಕೆ ಸರ್ವಾಂಗವನು ಸಲೆ ಸವೆದರಾರುಂಟು
ಬಾಯನುಡಿಗಳ ಚದುರರಲ್ಲದೆ
ಕಾಯದಲಿ ಕಲಿ ಯಾರು ಭಕ್ತಿಯ
ದಾಯ ನಿನ್ನಲಿ ನೆಲಸಿತೌ ಮಾದೇವಿ ಕೇಳೆಂದ ೨೦

ಶಾಂತಳಾಗಿ, ಸಮಸ್ತ ಭಾವಭ್ರಾಂತಿಯನ್ನು ನಾಶಗೊಳಿಸಿ ಒಮ್ಮನವನ್ನು ಹೊಂದಿ ಮಹಾದೇವಿಯು ಸದಾ ಅತಿಶಯವಾಗಿ ಶೋಭಿಸುತ್ತಿದ್ದಳು. ೧೮. "ಮುಪ್ಪಿಂದ ಚರ್ಮ ನೆರಿಗೆಗಟ್ಟಿ, ದೇಹ ಶಿಥಿಲವಾಗಿ ಅನೇಕ ದಿವಸಗಳು ಕಳೆದದ್ದರಿಂದ ಹಿರಿಯರೆಂದೆನಿಸಿದವರು [ನಿಜವಾಗಿ] ಹಿರಿಯರೆ? ಬೆಟ್ಟದಂತೆ ಬಹಳ ದಿನಗಳಿಂದಿರಲು [ಅವರು] ಹಿರಿಯರಾಗುವರೆ? ಸದಾ ನಿರಹಂಕಾರಿಯಾಗಿ [ಕಿರಿಯತನದಲ್ಲೇ] ಹಿರಿಯತನ ಮಾದೇವಿಗೆ ಆಯಿತು" ಎಂದು ಶಿವಗಣವು ಹೊಗಳಿತು. ೧೯. ಬಳಿಕ, ಅವಳ ಮನಸ್ಸು ಹೆಚ್ಚು ಪರಿಶುದ್ಧವಾದುದನ್ನು ತಿಳಿದು ಅಲ್ಲಮನು ತನ್ನಲ್ಲೇ ಸಂತೋಷಗೊಂಡು ಹೋ! ಭೇಷ್ ಮಾಯೆ! ಎಂದು ಹೊಗಳಿ "ನನ್ನನ್ನು ಅರಿಯಬೇಕೆಂದು ನನಗಾಗಿ ತೊಳಲಿ ಬಳಲಿದಳು. ಇನ್ನು [ಅವಳನ್ನು] ಅನುಗ್ರಹಿಸಿ ನಿಲ್ಲಿಸಬೇಕು" ಎಂದು [ಆಲೋಚಿಸಿ] ಅಲ್ಲಮಪ್ರಭುರಾಯನು ಹೀಗೆಂದು ಮಾದೇವಿಗೆ ನುಡಿದನು. ೨೦. "ಇಷ್ಟಲಿಂಗವನ್ನು ಧರಿಸಿ ಪ್ರಾಣಲಿಂಗವನ್ನು ಮುಟ್ಟಬೇಕು. ಭಕ್ತಿಯ ಬೆಳವಣಿಗೆಗೆ ದೇಹವನ್ನೆಲ್ಲಾ ಚೆನ್ನಾಗಿ ತೇದವರಾರುಂಟು? ಲಿಂಗಕ್ಕೆ ಸರ್ವಸ್ವವನ್ನು ಅರ್ಪಿಸಬೇಕೆಂದು ಎಲ್ಲರೂ ಬಾಯಲ್ಲಿ ಹೇಳುವರು. ನಿನ್ನಂತೆ ಭಕ್ತಿಯನ್ನೇ ಸೂರೆಗೊಂಡು ಶರೀರಾಭಿಮಾನವನ್ನು ತೊರೆದು ಲಿಂಗಕ್ಕೆ ಸಮರ್ಪಿಸಿದವರು ಯಾರು? ಭಕ್ತಿಯ ಸಾಧನೆ ನಿನ್ನಲ್ಲಿ ನೆಲಸಿತು, ಮಾದೇವಿ ಕೇಳು" ಎಂದು ಅಲ್ಲಮನು

ಹಾಲ ಹದದಲಿ ಹೆಪ್ಪನೆಱೆದರೆ
ಮೇಲೆ ತುಪ್ಪವನುಂಬರಾ ಪರಿ
ಹೇಳಬಲ್ಲೊಡೆ ನಿನ್ನ ನಿರ್ಮಳಭಾವ ಭೂಮಿಯಲಿ
ಲೀಲೆ ಮಿಗೆ ಶಿವತತ್ವಬೀಜವ
ಹೂಳಿದರೆ ಫಲಿಸುವುದೆನುತೆ ಕರು
ಣಾಳು ವರಗುರುರಾಯನಾ ಮಾದೇವಿಗಿಂತೆಂದ ೨೧

ಆನು ನೀನೆಂಬುಭಯದನುಸಂ
ಧಾನವನು ಮಿಗೆ ಮೀಱೆ ಸಮಸಂ
ಸ್ಥಾನದಲಿ ಸುಯಿಧಾನಿಯಾಗಿ ನಿರಾಳದಲಿ ನಿಂದು
ಜ್ಞಾನಜ್ಯೋತಿಯ ಬೆಳಗಿ ಕಾಯದ
ನೂನ ಕದಳಿಯ ಗೆಲಿದು ನಿನ್ನಲಿ
ನೀನೆ ಮುಕ್ತಿಯನಱಿವುದೈ ಮಾದೇವಿ ಕೇಳೆಂದ ೨೨

ಎನುತಲಾ ಮಾದೇವಿಯಕ್ಕಗೆ
ತನುಮನೋವಾಯುಗಳ ಸಂಚವ
ನನಲನಲಿ ಸಲೆ ಸುಡುವ ಸುಮತಿಯ ಜೀವಪರಮನನು
ಅನುಗೊಳಿಸಿ ನಿರ್ವಯಲ ಮಾಡುವ
ನೆನಹಿನುಪದೇಶವನು ಮಾಡಿದ
ನನುಪಮೋಪಮ ಸಗುಣ ನಿರ್ಗುಣ ಗುರುಗುಹೇಶ್ವರನು ೨೩

ನುಡಿದನು. ೨೧. "ಹಾಲಿನ ಹದಕ್ಕೆ ಅನುಗುಣವಾಗಿ ಹೆರಲು ಹೆಪ್ಪು ಹಾಕಿದರೆ ತುಪ್ಪವನ್ನು ಅನಂತರ ಉಣ್ಣುವರು. ಆ ರೀತಿ, ಹೇಳುವುದಾದರೆ, ನಿನ್ನ ಪವಿತ್ರವಾದ ಭಾವಭೂಮಿಯಲ್ಲಿ ವಿಲಾಸ ಅತಿಶಯವಾಗುವಂತೆ ಶಿವತತ್ವಬೀಜವನ್ನು ಬಿತ್ತಿದರೆ ಫಲಿಸುವುದು ಎಂದು ಹೇಳಿ ಕರುಣಾಳುವೂ ಶ್ರೇಷ್ಠಗುರುರಾಯನೂ ಆದ ಪ್ರಭುವು ಮಾದೇವಿಗೆ [ಮತ್ತೆ] ಹೀಗೆಂದು ಹೇಳಿದನು. ೨೨. "ನಾನು ನೀನು ಎಂಬ ಭಿನ್ನಭಾವವನ್ನು ತೊರೆದು ಏಕೋಭಾವದಲ್ಲಿ ಎಚ್ಚರಿಕೆಯಿಂದ ಕೂಡಿ ಶಾಂತತೆಯಲ್ಲಿ ನಿಂದು, ಜ್ಞಾನಜ್ಯೋತಿಯನ್ನು ಬೆಳಗಿ, ಕಾಯವೆಂಬ ಕದಳಿಯನ್ನು[೧] ಗೆದ್ದು, ನಿನ್ನಲ್ಲಿ ನೀನೇ ಕೈವಲ್ಯವನ್ನು ತಿಳಿಯುವುದು, ಮಾದೇವಿ ಕೇಳು" ಎಂದು ಅಲ್ಲಮನು ನುಡಿದನು. ೨೩. ಹೀಗೆಂದು ಹೇಳಿ ಆ ಮಹಾದೇವಿಯಕ್ಕನಿಗೆ ದೇಹ ಮನಸ್ಸು ಮತ್ತು ಪ್ರಾಣಗಳ ಸಮೂಹವನ್ನು ಮಹಾಜ್ಞಾನಾಗ್ನಿಯಲ್ಲಿ ಚೆನ್ನಾಗಿ ಸುಡುವ ಸುಬುದ್ಧಿಯನ್ನೂ, ಕುಂಭಕದಲ್ಲಿ ಪ್ರಾಣವಾಯುವನ್ನು ಭ್ರೂಮಧ್ಯಸ್ಥಾನದಲ್ಲಿ ಸೇರಿಸುವ ನೆನಹಿನ ಉಪದೇಶವನ್ನೂ ಸರಿಸಾಟಿಯಿಲ್ಲದ ಸಗುಣ ನಿರ್ಗುಣಭರಿತನಾದ ಗುರು ಗುಹೇಶ್ವರನು ಮಾಡಿದನು.

---

೧. ಆನೆಯನ್ನು ; ಅಡವಿಯನ್ನು ; ಕತ್ತಲೆಯನ್ನು (ರಂ)

## ೧೭. ಮಹಾದೇವಿಯಕ್ಕನಿಗೆ ಪ್ರಭು ಪ್ರಸನ್ನನಾದುದು

ಪರುಷ ಮುಟ್ಟಲು ಮುಂದೆ ಕಬ್ಬುನ
ವರುಷದಲಿ ಹೊನ್ನಹುದೆ ನಿಮಿಷಕೆ
ಗುರುನಿರೂಪಜ್ಞಾನಜ್ಯೋತಿಪ್ರಭೆ ಪ್ರಕಾಶಿಸಲು
ಹರಿದುದಾಗಳೆ ಸಂದ ಸಂಶಯ
ನೆರವಿಗತ್ತಲೆ ನಿತ್ಯನಿರ್ಮಳ
ಗಿರಿಯ ಗಹನಕೆ ಗಮಿಸಿದಳು ಮಾದೇವಿ ಮನದೊಳಗೆ ೨೪

ಎಲ್ಲರಲಿ ಶರಣಾರ್ಥಿಯೆಂದೆನು
ತೆಲ್ಲರಲಿ ಹರಕೆಯನು ಕೈಕೊಳು
ತೆಲ್ಲ ಶರಣರ ಚರಣವನು ನೆನಹಿನಲಿ ನೆಲೆಗೊಂಡು
ಉಲ್ಲವಿಸಿ ಮೈಮಣಿದು ಪಸರಿಸಿ
ಪಲ್ಲವಿಸಿ ಮಾದೇವಿ ಬಳಿಕೆ
ಮ್ಮಲ್ಲಮಪ್ರಭುರಾಯರನು ಬೀಳ್ಕೊಂಡಳರ್ತಿಯಲಿ ೨೫

ನಡೆದು ಬಳಿಕೇಕಾಂತವಾಸದೊ
ಳಿಡಿದ ಕಾಯದ ಕದಳಿಯನು ಹೊ
ಕ್ಕಡರಿ ನಿಜಸಿರಿಗಿರಿಯ[೧] ಶಿಖರದ ಸಿದ್ಧಪೀಠದಲಿ
ಬಿಡದೆ ನೆಲಸಿದಳಚಲಪದವಿಯ
ಪಡೆದಳಾ ಮಹದೇವಿ ಸುಖದಲಿ
ಪೊಡವಿಯಱಿಯಲು ಗುರುಗುಹೇಶ್ವರಲಿಂಗ ಲೀಲೆಯಲಿ ೨೬

ಅಂತು ಗತಿ ೧೭ ಕ್ಕಂ ಪದ ೭೫೫ ಕ್ಕಂ ಮಂಗಳಂ

೨೪. ಪರುಷಶಿಲೆ ತಾಗಲು ಮುಂದಿರುವ ಕಬ್ಬಿಣವು ಚಿನ್ನವಾಗುವುದಕ್ಕೆ ವರ್ಷವಾಗುತ್ತದೆಯೆ? ಒಂದು ನಿಮಿಷ ಗುರುವಿನಿಂದ ನಿರೂಪಿತವಾದ ಜ್ಞಾನವೆಂಬ ದೀಪದ ಪ್ರಭೆ ಬೆಳಗಲು ಆ ಕ್ಷಣವೆ ಹೆಚ್ಚಿನ ಸಂಶಯಗಳೆಂಬ ಮಬ್ಬುಗತ್ತಲೆ ಕರಗಿ ಹೋಯಿತು. ಹುಟ್ಟು ಸಾವುಗಳಿಲ್ಲದ ಪವಿತ್ರವಾದ, ಭೇದಿಸಲು ಅಸಾಧ್ಯವಾದ ಗಿರಿಯ ಎಡೆಗೆ[೧] ಮನದಲ್ಲೇ ಮಾದೇವಿ ನಡೆದಳು. ೨೫. ಎಲ್ಲರಿಗೂ ಶರಣಾರ್ಥಿ ಎಂದು ಹೇಳುತ್ತಾ, ಎಲ್ಲರಿಂದ ಆಶೀರ್ವಾದವನ್ನು ಸ್ವೀಕರಿಸುತ್ತಾ, ಎಲ್ಲ ಶರಣರ ಪಾದಸ್ಮರಣೆ ಮಾಡುತ್ತಾ ಉತ್ಸಾಹಗೊಂಡು ದೇಹವನ್ನು ಬಾಗಿಸಿ, [ಅಡ್ಡಬಿದ್ದು] ಬಳಿಕ ಮಾದೇವಿಯು ನಮ್ಮ ಅಲ್ಲಮಪ್ರಭುರಾಯನನ್ನು ಪ್ರೀತಿಯಿಂದ ಬೀಳ್ಕೊಂಡಳು. ೨೬. ಬಳಿಕ ನಡೆದು ಏಕಾಂತವಾಸವನ್ನು ಕೈಗೊಂಡು ಕಾಯದ ಕದಳಿಯನ್ನು[೨] ಪ್ರವೇಶಿಸಿ, ಮುಕ್ತಿಶ್ರೀ ಪರ್ವತವನ್ನು ಏರಿ, ಅದರ ಶಿಖರದ ಸಿದ್ಧಪೀಠದಲ್ಲಿ ಬಿಡದೆ ನೆಲಸಿ, ಜಗತ್ತೇ ತಿಳಿಯುವಂತೆ ಗುರುವಾದ ಗುಹೇಶ್ವರಲಿಂಗದ ಲೀಲೆಯಿಂದ ಮಹದೇವಿ ಸುಖದಿಂದ ಅಚಲವಾದ ಪದವಿಯನ್ನು ಪಡೆದಳು.

---

೧. ಹೃದಯ ಗುಹೆಯಲ್ಲಿ ನೆಲೆಸಿದ ಪರಮತತ್ತ್ವದೆಡೆಗೆ : ಶ್ರೀಶೈಲಪರ್ವತಕ್ಕೆ (ರಂ)

೨. ಶ್ರೀ ಶೈಲಪರ್ವತವನ್ನು (ರಂ)

# ೧೮. ಸಾಧಕಾಂಗ

ಗತಿ ೧೮

ಸೂಚನೆ : ಬಸವರಾಜಗೆ ಸಾಧಕಾಂಗದ
ಬೆಸುಗೆಯನುವಿನ ಭೇದವನು ಬೋ
ಧಿಸಿದನೆಮ್ಮಯ ಗುರುಗುಹೇಶ್ವರಲಿಂಗ ಲೀಲೆಯಲಿ

ಆರು ಮೊದಲಲಿ ಭಕ್ತಿಮಾರ್ಗದ
ದಾರಿಯನು ಸಲೆ ತೆಱಹುಮಾಡಿ ಮ
ನೋರಥವ ಹಡೆವವರು ಕಾಯದ ಕೀಲನಱಿವವರು
ಕಾರಣಂಗಳ ಮೂಲವನು ಕ
ಣ್ಣಾರೆ ಕಾಂಬ ಮಹಾಂತರುಗಳವ
ಧಾರಿಪುದು ಮುದದಿಂದಲೀ ಪ್ರಭುಲಿಂಗಲೀಲೆಯನು ೧

ನಿಲಿಸಿ ನಿರ್ವಯಲಿನ ಸಮಾಧಿಯ
ನಳವಡಿಸಿ ಮಹದೇವಿಯಕ್ಕನ
ಕಳುಹಿ ತದನಂತರದಲಗ್ಗದ ಬಸವರಾಜಂಗೆ
ತಿಳುಹುವೆನು ಶಿವತತ್ತ್ವಭಕ್ತಿಯ
ಬಳಕೆಯನುಭಾವದ ವಿವೇಕ
ಸ್ಥಲವನೆಂದೆನುತಲ್ಲಮಪ್ರಭುರಾಯನಿಂತೆಂದ ೨

ಸೂ : ಬಸವರಾಜನಿಗೆ ಅಂಗಲಿಂಗಗಳ ಸಂಯೋಗದ ವಿಧಾನವನ್ನು ನಮ್ಮ ಗುರು ಗುಹೇಶ್ವರಲಿಂಗನು ತನ್ನ ಲೀಲೆಯಲ್ಲಿ ಬೋಧಿಸಿದನು. ೧. ಯಾರು ಮೊದಲಿಗೆ ಭಕ್ತಿಮಾರ್ಗದ ದಾರಿಯನ್ನು ಚೆನ್ನಾಗಿ ಬಿಡುವುಮಾಡಿಕೊಂಡು ಮನಸ್ಸಿನ ಬಯಕೆಗಳನ್ನು ಪಡೆಯುವರೋ, ದೇಹದ ಕೀಲಗಳನ್ನು ತಿಳಿಯುವರೊ, ಕರ್ಮಕ್ಕೆ ಬೇಕಾದ ಆಧಾರಗಳ ಮೂಲವನ್ನು ಕಣ್ಣಾರೆ ಕಾಣುವರೋ ಅಂತಹ ಮಹಂತರುಗಳು ಈ ಪ್ರಭುಲಿಂಗಲೀಲೆಯನ್ನು ಪ್ರೀತಿಯಿಂದ ಕೇಳುವುದು. ೨. ಮಹದೇವಿಯಕ್ಕನನ್ನು ಕಲ್ಯಾಣದಲ್ಲಿ ಸ್ವಲ್ಪಕಾಲ ನಿಲ್ಲಿಸಿಕೊಂಡು, ಶೂನ್ಯಸಮಾಧಿಯನ್ನು ಹೊಂದುವ ಬಗೆಯನ್ನು ತಿಳಿಸಿ, ಅವಳನ್ನು ಬೀಳ್ಕೊಟ್ಟು, ಅನಂತರ ಶ್ರೇಷ್ಠನಾದ ಬಸವರಾಜನಿಗೆ ಶಿವತತ್ತ್ವ, ಶಿವಭಕ್ತಿಯ ಬಳಕೆಯನ್ನು, ಅನುಭಾವದ ವಿವೇಕಸ್ಥಲವನ್ನು ತಿಳಿಸುವೆನು ಎಂದೆನ್ನುತ್ತ ಅಲ್ಲಮಪ್ರಭುರಾಯನು ಹೀಗೆಂದನು.

ಒಸೆದು ತಾ ಹಿಡಿದಿಷ್ಟಲಿಂಗದ
ಬೆಸನದಲಿ ಗುರು ಲಿಂಗ ಜಂಗಮ
ವಶದಲಿಂತಿರುತಿರಲಿಕಂತಃಕರಣವೃತ್ತಿಗಳ
ಬೆಸುಗೆ ಬಿಡುವುದು ಪ್ರಾಣಲಿಂಗದ
ದೆಸೆಗೆ ಮನವೆಳಸುವುದು ಮಾಯೆಯ
ಮಸಕವೆಲ್ಲವು ಮಾದು ಹೋಹುದು ಬಸವ ಕೇಳೆಂದ ೩

ದೇವ ಚಿತ್ತೈಸಾದೊಡಾನಿ
ನ್ನಾವ ಪರಿಯಲಿ ಭಕ್ತಿಭರಸಂ
ಭಾವಿಯಹೆನೈ ಸಹಜ ಭಕ್ತಿಯನಜೆವ ಪರಿಯೆಂತು
ಈ ವಿಕಾರವ ಕಳೆದು ಕಾಯಕ
ಳಾವಿಳಾಸವ ತಿಳಿದು ನಿಖಿಲ ನಿ
ರಾವಲಂಬವನೆಂತು ಕಾಂಬೆನು ಗುರುವೆ ಹೇಳೆಂದ ೪

ಉಣ್ಣೆ ಕೆಚ್ಚಲಲೇಸುದಿನವಿ
ದ್ದಣ್ಣೆವಾಲುಣಬಲ್ಲುದೇ ಕೇ
ಳೆನ್ನ ಭಕ್ತಿದ್ವಾರವನು ಹುಗದನ್ಯಮಾರ್ಗದಲಿ
ಕಣ್ಣುಗಾಣದೆ ನಡೆದರದಜಲಿ
ನನ್ನನಜೆವುದು ಹುಸಿ ಕಣಾ ಬಸ
ವಣ್ಣ ಕೇಳೆನುತಲ್ಲಮಪ್ರಭುರಾಯನಿಂತೆಂದ ೫

ಗಿಡುವಳುಕೆ ಹೂ ಪತ್ರೆಗೋಸುಗ
ಮಡು ನಡುಗೆಯಗ್ಗವಣಿಗೋಸುಗ
ಸುಡಿದು ಉಪಹಾರಕ್ಕೆ ಸಕಲೌಷಧಿ ವನಸ್ಪತಿಯ
ಕೆಡಿಸುತೀ ಪರಿ ಹೆಜಿರುಗಳ ತ
ನ್ನೊಡಲ ವಂಚಿಸಿ ಬಾಹ್ಯಭಕ್ತಿಯು
ನಡೆವವರನಾ ಮೆಚ್ಚೆನೈ ಬಸವಣ್ಣ ಕೇಳೆಂದ ೬

೩. "ಪ್ರೀತಿಯಿಂದ ತಾನು ಹಿಡಿದ ಇಷ್ಟಲಿಂಗದ ಅಪ್ಪಣೆಯಂತೆ ಗುರು ಲಿಂಗ ಜಂಗಮಗಳಿಗೆ ವಶವಾಗಿ ಇರುತ್ತಿರಲು ಅಂತಃಕರಣವೃತ್ತಿಗಳ ಬೆಸುಗೆ ಬಿಡುವುದು. ಪ್ರಾಣಲಿಂಗದ ಕಡೆಗೆ ಮನವು ಬಯಸುವುದು. ಮಾಯೆಯ ಅಬ್ಬರವೆಲ್ಲವೂ ಅಡಗಿಹೋಗುವುದು, ಬಸವ ಕೇಳು" ಎಂದು ಅಲ್ಲಮನು ನುಡಿದನು. ೪. "ದೇವಾ ಕೃಪೆಮಾಡು, ನಾನು ಇನ್ನಾವ ರೀತಿಯಲ್ಲಿ ಹೆಚ್ಚಾದ ಭಕ್ತಿಯನ್ನು ಗೌರವಿಸುವವನಾಗುವೆ? ಸಹಜಭಕ್ತಿಯನ್ನು ತಿಳಿಯುವ ರೀತಿ ಯಾವುದು? ಈ ಮನೋವಿಕಾರಗಳನ್ನು ನಿವಾರಿಸಿ ಕಾರ್ಯಕಲಾವಿಲಾಸವನ್ನು ತಿಳಿದು ಸರ್ವದರಲ್ಲೂ ಯಾವುದಕ್ಕೂ ಅಂಟಿಕೊಳ್ಳದ ಸ್ಥಿತಿಯನ್ನು ಹೇಗೆ ಕಾಣುವೆನು? ಗುರುವೆ ಹೇಳು" ಎಂದು ಬಸವಣ್ಣನು ಪ್ರಭುವನ್ನು ಪ್ರಾರ್ಥಿಸಿದನು. ೫. "ಉಣ್ಣೆ ಕೆಚ್ಚಲಿನಲ್ಲಿ ಎಷ್ಟು ದಿನವಿದ್ದರೂ ಶುದ್ಧವಾದ ಹಾಲನ್ನು ಸವಿಯಬಲ್ಲುದೆ? ಕೇಳು, ನನ್ನ ಭಕ್ತಿಯ ಬಾಗಿಲನ್ನು ಪ್ರವೇಶಿಸದೆ ಅನ್ಯಮಾರ್ಗದಲ್ಲಿ ಕಣ್ಣುಗಾಣದೆ ನಡೆದರೆ ಅದರ ಮೂಲಕ ನನ್ನನ್ನು ತಿಳಿಯುವುದು ಸುಳ್ಳು, ಬಸವಣ್ಣಾ ಕೇಳು" ಎಂದು ಅಲ್ಲಮಪ್ರಭುರಾಯ ಹೀಗೆಂದನು. ೬. "ಹೂ ಪತ್ರೆಗಳಿಗೋಸ್ಕರ ಗಿಡಗಳನ್ನು ಅಲ್ಲಾಡಿಸುತ್ತ, ಪೂಜಾರ್ಘವಾದ ನೀರಿಗೋಸ್ಕರ ಹೊಂಡವನ್ನು ಕದಡುತ್ತ, ಆಹಾರಕ್ಕಾಗಿ ಸಸಿಗಳನ್ನು ಕಡಿದು ಕೆಡಿಸುತ್ತ-ಈ

ತೇಗು ಬಿಕ್ಕುಳು ಸೀನು ಉದುಗರ
ವಾಗಳಿಕೆಯಾಲಸ್ಯ ಕೆಮ್ಮುಗ್ಗ
ಳೋಗಡಿಕೆ ಮದ ನಿದ್ರೆ ತೂಕಡು ಕನಸು ಕಳವಳಿಕೆ
ಆಗುಹೋಗೆಂದೆಂಬ ಗೊಡವೆಯ
ನೀಗಿ ನಮ್ಮಯ ಸಿದ್ಧರಾಮನ
ಲಾಗಿನಂತಿರಬೇಕು ಭಕ್ತರು ಬಸವ ಕೇಳೆಂದ ೭

ಉಸುರು ಗರಗಸದಲ್ಲಿ ತನುವಿನ
ಬೆಸುಗೆಯನು ಬಿಡುಮಾಡಿ ಬಿಸುಡದೆ
ಹಸು ತೃಷೆಯ ಹರಿಹುಗಿಲಿನುಪಟಳಕಂಜಿ ಮುಖಗೊಡದೆ
ದಶವಿಧೇಂದ್ರಿಯ ದಾಳಿಯಲಿ ಶಂ
ಕಿಸದೆ ನಿಲುವೊಡೆ ಸಿದ್ಧರಾಮನ
ದೆಸೆಯ ನೆನೆಯಲು ಭಕ್ತರಹರೈ ಬಸವ ಕೇಳೆಂದ ೮

ದೇವದೇವ ಮಹಾಪ್ರಸಾದವಿ
ದಾವ ಶಬ್ದವ ಚಿತ್ತವಿಸಿದಿರಿ
ನೀವು ನಿಮ್ಮಯ ಕಿಂಕರರೊಳಿನ್ನಾರ ಹೋಲುವೆನು
ದೇವ ನೀ ಮನ್ನಿಸಿದೊಡಧಮನೆ
ಪಾವನಾತ್ಮಕನಲ್ಲದೊಡೆ ಜಡ
ಜೀವರಿಂದತಿಕಷ್ಟವೆಂದನು ಸಿದ್ಧರಾಮಯ್ಯ ೯

ರೀತಿ ಇತರರನ್ನು ನಾಶಮಾಡುತ್ತ, ತನ್ನ ದೇಹವನ್ನು ವಂಚಿಸಿ ಬಾಹ್ಯಭಕ್ತಿಯನ್ನು ಆಚರಿಸುವವರನ್ನು ನಾನು ಮೆಚ್ಚೆನು, ಬಸವಣ್ಣಾ ಕೇಳು" ೭. "ಭಕ್ತರಾದವರು ತೇಗು, ಬಿಕ್ಕಳು, ಸೀನು, ವಾಂತಿ, ಆಕಳಿಕೆ, ಆಲಸ್ಯ, ಕೆಮ್ಮು ಜಿಗುಪ್ಸೆ, ಮದ, ನಿದ್ರೆ, ತೂಕಡಿಕೆ, ಕನಸು, ಚಿಂತೆ, ಆಗು ಹೋಗುಗಳ ವ್ಯಸನ-ಇವೆಲ್ಲವನ್ನು ಕಳೆದು ನಮ್ಮ ಸಿದ್ಧರಾಮನ ಎಚ್ಚರಸ್ಥಿತಿಯಲ್ಲಿರಬೇಕು" ೮. "ಉಸಿರೆಂಬ ಗರಗಸದಿಂದ ತನುವಿನ ಬೆಸುಗೆ ಬಿಡುವಂತೆ ಮಾಡದೆ,[೧] ಹಸಿವೆ ಬಾಯಾರಿಕೆಗಳಿಗೆ ಹೆದರಿ ಹಿಂಜರಿಯದೆ, ದಶೇಂದ್ರಿಯಗಳ ದಾಳಿಯಲ್ಲಿ ಧೈರ್ಯಗೆಡದೆ ನಿಲ್ಲಬೇಕಾದರೆ, [ಅಂತಹ] ಸಿದ್ಧರಾಮನ ಸ್ಥಿತಿಯನ್ನು ಧ್ಯಾನಿಸಿದರೆ ಭಕ್ತರಾಗುವರು, ಬಸವ ಕೇಳು" ಎಂದು ಪ್ರಭುವು ನುಡಿದನು. ೯. "ದೇವಾ, ಮಹಾಪ್ರಸಾದ. ಇದಾವ ಮಾತನ್ನು ಹೇಳಿದಿರಿ ನೀವು? ನಿಮ್ಮ ಸೇವಕರಲ್ಲಿ ಯಾರನ್ನು ನಾನು ಹೋಲುವೆನು. ದೇವಾ, ನೀವು ಮನ್ನಿಸಿದರೆ ನೀಚನೇ ಪರಿಶುದ್ಧಾತ್ಮನಾಗುವನು. ನೀವು ಮನ್ನಿಸದಿದ್ದರೆ ಜಡಜೀವರಿಗಿಂತ ಕನಿಷ್ಠನಾಗುವನು" ಎಂದು ಸಿದ್ಧರಾಮಯ್ಯನು

---

೧. ಸುಮ್ಮನೆ ಉಸಿರಾಡಿ ದೇಹವನ್ನು ಸವೆಸಿದೆ (ರಂ)

ಪರಮ ಪೂರ್ವಾಚಾರ್ಯ ಬಸವೇ
ಶ್ವರನು ಘನ ಗುರು ಚೆನ್ನಬಸವನು
ನಿರುಪಮ ಜ್ಞಾನೈಕನಿಧಿ ಮಡಿವಾಳ ಮಾಚಯ್ಯ
ವರ ಮಹಾಗಣ ತಿಂತಿಣಿಯೊಳನಿ
ಬರೊಳು ಗಣಿಸುವೊಡಾನದೇಸಱ
ಹುರುಳು ಹೇಳಾ ದೇವ ಎಂದನು ಸಿದ್ಧರಾಮಯ್ಯ ೧೦

ಪೂತು ಮಝುರೇ ಸಿದ್ಧರಾಮನ
ಮಾತು ತಪ್ಪದು ಭಕ್ತರುಪಮಾ
ತೀತರಹುದೈ ಬಸವ ಮಡಿವಳ ಚೆನ್ನಬಸವಣ್ಣ
ಈತಗಳು ಸಾಕ್ಷಾತ ಲೋಕ
ಖ್ಯಾತ ಪುರುಷರು ಸತ್ಯವೆನುತ ಪು
ರಾತರನು ಮಿಗೆ ಹೊಗಳುತಾ ಪ್ರಭುರಾಯನಿಂತೆಂದ ೧೧

ಆದಿಪುರುಷನು ಬಸವರಾಜನ
ನಾದಿಪುರುಷನು ಬಸವರಾಜನು
ನಾದಪುರುಷನು ಬಸವರಾಜನು ಬಸವರಾಜನನು
ವೇದಶಾಸ್ತ್ರಗಳಱಿಸಲಱಿಯದೆ
ಹೋದುವೆನುತಲಿ ಬಸವರಾಜನ
ನೆಯ್ದೆ ಹೊಗಳುತಲಲ್ಲಮಪ್ರಭುರಾಯನಿಂತೆಂದ ೧೨

ಆದೊಡಾಲಿಸಿ ಕೇಳು ಭಕ್ತಿಯ
ಹಾದಿಗೊಂದೇ ಕೀಲು ದಿಟ ಬೇ
ಕಾದುದೀ ತನು ತನುವಿಡಿದು ಕಾಬುದು ಸಮಸ್ತವನು
ಆದರಿಸಿಯೇ ತನುವ ಲಿಂಗೋ
ಪಾದಿಯಲಿ ಜೋಗೈಸಿಕೊಳುತಲಿ
ಸಾಧಿಸುವುದು ಸಮಾಧಿಯನು ಬಸವಣ್ಣ ಕೇಳೆಂದ ೧೩

ಪ್ರಭುವಿಗೆ ನುಡಿದನು. ೧೦. "ಪರಮಪೂರ್ವಾಚಾರ್ಯನಾದ ಬಸವೇಶ್ವರನು, ಹಿರಿಯ ಗುರುವಾದ ಚನ್ನಬಸವನು, ಉಪಮಾತೀತ ಜ್ಞಾನನಿಧಿಯಾದ ಮಡಿವಾಳ ಮಾಚಯ್ಯನು, ಈ ಶ್ರೇಷ್ಠ ಮಹಾಗಣಗಳ ಸಮೂಹದಲ್ಲಿ ಲೆಕ್ಕಿಸುವುದಾದರೆ ನಾನು ಯಾವ ತಿರುಳು? ಹೇಳಾ, ದೇವ" ಎಂದು ಸಿದ್ಧರಾಮಯ್ಯನು ಪ್ರಭುವನ್ನು ಕೇಳಿದನು. ೧೧. "ಭೇಷ್, ಭೇಷ್ ಸಿದ್ಧರಾಮನ ಮಾತು ಸುಳ್ಳಲ್ಲ. ಭಕ್ತರು ಉಪಮೆಗೆ ನಿಲುಕದವರಾಗಿರುವರು. ಬಸವ, ಮಡಿವಳ ಮಾಚಿದೇವ, ಚನ್ನಬಸವಣ್ಣ-ಇವರುಗಳು ಸಾಕ್ಷಾತ್ ಲೋಕಪ್ರಸಿದ್ಧ ಪುರುಷರು. ಇದು ಸತ್ಯ" ಎಂದು ಪುರಾತನರನ್ನು ಅತಿಶಯವಾಗಿ ಹೊಗಳುತ್ತಾ ಪ್ರಭುರಾಯನು ಹೀಗೆಂದನು. ೧೨. "ಬಸವರಾಜನು ಆದಿಪುರುಷ. ಅವನು ಆದಿರಹಿತನಾದ ಪುರುಷ ಪ್ರಣವನಾದ ಸ್ವರೂಪನು. ವೇದ ಶಾಸ್ತ್ರಗಳು ಅವನನ್ನು ತಿಳಿಯಲಾಗದೆ ಹೋದುವು" ಎಂದು ಬಸವರಾಜನನ್ನು ವಿಶೇಷವಾಗಿ ಹೊಗಳುತ್ತ ಅಲ್ಲಮಪ್ರಭುರಾಯ ಹೀಗೆಂದನು. ೧೩. "ಹಾಗಾದರೆ ಕಿವಿಗೊಟ್ಟು ಕೇಳು. ಭಕ್ತಿಯ ಮಾರ್ಗಕ್ಕೆ ಒಂದೇ ಉಪಾಯ. ನಿಜವಾಗಿಯೂ ಅವಶ್ಯವಾದುದು ಈ ದೇಹ. ದೇಹವನ್ನು

ಅನುಶ್ರವಣ ಮನನದ ನಿಧಿದ್ಯಾ
ಸನದಲೊಚ್ಚತನಾಗಿ ತನ್ನಯ
ತನು ಮನೋವಾಕ್ಕಾಯ ಕರ್ಮಗಳೊಂದು ಹುರಿಯಾಗಿ
ನೆನಹು ನೆಲೆಗೊಂಡಾ ಮಹಾತ್ಮಗೆ
ಘನವದಾವುದು ಗಮಿಸಿದರೆಯಾ
ತನೆ ಕಣಾ ಸ್ವಾತಂತ್ರಭಕ್ತನು ಬಸವ ಕೇಳೆಂದ ೧೪

ತನ್ನೊಳಗೆ ಗುರು ಲಿಂಗ ಜಂಗಮ
ತನ್ನೊಳಗೆ ಪಾದೋದಕಾಮೃತ
ತನ್ನೊಳಗೆ ಪರಮಪ್ರಸಾದ ಸಮಸ್ತವೆಲ್ಲವನು
ತನ್ನೊಳಱಿಯದೆಯಿದಿರೊಳಱಸುವ
ಭಿನ್ನಭಾವಭ್ರಾಂತಭವಿಗಳು
ನನ್ನ ಸಾಧಿಸಲಱಿಯರೈ ಬಸವಣ್ಣ ಕೇಳೆಂದ ೧೫

ಅದು ನಿಮಿತ್ತದಲಂತರಂಗದ
ಪದರದೊಳು ಗುರು ಲಿಂಗ ಜಂಗಮ
ದೊದವನಾ ಪಾದೋದಕಾಮೃತ ಸುಪ್ರಸಾದವನು
ಹೃದಯದಲಿ ಕಾಂಬನ್ನಬರ ತ
ಮ್ಮಿದಿರಿನಲಿ ಪೂಜಿಪರಲ್ಲೈ ಪ್ರತಿ
ನಿಧಿಯ ನಿಯಮಿಸಿ ಪೂರ್ವಪುರುಷರು ಬಸವ ಕೇಳೆಂದ ೧೬

ವ್ಯಾಧಿಗಳ ನೆಱಿ ಗೆಲಿದು ಶೀತೋ
ಷ್ಣಾದಿಗಳ ಪರಿಹರಿಸಿ ತಾಗು ನಿ
ರೋಧವೆಲ್ಲವ ನೀಗಿ ನಿಂದಾಸ್ತುತಿಗೆ ಸಮನಾಗಿ
ಐದು ಮುಖದಲಿ ಹರಿವ ಮನವನು
ಸೇದಿ ನಿಶ್ಚಲವೆನಿಸಿ ಸತ್ಯಸ
ಮಾಧಿಯಲಿ ನಿಂದವನೆ ಭಕ್ತನು ಬಸವ ಕೇಳೆಂದ ೧೭

ಆಶ್ರಯಿಸಿ ಎಲ್ಲವನ್ನೂ ಕಾಣುವುದು. ಈ ದೇಹವನ್ನು ಪೋಷಿಸಿ ಲಿಂಗದೋಪಾದಿಯಲ್ಲಿ ಜೋಕೆಮಾಡುತ್ತಾ ಏಕಾಗ್ರಚಿತ್ತವನ್ನು ಸಾಧಿಸುವುದು. ಬಸವಣ್ಣ ಕೇಳು" ಎಂದು ಅಲ್ಲಮನು ನುಡಿದನು. ೧೪. "ಕ್ರಮವಾಗಿ ಶ್ರವಣ, ಮನನ, ನಿಧಿಧ್ಯಾಸನಗಳಲ್ಲಿ ಐಕ್ಯನಾಗಿ ತನ್ನ ದೇಹ ಮನ ಮಾತು ಕ್ರಿಯೆಗಳು ಒಂದಾಗಿ ಧ್ಯಾನ ನೆಲೆಯನ್ನು ಕಂಡುಕೊಂಡ ಮಹಾತ್ಮನಿಗೆ ದೊಡ್ಡದಾವುದು? [ಹೀಗೆ] ನಡೆದಾತನೆ ಯಾವ ಹಂಗುಗಳೂ ಇಲ್ಲದ ಪರಿಪೂರ್ಣ ಭಕ್ತನಲ್ಲವೆ, ಬಸವ ಕೇಳು" ಎಂದನು. ೧೫. "ತನ್ನಲ್ಲೇ ಗುರು ಲಿಂಗ ಜಂಗಮ; ತನ್ನಲ್ಲೇ ಪಾದೋದಕಾಮೃತ; ತನ್ನಲ್ಲೇ ಶ್ರೇಷ್ಠವಾದ ಪ್ರಸಾದ; [ಹೀಗೆ] ಸರ್ವಸ್ವವೂ ತನ್ನಲ್ಲೇ [ಇರುವುದನ್ನು] ತಿಳಿಯದೆ ಇದಿರಿನಲ್ಲಿ ಹುಡುಕುವ ಭಿನ್ನವಾದ ಭಾವವುಳ್ಳ ಮರುಳು ಭವಿಗಳು ನನ್ನ ನಿಲುವನ್ನು ಸಾಧಿಸಲು ಶಕ್ತರಲ್ಲ, ಬಸವಣ್ಣ ಕೇಳು" ಎಂದನು. ೧೬. "ಅದು ಕಾರಣ ಅಂತರಂಗದ ಪದರದಲ್ಲಿ ಗುರು ಲಿಂಗ ಜಂಗಮ ಪಾದೋದಕಾಮೃತ ಸುಪ್ರಸಾದಗಳನ್ನು ಹೃದಯದಲ್ಲಿ ಕಾಣುವವರೆವಿಗೆ ಪುರಾತನಭಕ್ತರು ತಮ್ಮೆದುರಿಗೇ ಪ್ರತಿನಿಧಿಯನ್ನು ನೇಮಿಸಿ ಪೂಜಿಸುವರು, ಬಸವ ಕೇಳು" ಎಂದನು. ೧೭. "ರೋಗಗಳನ್ನು ಗೆದ್ದು, ಶೀತ ಉಷ್ಣಗಳನ್ನು ನಿವಾರಿಸಿ, ಅಡೆ ತಡೆಗಳೆಲ್ಲವನ್ನು ಪರಿಹರಿಸಿ, ನಿಂದೆ ಸ್ತುತಿಗಳನ್ನು

ಮನವನೊಬ್ಬುಳಿ ಮಾಡಿದಲ್ಲದೆ
ತನುವಿನೊಳಗನು ಕಾಣಬಾರದು
ತನುವಿನೊಳಗನು ಕಾಣದಿರ್ದೊಡೆ ಭಕ್ತಿರತಿಯಿಲ್ಲ
ವಿನುತ ಭಕ್ತಿಯ ರತಿಯ ಕಾಣದೆ
ಘನವನೆಯ್ದಲು ಬಾರದಂತಾ
ಘನವ ಬೆರಸದೆ ಮುಕ್ತಿಯಾಗದು ಬಸವ ಕೇಳೆಂದ ೧೮

ವಾರುವನನೇಱುವೊಡೆ ವಾಘೆಯ
ದಾರವನು ಹಿಡಿದಲ್ಲದಾಗದು
ಧೀರತನದಲಿ ಸಂಚಲಿಸುತಿಹ ಮನವ ನಿಲಿಸುವೊಡೆ
ಮಾರುತನ ಗತಿಗೆಡಿಸಿ ಕಾಯದ
ಕಾರಣವನಱಿದಲ್ಲದಾಗದು
ವೀರಶೈವದ ಬಟ್ಟೆಯಿದು ಬಸವಣ್ಣ ಕೇಳೆಂದ ೧೯

ಮಾಯೆಯೆಂಬುದು ಮನವು ಮನವೇ
ವಾಯುವಾಗಿಹುದಾ ಮನಸ್ಸೇ
ವಾಯುರೂಪಾಗಿರುತಲಿಹುದಾ ವಾಯು ಹರಿದಾಡಿ
ಕಾಯವನು ಕಂಗೆಡಿಸಿ ಭಕ್ತಿಯ
ಬಾಯ ಕಾಣಿಸಲೀಯದಂತಾ
ವಾಯುವನೆ ಗೆಲುವವನೆ ಭಕ್ತನು ಬಸವ ಕೇಳೆಂದ ೨೦

ಒಂದಾಗಿ ಸ್ವೀಕರಿಸಿ, ಐದು ದಾರಿಗಳಲ್ಲಿ [ಪಂಚ ಇಂದ್ರಿಯಗಳಲ್ಲಿ] ಹೋಗುವ ಮನಸ್ಸನ್ನು ಅಲುಗಾಡದಂತೆ ಬಿಗಿದು ನಿಜಸಮಾಧಿಯಲ್ಲಿ ನಿಂತವನೆ ಭಕ್ತನು, ಬಸವ ಕೇಳು" ಎಂದನು. ೧೮. "ಮನಸ್ಸನ್ನು ಒಟ್ಟುಗೂಡಿಸಿದಲ್ಲದೆ ದೇಹದ ಅಂತರಂಗವನ್ನು ಕಾಣಲಾಗದು. ದೇಹದ ಅಂತರಂಗವನ್ನು ಕಾಣದಿದ್ದರೆ ಭಕ್ತಿಯಲ್ಲಿ ಪ್ರೀತಿಯಿಲ್ಲ. ಪ್ರಸಿದ್ಧವಾದ ಭಕ್ತಿಯ ಪ್ರೀತಿಯನ್ನು ಕಾಣದೆ ಪರಬ್ರಹ್ಮವನ್ನು ಮುಟ್ಟಲು ಸಾಧ್ಯವಿಲ್ಲ. ಆ ಪರಬ್ರಹ್ಮವನ್ನು ಕೂಡದೆ ಮುಕ್ತಿಯಿಲ್ಲ" ಎಂದನು. ೧೯. "ಕುದುರೆಯನ್ನು ಹತ್ತಲು ಕಡಿವಾಣದ ಹಗ್ಗವನ್ನು ಹಿಡಿದಲ್ಲದೆ ಆಗದು. ಧೈರ್ಯದಿಂದ ಕೂಡಿ ಚಂಚಲಗೊಂಡಿರುವ ಮನಸ್ಸನ್ನು ನಿಲ್ಲಿಸುವುದಾದರೆ ವಾಯುವಿನ ದಿಕ್ಕು ತಪ್ಪಿಸಿ ದೇಹದ ಕಾರಣವನ್ನು ತಿಳಿದಲ್ಲದೆ ಆಗದು, ವೀರಶೈವ ಮಾರ್ಗವಿದು, ಬಸವಣ್ಣ ಕೇಳು" ಎಂದನು. ೨೦. "ಮಾಯೆ ಎನ್ನುವುದು ಮನಸ್ಸು. ಮನಸ್ಸೇ ವಾಯುವಾಗಿರುವುದು.[೧] ಮನಸ್ಸೇ ವಾಯುರೂಪವಾಗಿರುತ್ತಿರುವುದು. ಆ ವಾಯು ಸುತ್ತಾಡಿ ದೇಹವನ್ನು ಕಂಗೆಡಿಸಿ ಭಕ್ತಿಯ ಮುಖವನ್ನು ಕಾಣಿಸಲು ಅವಕಾಶ ಮಾಡಿಕೊಡದು. ಹಾಗಿರುವ ಆ ವಾಯುವನ್ನು ಗೆಲ್ಲುವವನೇ ಭಕ್ತನು, ಬಸವ ಕೇಳು" ಎಂದನು.

---

೧. ಮನಸ್ಸು ವಾಯುವಿನಂತೆ ಚಂಚಲ; ಚಂಚಲವಾದ್ದರಿಂದ ಭಕ್ತಿಗೆ ಅಡ್ಡಿಯಾಗುತ್ತದೆ (ರಂ)

ಹೇಳುವೊಡೆ ಮನವೆಂಬ ಹಕ್ಕಿಗೆ
ಕಾಲುಗಳೆಲ್ಲೈ ತೊಳಲುತಿಹ ಕ
ಣ್ಣಾಲಿಗಳು ದಿಟವದಕೆ ಪಕ್ಕಗಳೀಡೆ ಪಿಂಗಳದ
ಗಾಳಿಯಾಗಿಹುದಂತುಕಾರಣ
ವಾಲಿಯೇ ಸಾಧನಕೆ ಸಾಧನ
ಮೂಲವನು ನಿಲಿಸುವವನೆ ಭಕ್ತನು ಬಸವ ಕೇಳೆಂದ ೨೧

ಆಲಿ ನಿಂದೊಡೆ ಸುಳಿದು ಸೂಸುವ
ಗಾಳಿ ನಿಲುವುದು ಗಾಳಿ ನಿಲೆ ಮನ
ಮೇಲೆ ನಿಲುವುದು ಮನವು ನಿಂದೊಡೆ ಬಿಂದು ನಿಂದಿಹುದು
ಲೀಲೆಯಿಂದಾ ಬಿಂದು ನಿಂದೊಡೆ
ಕಾಲಕರ್ಮವ ಗೆದ್ದು ಮಾಯೆಯ
ಹೇಳಹೆಸರಿಲ್ಲೆನಿಸಬಹುದೈ ಬಸವ ಕೇಳೆಂದ ೨೨

ಅಂಗಭೂಮಿಯಲನ್ನ ಬೀಜವ
ಲಿಂಗನೆನಹಿನಲಿಕ್ಕಿ ಜಲಪಾ
ನಂಗಳಿಂದವೆ ಸಪ್ತಧಾತು ಸಮೇಳದಲಿ ಬೆಳೆಸಿ
ಹಿಂಗದೊದವಿದ ಬಿಂದುಫಲವನ
ನಂಗನೀಯದೆ ವಿಮಲವೆನಿಸಿಯೆ
ಸಂಗಡಿಸಿಕೊಂಡಿಹನೆ ಭಕ್ತನು ಬಸವ ಕೇಳೆಂದ ೨೩

೨೧. "ಹೇಳುವುದಾದರೆ ಮನಸ್ಸೆಂಬ ಹಕ್ಕಿಗೆ ಚಂಚಲವಾದ ಕಣ್ಣುಗುಡ್ಡೆಗಳೇ ಕಾಲುಗಳು; ನಿಜವಾಗಿಯೂ ಅದಕ್ಕೆ ಈಡಾ, ಪಿಂಗಳ ಗಾಳಿಗಳೇ ಪಕ್ಕಗಳು. ಆದಕಾರಣ ಕಣ್ಣುಗಳೇ ಅಭ್ಯಾಸಕ್ಕೆ ಉಪಕರಣ. ಮೂಲಸ್ಥಾನದಲ್ಲಿ ವಾಯುವನ್ನು ನಿಲ್ಲಿಸಿವವನೇ[1] ಭಕ್ತನು, ಬಸವ ಕೇಳು" ಎಂದನು. ೨೨. "ಕಣ್ಣು ಸುತ್ತುವುದನ್ನು ನಿಲ್ಲಿಸಿದರೆ ಸುತ್ತಿ ಹೊಮ್ಮುವ ವಾಯು ನಿಲ್ಲುವುದು. ವಾಯು ನಿಂತರೆ ಮನಸ್ಸು ಮೇಲೆ ನಿಲ್ಲುವುದು. ಮನಸ್ಸು ನಿಂತದ್ದಾದರೆ ಲಿಂಗಸ್ವರೂಪವು ನಿಲ್ಲುವುದು. ವಿಲಾಸದಿಂದ ಆ ಲಿಂಗಸ್ವರೂಪವು ನಿಂತದ್ದಾದರೆ ಕಾಲಕರ್ಮವನ್ನು ಗೆದ್ದು, ಮಾಯೆಯನ್ನು ಹೇಳಲು ಹೆಸರಿಲ್ಲದಂತಾಗಿಸಬಹುದು, ಬಸವ ಕೇಳು" ಎಂದನು. ೨೩. "ದೇಹವೆಂಬ ಭೂಮಿಯಲ್ಲಿ ಅನ್ನವೆಂಬ ಬೀಜವನ್ನು ಲಿಂಗದ ಧ್ಯಾನದಲ್ಲಿ ಬಿತ್ತಿ, ನೀರುಣಿಸುವುದರ ಮೂಲಕ ಸಪ್ತಧಾತುಗಳೊಂದಿಗೆ ಬೆಳೆಸಿ ತಪ್ಪದೆ ಬಂದ ಲಿಂಗಸ್ವರೂಪದ ಫಲವನ್ನು ದೇಹಕ್ಕೆ ಕೊಡದೆ ಪವಿತ್ರವೆಂದೇ ಭಾವಿಸಿ ಜೊತೆಗೂಡಿ ಇರುವವನೇ ಭಕ್ತನು, ಬಸವ ಕೇಳು" ಎಂದನು.

---

೧ ಮನಸ್ಸನ್ನು ತಡೆಹಿಡಿದು ಸ್ಥಿರವಾಗಿಟ್ಟುಕೊಂಡವನು (ರಂ)

ಸಲೆ ಷಡಾಧಾರಾಂಬುಜಂಗಳ
ನೆಲೆಯನಱಿಯಲಿಬೇಕು ಬೇಹಡೆ
ಬಲಿವುದಿಂತು ಷಡುಸ್ಥಳಂಗಳನಱಿವ ಮೇಳದಲಿ
ಇಳೆ ಜಲಾನಲ ವಾಯು ಗಗನ
ಸ್ಥಳಕುಳಂಗಳನಾತ್ಮತತ್ತ್ವದೊ
ಳಿಳುಹಿ ಸುಖಿಸುವನವನೆ ಭಕ್ತನು ಬಸವ ಕೇಳೆಂದ ೨೪

ಆಱು ಭೂತಗಳಾಱು ಚಕ್ರಗ
ಳೇಱಿಹವು ಪರಿವಿಡಿಯಲವಱೊಳು
ಮೀಱಿದಜ ಹರಿ ರುದ್ರನೀಶ ಶಿವಾತ್ಮತತ್ತ್ವಗಳು
ತೋಱುವುವು ನೆಲೆವಿಡಿದು ಸಲೆ ಬಲು
ಹೇಱಿ ಸಾಧಿಸಿಯಂತವೆಲ್ಲವ
ಸಾಱಿ ದಾಂಟುವನವನೆ ಭಕ್ತನು ಬಸವ ಕೇಳೆಂದ ೨೫

ನೆಟ್ಟನಾ ಗುದಲಿಂಗನಾಭಿಯ
ಮುಟ್ಟ ಗುರು ನೆಲೆ ನಾಭಿ ಹೃದ್ಗಳ
ಮುಟ್ಟ ಜಂಗಮದಿಕ್ಕೆಗಳ ಭ್ರೂ ಬ್ರಹ್ಮರಂಧ್ರಗಳ
ನಿಟ್ಟಿಸಲು ಶಿವಲಿಂಗದೋವರಿ
ಯೊಟ್ಟಿಲಾಗಿಹವಿವನು ಬೆರಸುವ
ಕಟ್ಟಳೆಯ ಕಂಡವನೆ ಭಕ್ತನು ಬಸವ ಕೇಳೆಂದ ೨೬

೨೪. "ದೇಹದಲ್ಲಿರುವ ಆರು ಆಧಾರಕಮಲಗಳನ್ನು (ಷಟ್ಚಕ್ರಗಳನ್ನು[೧]) ಚೆನ್ನಾಗಿ ತಿಳಿಯಬೇಕು. [ಅನಂತರ] ಜ್ಞಾನದಿಂದ ಷಟ್‌ಸ್ಥಲಗಳನ್ನು ಅವುಗಳಲ್ಲಿ ಕೂಡಿಸಬೇಕು. ಭೂಮಿ, ನೀರು, ಬೆಂಕಿ, ವಾಯು, ಆಕಾಶ- ಈ ಪಂಚಭೂತಗಳನ್ನು ಆತ್ಮತತ್ತ್ವದಲ್ಲಿ ಇರಿಸಿ ಸುಖಿಸುವವನೇ ಭಕ್ತನು, ಬಸವ ಕೇಳು" ಎಂದನು. ೨೫. "ಆರು ಭೂತಗಳು, ಆರು ಚಕ್ರಗಳು ಕ್ರಮವಾಗಿ ಮೇಲೆ ಹೋಗಿರುವುವು. ಅವುಗಳಲ್ಲಿ ಮೀರಿದವಾದ ಬ್ರಹ್ಮ ವಿಷ್ಣು ರುದ್ರ ಈಶ ಶಿವ ಆತ್ಮತತ್ತ್ವಗಳು ಕಾಣುವುವು. ಅವುಗಳ ಸ್ಥಾನವನ್ನು ಹಿಡಿದು ಬಲವಂತದಿಂದ ಅವನ್ನು ಸಾಧಿಸಿ ಹಾಗೆ ಅವೆಲ್ಲವನ್ನೂ ಮುಟ್ಟಿ ದಾಟಿ ಹೋಗುವವನೆ ಭಕ್ತನು, ಬಸವ ಕೇಳು" ಎಂದನು. ೨೬. "ನೇರವಾಗಿ ಗುದಲಿಂಗ ಹಾಗೂ ಹೊಕ್ಕಳುಗಳನ್ನು ಮುಟ್ಟುವುದಿಲ್ಲ. ಗುರುಸ್ಥಾನವಾದ ಹೊಕ್ಕಳು, ಹೃದಯ, ಕಂಠಗಳನ್ನು ಮುಟ್ಟುವುದಿಲ್ಲ. ಜಂಗಮದ ವಾಸಸ್ಥಾನವಾದ ಕಂಠ, ಭ್ರೂ ಮಧ್ಯೆ, ಬ್ರಹ್ಮರಂಧ್ರಗಳನ್ನು ನೋಡಲು ಶಿವಲಿಂಗದ ಒಳಮನೆಯು ಗುಂಪುಗುಂಪಾಗಿರುತ್ತದೆ. ಇವನ್ನು ಕೂಡಿಸುವ ನಿಯಮವನ್ನು ತಿಳಿದವನೆ ಭಕ್ತನು, ಬಸವ ಕೇಳು" ಎಂದನು.

---

೧. ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧಿ ಮತ್ತು ಆಜ್ಞಾ (ರಂ).

ಬಿಂದುವಸ್ತುವ ಗುರುಮುಖಾಗ್ನಿಗೆ
ತಂದು ಪಚನಿಸಿ ಜಂಗಮದ ಮುಖ
ದಿಂದ ಲಿಂಗಕೆ ನೀಡಿ ತನ್ಮುಖದಿಂದಲೊಕ್ಕುಳಿದ
ಸಂದ ಸುಧೆಯೆನಿಪಾ ಪ್ರಸಾದವ
ನೊಂದು ಮನಸಿನಲುಂಡು ಪರಮಾ
ನಂದವನು ಪಡೆದವನೆ ಭಕ್ತನು ಬಸವ ಕೇಳೆಂದ ೨೭

ಧರೆ ಜಲಾಗ್ನಿಯನೆಯ್ದಿದರೆ ಸ
ದ್ಗುರುಕುಮಾರಕನಗ್ನಿವಿಡಿದಾ
ಮರುತ ಗಗನವನೆಯ್ದಿದರೆ ಜಂಗಮದಲವಧಾನಿ
ವರ ಗಗನವಾತ್ಮಸ್ಥಲವನೆ
ಯ್ದಿರಲು ಶಿವಲಿಂಗೈಕ್ಯನಿಂತೀ
ಪರಿಯನರಿದವನೆನ್ನ ಭಕ್ತನು ಬಸವ ಕೇಳೆಂದ ೨೮

ಧರಣಿ ಜಲದಲಿ ಕರ್ಮಿಪಾವಕ
ಮರುತಮಂಡಲದಲ್ಲಿ ಭಕ್ತನು
ಪಿರಿಯ ಗಗನಾತ್ಮಸ್ಥಳಾನ್ವಿತನಾಗೆ ಸುಜ್ಞಾನಿ
ಪರಿವಿಡಿಯಲವನಿಳಿಹಿ ನಿಂದರೆ
ಪರಕೆ ಪರತರವಸ್ತುವಾಗಿಯೆ
ನೆರೆವನೆನ್ನಲಿ ಬಳಿಕ್ಕಲಾತನು ಬಸವ ಕೇಳೆಂದ ೨೯

ಶಕ್ತಿಯೆಡೆ ಗುದಲಿಂಗವಂತಾ
ಭಕ್ತಿಯೆಡೆಯಾ ನಾಭಿ ಹೃದಯವು
ಮುಕ್ತಿಯೆಡೆಯಾ ತಾಲು ಹುಬ್ಬುಗಳದು ನಿಮಿತ್ತದಲಿ
ಶಕ್ತಿಯಲಿ ಸಂಪನ್ನನಾಗಿಯೆ
ಭಕ್ತಿಯಲಿ ಭಾವಜ್ಞನಾದೊಡೆ
ಮುಕ್ತಿಯೆಂಬುದು ಮುಂದೆ ನಿಲುವುದು ಬಸವ ಕೇಳೆಂದ ೩೦

೨೭. "ಬಿಂದುವೆಂಬ ವಸ್ತುವನ್ನು ಗುರುಮುಖವೆಂಬ ಅಗ್ನಿಯಲ್ಲಿ ಬೇಯಿಸಿ, ಜಂಗಮದ ಮುಖಾಂತರ ಲಿಂಗಕ್ಕೆ ನೀಡಿ, ಜಂಗಮಮುಖದಿಂದ ಮಿಕ್ಕ ಅಮೃತವೆನ್ನಿಸಿಕೊಳ್ಳುವ ಪ್ರಸಾದವನ್ನು ಒಮ್ಮನಸ್ಸಿನಿಂದ ಉಂಡು ಪರಮಾನಂದವನ್ನು ಪಡೆದವನೆ ಭಕ್ತನು, ಬಸವ ಕೇಳು" ಎಂದನು. ೨೮. "ಭಕ್ತನಾದವನು ಭೂಮಿಯನ್ನು ಅನುಸರಿಸಿ ಜಲವನ್ನು; ಜಲವನ್ನು ಅನುಸರಿಸಿ ಅಗ್ನಿಯನ್ನು; ಅಗ್ನಿಯನ್ನು ಅನುಸರಿಸಿ ವಾಯುವನ್ನು; ವಾಯುವನ್ನು ಅನುಸರಿಸಿ ಆಕಾಶವನ್ನು ಮುಟ್ಟಿರಲು ಲಿಂಗೈಕ್ಯನು. ಈ ಕ್ರಮವನ್ನು ತಿಳಿದವನು ನನ್ನ ಭಕ್ತನು, ಬಸವಾ ಕೇಳು" ಎಂದನು. ೨೯. "ಭೂಮಿ ಹಾಗೂ ಜಲದಲ್ಲಿ ಪಾಪಕರ್ಮಿಯು ಅಗ್ನಿ, ವಾಯು ಮಂಡಲಗಳಲ್ಲಿ ಭಕ್ತನು, ಹಿರಿಯ ಆಕಾಶ ಹಾಗೂ ಆತ್ಮಸ್ಥಲದಲ್ಲಿ ಸುಜ್ಞಾನಿಯೂ ಅನುಕ್ರಮವಾಗಿ ಸೇರಿ ಅವುಗಳ ಮೇಲೇರಿ ನಿಂತರೆ ಆ ಬಳಿಕ ಪರಾತ್ಪರವಸ್ತುವಾಗಿ ಆತನು ನನ್ನನ್ನು ಸೇರುವನು, ಬಸವ ಕೇಳು" ಎಂದನು. ೩೦. "ಶಕ್ತಿಯ ಸ್ಥಾನ ಗುದ ಹಾಗೂ ಜನನೇಂದ್ರಿಯ. ಭಕ್ತಿಯ ಸ್ಥಾನ ಹೊಕ್ಕುಳು ಮತ್ತು ಹೃದಯ. ಮುಕ್ತಿಯ ಸ್ಥಾನ

ತನ್ನನೊಲಿವೊಡೆ ಶಕ್ತಿಯಿದಲಾ
ತನ್ನನಱಿವೊಡೆ ಭಕ್ತಿಯಿದಲಾ
ತನ್ನನಳಿವೊಡೆ ಮುಕ್ತಿಯಿದಲಾ ಲಿಂಗವಂತರಿಗೆ
ತನ್ನ ತಾನಿಂತಡಱಿ ತನ್ನೊಳು
ತನ್ನ ತಾನಾಗಿದ್ದನಾದೊಡೆ
ನನ್ನ ನಚ್ಚಿದ ಭಕ್ತನಾತನು ಬಸವ ಕೇಳೆಂದ ೩೧

ಶುದ್ಧವೆನಿಪಾ ಪೂರ್ವಪಶ್ಚಿಮ
ಸಿದ್ಧ ಮುದ್ರಾಬಂಧ ಮೊದಲಾ
ಗಿದ್ದ ನಾನಾ ಪರಿಪರಿಯ ಯೋಗೋಪದೇಶಗಳ
ಉದ್ಧರಿಸಲಾ ಬಸವರಾಜನ
ಬುದ್ಧಿ ಪ್ರಜ್ವಲವಾಗಿ ಪಸರಿಸು
ತಿದ್ದುದೇನೆಂದೆಂಬೆನಾ ಪ್ರಭುಲಿಂಗನೊಲುಮೆಯನು ೩೨

ಮಾಡುತಿಹುದನವರತಲನುಭವ
ಕೂಡವನ್ನಕವನುಭವಂಗಳ
ಗಾಢದಲಿ ಗಮನಿಸುವುದೂರ್ಧ್ವಪದಪ್ರಚಾರಣೆಗೆ
ನೀಡಿ ನಿಲುಕುವುದಂತರಂಗದ
ನಾಡನಾಳುವೊಡೀ ಪ್ರಕಾರವ
ಜೋಡಿಸುತ್ತಿರುತಿಹುದು ಭಕ್ತರು ಬಸವ ಕೇಳೆಂದ ೩೩

ಕಂಠ ಮತ್ತು ಭ್ರೂಮಧ್ಯ. ಅದು ಕಾರಣ ಶಕ್ತಿಯಲ್ಲಿ ಸಂಭಾವಿತನಾಗಿ, ಭಕ್ತಿಯಲ್ಲಿ ಭಾವಜ್ಞನಾದರೆ ಮುಕ್ತಿಯೆನ್ನುವುದು ಮುಂದೆ ನಿಲ್ಲುವುದು, ಬಸವ ಕೇಳು" ಎಂದನು. ೩೧. "ಲಿಂಗವಂತನಿಗೆ ತನ್ನನ್ನು ಒಲಿಯಲು ಶಕ್ತಿಯಿದೆ. ತನ್ನನ್ನು ತಿಳಿಯಲು ಭಕ್ತಿಯಿದೆ. ತನ್ನತನವನ್ನು ನಾಶಗೊಳಿಸಲು ಮುಕ್ತಿಯಿದೆ. ಹೀಗೆ ತನಗೆ ತಾನೇ ಮೇಲೇರಿ ತನ್ನಲ್ಲಿ ತಾನೇ ಆಗಿದ್ದನಾದರೆ ಆತನು ನನ್ನ ಮೆಚ್ಚಿನ ಭಕ್ತನು, ಬಸವ ಕೇಳು" ಎಂದನು. ೩೨. ಶುದ್ಧವೆನ್ನಿಸಿಕೊಂಡಿರುವ ಪೂರ್ವಪಶ್ಚಿಮ, ಮುದ್ರಾಬಂಧ ಮೊದಲಾದ ಯೋಗಿಗಳ ನಾನಾ ಬಗೆಯ ಯೋಗೋಪದೇಶಗಳನ್ನು ಹೇಳಲು ಆಗ ಬಸವರಾಜನ ಬುದ್ಧಿ ಬೆಳಗಿ ಹರಡುತ್ತಿದ್ದಿತು. ಆ ಪ್ರಭುಲಿಂಗನ ಪ್ರೀತಿಯನ್ನು ಏನೆಂದು ಹೇಳಲಿ! ೩೩. "ಅನುಭವಗಳನ್ನು ಸದಾ ಮಾಡುತ್ತಿರುವುದು. ಅನುಭವಗಳು ಉಂಟಾಗುವವರೆವಿಗೆ ತೀವ್ರವಾಗಿ ಅವಲೋಕಿಸುತ್ತಿರುವುದು. ಊರ್ಧ್ವಗತಿಯು ಕೈಗೆ ನಿಲುಕುವವರೆವಿಗೆ ಚೆನ್ನಾಗಿ ಸಾಧಿಸುತ್ತಿರುವುದು. ಭಕ್ತರು ಅಂತರಂಗದ ರಾಜ್ಯವನ್ನು ಆಳುವುದಾದರೆ ಈ ಪ್ರಕಾರವಾಗಿ [ಒಂದಕ್ಕೊಂದು] ಜೋಡಣೆ ಮಾಡಿಕೊಳ್ಳಬೇಕು, ಬಸವ ಕೇಳು" ಎಂದು ಅಲ್ಲಮನು ನುಡಿದನು.

ಅನುಭವಣೆಯಳವಡುವ ಪರಿಯಂ
ತನುಮತವನೊಳಗೊಂಡು ನಿಶ್ಚಲ
ದನುವನಂಗೀಕರಿಸಿ ನೀವಿರಲಾ ದಿನಂಗಳಲಿ
ಮನವೊಲಿದು ನಾ ಬಂದು ಮೇಲಣ
ನೆನಹಿಗಾಕ್ಷಣ ಅಱುವ ಮಾಡುವೆ
ನೆನುತಲಾ ಪ್ರಭುರಾಯನಾ ಬಸವಣ್ಣಗಿಂತೆಂದ ೩೪

ನೋಡಬೇಕಾರಾದು ಭಕ್ತಿಯ
ಮಾಡಿ ಮುಕ್ತಿಯ ಹಡೆವೆವೆಂದನು
ಗೂಡಿ ನಿಚ್ಚಟರಾಗಿ ಧೀರೋದಾರವೃತ್ತಿಯಲಿ
ಖೋಡಿವೋಗದೆ ನಿರ್ವಹಿಸಿ ಹೇ
ಡಾಡದವವನು ಕಾಂಬೆವಾವಿ
ನ್ನಾಡಿಬಹೆವೆಂದೆನುತಲಿರ್ದನು ಗುರು ಗುಹೇಶ್ವರನು ೩೫

೩೪. "ಅನುಭವಗಳು ಸೇರುವವರೆವಿಗೆ ಒಪ್ಪಿಗೆಯಿಂದ ನಿಶ್ಚಲಸ್ಥಿತಿಯನ್ನು ಸ್ವೀಕರಿಸಿ ನೀವು ಇರುತ್ತಿರಲು ಆ ದಿನಗಳಲ್ಲಿ ಮನಸಾರೆ ಒಪ್ಪಿ ನಾನು ಬಂದು ನನ್ನ ಮೇಲಿನ ನೆನಹಿಗೆ ಆ ಕ್ಷಣವೇ [ಒಂದು] ಉಪಾಯ ಮಾಡುವೆನು." ೩೫. "ಯಾರು ಯಾರು ಭಕ್ತಿಯನ್ನು ಆಚರಿಸಿ ಮುಕ್ತಿಯನ್ನು ಪಡೆಯೋಣವೆಂದು ಸಿದ್ಧರಾಗಿ, ಚಿತ್ತಸ್ಥೈರ್ಯ ಹೊಂದಿದವರಾಗಿ, ಧೀರೋದಾತ್ತ ಕಾರ್ಯದಲ್ಲಿ ಕಳಂಕ ಹೊಂದದೆ, ಹಿಮ್ಮೆಟ್ಟದೆ ಕಾರ್ಯ ನಿರ್ವಹಿಸುವರೋ ನೋಡಬೇಕು. ಅವರನ್ನು [ನಾವು] ರಕ್ಷಿಸುವೆವು. ನಾವು ಇನ್ನು ಸುತ್ತಾಡಿ ಬರುವೆವು" ಎಂದು ಗುರು ಗುಹೇಶ್ವರನು ಬಸವಣ್ಣನಿಗೆ ಹೇಳುತ್ತಿದ್ದನು.

# ೧೯. ಗೋರಕ್ಷ

## ಗತಿ ೧೯

ಸೂಚನೆ : ಶರಣರೆಲ್ಲರ ನಿಲಿಸಿ ಹೋಗುತ
ಕರುಣದಲಿ ಗೋರಕ್ಷನಾಥಗೆ
ವಿರಚಿಸಿದನೆಮ್ಮಲ್ಲಮಪ್ರಭು ಲಿಂಗತತ್ವವನು

ನರ ತೊಗಲು ಎಲು ಮಿದುಳು ಕಬ್ಬಸು
ಕರುಳು ಕಂಡ ಪುರೀಷ ಪುಂಜದ
ಶರಿರವೇ ಸ್ವಯವಾಗೆ ಸಿದ್ಧಿಯ ಪಡೆವೆವೆಂದೆಂಬ
ಮರುಳುತನವನು ನಿಲಿಸಿ ಸಾಕ್ಷಾತ್
ಪರಮಪದವಿಯಲಿರಿಸುವನುವನು
ಶರಣರೆಲ್ಲರು ತಿಳಿವುದೀ ಪ್ರಭುಲಿಂಗಲೀಲೆಯಲಿ ೧

ಸಾಧಿಸುವುದಿನ್ನಿನ್ನು ನಿಮ್ಮೊಳು
ನಾದ ಬಿಂದು ಕಳಾಪ್ರಪಂಚದ
ಹಾದಿಯನು ಹಜುಮಾಡುತಿಹುದೇಕಾಗ್ರಚಿತ್ತದಲಿ
ಆ ದಿನಕೆ ನಾ ಬಂದು ನಿಮ್ಮ ಸ
ಮಾಧಿಗಳ ಸಾಹಸದ ಪ್ರಾಪ್ತಿಯ
ನೈದೆ ನೋಡುವೆನೆನುತಲಾ ಪ್ರಭುರಾಯನಿಂತೆಂದ ೨

ಸ್ತುತ್ಯರಾಗಿಹುದಖಿಳ ಭಕ್ತರು
ನಿತ್ಯರಾಗಿಹುದಚಲ ಭಕ್ತರು
ಸತ್ಯರಾಗಿಹರಮಲ ಭಕ್ತರು ಭಕ್ತಿಯಿಂದೆನುತ
ಮತ್ತೆ ಮುದದಲಿ ಸಿದ್ಧರಾಮನ
ನುತ್ತಮೋತ್ತಮ ಬಸವರಾಜನ
ಚಿತ್ತ ದಣಿಯಲು ಹರುಷದಲಿ ಹರಸಿದನು ಪ್ರಭುರಾಯ ೩

ಸೂ : ಶರಣರೆಲ್ಲರನ್ನು ನಿಲ್ಲಿಸಿ ಹೋಗುತ್ತಾ, ನಮ್ಮ ಅಲ್ಲಮಪ್ರಭುವು ಗೋರಕ್ಷನಾಥನಿಗೆ ಲಿಂಗತತ್ವವನ್ನು ತಿಳಿಯಪಡಿಸಿದನು. ೧. ಈ ಪ್ರಭುಲಿಂಗಲೀಲೆಯಲ್ಲಿ ಎಲ್ಲ ಶರಣರೂ ನರ, ಚರ್ಮ, ಎಲುಬು, ಮಿದುಳು, ಕೊಬ್ಬು, ಕರುಳು, ಮಾಂಸಖಂಡ, ಮಲ ಇವುಗಳ ಮೊತ್ತದ ಶರೀರವೇ ತನ್ನದಾಗಿರುವಾಗ ಸಿದ್ಧಿಯನ್ನು ಪಡೆಯುವೆವು ಎನ್ನುವವರ ಹುಚ್ಚುತನವನ್ನು ನಿವಾರಿಸಿ ಸಾಕ್ಷಾತ್ ಪರಮಪದವಿಯಲ್ಲಿ ನಿಲ್ಲಿಸುವ ಕ್ರಮವನ್ನು ತಿಳಿಯುವುದು. ೨. "ಏಕಾಗ್ರಚಿತ್ತದಿಂದ ನಾದ ಬಿಂದು ಕಲಾಪ್ರಪಂಚದ ಮಾರ್ಗವನ್ನು ಉಪಾಯವಾಗಿ ಇನ್ನು ಮುಂದೆ ನಿಮ್ಮಲ್ಲಿ ನೀವೇ ಸಾಧಿಸುವುದು. [ಹಾಗೆ ಸಾಧಿಸಿದಲ್ಲಿ] ಆ ದಿನ ನಾನು ಬಂದು ನಿಮ್ಮ ಏಕಾಗ್ರಚಿತ್ತವನ್ನು, ಸಾಹಸದ ಸಿದ್ಧಿಯನ್ನು ಚೆನ್ನಾಗಿ [ಪರೀಕ್ಷಿಸಿ] ನೋಡುವೆನು" ಎಂದು ಹೇಳುತ್ತಾ ಆ ಪ್ರಭುರಾಯನು [ಮತ್ತೆ] ಹೀಗೆಂದನು: ೩. "ಸರ್ವಭಕ್ತರು ಹೊಗಳಿಕೆಗೆ ಅರ್ಹರಾಗಿರುವುದು; ಚಾಂಚಲ್ಯವಿಲ್ಲದ ಭಕ್ತರು ನಿತ್ಯರಾಗಿರುವುದು; ಪರಿಶುದ್ಧರಾದ ಭಕ್ತರು ಭಕ್ತಿಯಿಂದ ಸತ್ಯವಂತರಾಗಿರುವುದು" ಎಂದು

ಮನವೊಲಿದು ಶಿವಶರಣರೆಲ್ಲರು
ತನತನಗೆ ಸಾಷ್ಟಾಂಗ ಸಹಿತವೆ
ತನುವನೀಡಾಡಿದರು ಗುರುವಿಗೆ ಬಳಿಕಲವರುಗಳ
ವಿನಯದಿಂದಿರಹೇಳಿ ಮರ್ತ್ಯದ
ಮನುಜರನು ಪಾವನವ ಮಾಡುವೆ
ನೆನುತ ಗಮಿಸಿದನಲ್ಲಮಪ್ರಭು ಲಿಂಗಲೀಲೆಯಲಿ ೪

ಇತ್ತಲೀ ಬಸವಣ್ಣ ಮೊದಲಾ
ದುತ್ತಮದ ಶಿವಭಕ್ತರೆಲ್ಲರು
ಚಿತ್ತದಲಿ ನಿಜಗುರುನಿರೂಪವ ಮಾಡತೊಡಗಿದರು
ಅತ್ತ ಸೊನ್ನಲಪುರಕೆ ಹೋಗಿ ವಿ
ಚಿತ್ರದಿಂದಲಿ ಸಿದ್ಧರಾಮನು
ಮತ್ತೆ ಮನದಲಿ ಮಾಡುತಿರ್ದನು ಶಿವಸಮಾಧಿಯನು ೫

ಧರಣಿಯೊಳಗಾರಾರದಾವಾ
ಚರಣೆಗಳನಾಚರಿಸುತಿಹರಾ
ಪರಿಮಲವರವರಿಗೆ ಯಥೋಚಿತ ಸುಪ್ರಸನ್ನತೆಯ
ಕರುಣಿಸುವೆನೆಂದೆನುತ ಸಚರಾ
ಚರರಿಗುಪಕಾರಾರ್ಥವಾಗಿಯೆ
ಗುರು ಗುಹೇಶ್ವರಲಿಂಗ ಸುಳಿದನು ತನ್ನ ಲೀಲೆಯಲಿ ೬

ಹೇಳಿ ಮತ್ತೆ ಸಂತೋಷದಿಂದ ಸಿದ್ಧರಾಮನನ್ನು, ಶ್ರೇಷ್ಠರಲ್ಲಿ ಶ್ರೇಷ್ಠನಾದ ಬಸವ ರಾಜನನ್ನು ಪ್ರಭುರಾಯನು ಮನದಣಿಯುವಂತೆ ಸಂತಸದಿಂದ ಆಶೀರ್ವದಿಸಿದನು. ೪. ಮನಸ್ಸು ಪ್ರೀತಿಗೊಂಡು ಶಿವಶರಣರೆಲ್ಲರು ತಾವು ತಾವೇ ಸಾಷ್ಟಾಂಗಸಹಿತವಾಗಿ ಗುರುವಿನ ಪಾದಗಳಿಗೆ ದೇಹವನ್ನು ಚೆಲ್ಲಿದರು. ಅನಂತರ ಅವರುಗಳನ್ನು ವಿನಯದಿಂದ ಇರಲು ಹೇಳಿ ಭೂಲೋಕದ ಮನುಷ್ಯರನ್ನು ಪವಿತ್ರರನ್ನಾಗಿ ಮಾಡುವೆನೆಂದು ಅಲ್ಲಮಪ್ರಭುಲಿಂಗನು ತನ್ನ ಲೀಲೆಯಲ್ಲಿ ನಡೆದನು. ೫. ಇತ್ತ ಬಸವಣ್ಣ ಮೊದಲಾದ ಶ್ರೇಷ್ಠ ಶಿವಭಕ್ತರೆಲ್ಲರೂ ಮನದಲ್ಲಿ ತಮ್ಮ ಗುರುವಿನ ಆಜ್ಞಾನುಸಾರ [ಭಕ್ತಿಯನ್ನು] ಆಚರಿಸತೊಡಗಿದರು. ಅತ್ತ ಸೊನ್ನಲಪುರಕ್ಕೆ ಸಿದ್ಧರಾಮನು ಹೋಗಿ ಆಶ್ಚರ್ಯಕರವಾದ ರೀತಿಯಲ್ಲಿ ಶಿವಸಮಾಧಿಯನ್ನು ಮರಳಿ ಮನಸ್ಸಿನಲ್ಲಿ ಮಾಡುತ್ತಿದ್ದನು. ೬. ಭೂಮಿಯಲ್ಲಿ ಯಾರು ಯಾರು ಯಾವ ಯಾವ ಆಚರಣೆಗಳನ್ನು ಆಚರಿಸುತ್ತಿರುವರೊ ಆ ರೀತಿಯಲ್ಲಿ ಅವರವರಿಗೆ ಯೋಗ್ಯವಾದ ಸಂತೃಪ್ತಿಯನ್ನು ಅನುಗ್ರಹಿಸುವೆನೆಂದು ಚರಾಚರ ಜೀವಿಗಳಿಗೆ ಉಪಕರಿಸಬೇಕೆಂದು ಗುರು ಗುಹೇಶ್ವರಲಿಂಗನು ತನ್ನ ಲೀಲೆಯಲ್ಲಿ ಸುಳಿದನು.

ಒಸೆದು ಕುಲಗಿರಿಕುಲವನೊಲಿದೀ
ಕ್ಷಿಸಲು ಪರುಷದ ಪರ್ವತಂಗಳ
ಹೆಸರ ಹಡೆದುವು ತರುಲತಾನಿಕರವ ನಿರೀಕ್ಷಿಸಲು
ಮಿಸುಪ ಸುರತರು ಕಲ್ಪಲತೆಯೆಂ
ಬೆಸಕವಾದುವು ನೋಡೆ ಸರಸಿ
ಪ್ರಸರವಮೃತಗಳಾದುವಾ ಪ್ರಭುಲಿಂಗಲೀಲೆಯಲಿ ೭

ಪೊಡವಿಯನು ಪಾವನವ ಮಾಡುತ
ನಡೆದು ನಲವಿಂ ಬರುತ ಬರುತಲಿ
ಬಡಗಭೂಮಿಯ ಪುಣ್ಯಪುರುಷರ ಚಾರುಚರಿತೆಯನು
ಬಿಡದೆ ನೋಡುವೆನವರು ಬೇಡಿತ
ಕೊಡುವೆನೆಂದೆನುತೊಲಿದು ಕರುಣದ
ಕಡಲಿನಂತಿರೆ ಬಂದನಾ ಪ್ರಭು ಲಿಂಗಲೀಲೆಯಲಿ ೮

ಇದಿರುವರಿತಂದಲ್ಲಮಪ್ರಭು
ಪದಪಯೋಜಸ್ಪರುಶನದ ಸಂ
ಪದದ ಸತ್ವದಲಾದುವಗ್ಗದ ಪುಣ್ಯನದಿನಿಕರ
ಮುದದಲೆಡೆಗೆಯ್ದೆಡೆಗಳೆಲ್ಲವು
ಸದಮಲಕ್ಷೇತ್ರಂಗಳಾದುವು
ವಿದಿತವೆಮ್ಮಯ ಗುರು ಗುಹೇಶ್ವರಲಿಂಗ ಲೀಲೆಯಲಿ ೯

ನಿಧಿಯ ಚಿಂತಾಮಣಿಯ ದಿವ್ಯೌ
ಷಧಿಯ ಪರುಷದ ಕಣಿಯ ಸುಲಲಿತ
ಸುಧೆಯ ಬಿಲಗಳ ಸಿದ್ಧರಸಪಾದುಕೆಯನಂಜನವ
ನಿಧಿನಿಧಾನದ ವಸ್ತುಗಳ ತ
ಮ್ಮಿದಿರಲಜಿಸುವ ಸಾಧಕರ ತವ
ನಿಧಿಯೆನಿಪ ಶ್ರೀಗಿರಿಯ ಕಂಡನು ಬರುತ ಪ್ರಭುರಾಯ ೧೦

೭. ಪ್ರಭುಲಿಂಗನು ತನ್ನ ಲೀಲೆಯಲ್ಲಿ ಸಂತೋಷದಿಂದ ಕುಲಪರ್ವತಗಳ ಮೊತ್ತವನ್ನು ಪ್ರಸನ್ನ ಮನದಿಂದ ನೋಡಲು ಸ್ಪರ್ಶಶಿಲೆಗಳಿಂದ ಕೂಡಿದ ಪರ್ವತಗಳೆಂಬ ಹೆಸರು ಪಡೆದುವು; ಮರಗಿಡಗಳ ಸಮೂಹವನ್ನು ನೋಡಲು ಬೆಳಗುವ ಕಲ್ಪವೃಕ್ಷ ಕಲ್ಪಲತೆಗಳ ರೂಪ ಪಡೆದುವು; ಕೊಳಗಳ ಸಮೂಹವನ್ನು ನೋಡಲು ಅಮೃತಸರೋವರಗಳಾದುವು. ೮. ಪ್ರೀತಿಯಿಂದ ಭೂಮಿಯನ್ನು ಪವಿತ್ರಗೊಳಿಸುತ್ತಾ ನಡೆದುಬರುತ್ತಾ ಉತ್ತರದಿಕ್ಕಿನ ಪುಣ್ಯಪುರುಷರ ಮನೋಹರವಾದ ಚರಿತೆಯನ್ನು ತಪ್ಪದೆ ನೋಡುವೆನು. ಅವರು ಬೇಡಿದುದನ್ನು ಅನುಗ್ರಹಿಸುವೆನೆಂದು ಹೇಳುತ್ತ ಪ್ರಭುವು ಕರುಣೆಯ ಸಮುದ್ರದಂತೆ ಪ್ರಸನ್ನನಾಗಿ ತನ್ನ ಲಿಂಗಲೀಲೆಯಲ್ಲಿ ಬಂದನು. ೯. ಪ್ರಖ್ಯಾತನಾದ ನಮ್ಮ ಗುಹೇಶ್ವರಲಿಂಗನ ಲೀಲೆಯಿಂದ, ಅವನ ಪಾದಕಮಲಗಳ ಸ್ಪರ್ಶದ ಸಂಪತ್ತಿನ ಸತ್ವದಿಂದ ಶ್ರೇಷ್ಠವಾದ ಪುಣ್ಯದಾಯಿಯಾದ ಅನೇಕ ನದಿಗಳಾದವು; ಪ್ರೀತಿಯಿಂದ ನಡೆದಾಡಿದ ಸ್ಥಳಗಳೆಲ್ಲವೂ ಪವಿತ್ರ ಕ್ಷೇತ್ರಗಳಾದುವು, ೧೦. ಶಂಖ, ಪದ್ಮಾದಿ ದ್ರವ್ಯದ ರಾಶಿಗಳನ್ನು, ಚಿಂತಾಮಣಿ ಯನ್ನು, ದಿವ್ಯೌಷಧಿಯನ್ನು ಪರುಷದ ಖನಿಯನ್ನು, ಮನೋಹರವಾದ ಅಮೃತದ

ನಡೆವ ಲತೆಗಳು ನಗುವ ಗಿಡಗಳು
ನುಡಿವ ಶಿಲೆಗಳು ತೇಜದಿಂದುರಿ
ಯಿಡುವ ತರುಗಳು ದಿವ್ಯರುಚಿಗಳನೀವ ಗುಲ್ಮಗಳು
ಕುಡಿದೊಡಂತಃಕರಣಶುದ್ಧಿಯ
ಕೊಡುವ ಮಡುಗಳು ಜಾತಿವೈರವ
ತೊಡದ ಖಗ ಮೃಗ ಮೆಱೆದುದಾ ಶ್ರೀಗಿರಿಯ ಶಿಖರದಲಿ ೧೧

ಏಱೆ ನೋಡಲು ಸತ್ಯಲೋಕಕೆ
ಹಾಱಿಸುವ ಗಿರಿಶಿಖರಗಳು ಮಿಗೆ
ಮೀಱೆ ಹೊಕ್ಕೊಡೆ ಸಪ್ತ ಪಾತಾಳದ ಸಘಾಟಿಕೆಯು
ತೋಱಿಸುವ ಬಿಂಕದ ಬಿಲಂಗಳು
ಸಾಱೆ ಸಾಧಕರೇನ ಬಗೆದುದ
ಹೇಱಿಕೊಡುವ ಸುವಸ್ತುವಿರ್ದುವು ಪರ್ವತಾಗ್ರದಲಿ ೧೨

ಆ ಮಹಾ ಶ್ರೀಗಿರಿಯ ಶಿಖರದೆ
ಕಾಮಿತಾರ್ಥವ ಹಡೆವೆನೆಂದು
ದ್ದಾಮತೆಯ ಗೋರಕ್ಷಕನೆಂಬ ಸಮಸ್ತಸಾಧಕನು
ಪ್ರೇಮದಿಂದಿರುತಿರಲಿಕಾ ದಿನ
ವೀ ಮನೋಹರ ಮೂರ್ತಿಮಯ ನಿ
ಸ್ಸೀಮನಲ್ಲಮನಲ್ಲಿಗೆಯ್ತಂದನು ವಿನೋದದಲಿ ೧೩

ಬಿಲಗಳನ್ನು, ಸಿದ್ಧರಸದ ಪಾದುಕೆಯನ್ನು, ಅಂಜನವನ್ನು, ಹೂಳಿಟ್ಟ ನಿಧಿ ಹಾಗೂ ವಸ್ತುಗಳನ್ನು ತಮ್ಮೆಮರಿಗೇ ಹುಡುಕುವ ಸಾಧಕರ ಅಕ್ಷಯಭಂಡಾರವಾದ ಶ್ರೀಪರ್ವತವನ್ನು ಪ್ರಭು ಬರುತ್ತಾ ಕಂಡನು. ೧೧. ಶ್ರೀಗಿರಿಯ ತುದಿಯಲ್ಲಿ ನಡೆವ ಬಳ್ಳಿಗಳು, ನಗುವ ಗಿಡಗಳು, ಮಾತನಾಡುವ ಶಿಲೆಗಳು, ತೇಜಸ್ಸಿನಿಂದ ಬೆಂಕಿಯನ್ನು ಕಾರುವ ವೃಕ್ಷಗಳು, ದಿವ್ಯಕಾಂತಿಯನ್ನು ಚೆಲ್ಲುವ ಪೊದರುಗಳು, ಕುಡಿದರೆ ಅಂತಃಕರಣ ಶುದ್ಧಿಯನ್ನುಂಟು ಮಾಡುವ ಹೊಂಡಗಳು, ಜಾತಿಸಹಜವಾದ ವೈರವನ್ನು ಮಾಡದ ಪಕ್ಷಿ ಮೃಗಗಳು ಶೋಭಿಸಿದವು. ೧೨. ಆ ಪರ್ವತಾಗ್ರವನ್ನು ಹತ್ತಿ ನೋಡಲು ಸತ್ಯಲೋಕಕ್ಕೆ ಹಾರಿಸುವ ಗಿರಿಶಿಖರಗಳು, ಅದನ್ನೂ ಮೀರಿ ಪ್ರವೇಶಿಸಿದರೆ ಏಳು ಪಾತಾಳ ಲೋಕಗಳ ಅತಿಶಯತೆಯನ್ನು ತೋರಿಸುವ ಹೆಮ್ಮೆಯ ಬಿಲಗಳು, ಸಾಧಕರು ಏನನ್ನು ಚಿಂತಿಸಿ ಕೂಗಿ ಹೇಳಿದರೂ ತಂದುಕೊಡುವ ಶ್ರೇಷ್ಠವಾದ ವಸ್ತುಗಳು ಅಲ್ಲಿ ಇದ್ದುವು. ೧೩. ಆ ಮಹಾಶೈಲದ ತುದಿಯಲ್ಲಿ ಮನಸ್ಸಿನಲ್ಲಿ ನೆನೆದುದನ್ನು ಪಡೆಯುವೆನೆಂಬ ಸೊಕ್ಕಿನ ಗೋರಕ್ಷನೆಂಬ ಸಾಧಕನು ಪ್ರೀತಿಯಿಂದ ಇರುತ್ತಿರಲು ಆ ದಿನ ಎಣೆಯಿಲ್ಲದ ಮನೋಹರಸ್ವರೂಪಿಯಾದ ಅಲ್ಲಮನು ಅಲ್ಲಿಗೆ ವಿನೋದದಿಂದ ಬಂದನು.

ರೋಗಿಯಲ್ಲಿಗೆಯಮೃತವೇ ಮೆ
ಯ್ಯಾಗಿ ನಡೆತಂದಂತೆ ಜೀವವಿ
ಯೋಗ ತನುವಿಗೆ ಮುಟ್ಟಿ ಮರುಜೀವಣಿಗೆ ಬಂದಂತೆ
ಮೂಗಗಮಲ ವಚೋವಿಳಾಸತೆ
ಯಾಗುದೋಱಿಸಿದಂತೆ ಕೃಪೆಯಿಂ
ದಾಗಳಾ ಗೋರಕ್ಷನಲ್ಲಿಗೆ ಬಂದ ಪ್ರಭುರಾಯ ೧೪

ಬರಲಿಕಾ ಪ್ರಭುರಾಯನಡಿಗಳಿ
ಗೆಱಗಲೊಲ್ಲದೆ ಹಮ್ಮಿನಿಂದಲಿ
ಬೆಱೆತು ಬಿಂಕದ ಬಿಮ್ಮಿನಲಿ ಕೈಮುಗಿದು ಶರಣೆಂದು
ಗುರುತರಾಸನದಲ್ಲಿ ಮಿಗೆ ಕು
ಳ್ಳಿರಿಸಿ ಕೂರ್ಮೆಯಲೊಯ್ಯನೊಯ್ಯನೆ
ಪರಿವಿಡಿಯಲಲ್ಲಮಗೆ ಬಿನ್ನೈಸಿದನು ಗೋರಕ್ಷ ೧೫

ಆವ ಕಡೆಯಿಂ ಬಿಜಯಮಾಡಿದಿ
ರಾವ ಕಾರಣ ಬಂದ ಬರವೆಮ
ಗಾವುದೈ ಬೆಸನೇನು ಹದನ ನಿರೂಪಿಸಾ ಪ್ರಭುವೆ
ನೀವು ಬಹುದೆಮಗತುಳ ಭಾಗ್ಯಫ
ಲಾವಳಿಗೆ ಕಾರಣವಲಾ ಮಹ
ದೇವ ಎನುತಲಿಯುಚಿತ ವಚನವ ನುಡಿದ ಗೋರಕ್ಷ ೧೬

ನುಡಿಯನಾಲಿಸಿ ಕೇಳು ಭಕ್ತಿಯ
ಕಡೆಯಲಾವೆಯ್ತಂದೆವೆಮಗೀ
ಕಡೆಯ ಮನುಜರ ಮನಕೆ ಕಡೆಯನು ಮಾಡಬೇಕಾಗಿ
ಒಡಲಿನಾಸೆಗೆ ಕುದಿದು ಕೋಟಲೆ
ಬಡುವವರ ಕಳವಳವ ಕಳೆಚಲು
ನಡೆದುಬಂದವರಾವೆಲೈ ಗೋರಕ್ಷ ಕೇಳೆಂದ ೧೭

೧೪. ರೋಗಿ ಇರುವಲ್ಲಿಗೆ ಅಮೃತವೇ ರೂಪ ಧರಿಸಿ ನಡೆತಂದಂತೆ, ಜೀವಹೋಗುವ ದೇಹಕ್ಕೆ ಒಂದು ಹಿಡಿ ಸಂಜೀವನ [ಬೇರು] ಬಂದಂತೆ, ಮೂಗನಿಗೆ ಮಾತಿನ ವಿಲಾಸ ಬಂದಂತೆ, ಕೃಪೆಯಿಟ್ಟು ಪ್ರಭುರಾಯನು ಗೋರಕ್ಷನಲ್ಲಿಗೆ ಬಂದನು. ೧೫. [ಹಾಗೆ] ಬಂದವನು ಪ್ರಭುರಾಯನ ಪಾದಗಳಿಗೆ ನಮಸ್ಕಾರ ಮಾಡಲು ಇಚ್ಛಿಸದೆ, ಅಹಂಕಾರದಿಂದ ಕೂಡಿ, ಪ್ರತಿಷ್ಠೆಯ ಗಾಂಭೀರ್ಯದಲ್ಲಿ ಕೈಮುಗಿದು, ಶರಣು ಎಂದು ಹೇಳಿ ಶ್ರೇಷ್ಠವಾದ ಪೀಠದಲ್ಲಿ ಕುಳ್ಳಿರಿಸಿ, ಪ್ರೀತಿಯಿಂದ ಮೆಲ್ಲ ಮೆಲ್ಲನೆ ಗೋರಕ್ಷನು ಅಲ್ಲಮನಲ್ಲಿ ಈ ಕ್ರಮದಲ್ಲಿ ವಿಜ್ಞಾಪನೆ ಮಾಡಿದನು. ೧೬. "ಯಾವ ಕಡೆಯಿಂದ ದಯಮಾಡಿಸಿದಿರಿ? ನಿಮ್ಮ ಆಗಮನದ ಕಾರಣವೇನು? [ಆಗಬೇಕಾದ] ಕಾರ್ಯವೇನು? ಪ್ರಭುವೆ [ಎಲ್ಲ] ಸಂಗತಿಯನ್ನು ಹೇಳು. ಮಹದೇವ ನೀವು ಬಂದುದು ನಮಗೆ ಹೆಚ್ಚಿನ ಭಾಗ್ಯ ಲಾಭಗಳಿಗೆ ಕಾರಣವಾಗಿದೆ" ಎಂದು ಗೋರಕ್ಷನು ಯೋಗ್ಯ ಮಾತುಗಳನ್ನು ಆಡಿದನು. ೧೭. ಆ ಮಾತುಗಳನ್ನು ಕೇಳಿ ಪ್ರಭುವು "ಕೇಳು ಭಕ್ತಿಗೋಸ್ಕರವಾಗಿ ಈ ಕಡೆಯ ಜನರ ಮನಸ್ಸನ್ನು

ಹೊಸತಲಾ ಲೌಕೀಕದುಚಿತವ
ಪಸರಿಸಲು ಪರಮಾರ್ಥವನು ಸೂ
ಚಿಸುತಲಿಹನೆಯದಲ್ಲದೆನ್ನನು ಮುನ್ನ ಪರಿಕಿಸದೆ
ಹೆಸರುಗೊಳುತಲಿದಾನೆಯೀತನ
ಗಸಣೆ ತಾನೇಯಾದಿನಾಥನ
ಬೆಸಗುಯಾಗಲು ಬೇಕೆನುತ ಗೋರಕ್ಷನಿಂತೆಂದ ೧೮

ಎಲೆ ಮಹಾಪುರುಷಾ ನಿಧಾನಿಸಿ
ತಿಳಿಯೆ ನಿನ್ನಂತಸ್ಥವೆಂಬುದು
ನಿಲುಕದೆಮ್ಮಯ ಮತಿಗೆ ನಿನ್ನಯ ರೀತಿ ಹೊಸದಾಗಿ
ಹೊಲಬು ಹುಗದೆಮ್ಮಜೆವ್ವುಗಿಜೆವಿನ
ಸಲುಗೆ ಸಲ್ಲದು ಸಾಕು ನಿನ್ನಯ
ನೆಲೆಯ ನೀನೇ ಬಲ್ಲೆಯೆಂದನು ಬಳಿಕ ಗೋರಕ್ಷ ೧೯

ತನ್ನನಱಿಯದ ಮಂದಮತಿಗಳಿ
ಗಿನ್ನು ಪೆಱರಂತಸ್ಥವೆಂಬುದು
ಕಣ್ಣು ಕಾಣದ ಕುರುಡ ಕನ್ನಡಿವಿಡಿದ ತೆಱನಂತೆ
ನನ್ನ ನಿಜದ ನಿಧಾನವನು ಬಳಿ
ಕಿನ್ನು ಕಾಣುವರಾರು ಮಾತಿನ
ಬಿನ್ನಣಿಗರಿಗೆ ಸಾಧ್ಯವೇ ಗೋರಕ್ಷ ಕೇಳೆಂದ ೨೦

ಮಥಿಸುವ ಕಾರ್ಯ ಮಾಡಬೇಕಿದ್ದುದರಿಂದ ನಾವು ಬಂದೆವು. ದೇಹದ ಮೇಲಿನ ಆಸೆಗಾಗಿ ಚಿಂತಿಸಿ ಕಷ್ಟಪಡುವವರ ಕಳವಳವನ್ನು ನಿವಾರಿಸಲು ನಾವು ನಡೆದು ಬಂದೆವು. ಎಲೆ ಗೋರಕ್ಷ ಕೇಳು" ಎಂದು ಅಲ್ಲಮನು ನುಡಿದನು. ೧೮. "ಇದು ಥೊಸತು. ಲೋಕಕ್ಕೆ ಸಂಬಂಧಿಸಿದಂತೆ ತಕ್ಕುದನ್ನು ಹರಡಲು ಲೌಕಿಕವಲ್ಲದ್ದನ್ನು ಸೂಚಿಸುತ್ತಿರುವನಲ್ಲ. ಅಷ್ಟಲ್ಲದೆ ನನ್ನನ್ನು ಮೊದಲು ನೋಡದಿದ್ದರೂ ಹೆಸರು ಹೇಳುತ್ತಲಿದ್ದಾನೆ. ಈತನ ವಿಚಾರ ಆದಿನಾಥನಿಗೆ ಸಂಬಂಧಿಸಿರಬೇಕು" ಎಂದು [ಆಲೋಚಿಸಿ] ಗೋರಕ್ಷನು ಹೀಗೆಂದು ಪ್ರಭುವಿಗೆ ನುಡಿದನು. ೧೯. "ಎಲೆ ಮಹಾಪುರುಷ, ಸಾವಧಾನದಿಂದ ವಿಚಾರಮಾಡಲು ನಿನ್ನ ರೀತಿ ಹೊಸದಾಗಿದ್ದು ನಿನ್ನ ಅಂತರಂಗವೆಂಬುದು ನಮ್ಮ ಬುದ್ಧಿಗೆ ಎಟುಕದು; ದಾರಿ ಕಾಣದು; ನಮ್ಮ ಬುದ್ಧಿಗಿದ್ಧಿಯ ಚಲಾವಣೆಯಾಗದು. ಸಾಕು, ನಿನ್ನ ನೆಲೆಯನ್ನು ನೀನೇ ಬಲ್ಲೆ" ಎಂದು ಗೋರಕ್ಷನು ನುಡಿದನು. ೨೦. "ತನ್ನನ್ನೇ ತಿಳಿಯದ ಮಂದಬುದ್ಧಿಯವನಿಗೆ ಇನ್ನು ಬೇರೆಯವರ ಅಂತರಂಗವೆನ್ನುವುದು ಕಣ್ಣು ಕಾಣದ ಕುರುಡ ಕನ್ನಡಿ ಹಿಡಿದು ನೋಡಿದ ರೀತಿಯಂತೆ. ನನ್ನ ಸ್ವರೂಪದ ಸಂಪತ್ತನ್ನು ಬಳಿಕ ಇನ್ನು ಕಾಣುವವರಾರು? ಮಾತಿನ ಕುಶಲಿಗರಿಗೆ [ಅದು] ಸಾಧ್ಯವೆ? ಗೋರಕ್ಷ ಕೇಳು" ಎಂದು ಪ್ರಭುವು ನುಡಿದನು.

ಕಾಯವೆಂಬುದು ತಾನು ತಾನೇ
ಕಾಯವಾಗಿಹನಿಂತು ತನ್ನೆಂ
ದಾಯತದ ತಿಳಿವೆಂಬುದಿದು ಕಾಪಾಲಮಾರ್ಗದಲಿ
ನ್ಯಾಯಧರ್ಮವು ನನ್ನನಱಿವ ವಿ
ಡಾಯವೆನಗೇನಱಿದು ಪ್ರಭುವೇ
ಬಾಯನುಡಿಗಳ ಬಲ್ಲಿದರು ನಾವಲ್ಲ ಕೇಳೆಂದ ೨೧

ಎಲು ತೊಗಲು ಮಲ ಮೂತ್ರ ನೆತ್ತರ
ಕೊಳಚೆಯಾಗಿಹ ಹೇಸಿಕೆಯ ತನಿ
ಗೊಳೆಯೊಡಲು ತಾನೆಂಬ ಮೂರ್ಖನು ತನ್ನನಱಿದಪನೆ
ಸಲುವುದೇ ಕಾಪಾಲಮಾರ್ಗಕೆ
ಹಳಿವ ತಹರೇ ಸಾಂಪ್ರದಾಯದ
ನೆಲೆಯನಱಿವುದು ಸೂಱೆಯೇ ಗೋರಕ್ಷ ಕೇಳೆಂದ ೨೨

ಮಾಡಲಱಿಯದವಂಗೆ ಕೊಳಚೆಯ
ಮಾಡವೀ ತನು ತಪ್ಪದೈ ದಿಟ
ಮಾಡಬಲ್ಲೊಡೆಯೀ ಶರೀರವೆ ರತ್ನವಾಗಿಹುದು
ಖೋಡಿಗಳೆವುದು ಮಾಯೆಗೀಯೆಯ
ನೇಡಿಸುವುದಾ ಮಿತ್ತುಗಿತ್ತುವ
ರೂಢಿಯಲಿ ತನು ಸಿದ್ಧರಾಮೈ ಪ್ರಭುವೆ ಕೇಳೆಂದ ೨೩

ಎಲೆ ಮರುಳೆ ಮೃದುವಾದ ಮಾಯೆಯ
ಬಲೆಯ ಬಲ್ಲಿತ ಮಾಡೆ ಸಾವನು
ಗೆಲಿದೆನೆಂದು ನಿರರ್ಥದಲಿ ಹಾರೈಸದಿರು ಬಱಿದೆ
ತಿಳಿವೊಡೀ ತನು ತಾನೆ ಕಾಲನ
ನಿಳಯ ನೀನಿದ ನಂಬಿ ನುಡಿದರೆ
ಪ್ರಳಯ ನಿನ್ನನು ಬಿಡುವುದೇ ಗೋರಕ್ಷ ಕೇಳೆಂದ ೨೪

೨೧. "ದೇಹವೆಂಬುದೇ ನಾನು. ನಾನೇ ದೇಹವಾಗಿರುವೆನು. ಕಾಪಾಲಿಕರ ಧರ್ಮದಲ್ಲಿ ಇದು ಸರಿಯಾದ ಭಾವನೆ. ನ್ಯಾಯವಾದ ಧರ್ಮವು [ಇದೇ]. ನನ್ನನ್ನು ತಿಳಿಯುವ ಶಕ್ತಿಯು ನನಗೇನು ಅಸಾಧ್ಯವೆ? ಪ್ರಭುವೇ ಕೇಳು, ಬರಿಯ ಮಾತಿನ ಗಟ್ಟಿಗರು ನಾವಲ್ಲ" ಎಂದು ಗೋರಕ್ಷನು ನುಡಿದನು. ೨೨. "ಎಲುಬು, ಚರ್ಮ, ಮಲ, ಮೂತ್ರ, ರಕ್ತ, ಕೊಳಚೆಯಾಗಿರುವ ಹೇಸಿಕೆಯ, ಪ್ರತ್ಯೇಕವಾದ ಕೊಚ್ಚೆಯಾಗಿರುವ ದೇಹವೇ ತಾನು ಎನ್ನುವ ಮೂರ್ಖನು ತನ್ನನು ತಿಳಿಯುವನೆ? ಕಾಪಾಲಿಗರ ಪಂಥದಲ್ಲಿ ಇದು ಸಲ್ಲುವುದೆ? ಅದಕ್ಕೆ ಅಪಕೀರ್ತಿಯನ್ನು ತರಬಹುದೆ? ಸಂಪ್ರದಾಯದ ನೆಲೆಯನ್ನು ತಿಳಿಯುವುದು [ಅದೇನು] ಸುಲಿಗೆಯೆ? ಗೋರಕ್ಷ ಕೇಳು" ಎಂದು ಅಲ್ಲಮನು ನುಡಿದನು. ೨೩. [ಏನು] ಮಾಡಲೂ ತಿಳಿಯದವನಿಗೆ ಈ ದೇಹ ಕೊಳಚೆಯ ಮನೆ. ಇದು ತಪ್ಪದು, ಸತ್ಯ. ಮಾಡಲು ತಿಳಿದಿದ್ದರೆ ಈ ಶರೀರವೇ ರತ್ನವಾಗಿರುವುದು. ಮಾಯೆಗೀಯೆಯನ್ನು ಹಾಸ್ಯಮಾಡುವುದು [ನಿಮ್ಮ] ಪದ್ಧತಿ. ನಾವು ಸಿದ್ಧಿ ಪಡೆದ ದೇಹವುಳ್ಳವರು, ಪ್ರಭುವೇ ಕೇಳು" ಎಂದು ಗೋರಕ್ಷನು ನುಡಿದನು. ೨೪. "ಎಲೆ ಹುಚ್ಚ, ಕೋಮಲವಾದ ಮಾಯೆಯ ಬಲೆಯನ್ನು ಬಲಿಷ್ಠವಾಗುವಂತೆ ಮಾಡಿ ಮೃತ್ಯುವನ್ನು ಗೆದ್ದೆನೆಂದು ಅರ್ಥವಿಲ್ಲದೆ

ಆದೊಡಿನ್ನೇಳೇಳು ಹಿಡಿ ಹಿಡಿ
ಕೈದುವಿದೆ ಕೋ ತನ್ನ ತನುವನು
ಹೊಯ್ದು ನೋಡಾ ನೀನು ನಿನ್ನಾಪನಿತು ಸತ್ವದಲಿ
ಕೂದಲೊಳಗೊಂದಿನಿತು ಹಜಿಮುಜಿ
ಯಾದರಕಟಾ ನಾನು ಸಿದ್ಧನೆ
ವಾದವೇತಕೆ ದೃಷ್ಟವಿರಲಾ ಪ್ರಭುವೆ ನೋಡೆಂದ ೨೫

ಕೊಂದು ನೋಡುವುದಿದು ಪರೀಕ್ಷಿಸು
ವಂದವೇ ನಾವಜಿಯೆವಾಸುರ
ಬಂಧಕರ್ಮವನಿದು ಗುಹೇಶ್ವರಲಿಂಗಮತವಲ್ಲ
ಇಂದು ನಿನ್ನ ಶರೀರವಳಿದೊಡೆ
ಮುಂದೆ ಸಿದ್ಧಿಯ ಪಡೆವರಾರೈ
ಮಂದಮತಿಗಾನಂಜುವೆನು ಗೋರಕ್ಷ ಕೇಳೆಂದ ೨೬

ಸಾವು ಬಂದೊಡೆ ನಾವು ಸಿದ್ಧಿಸಿ
ತಾವುದೈ ತನುವಳಿವುದೇ ಶ
ಸ್ತ್ರಾವಳಿಗೆ ದಿಟವಣಿಯಬಾರದ ಮಡಕೆಯಡಬಹುದೆ
ಈ ವಿಕಲ್ಪವ ಬಿಟ್ಟು ನಿರ್ಭಯ
ಭಾವಭರದಲಿ ಹೊಡೆದು ನೋಡಿ
ನ್ನಾವ ಸಂಶಯವೇತಕೆಲೆ ಪ್ರಭುರಾಯ ಹೇಳೆಂದ ೨೭

ಸುಮ್ಮನೆ ಆಶಿಸದಿರು. ತಿಳಿವುದಾದರೆ, ಈ ದೇಹವೇ ಮೃತ್ಯುವಿನ ಮನೆ. ನೀನೀ ಶರೀರವನ್ನು ನೆಚ್ಚಿ ಮಾತನಾಡಿದರೆ ಸಾವು ನಿನ್ನನ್ನು ಬಿಡುವುದೆ? ಗೋರಕ್ಷ ಕೇಳು" ಎಂದು ಅಲ್ಲಮನು ನುಡಿದನು. ೨೫. "ಹಾಗಾದರೆ ಇನ್ನು ಮೇಲೇಳು. ಹಿಡಿ ಹಿಡಿ, ಆಯುಧವಿದೆ ತೆಗೆದುಕೊ. ನನ್ನ ದೇಹವನ್ನು ನೀನು ನಿನ್ನ ಶಕ್ತ್ಯನುಸಾರ ಹೊಡೆದು ನೋಡು. ಕೂದಲು ಸ್ವಲ್ಪ ಕೊಂಕುವುದೇ ಆಗಲಿ ಮುರಿಯುವುದೇ ಆಗಲಿ ಆದರೆ, ಅಯ್ಯೋ, ನಾನು ಸಿದ್ಧನೆ? ವಾದವೇತಕ್ಕೆ? ಪ್ರಭುವೆ ಪರಿಶೀಲಿಸಿ ನೋಡು" ಎಂದು ಗೋರಕ್ಷನು ನುಡಿದನು. ೨೬. "ಕೊಂದು ನೋಡುವುದು ಪರೀಕ್ಷಿಸುವ ರೀತಿಯೆ? ರಾಕ್ಷಸರಿಗೆ ಸಂಬಂಧಿಸಿದ ಕಾರ್ಯವಿದು. ಇದು ನಮಗೆ ತಿಳಿಯದು. ಇದನ್ನು ಗುಹೇಶ್ವರಲಿಂಗವು ಒಪ್ಪುವುದಿಲ್ಲ. ಇಂದು ನಿನ್ನ ಶರೀರ ಹೋದರೆ ಮುಂದೆ ಸಿದ್ಧಿಯನ್ನು ಪಡೆಯುವವರಾರು? ಮಂದಬುದ್ಧಿಗೆ ನಾನಂಜುವೆನು, ಗೋರಕ್ಷ ಕೇಳು" ಎಂದು ಅಲ್ಲಮನು ನುಡಿದನು. ೨೭. "ಸಾವು ಬಂದದ್ದೇ ಆದರೆ ನಾವು ಸಿದ್ಧಿಸಿದ್ದೇನು? ಶಸ್ತ್ರಗಳ ಸಮೂಹಕ್ಕೆ ದೇಹ ನಾಶಹೊಂದುವುದೆ? ನಿಜವಾಗಿ ಸಿದ್ಧಮಾಡದ ಮಡಕೆಯಿಂದ ಅಡುಗೆ ಮಾಡಬಹುದೆ? ಈ ಭ್ರಾಂತಿಯನ್ನು ಬಿಟ್ಟು, ನಿರ್ಭಯಭಾವದಿಂದ ಕೂಡಿ ಹೊಡೆದು ನೋಡು. ಇನ್ನು ಸಂಶಯ ವೇತಕ್ಕೆ? ಎಲೆ ಪ್ರಭುರಾಯ ಹೇಳು" ಎಂದು ಗೋರಕ್ಷನು ನುಡಿದನು.

ಒಲ್ಲೆವೆಂದನಲೇಕೆ ಹುಟ್ಟಿಸ
ಬಲ್ಲವನು ಹೊಂದಿಸಿದೊಡಾತಗೆ
ಹೊಲ್ಲವಾವುದು ನಾವು ಸಲಿಸುವೆವೀತನರ್ತಿಯನು
ನಿಲ್ಲದೆಱಗಲು ಸತ್ತನಾದೊಡೆ
ಬಲ್ಲಿತಹ ಗೋರಕ್ಷನನು ನಾ
ವಿಲ್ಲಿ ಸೃಜಿಸುವೆವೆನುತಲಾ ಪ್ರಭುರಾಯನನುವಾದ ೨೮

ಹಿಡಿದು ಹಿಂಗದೆ ಬಲಿದು ಝಳಪಿಸಿ
ಜಡಿದು ಹೊಱಕೈಯಿಂದೆ ಖಣಿಖಟಿ
ಲಿಡಲಿಕಾ ಪ್ರಭುವಬ್ಬರಿಸಿ ಬಿಱು ಹೊಯಿಲನೆಱಗಿದರೆ
ನಡುಗಿದುದು ನೆಲ ಶಿಲೆಗಳನು ಮೈ
ಗೊಡಹಿದುದು ಗಿರಿಯೊಂದು ಕೂದಲು
ಕಡಿಯದಾ ಗೋರಕ್ಷನಲಿಯೇನೆಂಬೆನಚ್ಚರಿಯ ೨೯

ಮೋಹದಲಿ ಮಾಯಾ ಪ್ರಪಂಚಿನ
ದೇಹಸಿದ್ಧಿಯ ಪಡೆದನೆಂಬೀ
ಗಾಹಿನಿಂದಲಿ ವಜ್ರಪಿಂಡಶರೀರ ಫಲಿಸಿದೊಡೆ
ಊಹಿಸುವೊಡಾ ಪ್ರಳಯವನು ಸಂ
ದೇಹವಿಲ್ಲದೆ ಗೆಲುವೆಯೋ ಸುಡು
ದೇಹಸಿದ್ಧಿಯನೆನುತಲಾ ಪ್ರಭು ಖಂಡೆಯವ ಬಿಸುಟ ೩೦

ಸಿದ್ಧಿಯುಳ್ಳವನಂಗದಲಿ ಖಣಿ
ಲೆದ್ದು ಧ್ವನಿ ಹುಟ್ಟುವುದೆ ಹೊಯಿದೊಡೆ
ಸಿದ್ಧಿಯೆಂಬುದು ತಿಳಿವೊಡೀ ತೆಱನಲ್ಲ ನಂಬದಿರು
ಹೊದ್ದಿತಲ್ಲಾ ಪ್ರಳಯವೀ ಪರಿ
ಬದ್ಧದೇಹಿಗೆಯಕ್ಕಟಕ್ಕಟ
ಸಿದ್ಧತನ ಸಾಮಾನ್ಯವೇ ಗೋರಕ್ಷ ಕೇಳೆಂದ ೩೧

೨೮. "ಇಷ್ಟಪಡುವುದಿಲ್ಲವೆನ್ನುವುದೇಕೆ? ಹುಟ್ಟಿಸಿದಾತನು ಸಾಯಿಸಿದರೆ ಆತನಿಗೆ ಕೆಡಕೇನು? ಈತನ ಪ್ರೀತಿಯನ್ನು ನಾವು ನೆರವೇರಿಸೋಣ. ಹೊಡೆಯಲು ನಿಲ್ಲದೆ ಸತ್ತನಾದರೆ ಬಲಿಷ್ಠನಾದ ಗೋರಕ್ಷನನ್ನು ನಾವು ಇಲ್ಲಿ [ಮರಳಿ] ಹುಟ್ಟಿಸುವೆವು" ಎಂದು [ಆಲೋಚಿಸಿ] ಪ್ರಭುರಾಯನು [ಹೊಡೆಯಲು] ಸಿದ್ಧನಾದನು. ೨೯. ಕತ್ತಿಯನ್ನು ಹಿಡಿದು ಹಿಂದೆ ಸರಿಯದೆ ಬಲವಾಗಿ ಝಳಪಿಸಿ ಹೆದರಿಸಿ ಹೊರಕೈಯಿಂದ ಖಣಿಲ್ ಖಟಿಲ್ ಎನ್ನುವಂತೆ ಅಬ್ಬರಿಸಿ ಬಲವಾದ ಏಟನ್ನು ಹೊಡೆಯಲು ನೆಲ ನಡುಗಿತು; ಪರ್ವತವು ಕಲ್ಲುಗಳನ್ನು ಹೊರಚೆಲ್ಲಿತು. ಗೋರಕ್ಷನ ಒಂದು ಕೂದಲೂ ಕತ್ತರಿಸದಿರಲು ಆ ಆಶ್ಚರ್ಯವನ್ನು ಏನು ಹೇಳಲಿ! ೩೦. "ಮಾಯಾಪ್ರಪಂಚದ ಮೇಲಣ ಮೋಹದಿಂದ ದೇಹಸಿದ್ಧಿಯನ್ನು ಪಡೆದೆನೆಂಬ ಈ ವಂಚನೆಯಿಂದ ವಜ್ರದಂತಹ ಪಿಂಡಶರೀರ ಪ್ರಾಪ್ತವಾದರೆ, ಅನುಮಾನವಿಲ್ಲದೆ ಆ ಪ್ರಳಯವನ್ನು ಗೆಲ್ಲುವೆಯಾ? ಸುಡಲಿ, [ನಿನ್ನ] ದೇಹಸಿದ್ಧಿಯನ್ನು" ಎಂದು ಹೇಳುತ್ತಾ ಪ್ರಭು ಕತ್ತಿಯನ್ನು ಬೀಸಾಡಿದನು. ೩೧. "ಸಿದ್ಧಿಯುಳ್ಳವನ ದೇಹದಲ್ಲಿ ಹೊಡೆದಾಗ ಖಣಿಲೆಂಬ ಧ್ವನಿ ಹುಟ್ಟುವುದೆ? ಸಿದ್ಧಿ ಎಂದರೆ ಈ ರೀತಿಯಲ್ಲ, ನಂಬದಿರು. ಈ ರೀತಿ

ಬಱಸಿಡಿಲು ಶೀತೋಷ್ಣ ಖಡುಗದ
ಬಿಱುಬು ಹೊಯಿಲಿಗೆ ಕೆಡದೆ ವಜ್ರದ
ಬಿಱಿಸಿನಂತೆನಿಸಿದ ಶರೀರವು ಸಿದ್ಧಿಯಲ್ಲದೊಡೆ
ಪೆಱತದಾವುದು ಸಿದ್ಧನಾದೊಡೆ
ಕುಱುಹದಾವುದು ನೀನು ಬಲ್ಲೊಡೆ
ಬಱಿಯ ಮಾತನು ಬಿಟ್ಟು ದಿಟವನು ಪ್ರಭುವೆ ತೋಱೆಂದ ೩೨

ಹಿಡಿದುಕೋ ಖಂಡೆಯವನಾದೊಡೆ
ಹೊಡೆದು ನೋಡೆಮ್ಮುವನು ಮುನ್ನವು
ಮುಡುಹಿಗೆನಿತುಳ್ಳನಿತು ನಿನ್ನಯ ಸರ್ವ ಸತ್ವದಲಿ
ಖಡುಗ ಮುಖದಲಿ ಕಾಂಬುದಲ್ಲದೆ
ನುಡಿಯನುಣ್ಣಿಸಲೇನುಕಾರಣ
ತಡವಿದೇತಕೆ ತಥ್ಯವನು ಗೋರಕ್ಷ ನೋಡೆಂದ ೩೩

ನೋಡಬೇಕಿನ್ನಾದೊಡೀತನ
ಗಾಡಿಯನು ಸಲೆ ಸಿದ್ಧತನದಾ
ರೂಢವನು ಸಾಧಕರಿಗೆ ಮಹಾನವಮಿಯೆಂದೆನುತ
ನೀಡಿ ನಿಜ ಸವ್ಯಾಪಸವ್ಯದ
ಮೋಡಿಯಲಿ ಬಿಡದೆಱಗುತಿರಲೀ
ಸಾಡಿತವನಸಿಯಮಮ ಪ್ರಭುವಿನ ಬಯಲ ದೇಹದಲಿ ೩೪

ದೇಹವನ್ನು ಹೊಂದಿಕೊಂಡಿರುವವನಿಗೆ ಪ್ರಳಯವು ಬಂದೇಬರುವುದು. ಸಿದ್ಧಿಯೆಂದರೆ ಸಾಮಾನ್ಯವೆ? ಗೋರಕ್ಷ, ಕೇಳು" ಎಂದು ಅಲ್ಲಮನು ನುಡಿದನು. ೩೨. "ಬರಸಿಡಿಲು, ಶೀತ, ಉಷ್ಣ, ಬಲವಾದ ಖಡ್ಗದ ಹೊಡೆತ-ಇವುಗಳಿಗೆ [ದೇಹ] ನಾಶ ಹೊಂದದೆ ಕಠಿನವೆಂದೆನಿಸಿದರೆ [ಅದು] ಶರೀರಸಿದ್ಧಿ ಎನಿಸದಿದ್ದರೆ ಮತ್ತಾವುದು [ಸಿದ್ಧಿ]? ಸಿದ್ಧನಾದರೆ ಚಿಹ್ನೆ ಯಾವುದು? ನೀನು ತಿಳಿದಿರುವೆಯಾದರೆ, ಪ್ರಭುವೇ, ವ್ಯರ್ಥವಾದ ಮಾತನ್ನು ಬಿಟ್ಟು ನಿಜವನ್ನು ತೋರಿಸು" ಎಂದು ಗೋರಕ್ಷನು ನುಡಿದನು. ೩೩. "ಹಾಗಾದರೆ, ಹಿಡಿದುಕೋ ಕತ್ತಿಯನ್ನು, ನಮ್ಮನ್ನು ಮೊದಲಿಗೆ ಹೊಡೆದು ನೋಡು. [ಸಿದ್ಧನ ಚಿಹ್ನೆಯನ್ನು] ಕತ್ತಿಯ ಮುಖಾಂತರ ಕಾಣುವುದಲ್ಲದೆ ಮಾತನ್ನು ಕೌಶಲ್ಯದಿಂದ ಆಡುವುದೇಕೆ? ತಡವೇಕೆ? ಗೋರಕ್ಷಾ, ನಿಜವನ್ನು ನೋಡು" ಎಂದು ಪ್ರಭುವು ನುಡಿದನು. ೩೪. ಇನ್ನಾದರೂ ಈತನ ಬೆಡಗನ್ನು, ಚೆನ್ನಾಗಿ ಸಿದ್ಧತನ ಹತ್ತಿರುವುದನ್ನು ನೋಡಬೇಕು. ಸಾಧಕನಿಗೆ ಇದೇ ಮಹಾನವಮಿ ಎಂದು ಗೋರಕ್ಷನು ತನ್ನ ಕತ್ತಿಯನ್ನು ಎಡಬಲಕ್ಕೆ ಬೀಸಿ ವಿಲಾಸದಿಂದ ಬಿಡದೆ ಹೊಡೆಯುತ್ತಿರಲು ಅವನ ಕತ್ತಿಯು ಪ್ರಭುವಿನ ಶೂನ್ಯದೇಹದಲ್ಲಿ ಈಸಾಡಿತು.

ಸೊಪ್ಪುಗಳಾಗದು ಕೈದುವಾನದು
ವೊಪ್ಪವಳಿಯದು ಜಂತ ಜೋಕೆಗೆ
ತಪ್ಪುದೋಱದು ಹೊಡೆಯೆ ಹಾಱುವ ಹದ್ದಿನಂದದಲಿ
ನಿಪ್ಪಸರದಸಿ ಬಯಲ ದೇಹಿಯ
ನಪ್ಪಲಱಿಯದಿದೇನು ಚೋದ್ಯವೊ
ತಪ್ಪದೀತನೆ ಗುರುವೆನುತ ಗೋರಕ್ಷನಿಂತೆಂದ ೩೫

ಅಣಕವಲ್ಲಿದು ತನ್ನ ಹೊಯಿದರೆ
ಖಣಿಲೆನುತ ಖಂಡೆಯಕೆ ಮಾಱಾಂ
ತಣಿದುದೆನ್ನಸು ನಿನ್ನ ಹೊಯಿದೊಡೆ ಬಯಲ ಹೊಯಿದಂತೆ
ನುಣುಚಿ ನುಣ್ಣನೆ ಕಡೆಗೆ ಖಂಡೆಯ
ಜುಣುಗಿ ಹೋಯಿತಿದಾವ ಮಹಿಮೆಯ
ಗುಣವೊ ನಮಗಿದನಱಿಯಬಾರದು ಪ್ರಭುವೆ ಹೇಳೆಂದ ೩೬

ಕಾಯ ಬಲಿದರೆ ಮಾಯೆ ಬಲಿವುದು
ಮಾಯೆ ಬಲಿದರೆ ಛಾಯೆ ಬಲಿವುದು
ಕಾಯ ಮಾಯಾ ಛಾಯೆ ಬಲಿದರೆ ಸಿದ್ಧತನವಲ್ಲ
ಕಾಯ ಮಾಯಾ ಛಾಯದಾಗಿನ
ದಾಯವನು ಕಳೆದುಳಿದನಾದೊಡೆ
ರಾಯನಾತನು ಸಿದ್ಧರಲಿ ಗೋರಕ್ಷ ಕೇಳೆಂದ ೩೭

ಆದಿನಾಥನೆ ತಾನಿದೊಂದು ವಿ
ನೋದವೇಷವ ಧರಿಸಿ ತನ್ನಯ
ಸಾಧಕರ ಸಂಕಲ್ಪಸಿದ್ಧಿಯನೀಯಬೇಕೆಂದು
ಮೇದಿನಿಗೆ ಮೆಯ್ಗಾಣಿಸಿದನಿ
ನ್ನಾದುದಾನಱಿಸುವ ಮನೋರಥ
ವೆಯ್ದೆ ಫಲಿಸಿದುದೆನುತಲಾ ಗೋರಕ್ಷನಿಂತೆಂದ ೩೮

೩೫. "ಶಬ್ದವಾಗದು, ಕತ್ತಿ ಇದಿರಿಸದು, ದೇಹದ ಅಂದವಳಿಯದು, ಸಾಧನದ ಪ್ರೌಢಿಮೆಯಲ್ಲಿ ತಪ್ಪು ಕಾಣಿಸದು. ಹೊಡೆಯಲು ಹಾರಿಹೋಗುವ ಹದ್ದಿನಂತೆ ಬಿರುಸಿನಿಂದ ಬಂದ ಕತ್ತಿಯು ಬಯಲದೇಹಿಯನ್ನು ಅಪ್ಪಲು ತಿಳಿಯದು. ಇದೇನು ಆಶ್ಚರ್ಯವೊ, ನಿಶ್ಚಯವಾಗಿಯೂ ಈತನೇ ಗುರುವು" ಎಂದು ಹೇಳುತ್ತಾ ಮತ್ತೆ ಹೀಗೆಂದನು. ೩೬. "ಇದು ಹಾಸ್ಯವಲ್ಲ. ನನ್ನನ್ನು ಹೊಡೆಯಲು ಖಣಿಲೆಂದು ದೇಹವು ಕತ್ತಿಯನ್ನು ಪ್ರತಿಭಟಿಸಿತು. ನಿನ್ನನ್ನು ಹೊಡೆದರೆ ಬಯಲನ್ನು ಹೊಡೆದಂತೆ ನಯವಾಗಿ ಜಾರಿ ಕೊನೆಗೆ ಕತ್ತಿಯೂ ಜಾರಿ ಹೋಯಿತು. ಇದಾವ ಮಹಿಮೆಯ ಗುಣವೊ? ನಮಗೆ ಇದನ್ನು ತಿಳಿಯಲಾಗದು. ಪ್ರಭುವೆ [ಬಿಡಿಸಿ] ಹೇಳು" ಎಂದು ಗೋರಕ್ಷನು ಪ್ರಾರ್ಥಿಸಿದನು. ೩೭. "ದೇಹ ಬಲಿಷ್ಠವಾದರೆ ಮಾಯೆ ಬಲಿಷ್ಠವಾಗುವುದು. ಮಾಯೆ ಬಲಿಷ್ಠವಾದರೆ ಛಾಯೆ ಬಲಿಷ್ಠವಾಗುವುದು. ದೇಹ-ಮಾಯೆ-ಛಾಯೆ ಇವು ಬಲಿಷ್ಠವಾದರೆ ಸಿದ್ಧತನವಲ್ಲ. ದೇಹ-ಮಾಯೆ-ಛಾಯೆ ಇವುಗಳ ಸಾಧನವನ್ನು ಮೀರಿ ನಿಂದವನಾದರೆ ಆತ ಸಿದ್ಧರುಗಳಲ್ಲಿ ರಾಜನು, ಗೋರಕ್ಷ ಕೇಳು" ಎಂದು ಅಲ್ಲಮನು ನುಡಿದನು. ೩೮. "ಆದಿನಾಥನೇ ತಾನೊಂದು ವಿನೋದವೇಷವನ್ನು ಧರಿಸಿ ತನ್ನ ಸಾಧಕರ ಸಂಕಲ್ಪವು ಸಿದ್ಧಿಸುವಂತೆ

ಅಱೆಯೆ ನಾನಿನ್ನೆಬರ ನಿನ್ನಯ
ತೆಱನನೆನ್ನಯ ಮತ್ತತನದಲಿ
ಬೆಱೆತುಕೊಂಡಾನಿರ್ದೆನೆನ್ನದು ಸರ್ವ ತಪ್ಪೆನುತ
ನೆಱೆ ಶರೀರವ ನೀಡಿ ಕೈಮುಗಿ
ದೆಱಗಿದನು ಭಯಭಕ್ತಿಭಾರದ
ಲೊಱಗುವಂತಾ ಪ್ರಭುವಿನಡಿಯೊಳು ಬಳಿಕ ಗೋರಕ್ಷ ೩೯

ಬಿಸಿಯ ಹದನನು ತಿಳಿದು ಲೋಹವ
ಬೆಸುವವೊಲು ಪರಿಪಾಕಭಾವದ
ಹಸನನಱೆದಿನ್ನೀತಗುಪದೇಶಿಸುವೆನೆಂದೆನುತ
ಒಸೆದು ಹಣೆವಿಡಿದೆತ್ತಿ ಕರುಣವ
ಪಸರಿಸುತ ಗೋರಕ್ಷನನು ಮ
ನ್ನಿಸಿದನೆಮ್ಮಯ ಗುರು ಗುಹೇಶ್ವರ ಲಿಂಗಲೀಲೆಯಲಿ ೪೦

ನೋಡಿದರೆ ಮದಮತ್ಸರಗಳೆ
ದ್ದೋಡಿದುವು ಕರುಣದಲಿ ಗುರು ಮಾ
ತಾಡಿದೊಡೆ ಮಗ್ಗಿದುದು ಮನಸಿನ ಮಱವೆ ನಿಮಿಷದಲಿ
ನೀಡಿ ಕೈಮುಟ್ಟದೊಡೆ ಕಾಯದ
ಖೋಡಿ ಹೋಯಿತು ವಿಮಲ ತನು ಮನ
ಮೂಡಿತಾ ಗೋರಕ್ಷನಲಿ ಪ್ರಭುಲಿಂಗಲೀಲೆಯಲಿ ೪೧

ಅನುಗ್ರಹಿಸಬೇಕೆಂದು ಭೂಮಿಯಲ್ಲಿ ಕಾಣಿಸಿಕೊಂಡನು. ಇನ್ನು [ಬಯಕೆ] ಪೂರಯಿಸಿತು. ನಾನು ಬಯಸುತ್ತಿದ್ದ ಇಷ್ಟಾರ್ಥವು ಚೆನ್ನಾಗಿ ಫಲ ಕೊಟ್ಟಿತು" ಎಂದು ಹೇಳುತ್ತಾ ಮತ್ತೆ ಗೋರಕ್ಷನು ಹೀಗೆಂದನು. ೩೯. "ನಾನಿಲ್ಲಿಯವರೆವಿಗೆ ನಿನ್ನ ರೀತಿಯನ್ನು ತಿಳಿದಿರಲಿಲ್ಲ. ನಾನು ಸೊಕ್ಕಿನಿಂದ ಕೂಡಿದ್ದೆನು. ಸರ್ವ ತಪ್ಪುಗಳೂ ನನ್ನದೆ" ಎಂದು ಹೇಳುತ್ತಾ ಗೋರಕ್ಷನು ಮೈಚಾಚಿ ಕೈಮುಗಿದು ಭಯಭಕ್ತಿಗಳ ಭಾರದಿಂದ ಬೀಳುವಂತೆ ಪ್ರಭುವಿನ ಪಾದಗಳಿಗೆ ಬಾಗಿದನು. ೪೦. ಗುರು ಗುಹೇಶ್ವರಲಿಂಗನಾದ ಅಲ್ಲಮಪ್ರಭುವು ಲೀಲೆಯಿಂದ, ಬಿಸಿಯ ಸ್ಥಿತಿಯನ್ನರಿತು ಲೋಹದ ಬೆಸುಗೆ ಹಾಕುವ ರೀತಿಯಲ್ಲಿ ಗೋರಕ್ಷನ ಪರಿಪಕ್ವಭಾವದ ಶುದ್ಧತೆಯನ್ನು ತಿಳಿದು ಇನ್ನು ಈತನಿಗೆ ಉಪದೇಶಿಸೋಣವೆಂದು ಪ್ರೀತಿಯಿಂದ ಹಣೆ ಹಿಡಿದೆತ್ತಿ ಕರುಣೆಯನ್ನು ಬೀರಿ ಮನ್ನಿಸಿದನು. ೪೧. ನೋಡುವಷ್ಟರಲ್ಲಿ ಪ್ರಭುಲಿಂಗನ ಲೀಲೆಯಿಂದಾಗಿ [ಗೋರಕ್ಷನ] ಮದ ಮತ್ಸರಗಳು ಎದ್ದು ಓಡಿದುವು. ಕರುಣೆಯಿಂದ ಗುರು ಮಾತನಾಡಲು ನಿಮಿಷದಲ್ಲೇ ಅವನ ಮನಸ್ಸಿನ ಅಜ್ಞಾನ ಕಾಣದಂತಾಯಿತು. ಕೈಚಾಚಿ ಸ್ಪರ್ಶಿಸಲು ದೇಹದ ಕೊರತೆಯೆಲ್ಲ ಹೋಯಿತು. ಪರಿಶುದ್ಧವಾದ ದೇಹ ಮನಸ್ಸುಗಳ ಉದ್ಭವವಾದುವು.

ಬಳಿಕಲಾ ಗೋರಕ್ಷನತಿ ಕಿಂ
ಕಲವನಂಗೀಕರಿಸಿ ಮನದೊಳು
ನಲಿದು ನೋಡುತ ರೋಮಪುಳಕದ ಗುಡಿಯ ನೆಗಹುತಲಿ
ಎಲೆ ಮಹಾಘನಮಹಿಮ ಕರುಣಾ
ಜಲಧಿಯೇ ನಾನಾವ ಗತಿಯಲಿ
ನಿಲುವೆನೆನುತಾ ಪ್ರಭುವಿಗೆಂದನು ಭಕ್ತಿಯುಕ್ತಿಯಲಿ ೪೨

ಆದೊಡಾಲಿಸಿ ಕೇಳು ಕಠಿಣತೆ
ಯಾದ ತನುವಿದು ಕಾಯಸಿದ್ಧಿಯ
ಭೇದವಲ್ಲದೆ ನಿತ್ಯಮುಕ್ತಿಯ ಸಿದ್ಧಿಯಿಂತಲ್ಲ
ಈ ದುರಾಶೆಯ ಹೋದ ಹೊಲಬಿನ
ಹಾದಿಯನು ಹುಗದಾ ಗುಹೇಶ್ವರ
ಪಾದಕೆಱಗಲು ಸಿದ್ಧನಹನೈ ಕಂದ ಕೇಳೆಂದ ೪೩

ನಂಬುವೊಡೆ ಹೇಳಾ ಗುಹೇಶ್ವರ
ನೆಂಬನಾವನು ವಾಸಿಸಲು ತನ
ಗಿಂಬದಾವುದು ಭಜಿಸಲೆಂತಾತನನು ಹೇಳೆನಲು
ಹಂಬಲಿಸಲೇಕಾ ಗುಹೇಶ್ವರ
ನೆಂಬವನೆ ನಾನಿದಕೆ ಸಂಶಯ
ವೆಂಬುದಿಲ್ಲೈ ಸತ್ಯವಿದು ಗೋರಕ್ಷ ಕೇಳೆಂದ ೪೪

ಗುಹೆಯೆಲ್ಲೈ ಕೇಳಾತ್ಮನಂತಾ
ಗುಹೆಗೆ ಪತಿಯಾನೆನ್ನ ನಾಮದ
ಮಹಿಮೆ ತಾನು ಗುಹೇಶ್ವರಾಂಕಿತವಾದ ಕತದಿಂದೆ
ಮಹಿಯ ಲೌಕಿಕರಲ್ಲಿ ನುಱಿಹಿಸಿ
ವಿಹಿತವೆಂಬಂತಿರ ಗುಹೇಶ್ವರ
ಸಹಜನಾಮವೆ ನಟಿಸಿದೆನು ನಾನೆನ್ನ ಲೀಲೆಯಲಿ ೪೫

೪೨. ಅನಂತರ ಗೋರಕ್ಷನು ಕಿಂಕರಭಾವವನ್ನು ತಾಳಿ, ಮನಸ್ಸಿನಲ್ಲಿ ಸಂತೋಷಗೊಂಡು, ಪ್ರಭುವನ್ನು ನೋಡಿ ರೋಮಾಂಚನದ ಹೆಚ್ಚಳವನ್ನು ಪ್ರಕಟಪಡಿಸುತ್ತ "ಎಲೆ ಮಹಾ ಘನಮಹಿಮ, ಕರುಣಾಸಮುದ್ರನೆ, ನಾನಾವ ಅವಸ್ಥೆಯಲ್ಲಿ ನಿಲ್ಲಲಿ?" ಎಂದು ಭಕ್ತಿ ಯುಕ್ತಿಗಳಿಂದ ಪ್ರಭುವನ್ನು ಕೇಳಿದನು. ೪೩. "ಗೋರಕ್ಷಾ, ಹಾಗಾದರೆ ಮನವಿಟ್ಟು ಕೇಳು. ಕಠಿಣತೆಯನ್ನು ಹೊಂದಿರುವ ದೇಹ ನಿನ್ನದು. ನಿನ್ನದು ಕಾಯಸಿದ್ಧಿಯ ಒಂದು ಭೇದ. ನಿತ್ಯಮುಕ್ತಿಯ ಸಿದ್ಧಿಯು ಹೀಗಲ್ಲ. ಕಂದಾ ಕೇಳು, ಕೀಳುಮಾರ್ಗದಲ್ಲಿ ನಡೆಯದೆ ಪರಬ್ರಹ್ಮಸ್ವರೂಪನಿಗೆ ಶರಣುಹೋಗಲು [ನೀನು] ಸಿದ್ಧನಾಗುವೆ" ಎಂದು ಪ್ರಭುವು ನುಡಿದನು. ೪೪. "ನಂಬುವಂತೆ ಹೇಳು, ಆ ಗುಹೇಶ್ವರನೆನ್ನುವನು ಯಾರು? ವಾಸಿಸಲು ನನಗೆ ಆಶ್ರಯವಾವುದು? ಆತನನ್ನು ಭಜಿಸುವುದು ಹೇಗೆ? ಹೇಳು" ಎಂದು ಗೋರಕ್ಷನು ಪ್ರಶ್ನಿಸಲು ಅದಕ್ಕೆ ಪ್ರಭುವು "ಆತುರವೇಕೆ? ಆ ಗುಹೇಶ್ವರನೆನ್ನುವವನೇ ನಾನು. ಇದಕ್ಕೆ ಸಂಶಯವೆಂಬುದಿಲ್ಲ. ಇದು ಸತ್ಯ, ಗೋರಕ್ಷ ಕೇಳು" ಎಂದು ಅಲ್ಲಮನು ನುಡಿದನು. ೪೫. "ಎಲೈ ಕೇಳು, ಗುಹೆಯೆ ಆತ್ಮ, ಅಂತೆ ಆ ಗುಹೆಗೆ ಒಡೆಯನು ನಾನು. ನನ್ನ ಹೆಸರಿನ ಮಹಿಮೆಯಿಂದಾಗಿ ನಾನು ಗುಹೇಶ್ವರನೆಂಬ ಅಂಕಿತವನ್ನು ಪಡೆದ ಕಾರಣದಿಂದ

ಅದು ನಿಮಿತ್ತದಲಖಿಳ ಜೀವರ
ಹೃದಯವಲ್ಲಭನೈ ಗುಹೇಶ್ವರ
ನದಱ ಭೇದವ ತಿಳಿದು ಸೋಹಂಭಾವ ಬುದ್ಧಿಯಲಿ
ಸದಮಲಜ್ಞಾನೈಕನಾದರೆ
ನಿಧಿಯ ಕಾಬನು ನಿತ್ಯಮುಕ್ತಿಯ
ಪದಕೆ ಪತಿಯಹನಾತನೈ ಗೋರಕ್ಷ ಕೇಳೆಂದ ೪೬

ಜಾಣ ನುಡಿಗಳ ಬಿಡು ಗುಹೇಶ್ವರ
ನೀನೆಯಾದೊಡೆ ನಿನ್ನ ಕೈಯಲಿ
ದೇನು ಕುಱುಹಿನ ಲಿಂಗವಿದೆಯಿದಿರಿಟ್ಟು ಬೇಱೆನಿಸಿ
ನೀನು ತಾನಾಗಿದ್ದ ಬಳಿಕಲಿ
ದೇನು ಕಾರಣ ಕರ್ಮಭಕ್ತಿ
ಜ್ಞಾನದಾಯತದಿಂಗಿತಂಗಳು ಗುರುವೆ ಹೇಳೆಂದ ೪೭

ಅಂಗವಿಸಿ ತಾನೀ ಪ್ರಕಾರದ
ಲಿಂಗನಿಷ್ಠೆಯನಖಿಳರಿಗೆ ಮು
ಕ್ತ್ಯಂಗನೆಯ ಮದುವೆಯನು ಮಾಡುವೆನೆಂದು ಕರುಣದಲಿ
ಹಿಂಗದೀ ಪರಿ ನಟಿಸಿದರೆಯೆನ
ಗಂಗಲಿಂಗಕೆ ಭೇದಭಾವದ
ಸಂಗವುಂಟೆಂದೆಂಬರೇ ಗೋರಕ್ಷ ಕೇಳೆಂದ ೪೮

ಭೂಲೋಕದ ಲೌಕಿಕರಲ್ಲಿ ಗುಹೇಶ್ವರನೆಂಬ ಸಹಜವಾದ ಹೆಸರಿನಿಂದ ನಾನು ನನ್ನ ಲೀಲೆಯನ್ನು ನಟಿಸಿದೆನು" ೪೬. "ಅದು ಕಾರಣ ಗುಹೇಶ್ವರನು ಸಕಲಜೀವರ ಹೃದಯವಲ್ಲಭನಾಗಿರುವನು. ಅದರ ವ್ಯತ್ಯಾಸವನ್ನು ತಿಳಿದು 'ನಾನೇ ಅವನು' ಎಂಬ ಭಾವಬುದ್ಧಿಯಿಂದ ಪರಿಶುದ್ಧಜ್ಞಾನದಲ್ಲಿ ಒಂದೇ ಆದರೆ ನಿಧಿಯನ್ನು ಕಾಣುವನು. ಕೈವಲ್ಯಪದಕ್ಕೆ ಆತ ಒಡೆಯನಾಗುವನು, ಗೋರಕ್ಷ ಕೇಳು" ಎಂದು ಅಲ್ಲಮನು ನುಡಿದನು. ೪೭. "ಜಾಣತನದ ಮಾತುಗಳನ್ನು ಬಿಡು. ಗುಹೇಶ್ವರನು ನೀನೇ ಆದಲ್ಲಿ ನಿನ್ನ ಕೈಯಲ್ಲಿ ಈ ಗುರುತಿನ ಲಿಂಗವಿದೇತಕ್ಕೆ? ಇದಿರಿಗೆ ಲಿಂಗವನ್ನು ಹಿಡಿದು ನೀನು ಬೇರೆ ಅದು ಬೇರೆ ಎಂದು ತೋರಿಸಿಕೊಂಡೆ. ಕರ್ಮ ಭಕ್ತಿ ಜ್ಞಾನಗಳ ಸಾಧನೆಯ ಭಾವಗಳಿಗೆ ಕಾರಣವೇನು? ಗುರುವೆ ಹೇಳು" ಎಂದು ಗೋರಕ್ಷನು ಅಲ್ಲಮನನ್ನು ಪ್ರಾರ್ಥಿಸಿದನು. ೪೮. "ನಾನು ಈ ರೀತಿಯ ಲಿಂಗನಿಷ್ಠೆಯನ್ನು ಸ್ವೀಕರಿಸಿ ಸಕಲರಿಗೂ ಮುಕ್ತಿ ಸ್ತ್ರೀಯನ್ನು ದೊರಕಿಸಿಕೊಡಬೇಕೆಂದು ಕರುಣೆಯಿಂದ ಈ ರೀತಿ ನಟಿಸಿದರೆ ನನಗೆ ಮತ್ತು ಅಂಗದ ಲಿಂಗಕ್ಕೆ ಭೇದಭಾವದ ಸಂಬಂಧವುಂಟೆಂದು ಹೇಳುವರೇ? ಗೋರಕ್ಷ ಕೇಳು" ಎಂದು

ತೆತ್ತಿಸಿದ ಶಿವಲಿಂಗ ಭಕ್ತಿಯ
ಹೆತ್ತವೊಲು ವಚನಗಳ ನಾನೆಂ
ಬತ್ತು ಕೋಟಿಯ ಹಾಡಿದೆನು ಹಲವಂದಛಂದದಲಿ
ತಥ್ಯವನು ಹೇಳುವೊಡೆ ಭಕ್ತರ
ಚಿತ್ತದಲಿ ಸುಜ್ಞಾನ ಬೀಜವ
ಬಿತ್ತಲೀ ಪರಿ ನಟಿಸಿದೆನು ಗೋರಕ್ಷ ಕೇಳೆಂದ ೪೯

ನಾನು ಮಾಡಿದೆನೆಂಬುದೊಂದನು
ಮಾನವನು ನಾ ನಟಿಸದಿದ್ದರೆ
ತಾನದೆಲ್ಲಿಯದೈ ಧರಿತ್ರಿಯ ಮೇಲೆ ಶಿವಭಕ್ತಿ
ಮಾನವರಿಗುಪಕಾರಿಯಾಗಿರ
ಲಾನು ತೋಱಿದೆನೀ ಪ್ರಕಾರವ
ನಾನು ನಿರ್ಲೇಪನು ಕಣಾ ಗೋರಕ್ಷ ಕೇಳೆಂದ ೫೦

ಆವ ಪರಿಗಳಲಾರ ಬುದ್ಧಿಯ
ಭಾವವಿಹುದವರವರಿಗಾ ಪರಿ
ಭಾವವನು ಶುದ್ಧೈಸಿ ಸಮ್ಯಗ್ಜ್ಞಾನಜ್ಯೋತಿಯನು
ತೀವಿ ಸುಖಿಗಳ ಮಾಡಲೋಸುಗ
ವೀ ವಿನೋದದಲಿದ್ದೆನಿಂತು ನಿ
ರಾವಲಂಬನು ನಾನೆಲೈ ಗೋರಕ್ಷ ಕೇಳೆಂದ ೫೧

ಅಱಿಯದವರಿಗೆ ಅಂಗಲಿಂಗದ
ತೆಱದಲಿಹೆ ನಾನೆನ್ನ ನೆಟ್ಟನೆ
ಯಱಿದ ಮಹಿಮೆಗೆ ಸಚ್ಚಿದಾನಂದಸ್ವರೂಪಾನು
ಬಱಿಯ ಮಾತಲ್ಲಾದೊಡಿದ ಕೋ
ಕುಱುಹು ತೆಱಹಿಲ್ಲೆಂಬ ಪರಿಯನು
ನೆಱೆ ಪರೀಕ್ಷೆಯ ಕೊಂಬುದೆಲೆ ಗೋರಕ್ಷ ಕೇಳೆಂದ ೫೨

ಅಲ್ಲಮನು ನುಡಿದನು. ೪೯. "ಶಿವಲಿಂಗಭಕ್ತಿಯನ್ನು ಎಂಬತ್ತು ಕೋಟಿ ವಚನಗಳಲ್ಲಿ, ಹಲವು ರೀತಿಯಲ್ಲಿ ಛಂದೋಬದ್ಧವಾಗಿ ಹಾಡಿದೆನು. ನಿಜವಾಗಿ ಹೇಳುವುದಾದರೆ ಭಕ್ತರ ಮನದಲ್ಲಿ ಸುಜ್ಞಾನವೆಂಬ ಬೀಜವನ್ನು ಬಿತ್ತಲು ಈ ರೀತಿ ನಟಿಸಿದೆನು, ಗೋರಕ್ಷ ಕೇಳು" ಎಂದು ಅಲ್ಲಮನು ನುಡಿದನು. ೫೦. "ನಾನು ಮಾಡಿದ ಒಂದೊಂದನ್ನೂ ಮನುಷ್ಯನಾಗಿ ಬಂದ ನಾನು ನಟಿಸದಿದ್ದರೆ ಭೂಮಿಯ ಮೇಲೆ ಶಿವಭಕ್ತಿ ತಾನೆಲ್ಲಿರುತ್ತಿದ್ದಿತು? ಮನುಷ್ಯರಿಗೆ ಉಪಕಾರಿಯಾಗಿರಬೇಕೆಂದು ನಾನು ಈ ಪ್ರಕಾರವಾಗಿ ಕಾಣಿಸಿಕೊಂಡೆನು. ನಾನು ಯಾವುದಕ್ಕೂ ಅಂಟದಿರುವವನು ಕಣಾ, ಗೋರಕ್ಷ ಕೇಳು" ಎಂದು ಅಲ್ಲಮನು ನುಡಿದನು. ೫೧. "ಯಾವ ರೀತಿಯಲ್ಲಿ ಯಾರ ಬುದ್ಧಿಯ ಭಾವವಿರುವುದೋ ಅವರಿಗೆ ಆ ರೀತಿ ಭಾವವನ್ನು ಶುದ್ಧಗೊಳಿಸಿ, ಪರಿಪೂರ್ಣವಾದ ಜ್ಞಾನಜ್ಯೋತಿಯನ್ನು ತುಂಬಿ ಸುಖಿಗಳನ್ನಾಗಿ ಮಾಡಲು ಈ ವಿನೋದದಲ್ಲಿ ಇದ್ದೆನು. ಹೀಗೆ ನಾನು ಯಾವುದನ್ನೂ ಅವಲಂಬಿಸದವನಾಗಿ ಇರುವೆನು, ಗೋರಕ್ಷ ಕೇಳು" ಎಂದು ಅಲ್ಲಮನು ನುಡಿದನು. ೫೨. "ತಿಳಿಯದವರಿಗೆ ನಾನು ಅಂಗ ಲಿಂಗದ ರೂಪದಲ್ಲಿರುವೆನು. ನನ್ನನ್ನು ನೇರವಾಗಿ ಅರಿತ ಮಹಿಮನಿಗೆ

ತೊಳಪ ತೇಜದ ಮುಗಿಲು ಮಿಂಚನು
ಝುಳಪಿಸುವವೊಲು ಕೈಯ ಕುಱುಹಿನ
ಬೆಳಗ ಬಿದಿರಿಸಲುದರದಂದದಲೈಕ್ಯವಾಗಿರಲು
ಸೆಳೆದು ತುಡುಕಲು ಕೈಗೆ ಬಯಲಿನ
ಹೊಳಹದಾಗಿರೆ ಕಂಡು ಗುರುವಿನ
ನಿಲುಕಡೆಗೆ ಬೆಱಗಾಗುತಿರ್ದನು ಬಳಿಕ ಗೋರಕ್ಷ ೫೩

ಸಾಕು ಸಾಕಿನ್ನೆಲ್ಲಿತನಕ ವಿ
ವೇಕತನದಾಳಾಪವೆನಗಿ
ನ್ನೇಕೆ ನಿಮ್ಮಯ ಮಹಿಮೆಯನು ನೋಡುವೊಡೆಯೆನ್ನಳವೆ
ಕಾಕುತನಗಳು ಹೋಗಲೆನಗೆ ನಿ
ರಾಕುಳ ಶ್ರೀಸಂಗದಂಗದ
ಜೋಕೆಯನು ಕೃಪೆ ಮಾಡಬೇಹುದು ಪ್ರಭುವೆ ಕೇಳೆಂದ ೫೪

ಗುರುವೆ ತಾನೆಂಬಂತೆ ಶಿಷ್ಯನು
ಗುರುವೆ ಚೆನ್ನಾಗಿರೆ ಪರೀಕ್ಷಿಸಿ
ಗುರುಪದವ ಬಳಿಕಿತ್ತು ಶಿಷ್ಯತ್ವವನು ತಾ ಹಿಡಿದು
ಗುರುಕುಮಾರಕನಹನು ದಿಟವಾ
ಪರಿಯಲೆನ್ನನು ಪರಿಕಿಸಿದೆ ಸ
ತ್ಪುರುಷನಹುದೋ ನೀನೆ ದಿಟ ಗೋರಕ್ಷ ಕೇಳೆಂದ ೫೫

ಸತ್-ಚಿತ್-ಆನಂದಗಳ ಸ್ವರೂಪನಾಗಿರುವೆನು. ಇದು ವ್ಯರ್ಥವಾದ ಮಾತಲ್ಲ. ಹಾಗಾದರೆ ಇದೋ ನೋಡು. ಕುರುಹು ಬೇರಲ್ಲ ಎಂಬುದನ್ನು [ನೀನು] ಚೆನ್ನಾಗಿ ಪರೀಕ್ಷೆ ಮಾಡುವುದು, ಗೋರಕ್ಷ ಕೇಳು" ಎಂದು ಅಲ್ಲಮನು ನುಡಿದನು. ೫೩. ಹೊಳೆಯುವ ತೇಜೋಭರಿತವಾದ ಮುಗಿಲು ಮಿಂಚನ್ನು ಝುಳಪಿಸುವ ರೀತಿಯಲ್ಲಿ ಕೈಯಲ್ಲಿನ ಲಿಂಗವು ಕಾಂತಿಯನ್ನು ಬೀರುತ್ತ ಅಲ್ಲಮನ ದೇಹದಲ್ಲಿ ಐಕ್ಯವಾಯಿತು. ಕೈಯಲ್ಲಿ ಹಿಡಿಯಲು ಎಳೆದಾಗ ಶೂನ್ಯದ ಕಾಂತಿಯಾಗಿ ಕಾಣಲು ಗುರುವಿನ ನಿಲುಗಡೆಗೆ ಗೋರಕ್ಷನು ಆಶ್ಚರ್ಯಹೊಂದುತ್ತಿದ್ದನು. ೫೪. "ಸಾಕು! ಸಾಕು! ಇನ್ನೆಲ್ಲಿಯವರೆವಿಗೆ ನನಗೆ ನಿಮ್ಮೊಡನೆ ಬುದ್ಧಿವಂತಿಕೆಯ ಸಂಭಾಷಣೆ. ನಿಮ್ಮ ಮಹಿಮೆಯನ್ನು ನೋಡಲು ನನ್ನಿಂದ ಸಾಧ್ಯವೆ? ವಕ್ರತನಗಳು ಹೋಗಲಿ, ನನಗೆ ಶಾಂತಿಯೆಂಬ ಸಂಪತ್ತಿನ ಸ್ನೇಹ ಹೊಂದುವ ಜ್ಞಾನವನ್ನು ಅನುಗ್ರಹಿಸಬೇಕು, ಪ್ರಭುವೆ ಕೇಳು" ಎಂದು ಗೋರಕ್ಷನು ನುಡಿದನು. ೫೫. "ಗುರುವೇ ತಾನು ಎಂಬಂತೆ ಶಿಷ್ಯನು ಗುರುವನ್ನು ಪರೀಕ್ಷಿಸಿ ಅನಂತರ ಅವನಿಗೆ ಗುರುತ್ವವನ್ನು ಕೊಟ್ಟು, ಶಿಷ್ಯತ್ವವನ್ನು ತಾನು ಹಿಡಿದರೆ ಗುರುಪುತ್ರನಾಗುವನು. ಇದು ಸತ್ಯ. ಆ ರೀತಿಯಲ್ಲಿ ನನ್ನನ್ನು ಪರೀಕ್ಷಿಸಿದ ನೀನೇ

ಲಕ್ಷಿಸಿದನೀ ಪರಿಯಲಾ ಗೋ
ರಕ್ಷನಲಿ ಸಾಧಕತನಂಗಳ
ಲಕ್ಷಪರಿಯಲಿ ಬಳಿಕಲಾತನ ನೋಡಿ ಕರುಣದಲಿ
ರಕ್ಷಿಸುವೆನೆಂದೆನುತ ಶೂನ್ಯದ
ಲಕ್ಷವನು ದೀಕ್ಷೆಯನು ಮಾಡಿದ
ಮೋಕ್ಷಮಾರ್ಗದಲಿಂದು ಗೋರಕ್ಷಂಗೆ ಪ್ರಭುರಾಯ ೫೬

ಪೊಂಗೆ ಪರಿಮಳವಿನಿದೆನಿಪ ಕ
ಬ್ಬಿಂಗೆ ತನಿವಣ್ಣಾದ ತೆಱದಲಿ
ಹಿಂಗದಾ ಗೋರಕ್ಷಗೀ ಪ್ರಭುಲಿಂಗನೊಲವಾಗೆ
ಮಂಗಳವೆ ನೆಲೆಯಾಯ್ತು ಮಾಯೆಯ
ಹಂಗು ಹಿಂಗಿತು ರಾಜಯೋಗದ
ಸಂಗ ಸಾಱಿತು ಬಳಿಕಲಾ ಗೋರಕ್ಷನಾಥಂಗೆ ೫೭

ಬಿದ್ದುಹೋಯಿತು ಮನದ ಮಾಯಾ
ಬದ್ಧ ಭವಿತನ ನಿಮಿಷಮಾತ್ರಕೆ
ಹೊದ್ದಿ ಹೊಱಿಯೇಱಿದುದು ಸಮ್ಯಗ್‌ಜ್ಞಾನಸಾರಾಯ
ಶುದ್ಧಸೂಕ್ಷ್ಮ ಸ್ಥೂಲಕಾಯವ
ಮೆದ್ದು ಕಾರಣಕಾಯದಲಿ ತಾ
ಸಿದ್ಧ ನಿಜವ ವಿಳಾಸದಲಿ ಗೋರಕ್ಷ ಜಗವಱಿಯೆ ೫೮

ಸತ್ಪುರುಷನಾಗಿರುವೆ. ಇದು ನಿಜ, ಗೋರಕ್ಷ ಕೇಳು" ಎಂದು ಅಲ್ಲಮನು ನುಡಿದನು. ೫೬. ಈ ಬಗೆಯಿಂದ ಗೋರಕ್ಷನಲ್ಲಿ ಸಾಧಕತನಗಳನ್ನು ಪ್ರಭುವು ನೋಡಿದನು. ಅನಂತರ ಆತನನ್ನು ಕರುಣೆಯಿಂದ ರಕ್ಷಿಸಿ ಕಾಪಾಡುವೆನೆಂದು [ಬಗೆದು] ಮೋಕ್ಷಮಾರ್ಗದಲ್ಲಿ ನಡೆದು ಶೂನ್ಯದ ಪದವನ್ನು ಹೊಂದುವ ದೀಕ್ಷೆಯನ್ನು ಗೋರಕ್ಷನಿಗೆ ಪ್ರಭುರಾಯನು ಕೊಟ್ಟನು. ೫೭. ಇನಿದಾದ ಕಬ್ಬಿಗೆ ಪರಿಮಳವು ಬಂದು ಸೇರಿದಂತೆ ಗೋರಕ್ಷನಿಗೆ ಈ ಪ್ರಭುಲಿಂಗನ ಕೃಪೆಯಾಯಿತು. ಮಂಗಳವೆ ನೆಲೆಗೊಂಡಿತು. ಮಾಯೆಯ ಹಂಗು ಹಿಂಗಿತು. ಬಳಿಕ ಯೋಗಗಳಲ್ಲಿ ಒಂದಾದ ರಾಜಯೋಗದ ಸಂಬಂಧವು ಗೋರಕ್ಷನಾಥನಿಗೆ ಪ್ರಾಪ್ತವಾಯಿತು. ೫೮. ನಿಮಿಷಮಾತ್ರದಲ್ಲಿ ಮನಸ್ಸನ್ನು ಕವಿದಿದ್ದ ಮಾಯೆಯೆಂಬ ಗಾಢವಾದ ಭವಿತನ ಬಿದ್ದುಹೋಯಿತು. ಪರಿಪೂರ್ಣ ಜ್ಞಾನಾಮೃತವು ಸ್ನೇಹಗೊಂಡು ಹಿಗ್ಗಿತು. ಗೋರಕ್ಷನು ಶುದ್ಧ ಸೂಕ್ಷ್ಮ ಸ್ಥೂಲ ಶರೀರಗಳನ್ನು ಮೆದ್ದು, ಕಾರಣ ಶರೀರದಲ್ಲಿ ಜಗತ್ತೇ ತಿಳಿಯುವಂತೆ ಮಾಯಾರಹಿತನಾಗಿ ವಿಲಾಸದಿಂದ ಕೂಡಿದ್ದನು.

**ಕೀಡಿ ತುಂಬಿಯ ಬಿಡದೆ ನೆನೆದೊಡೆ**
**ನೋಡಲಾಕ್ಷಣ ತುಂಬಿಯಾಗದೆ**
**ಜೂಢಿಯಜೆಯಲು ವಜ್ರತನು ಗೋರಕ್ಷ ನಿಮಿಷದಲಿ**
**ಮಾಡಿಕೊಂಡನು ಭಕ್ತಿಯಲಿ ಕೈ**
**ಗೂಡಿ ವಿಮಲಾಕಾಶಕಾಯದ**
**ಜೋಡಣೆಯನೆಮ್ಮಲ್ಲಮಪ್ರಭು ಲಿಂಗಲೀಲೆಯಲಿ** ೫೯

**ಅಂತು ಗತಿ ೧೯ಕ್ಕಂ ಪದ ೮೪೯ಕ್ಕಂ ಮಂಗಳಂ**

೫೯. ಕೀಟವು ಭ್ರಮರವನ್ನು ಬಿಡದೆ ಧ್ಯಾನಿಸಿದರೆ ಭ್ರಮರವೇ ಆಗುವುದಿಲ್ಲವೆ? ಹಾಗೆಯೇ ನಮ್ಮ ಅಲ್ಲಮಪ್ರಭುಲಿಂಗನ ಲೀಲೆಯಿಂದ ವಜ್ರದೇಹಿಯಾದ ಗೋರಕ್ಷನು ನಿಮಿಷ ಮಾತ್ರದಲ್ಲಿಯೇ ತನ್ನನ್ನು ವಿಮಲವಾದ ಶೂನ್ಯದೇಹವನ್ನಾಗಿ ಮಾಡಿಕೊಂಡನು.

# ೨೦. ಮುನಿಗಳಿಗೆ ಬೋಧಿಸಿದುದು

## ಗತಿ ೨೦

ಸೂಚನೆ : ಸಾಧಕರು ಮೊದಲಾದ ವಿಷಯ
ವ್ಯಾಧಿಗತರಿಗೆ ತನ್ನ ಕರುಣಾ
ಮೋದಸುಧೆಯನು ಸುರಿದನೆಮ್ಮಯ ಗುರು ಗುಹೇಶ್ವರನು

ಜ್ಞಾನವನು ಗೋರಕ್ಷಗನುಸಂ
ಧಾನವೆನಿಸಿದ ಬಳಿಕ ತನ್ನ ಮ
ನೋನುರಾಗದಲಲ್ಲಮಪ್ರಭು ಲಿಂಗಲೀಲೆಯಲಿ
ಏನು ಮಾಡಿದನೆಂಬ ಹದನ ನಿ
ಧಾನಿಸುವುದು ಶಿವೈಕ್ಯಭಕ್ತಿಯ
ಮಾನನಿಧಿಗಳು ಮುದದಲೀ ಪ್ರಭುಲಿಂಗಲೀಲೆಯಲಿ ೧

ಪ್ರೀತಿಯಲಿ ಗೋರಕ್ಷಗನುಪಮ
ನಾಥಪದವಿಯನಿತ್ತು ಬಳಿಕೊಲಿ
ದಾತನಲಿ ಗುರುಪೂಜೆಯನು ಕೈಕೊಂಡು ಕರುಣದಲಿ
ಭೂತಳದಲಜ್ಞಾನಿಗಳನಾ
ನೋತು ಸುಜ್ಞಾನಿಗಳ ಮಾಡುವೆ
ನಾತಗಳನೆಂದೆನುತಲಾ ಪ್ರಭುರಾಯ ಬರುತಿರ್ದ ೨

ಬರುತ ಬರುತಲಿ ತನ್ನ ಸಾಧಿಸಿ
ಕರುಣವನೆ ಸಲೆ ಪಡೆಯಬೇಕೆಂ
ದಿರುತಲಿಹ ಸಾಧಕತಪೋಧನರಾಶ್ರಮವ ಕಂಡು
ಹರುಷದಲಿ ಸುಜ್ಞಾನಧರ್ಮವ
ನೊರೆವೆನಿನ್ನೀತಗಳಿಗೆನುತಲಿ
ಗುರು ಗುಹೇಶ್ವರಲಿಂಗ ಬಂದನು ತನ್ನ ಲೀಲೆಯಲಿ ೩

ಸೂ : ನಮ್ಮ ಗುರು ಗುಹೇಶ್ವರನು ಸಾಧಕರು ಮೊದಲಾದ ವಿಷಯವಾಸನೆಯ ರೋಗಕ್ಕೆ ಒಳಗಾದವರಿಗೆ ತನ್ನ ಕರುಣೆಯೆಂಬ ಆನಂದಾಮೃತವನ್ನು ಸುರಿದನು. ೧. ಗೋರಕ್ಷನಿಗೆ ಜ್ಞಾನವನ್ನು ಬೋಧಿಸಿದ ಬಳಿಕ ತನ್ನ ಮನದ ಸಂತಸದಂತೆ ಅಲ್ಲಮಪ್ರಭುಲಿಂಗನು (ತನ್ನ) ಲೀಲೆಯಲ್ಲಿ ಏನು ಮಾಡಿದನೆಂಬ ವಿಚಾರವನ್ನು ಶಿವನಲ್ಲಿ ಐಕ್ಯವಾದ ಭಕ್ತಿಯುಳ್ಳ ಮಾನನಿಧಿಗಳು ಸಂತೋಷದಿಂದ ಈ ಪ್ರಭುಲಿಂಗಲೀಲೆಯಲ್ಲಿ ಯೋಚಿಸುವುದು. ೨. ಪ್ರೀತಿಯಿಂದ ಗೋರಕ್ಷನಿಗೆ ಉಪಮಾತೀತವಾದ ನಾಥಪದವಿಯನ್ನು ಅನುಗ್ರಹಿಸಿ, ಅನಂತರ ಆತನಿಗೆ ಕೃಪೆಮಾಡಿ ಗುರುಪೂಜೆಯನ್ನು ಸ್ವೀಕರಿಸಿ ಭೂಮಿಯಲ್ಲಿ ಅಜ್ಞಾನಿಗಳನ್ನು ನಾನು ಪ್ರೀತಿಯಿಂದ ಸುಜ್ಞಾನಿಗಳನ್ನಾಗಿ ಮಾಡುವೆನೆಂದು ಆ ಪ್ರಭುರಾಯ ಬರುತ್ತಿದ್ದನು. ೩. ಬರುಬರುತ್ತಾ ತನ್ನನ್ನು ಸಾಧಿಸಿ (ತನ್ನ) ಕರುಣೆಯನ್ನು ವಿಶೇಷವಾಗಿ ಪಡೆಯಬೇಕೆಂದಿರುತ್ತಿರುವ ಸಾಧಕ ತಪೋಧನರುಗಳ ಆಶ್ರಮವನ್ನು ಕಂಡು, ಸಂತೋಷದಿಂದ ಸುಜ್ಞಾನಧರ್ಮವನ್ನು ಇವರುಗಳಿಗೆ ಇನ್ನು ಬೋಧಿಸುವೆನೆಂದು ಗುರು

ಸಾಧನೆಗೆ ನಾನಾಪ್ರಕಾರಗ
ಳಾದ ಬಗೆಗಳನೆಡೆವಿಡದೆ ಬೆಸ
ಲಾದ ಮನಮಾಣಿಕವ ತಮ್ಮ ಶರೀರಶರಧಿಯಲಿ
ಸಾಧಿಸಿಯೆ ಶಿವಸಾಣೆಯಲಿ ಸಲೆ
ತೇದು ಮಿಗೆ ಸುಜ್ಞಾನಕಾಂತಿಯು
ನೆಯ್ದಿಸುವುದನು ಪೇಳ್ದನಾ ಪ್ರಭು ತನ್ನ ಭಕ್ತರಿಗೆ ೪

ಮಿಱುಪ ಮನವೆಂದೆಂಬ ಮಣಿಯನು
ಕೊಱೆದು ನಿಷ್ಠಾವಜ್ರಸೂಚಿಯ
ಲುಱುವ ಜೀವಾನಿಲನ ದಾರವ ಹಿಡಿದು ಬೆಂಬಿಡದೆ
ನೆಱೆ ಶಿಖಾರತ್ನವನು ಮಾಡಿಯೆ
ಮೆಱೆವ ನಿತ್ಯಾನಂದಪದವಿಯ
ನಿಱೆಗೆಯನು ನಿಯಮಿಸಿದನಾ ಪ್ರಭು ಲಿಂಗಭಕ್ತರಿಗೆ ೫

ಲೆಪ್ಪವಿಲ್ಲದೆಯೂರ್ಧ್ವಬಿಂದುವೆ
ನಿಪ್ಪ ಪಶ್ಚಿಮವಾಹಿನಿಯಲಿಂ
ತೊಪ್ಪದಿಂದಲಿ ಮಿಂದು ಮೀಱಿದ ಮೂಲನಾದವನು
ಅರ್ಪಿತಾ ಪ್ರಾಣಸ್ವರೂಪದ
ಸುಪ್ರಭೆಯಲಿಹ ಸುಖವನಿತ್ತನು
ತಪ್ಪದಾ ಸಾಧಕತಪೋನಿಧಿಗಳಿಗೆ ಪ್ರಭುರಾಯ ೬

ಬಳಿಕಲಾ ಸಾಧಕತಪೋನಿಧಿ
ಗಳಿಗೆ ನಿರುಪಮ ನಿಃಪ್ರಪಂಚಿನ
ನೆಲೆಯ ನೆಟ್ಟನೆ ಕೊಟ್ಟು ತಾನಲ್ಲಿಂದ ನಡೆಗೊಂಡು
ತಳಿತ ತರುಲತೆ ಗುಲ್ಮತೃಣಸಂ
ಕುಲವ ಚರಿಸುವ ಖಗಮೃಗದ ಕಳ
ಕಳದ ಕಾನನಮಧ್ಯದಲಿ ಬರುತಿರ್ದ ಪ್ರಭುರಾಯ ೭

ಗುಹೇಶ್ವರಲಿಂಗನು ತನ್ನ ಲೀಲೆಯಲ್ಲಿ ಬಂದನು. ೪. ಎಡಬಿಡದೆ ನಾನಾ ವಿಧವಾದ ಸಾಧನೆಗಳಿಂದ ಸಾಧಿಸಿ, ತಮ್ಮ ಶರೀರವೆಂಬ ಸಮುದ್ರದಲ್ಲಿ ಹಡೆದ ಮನಸ್ಸೆಂಬ ಮಾಣಿಕ್ಯವನ್ನು ಶಿವನೆಂಬ ಸಾಣೆಕಲ್ಲಿನಲ್ಲಿ ಚೆನ್ನಾಗಿ ತೇದು ಅತಿಶಯವಾಗಿ ಸುಜ್ಞಾನಕಾಂತಿ ಹೊಂದಿಸುವ ರೀತಿಯನ್ನು ಆ ಪ್ರಭುವು ತನ್ನ ಭಕ್ತರಿಗೆ ಹೇಳಿದನು. ೫. ಪ್ರಕಾಶಿಸುವ ಮನವೆಂಬ ಮಣಿಯನ್ನು ಕೊರೆದು, ನಿಷ್ಠೆಯೆನ್ನುವ ವಜ್ರದ ಸೂಜಿನಲ್ಲಿ ಒಪ್ಪುವ ಜೀವಾನಿಲದ ದಾರವನ್ನು ಹಿಡಿದು ಹಿಂಬಾಲಿಸಿ, ಚೆನ್ನಾದ ಶಿಖಾರತ್ನವನ್ನು ಮಾಡಿ ಶೋಭಿಸುವ ನಿತ್ಯಾನಂದಪದವಿಯ ಮನೋಹರತೆಯನ್ನು ಪ್ರಭುಲಿಂಗನು (ತನ್ನ) ಆ ಭಕ್ತರಿಗೆ ನಿಯಮಿಸಿದನು. ೬. ಎರಕವಿಲ್ಲದೆ ಊರ್ಧ್ವಬಿಂದುವೆನ್ನುವ ಪಶ್ಚಿಮವಾಹಿನಿಯಲ್ಲಿ ಈ ಪ್ರಕಾರದಲ್ಲಿ ಸೊಗಸಾಗಿ ಮಿಂದು ಮೂಲವನ್ನು ಗೆದ್ದವನು ಅರ್ಪಿತವಾದ ಆ ಪ್ರಾಣಸ್ವರೂಪದ ಸುಪ್ರಭೆಯಲ್ಲಿರುವ ಸುಖವನ್ನು ಪ್ರಭುರಾಯನು ಬಿಡದೆ ಸಾಧಕ ತಪೋನಿಧಿಗಳಿಗೆ ಅನುಗ್ರಹಿಸಿದನು. ೭. ಅನಂತರ ಆ ಸಾಧಕ ತಪೋನಿಧಿಗಳಿಗೆ ಉಪಮಾತೀತವಾದ ಶೂನ್ಯಸ್ಥಿತಿಯನ್ನು ನೇರವಾಗಿ ಅನುಗ್ರಹಿಸಿ, ತಾನು ಅಲ್ಲಿಂದ

ಕೊಲುವುದನೆ ಸಲೆ ಕೊಂದು ಹಸಿವಿನ
ಹೊಲೆಯನಳಿಯದೆ ನಾಡ ನಾಯ್ಗಳ
ಬಳಿವಿಡಿದು ನಾನಾ ಪ್ರಕಾರದ ಜೀವಜಾಲವನು
ಅಳಿದು ಹೊಟ್ಟೆಯ ಹೊರೆದು ದುರ್ಗತಿ
ಗಿಳಿವ ಲುಬ್ಧನನಂದು ಕಾನನ
ದೊಳಗೆ ಕಂಡನು ಕರುಣದಿಂದಾ ಪ್ರಭು ಸಮೀಪದಲಿ ೮

ತನ್ನ ಕಣ್ಣಿದಿರಾದ ಮೂಢನ
ನಿನ್ನು ತಿಳುಹದೆ ನಾನು ಹೋಹುದು
ನನ್ನ ಹೆಮ್ಮೆಗೆ ಕೊಱತೆಯೆನುತ ಕಿರಾತಗೊಲವಿನಲಿ
ತನ್ನ ಕರುಣದ ಸಿದ್ಧರಸ ಕಾ
ರ್ಬೊನ್ನಿನಂದದ ಖಳನನೊಳ್ಳಿದ
ಹೊನ್ನ ಮಾಡಲೆ ಬೇಹುದೆನುತಾ ಪ್ರಭು ನಿರೀಕ್ಷಿಸಿದ ೯

ನೆಲಸಿದಾಹಂಕಾರಮೃಗವನು
ಸುಲಲಿತಾಂತಃಕರಣ ಶುನಕನ
ಬಳಿಸಲಿಸಿ ಮಾರುತಶರಾಸನವನು ದೃಢೀಕರಿಸಿ
ಚಲಿಸದೇಕೋಭಾವಶರದಲಿ
ಕೊಲುವ ಭೇದವನಾತ್ಮತೃಪ್ತಿಗೆ
ನಿಲುವ ನಿಜಗೆಯ ಪೇಳ್ದನಾ ಪ್ರಭು ಬೇಂಟೆಕಾಱಂಗೆ ೧೦

ನಡೆಯುತ್ತಾ ಚಿಗುರಿದ ಮರ, ಬಳ್ಳಿ, ಪೊದರು, ಹುಲ್ಲು ಇವುಗಳ ಸಮೂಹದಲ್ಲಿ ಓಡಾಡುವ ಪಕ್ಷಿ, ಮೃಗಗಳ ಕಳಕಳದಿಂದ ಕೂಡಿದ ಕಾಡಿನ ಮಧ್ಯದಲ್ಲಿ ಪ್ರಭುರಾಯನು ಬರುತ್ತಲಿದ್ದನು. ೮. ಕೊಂದುತಿನ್ನಲು ಯೋಗ್ಯವಾದ ಪ್ರಾಣಿಗಳನ್ನು ಪೂರ್ಣವಾಗಿ ಕೊಂದು, ಇನ್ನೂ ತೃಪ್ತಿ ಹೊಂದದ ನಾಡ ನಾಯಿಗಳ ಬೆನ್ನುಹಿಂದೆ ನಡೆದು ನಾನಾಬಗೆಯ ಜೀವಸಮೂಹವನ್ನು ಕೊಂದು ಹೊಟ್ಟೆಹೊರೆದು ದುರ್ಗತಿಗಿಳಿದ ಬೇಡನನ್ನು ಅಂದು ಕಾಡಿನಲ್ಲಿ ಅತಿ ಸಮೀಪದಲ್ಲೇ ಆ ಪ್ರಭುವು ಕರುಣೆಯಿಂದ ಕಂಡನು. ೯. "ತನ್ನ ಕಣ್ಣಿಗೆ ಇದಿರಾದ ಮೂಢನನ್ನು ಇನ್ನು ನಾನು ಬೋಧಿಸದೆ ಹೋಗುವುದು ನನ್ನ ಹೆಮ್ಮೆಗೆ ಕೊರತೆ. ಪ್ರೀತಿಯಿಂದ ತನ್ನ ಕರುಣೆಯ ಸಿದ್ಧರಸವು ಕಬ್ಬಿಣದಂತಹ ದುಷ್ಟನನ್ನು ಒಳ್ಳೆಯ ಚಿನ್ನವನ್ನಾಗಿ ಮಾಡಲೇ ಬೇಕು" ಎಂದು ಹೇಳುತ್ತಾ ಆ ಪ್ರಭುವು ಬೇಡನನ್ನು ನೋಡಿದನು. ೧೦. ನೆಲೆಸಿರುವ ಅಹಂಕಾರವೆಂಬ ಮೃಗವನ್ನು ಮನೋಹರವಾದ ಅಂತಃಕರಣವೆಂಬ ನಾಯಿಯ ಪಕ್ಕಕ್ಕೆ ಸೇರಿಸಿ, ವಾಯುವೆಂಬ ಶರಾಸನವನ್ನು ಬಿಗಿಹಿಡಿದು, ಚಲಿಸದ ಏಕೋಭಾವವೆಂಬ ಬಾಣದಿಂದ ಕೊಲ್ಲುವ ರೀತಿಯನ್ನು ಆತ್ಮತೃಪ್ತಿಗೆ ನಿಲುಕುವ ಕ್ರಮದಿಂದ ಆ ಬೇಟೆಗಾರನಿಗೆ

ಉಸುರುವಲೆ ಮೈಗಾಡು ಬುದ್ಧಿಯ
ಬೆಸುಗೆ ಕೈ ನಿಶ್ಚಲದ ಮನವೇ
ಮಿಸುಪ ಕಂಗಳು ತಿಳಿವೆ ಲುಬ್ಧಕನಾಗಿ ಹಮ್ಮೆಂಬ
ಅಸಮ ಖಗ ಮೃಗ ಜಲಚರವನೊಂ
ದಿಸುತ ಸುಜ್ಞಾನಾಗ್ನಿಯಲಿ ಪಚ
ನಿಸಿಯೆ ದಣಿಯುಣಕಲಿಸಿದನು ಪ್ರಭು ಬೇಂಟೆಕಾಱಂಗೆ ೧೧

ಈ ಪರಿಯಲಾ ಸರ್ವಜೀವದ
ಯಾಪರವನುಪದೇಶಿಸಿಯೆ ನಿ
ರ್ಲೇಪದಲಿ ನಿಲಿಸಿದ ಪುರಾತನನಾ ಕಿರಾತಂಗೆ
ಆ ಪರವ ನೆಱಿಯಱುಪಿ ನಿತ್ಯ
ಶ್ರೀಪದವನೊಲಿದಿತ್ತು ತೆರಳಿದ
ನಾ ಪರಬ್ರಹ್ಮಸ್ವರೂಪ ಪ್ರಭು ವಿನೋದದಲಿ ೧೨

ಕಾಮಿನಿಯರಿಗೆ ಸೋತು ಕಾಮನ
ಸೀಮೆಯಲಿ ಸಲೆ ಸತ್ತು ಹುಟ್ಟುವ
ಕಾಮಿಗಳಿಗಾ ಕುಂಡಲೀಶಕ್ತಿಯ ಮಹಾರತಿಯ
ನೇಮಿಸಿಯೆ ನಿರ್ಮಾಯದಲಿ ನಿ
ಸ್ಸೀಮ ನಿತ್ಯಾನಂದಸುಖದು
ದ್ದಾಮತೆಯನೊಲಿದಿತ್ತನಾ ಪ್ರಭುಲಿಂಗ ಕೆಲಬರಿಗೆ ೧೩

ಪ್ರಭುವು ಹೇಳಿದನು. ೧೧. ಉಸಿರೇ ಬಲೆ. ದೇಹವೇ ಕಾಡು. ಬುದ್ಧಿಯ ಕೂಟವೇ ಮೈ. ನಿಶ್ಚಲವಾದ ಮನಸ್ಸೇ ಪ್ರಕಾಶಭರಿತ ಕಣ್ಣುಗಳು. ಜ್ಞಾನವೇ ಬೇಡನಾಗಿ ಅಹಂಕಾರವೆಂಬ ಸಮನಲ್ಲದ ಪಕ್ಷಿ ಮೃಗ ಜಲಚರ ಪ್ರಾಣಿಗಳನ್ನು ಒಟ್ಟುಗೂಡಿಸುತ್ತ, ಸುಜ್ಞಾನವೆಂಬ ಬೆಂಕಿಯಿಂದ ಬೇಯಿಸಿ ತೃಪ್ತಿ ಹೊಂದುವಂತೆ ಉಣ್ಣಲು ಬೇಟೆಕಾರನಿಗೆ ಪ್ರಭುವು ಕಲಿಸಿದನು. ೧೨. ಆ ಪರಬ್ರಹ್ಮಸ್ವರೂಪನಾದ ಮತ್ತು ಪುರಾತನನಾದ ಪ್ರಭುವು ಸಕಲ ಜೀವಿಗಳಲ್ಲಿ ದಯೆಯನ್ನು ಆ ಬೇಡನಿಗೆ ಉಪದೇಶಿಸಿ ಸಂಸಾರಕ್ಕೆ ಅಂಟಿಕೊಳ್ಳದ ರೀತಿಯಲ್ಲಿ ನಿಲ್ಲಿಸಿದನು. (ಮತ್ತು) ಆ ಪರಬ್ರಹ್ಮವಸ್ತುವನ್ನು ಸೇರುವ ರೀತಿಯನ್ನು ಚೆನ್ನಾಗಿ ತಿಳಿಸಿ ಹುಟ್ಟು ಸಾವುಗಳಿಲ್ಲದ ಉತ್ತಮಪದವನ್ನು ಪ್ರೀತಿಯಿಂದ ಅನುಗ್ರಹಿಸಿ ವಿನೋದದಿಂದ ನಡೆದನು. ೧೩. ಸ್ತ್ರೀಯರಿಗೆ ಮನಸೋತು ಕಾಮನ ಸೀಮೆಯಲ್ಲಿ ಚೆನ್ನಾಗಿ ಸತ್ತು ಹುಟ್ಟುವ ಕಾಮಿಗಳಿಗೆ ಆ ಕುಂಡಲೀಶಕ್ತಿಯ ಮಹಾಕೂಟವನ್ನು ಹೇಳಿ, ಆ ಪ್ರಭುಲಿಂಗನು ಕೆಲವರಿಗೆ ನಿರ್ಮಾಯೆಯಿಂದ ಎಣೆಯಿಲ್ಲದ ನಿತ್ಯಾನಂದಸುಖದ ಶ್ರೇಷ್ಠತ್ವವನ್ನು ಒಲಿದು

ರಸದ ಸಿದ್ಧಿಯ ಪಸಿನೆಯಱಿಯದೆ
ವ್ಯಸನವಿಧಿಯಲಿ ಸತ್ತು ಹುಟ್ಟುವ
ಪಶುಗಳಿಗೆ ಬಳಿಕಂತರಂಗದ ಬಿಂದುವೆಂದೆಂಬ
ರಸವ ಕಟ್ಟಿ ಭಯಂಗಳನು ವ
ರ್ಜಿಸುವ ಪರಿಯನು ಕೆಲಬರಿಗೆ ಬೋ
ಧಿಸಿದನೆಮ್ಮಯ ಗುರು ಗುಹೇಶ್ವರಲಿಂಗ ಲೀಲೆಯಲಿ ೧೪

ಬಿಂದುವೇ ರಸವೌಷಧಿಯೆ ನಿ
ಷ್ಪಂದವಾಯು ಮನಸ್ಸು ಮೂಷಿಕೆ
ಸಂದ ಮಣಿಪೂರಕವೆ ಕಿಚ್ಚುನಿಸ್ಸಂಗಿಯೆ ರಸಘುಟಿಕೆ
ಮುಂದೆ ರುದ್ರೇಶ್ವರ ಸದಾಶಿವ
ರಿಂದ ಮೀಱಿದ ಸುಖವೆ ಸಿದ್ಧಿಗ
ಳೆಂದು ನಿಯಮಿಸಿ ಕೆಲರನಾ ಪ್ರಭು ಸಿದ್ಧರೆನಿಸಿದನು ೧೫

ಏನ ಹೇಳುವೆನೀ ಪರಿಯಲ
ಜ್ಞಾನಿಗಳು ಹಲಬರಿಗೆ ಸಲೆ ಸು
ಜ್ಞಾನಮಾರ್ಗವ ತೋಱಿ ಸದ್ಯೋಮುಕ್ತರೆನಿಸುತಲಿ
ತಾನೆ ತನ್ನಯ ಕರುಣದಿಂದಲಿ
ಮಾನವರ ಮನದಂಧಕಾರಕೆ
ಭಾನುವಾದನು ಗುರು ಗುಹೇಶ್ವರ ಲಿಂಗಲೀಲೆಯಲಿ ೧೬

ಬರುತ ಬರುತೀ ಪರಿಯಲುತ್ತರ
ಧರಣಿತಳದಲಿ ಋಷಿಗಳಾಶ್ರಮ
ವಿರಚಿಸುವ ತನಿರಸದ ಪರಿಪಾಕದ ಫಲಾವಳಿಯ
ತರುಲತಾಳಿಯ ತಿಳಿಗೊಳಂಗಳ
ವರ ನಿನಾದದ ವಿಹಗವಿತತಿಯ
ನೆರವಿಗಳಲೊಪ್ಪುವ ಮಹಾಕಾನನವ ಪ್ರಭು ಕಂಡ ೧೭

ಅನುಗ್ರಹಿಸಿದನು. ೧೪. ರಸಸಿದ್ಧಿಯನ್ನು ಚೆನ್ನಾಗಿ ತಿಳಿಯದೆ ಅತ್ಯಾಸಕ್ತಿಯ ರೀತಿಯಲ್ಲಿ ಸತ್ತು ಹುಟ್ಟುವ ಪಶುಗಳಿಗೆ ಬಳಿಕ ಅಂತರಂಗದ ಬಿಂದುವೆಂಬ ರಸವನ್ನು ಕಟ್ಟಿ, ಭಯವನ್ನು ಹೋಗಲಾಡಿಸುವ ರೀತಿಯನ್ನು ಕೆಲವರಿಗೆ ನಮ್ಮ ಗುರು ಗುಹೇಶ್ವರಲಿಂಗನು (ತನ್ನ) ಲೀಲೆಯಲ್ಲಿ ಬೋಧಿಸಿದನು. ೧೫. "ಬಿಂದುವೇ ರಸವು. ಅಲುಗದ ವಾಯುವೇ ಔಷಧ. ಮನಸ್ಸೇ ಲೋಹಗಳನ್ನು ಕರಗಿಸುವ ಮೂಸೆ, ಪ್ರಖ್ಯಾತವಾದ ಮಣಿಪೂರಕಚಕ್ರವೆ ಅಗ್ನಿ. ವಿಷಯವ್ಯಾಮೋಹವಿಲ್ಲದವನೇ ರಸಘುಟಿಕೆ. ಮುಂದೆ ರುದ್ರ, ಈಶ್ವರ, ಸದಾಶಿವರನ್ನು ಮೀರಿದ ಸುಖವೇ ಸಿದ್ಧಿಗಳು" ಎಂದು ಕೆಲವರನ್ನು ಆ ಪ್ರಭುವು ನಿಯಮಿಸಿ (ಅವರನ್ನು) ಸಿದ್ಧರೆನಿಸಿದನು. ೧೬. ಏನು ಹೇಳಲಿ, ಈ ರೀತಿಯಲ್ಲಿ ಹಲವರು ಅಜ್ಞಾನಿಗಳಿಗೆ ಚೆನ್ನಾಗಿ ಸುಜ್ಞಾನಮಾರ್ಗವನ್ನು ತಾನೇ ತನ್ನ ಕರುಣದಿಂದ ತೋರಿಸಿ, ಸದ್ಯೋಮುಕ್ತರೆನ್ನಿಸಿ, ಮನುಷ್ಯರ ಮನಸ್ಸಿನ ಕತ್ತಲೆಗೆ ಗುರು ಗುಹೇಶ್ವರನು (ತನ್ನ) ಲೀಲೆಯಿಂದ ಸೂರ್ಯನಾದನು. ೧೭. ಈ ರೀತಿಯಲ್ಲಿ ಬರಬರುತ್ತಾ ಉತ್ತರಭೂಭಾಗದಲ್ಲಿ ಋಷಿಗಳಾಶ್ರಮ, ಪಕ್ವವಾದ ರಸಭರಿತ ಹಣ್ಣುಗಳ ಸಮೂಹದಿಂದ ಕೂಡಿದ ಮರ, ಬಳ್ಳಿ, ತಿಳಿನೀರಿನ ಕೊಳ, ಇಂಪಾದ

ಕಾಲಕಾಲದ ನಿತ್ಯಕರ್ಮವ
ಮೇಳವಿಸಿ ಬಳಿಕಾ ಕ್ಷುಧಾಗ್ನಿ
ಜ್ವಾಲೆಯಾಹುತಿಗಾಗಿ ಬಹ ಭಿಕ್ಷುಕಮುನೀಶ್ವರರ
ವೇಳೆಯಱಿದುಚಿತದಲಿ ಸಂಫಲ
ದಾಳಿಗಳನೊಲಿದೀವ ತರುಲತೆ
ಯೋಳಿ ವನದಲಿ ಮೆಱೆವುತಿರ್ದುವು ಕೂಡೆ ಕತ್ತಲಿಸಿ ೧೮

ತೃಷೆಯ ಕಳೆವರು ಬನ್ನಿ ಹೊಟ್ಟೆಯ
ಹಸಿವನಳಿವರು ಬನ್ನಿ ಬಟ್ಟೆಯ
ಬಿಸಿಲಿನಲಿ ಧೂಪಿಸಿದ ಪಥಿಕರು ಬನ್ನಿಯೆಂದೆನುತ
ಹೊಸತೆನಿಪ ತನಿವಣ್ಣ ತರುಗಳ
ಪಸರಿಸಿದ ಕೊಂಬಿನಲಿ ಕುಳ್ಳಿತು
ವುಸುರಿಕೊಡುವಂತುಲಿದುವಲ್ಲಿಯ ಶುಕಪಿಕಾಳಿಗಳು ೧೯

ಆರು ಬೇಡಿದವರಿಗೆ ಬೇಡಿದ
ಭೂರುಹಂಗಳ ಫಲಗಳಿವೆಯೆಂ
ದೋರಣಿಸಿ ಕರೆಕರೆವವೊಲು ನಾನಾ ಪ್ರಕಾರದಲಿ
ಸಾರವೆನಿಪ ನಿನಾದಗಳು ಸಲೆ
ಪೂರವಿಸಲಾ ವನದೊಳಗೆ ಗಂ
ಭೀರಸ್ವರದಲಿ ಕೂಗುತಿರ್ದುವು ಕೂಡೆ ಖಗನಿಕರ ೨೦

ಧ್ವನಿಯನ್ನುಂಟುಮಾಡುವ ಪಕ್ಷಿಗಳ ಸಮೂಹ-ಇವುಗಳಿಂದ ಶೋಭಿಸುವ ದೊಡ್ಡ ಕಾಡನ್ನು ಪ್ರಭು ಕಂಡನು. ೧೮. ಕಾಲಕಾಲಕ್ಕೆ ನಿತ್ಯಕರ್ಮಗಳನ್ನು ಮಾಡಿ ಮುಗಿಸಿ, ಅನಂತರ ಹಸಿವೆಯೆಂಬ ಬೆಂಕಿಯ ಜ್ವಾಲೆಯ ಆಹುತಿಗಾಗಿ ಬರುವ ಭಿಕ್ಷುಕ ಮುನೀಶ್ವರರ ಸಮಯುವನ್ನು ತಿಳಿದು ಯೋಗ್ಯವಾಗ್ಗಿ ಫಲಗಳ ಮೊತ್ತವನ್ನು ಪ್ರೀತಿಯಿಂದ ಕೊಡುವ ಮರ ಬಳ್ಳಿಗಳ ಸಮೂಹವು (ಆ) ಕಾಡಿನಲ್ಲಿ ಕತ್ತಲೆಯನ್ನುಂಟುಮಾಡಿ ಶೋಭಿಸುತ್ತಿದ್ದಿತು. ೧೯. "ಬಾಯಾರಿಕೆ ನಿವಾರಿಸಬಯಸುವವರು (ಇತ್ತ) ಬನ್ನಿ; ಹೊಟ್ಟೆಯ ಹಸಿವೆಯನ್ನು ಇಲ್ಲವಾಗಿಸುವವರು (ಇತ್ತ) ಬನ್ನಿ; ಹಾದಿಯ ಸುಡುವ ಬಿಸಿಲಿನಲ್ಲಿ (ನಡೆದು) ಧೂಳಿಡಿದು (ಆಯಾಸಗೊಂಡಿರುವ) ದಾರಿಹೋಕರು (ಇತ್ತ) ಬನ್ನಿ" ಎಂದೆನ್ನುತ್ತಾ ಹೊಸದೆನ್ನುವ ರಸಭರಿತ ಹಣ್ಣುಗಳನ್ನು, ವೃಕ್ಷಗಳಲ್ಲಿ ಹರಡಿರುವ ಕೊಂಬೆಗಳಲ್ಲಿ ಗಿಳಿ, ಕೋಗಿಲೆಗಳು ಕುಳಿತು (ಕೂಗಿ) ಹೇಳಿಕೊಡುವಂತೆ ಧ್ವನಿಗೈದುವು. ೨೦. ಯಾರು ಬೇಡಿದರೂ ಅವರಿಗೆ ಬಯಸಿದ ಮರದ ಹಣ್ಣುಗಳಿವೆ ಎಂದು ಸಾಲಾಗಿ ಕರೆಯುವ ರೀತಿಯಲ್ಲಿ ನಾನಾ ಬಗೆಯಲ್ಲಿ ಮಧುರಧ್ವನಿಗಳು ಉಂಟಾಗುವಂತೆ ಗಂಭೀರಸ್ವರದಿಂದ ಪಕ್ಷಿಗಳ ಸಮೂಹವು ಕೂಗುತ್ತಿದ್ದುವು.

ನಡೆವ ವೃದ್ಧ ಮುನೀಂದ್ರರಿಗೆ ಕೈ
ಗುಡುವ ಕಪಿಗಳು ಕಾಲಕರ್ಮವ
ನಡೆಸಲೆಂದು ನದೀತಟಾಕದ ಬಿಸಿಯ ಬಿಸಿಲೊಳಗೆ
ಬಿಡದೆ ಬದ್ದಿಹವರಿಗೆ ಪಚ್ಚೆಯ
ಕೊಡೆಯವೊಲು ನೆಳಲಾಗಿ ಗಿಳಿಗಳ
ಗಡಣ ಮಂಡಳಿಸಿಹವು ಗಗನದೊಳಾ ವನಾಂತರದೆ ೨೧

ಬಡ ತಪಸ್ವಿಯ ಬಹಳ ಜಡೆಗಳ
ಮುಡಿಯ ತಾನೇ ಮಾಡಿ ಬಂಧಿಸಿ
ಬಿಡದೆ ಬಿಗಿದಿಹವುತ್ತಮಾಂಗದ ಬಾಲಸರ್ಪಗಳು
ಬಿಡದೆ ಪವನನಿರೋಧಿಗಳ ಬೆವ
ರೊಡಲನಾಜೆಸಲೆಂದು ಕಿವಿಗಳ
ಕೊಡವುತಿಹ ಮಜೆಯಾನೆ ಮೆಜೆದುವು ತಪ್ಪನಾಂತರದೆ ೨೨

ಆಸನಸ್ಥಿರರಾಗಿ ತಪದುಪ
ವಾಸದಿಂದಿಹವರಿಗೆ ನೆಮ್ಮುವ
ದಾಸಿಯಾಗಿಯೆ ಮಂಡಲಿಸಿ ಮಲಗಾದ ಹೆಬ್ಬುಲಿಯ
ಬೇಸಜದೆ ಸೊಂಡಿಲಲಿ ಮೊಗೆತಂ
ದಾಶ್ರಮಕೆ ತಣ್ಣೀರ ಚಳೆಯವ
ಸೂಸುತಿರುತಿಹ ಭದ್ರಹಸ್ತಿಯಲೊಪ್ಪಿತಾ ವನವು ೨೩

ಮೇಳವಿಸಿ ಮುಂಜಿಗಳ ಮಾಡುವ
ಬಾಲಕರಿಗಾ ಮೆದೆಯ ಹುಲ್ಲನು
ಸೀಳಿ ಸೀಳಿ ಸಮೀಪದಲಿ ಕೈಗೈವ ಕರಡಿಗಳ
ಲೀಲೆಯಲಿ ಯಜ್ಞೋಪವೀತದ
ನೂಲಿಗೆಂದಂಬುಜದ ನಾಳವ
ನೋಳಿಯಿಂ ತಂದಿಡುವ ಹಂಸೆಯಲೊಪ್ಪಿತಾ ವನವು ೨೪

೨೧. ಆ ವನದಲ್ಲಿ ಮುಪ್ಪಿನ ಮುನೀಂದ್ರರು ನಡೆಯುವಾಗ (ಸಹಾಯಕ್ಕೆ) ಕೈಚಾಚುವ ಕೋತಿಗಳು; ಸಮಯೋಚಿತವಾಗಿ ಕರ್ಮ ಮಾಡಲೆಂದು ನದೀದಡಕ್ಕೆ ಉರಿವ ಬಿಸಿಲಿನಲ್ಲಿ ನಡೆಯುವವರಿಗೆ ನೆಳಲಾಗಿ ಗಿಳಿಗಳ ಸಮೂಹವು ಪಚ್ಚೆಯ ಕೊಡೆಯ ರೀತಿಯಲ್ಲಿ ಆಕಾಶದಲ್ಲಿ ಗುಂಪುಗೂಡಿರುವುವು. ೨೨. ಆ ವನದೊಳಗೆ ಬಡತಪಸ್ವಿಯ ದಟ್ಟವಾದ ಜಡೆಯ ಮುಡಿಯನ್ನು ತಲೆಯಲ್ಲಿನ ಬಾಲಸರ್ಪಗಳು ತಾವೇ ಬಿಡದೆ ಕಟ್ಟಿರುವುವು. ಉಸಿರಾಡದ ತಪಸ್ವಿಗಳ ಬೆವರನ್ನು ಆಯಾಸಗೊಂಡಿರುವ ದೇಹವನ್ನು ಸಂತೈಸಲೆಂದು ಕಿವಿಗಳನ್ನಾಡಿಸಿ (ಗಾಳಿ ಬೀಸುವ) ಆನೆಯ ಮರಿಗಳು ಶೋಭಿಸಿದುವು. ೨೩. ಆ ಕಾಡು ಸ್ಥಿರವಾಗಿ ಆಸನದಲ್ಲಿ ಕುಳಿತು ಉಪವಾಸದಿಂದ (ಶಕ್ತಿಗುಂದಿ)ರುವವರಿಗೆ ಬೆನ್ನುಕೊಡುವ ಸೇವಕಿಯಾಗಿ ಒರಗಲಿಕ್ಕೆ ಸಹಾಯುಮಾಡಲು ಗುಂಪುಗೂಡಿರುವ ಹೆಬ್ಬುಲಿ, ಬೇಸರಹೊಂದದೆ ಸೊಂಡಿಲಿನಲ್ಲಿ ನೀರನ್ನು ತುಂಬಿ ಆಶ್ರಮಕ್ಕೆ ತಣ್ಣೀರನ್ನು ತಂದು ಪ್ರೋಕ್ಷಣೆ ಮಾಡುತ್ತಿರುವ ಮನೋಹರಾಕೃತಿಯ ಆನೆ-ಇವುಗಳಿಂದ ಶೋಭಿಸಿತು. ೨೪. ಆ ಕಾಡು ಹೊಸೆದು ಮುಂಜಿಗಳನ್ನು ಮಾಡುವ ಎಳೆಯರಿಗೆ ಮೆದೆಯ ಹುಲ್ಲನ್ನು ಸೀಳಿ ಸೀಳಿ

ನಂದಬಾರದ ಹೋಮದಗ್ನಿಯ
ನಂದಲೀಯದೆ ಶುಷ್ಕ ಸಮಿಧೆಯ
ತಂದು ನೆಱೆ ಹೊತ್ತಿಕ್ಕಿ ಹೊಗಿಸುವ ವೃದ್ಧ ಕಪಿಗಳಲಿ
ಬಂದು ಪಕ್ಕವ ಬೀಸಿ ಮಾರುತ
ನಿಂದಲಗ್ನಿಯ ಪಟುವ ಮಾಡುತ
ನಿಂದು ನರ್ತಿಸಿ ನಲಿವ ನವಿಲಿನಲೊಪ್ಪಿತಾ ವನವು ೨೫

ಸಾವಧಾನದಲೊಱಗಿ ಸಲೆ ಸಂ
ಭಾವಿತದಲಿಹ ಮುನಿಗಳಿಗೆ ನಿ
ದ್ರಾವಿಳಾಸತೆ ಲೋಗರಿಂದಳಿಯದ ಉಪಾಯದಲಿ
ತಾವೆ ಬಂದಾ ಪರ್ಣಶಾಲೆಯ
ನೋವಿ ಬಾಗಿಲ ಕಾಯ್ದುಕೊಂಡಿಹ
ವಾ ವನಾಂತದೊಳಲ್ಲಿಗಲ್ಲಿಗೆ ಪಂಚಮುಖನಿಕರ ೨೬

ಕೆಲರು ವೇದವನೋದುವರು ಕೆಲ
ಕೆಲರು ಶಾಸ್ತ್ರವ ಕೇಳುವರು ಕೆಲ
ಕೆಲರು ವೇದಾರ್ಥವನುಪನ್ಯಾಸವನು ಮಾಡುವರು
ಕೆಲರು ದರ್ಶನ ತರ್ಕಭೇದಂ
ಗಳನು ತಿಳಿವರದೆಲ್ಲಿ ನೋಡಲು
ತುಳುಕುತಿರ್ದುದು ಶಬ್ದಸಂಭ್ರಮವಾ ವನಾಂತದಲಿ ೨೭

ಸಮೀಪದಲ್ಲೇ ಸಿದ್ಧಮಾಡಿಕೊಡುವ ಕರಡಿ, ಸಂತೋಷದಿಂದ ಯಜ್ಞೋಪವೀತದ ನೂಲಿಗೆಂದು ಕಮಲದ ನಾಳವನ್ನು ಸಾಲಾಗಿ ತಂದಿಡುವ ಹಂಸ-ಇವುಗಳಿಂದ ಶೋಭಿಸಿತು. ೨೫. ಆ ಕಾಡು ಕೆಡಬಾರದ ಹೋಮದ ಬೆಂಕಿಯನ್ನು ಕೆಡಲು ಅವಕಾಶವೀಯದೆ ಒಣಗಿದ ಅರಳಿ, ಮುತ್ತುಗ ಮೊದಲಾದುವುಗಳ ಚೋಟುದ್ದದ ಕಡ್ಡಿಗಳನ್ನು ತಂದು ಚೆನ್ನಾಗಿ ಬೆಂಕಿ ಹತ್ತಿಸಿ ಜ್ವಲಿಸುವಂತೆ ಮಾಡುವ ವಯಸ್ಸಾದ ಕಪಿಗಳು, ಬಂದು ರೆಕ್ಕೆಯನ್ನು ಬೀಸಿ ಗಾಳಿಯಿಂದ ಬೆಂಕಿಯನ್ನು ತೀವ್ರಗೊಳಿಸುತ್ತ ನಿಂತು ನರ್ತಿಸಿ ನಲಿಯುವ ನವಿಲು-ಇವುಗಳಿಂದ ಶೋಭಿಸಿತು. ೨೬. ಆ ಕಾಡಿನಲ್ಲಿ ಸಿಂಹಗಳ ಸಮೂಹವು ಮನಸ್ಸನ್ನು ಒಂದೇ ಕಡೆ ಇರಿಸಿ ಒರಗಿರುವ ಗೌರವಾನ್ವಿತ ಮುನಿಗಳಿಗೆ ನಿದ್ರೆಯ ಸೊಗಸು ಸಾಮಾನ್ಯರಿಂದ ಭಂಗಗೊಳ್ಳದ ರೀತಿಯಲ್ಲಿ ಪ್ರೀತಿಯಿಂದ ಎಲೆಮನೆಯ ಬಾಗಿಲನ್ನು ಅಲ್ಲಲ್ಲಿ ಕಾಯ್ದುಕೊಂಡಿರುವುವು. ೨೭. ಕೆಲವರು ವೇದವನ್ನೋದುವರು, ಕೆಲವರು ಶಾಸ್ತ್ರವನ್ನು ಕೇಳುವರು, ಮತ್ತೆ ಕೆಲವರು ವೇದಗಳ ಅರ್ಥವನ್ನು ಕುರಿತು ಉಪನ್ಯಾಸ ಮಾಡುವರು, ಕೆಲವರು ದರ್ಶನ, ತರ್ಕ ಭೇದಗಳನ್ನು ತಿಳಿಯುವರು. (ಹೀಗೆ) ಆ ಕಾಡಿನೊಳಗೆ ಎಲ್ಲಿ ನೋಡಿದರಲ್ಲಿ ಶಬ್ದಸಂಭ್ರಮ ತುಳುಕುತ್ತಿದ್ದಿತು.

ಸಾರಣೆಯ ಮಾಡೆಂಬುವರು ದೇ
ಹಾರಕೆಡೆಮಾಡೆಂಬುವರುಪುಪ
ಹಾರಕೊಳ್ಳಿಹ ಕಂದಮೂಲವ ತನ್ನಿಯೆಂಬುವರು
ಸಾರ ಮಂತ್ರಾಗಮಗಳಲಿ ಕೆ
ಯ್ಯಾರೆ ಭೂತಿಯು ಮಾಡುವರುಗಳು
ನಾರಸೀರೆಯ ನೆಯ್ವುವರು ಮೆಱೆದರು ವನಾಂತದಲಿ ೨೮

ಬೇಹ ಧರ್ಮದ ಬೀಡು ಕರ್ಮಸ
ಮೂಹದಾಗರ ಸಗುಣಯೋಗ
ವ್ಯೂಹದೊಡ್ಡಣೆ ಜಾತಿವರ್ಣಾಶ್ರಮದ ನೆಲೆಗಾಡು
ಸ್ನೇಹದಂಬುಧಿ ಯಜ್ಞವಿಧಿಯ ವಿ
ವಾಹಶಾಲೆಯಿದೆಂಬ ಋಷಿಸಂ
ದೋಹದಾಶ್ರಮವಿದ್ದುವಾ ಕಾನನದ ಮಧ್ಯದಲಿ ೨೯

ಉಡುವುದಾದೊಡೆ ನಾರು ಹಸಿದುಂ
ಬೊಡೆ ಸದಾ ವನತರುಫಲಂಗಳು
ತೊಡುವುದಾದೊಡೆ ಭೂತಿ ಹಕ್ಕೆಯ ಹಾಸ ನೋಡಿದೊಡೆ
ಕಡವಸಗಳಿಹ ವಾಸವಾದೊಡೆ
ಯಡವಿಯೀ ಸಂಸಾರ ಮುನಿಗಳ
ಬಿಡದಲಾ ಎಂದೆನುತಲಲ್ಲಮ ನೋಡಿ ಬೆಱಗಾದ ೩೦

ನಾರುಸೀರೆಗೆ ಮರನುಗಳನಾ
ಹಾರದಾಸೆಗೆ ಕಂದಮೂಲವ
ನೀರ ತೃಷೆಗನವರತ ನಾನಾ ನದಿ ಸರೋವರದ
ಹಾರಿಕೊಂಡಿಹ ಘೋರತರ ಸಂ
ಸಾರ ಮುನಿಗಳ ಬಿಡದುವುಳಿದರ
ನಾರು ಬಲ್ಲರು ಸುಡಲೆನುತಲಲ್ಲಮನು ಬೆಱಗಾದ ೩೧

೨೮. ಆ ಕಾಡಿನಲ್ಲಿ ನೆಲವನ್ನು ಸಾರಿಸು ಎನ್ನುವವರು, ಪೂಜೆಗೆ ಅಣಿಮಾಡು ಎಂದು ಹೇಳುವವರು, ಉಪಹಾರಕ್ಕೆ ಒಳ್ಳೆಯ ಗೆಡ್ಡೆ ಗೆಣಸುಗಳನ್ನು ತನ್ನಿ ಎಂದು ಹೇಳುವವರು, ಶ್ರೇಷ್ಠವಾದ ಮಂತ್ರಾಗಮಗಳಿಂದ ಕೈಯಿಂದಲೇ ವಿಭೂತಿಯನ್ನು ಸಿದ್ಧಮಾಡುವವರು, ನಾರುಬಟ್ಟೆಯನ್ನು ನೇಯುವವರು ಶೋಭಿಸಿದರು. ೨೯. ಆ ಕಾಡಿನ ಮಧ್ಯದಲ್ಲಿ ಅಪೇಕ್ಷಿಸುವ ಧರ್ಮದ ಬೀಡು; ಕರ್ಮಸಮೂಹದ ಗಣಿ; ಒಳ್ಳೆಯ ಸಗುಣ ಯೋಗಾಭ್ಯಾಸಿಗಳ ಸಮೂಹ; ಜಾತಿ-ವರ್ಣಾಶ್ರಮಗಳ ನೆಲೆಯ ಬೀಡು; ಸ್ನೇಹದ ಸಮುದ್ರ; ಯಜ್ಞವಿಧಿಯ ಮಂಗಳದ ಮನೆ-ಇವು ಎನ್ನುವ ಋಷಿಸಮುದಾಯಗಳ ಆಶ್ರಮಗಳು ಇದ್ದುವು. ೩೦. "ಉಡಲು ನಾರುಬಟ್ಟೆ; ಹಸಿದು ಉಣ್ಣಲು ಎಲ್ಲಾ ಕಾಲದಲ್ಲೂ ಸಿಗುವ ಕಾಡುಮರಗಳ ಹಣ್ಣುಗಳು; ಧರಿಸಲು ವಿಭೂತಿ; ಒರಗುವ ಹಾಸುಗೆಯನ್ನು ನೋಡಿದರೆ ಜಿಂಕೆಯ ಚರ್ಮ; ವಾಸವಾದರೊ ಕಾಡು. ಈ ಸಂಸಾರ ಮುನಿಗಳನ್ನು ಬಿಡುವುದಿಲ್ಲ" ಎಂದೆನ್ನುತ್ತ ಅಲ್ಲಮನು (ಅವರನ್ನು) ನೋಡಿ ಆಶ್ಚರ್ಯಹೊಂದಿದನು. ೩೧. "ನಾರುಬಟ್ಟೆಗೆ ಮರಗಳನ್ನು, ಆಹಾರದ ಆಸೆಗೆ ಗೆಡ್ಡೆ ಗೆಣಸುಗಳನ್ನು, ನೀರಿನ ಬಾಯಾರಿಕೆಗೆ ನಾನಾ

ಸ್ನಾನ ಜಪ ತಪ ನಿತ್ಯನಿಯಮ
ಧ್ಯಾನ ವೇದಾಧ್ಯಯನ ಯಜ್ಞ ವಿ
ಧಾನ ಮೊದಲಾಗಿರ್ದ ನಾನಾ ವಿಧದ ಗೊಡವೆಗಳ
ಏನ ಮಾಡಿದರೇನು ಜೀವದ
ಹಾನಿ ಹರಿಬವನರಿಯಲರಿಯರು
ಕಾನನವ ಹೊಕ್ಕೇನು ಫಲವೆನುತಿರ್ದನಲ್ಲಮನು ೩೨

ಎಲ್ಲಿತನಕಲಿ ಮಾಯೆ ತನಗು
ಳ್ಳಲ್ಲಿ ಮುಟ್ಟಲಿ ಕಲಿತು ಜೀವವ
ಕೊಲ್ಲದಿರಲಿಕೆ ಬಾರದವ ಕೊಂದವಗೆ ಕೊಲೆ ಬಿಡದು
ಎಲ್ಲಿ ಹೊಕ್ಕೊಡೆ ಮಾರಿ ತನ್ನಯ
ಹಲ್ಲ ಬಾಯಲಿ ತಿಂದು ತೇಗದೆ
ನಿಲ್ಲದವರನು ಸುಡಲಿ ಮಾಟವನೆಂದನಲ್ಲಮನು ೩೩

ಮಾಟದಲಿ ಗತವಾಗಿ ಭವಭವ
ಕೋಟಿಯಲಿ ಸಂಸಾರದುಃಖದ
ಕೂಟವನೆ ಕೈಗೈವ ಮುಖ್ಯ ಮುನೀಂದ್ರರೆಲ್ಲರನು
ದಾಟಿಸುವೆನಾ ಭವಭವಾಬ್ಧಿಯ
ನಾಟಿಸುವೆನವರರಿವಿಗರಿವನು
ಮಾಟವೆಲ್ಲವ ಮಾಸಿಸುವೆನೆನುತಿರ್ದ ಪ್ರಭುರಾಯ ೩೪

ಬಗೆಯ ನದಿ ಸರೋವರಗಳನ್ನು ಹುಡುಕಿಕೊಂಡಿರುವ ಘೋರತರ ಸಂಸಾರವು ಮುನಿಗಳನ್ನು ಬಿಡದು. (ಇನ್ನು) ಉಳಿದವರ ಪಾಡೇನು?" ಎಂದು ಅಲ್ಲಮನು ಆಶ್ಚರ್ಯಹೊಂದಿದನು. ೩೨. "ಸ್ನಾನ, ಜಪ, ತಪಸ್ಸು, ನಿತ್ಯನಿಯಮಗಳು, ಧ್ಯಾನ, ವೇದಾಭ್ಯಾಸ, ಯಜ್ಞವಿಧಾನ ಇವೇ ಮೊದಲಾಗಿರುವ ನಾನಾಬಗೆಯ ಚಿಂತೆಗಳು. ಏನು ಮಾಡಿದರೇನು, ಜೀವಕ್ಕೆ ಒದಗುವ ಹಾನಿ ತೊಂದರೆಗಳನ್ನು ತಿಳಿಯಲು ಅಸಮರ್ಥರು ಕಾಡನ್ನು ಪ್ರವೇಶಿಸಿದರೇನು ಫಲ?" ಎಂದು ಅಲ್ಲಮನು ನುಡಿಯುತ್ತಿದ್ದನು. ೩೩. "ಇವರು ಎಲ್ಲಿಯವರೆವಿಗೆ ಮಾಯೆ ತಮ್ಮಲ್ಲಿ ಇರುವುದೋ ಅಲ್ಲಿಯವರೆವಿಗೆ ಅದು ತಮ್ಮ ಜೀವವನ್ನು ನಾಶಗೊಳಿಸುವುದೆಂಬುದನ್ನು ಅರಿಯರು. ಕೊಂದವನಿಗೆ ಸಾವು ತಪ್ಪುವುದಿಲ್ಲ. ಎಲ್ಲಿಗೆ ಹೋದರೂ ಮಾರಿಯು ತನ್ನ ಹಲ್ಲಿನ ಬಾಯಿಯಿಂದ ತಿಂದು ತೇಗದೆ ಬಿಡದು. ಅವರನ್ನೂ ಅವರ ಕಾರ್ಯಗಳನ್ನೂ ಸುಡಲಿ" ಎಂದು ಅಲ್ಲಮನು ನುಡಿದನು. ೩೪. "ಕಾರ್ಯದಲ್ಲಿ ತೊಡಗಿ ಜನ್ಮಜನ್ಮಕೋಟಿಯಲ್ಲಿ ಸಂಸಾರದ ದುಃಖದ ಸಂಬಂಧವನ್ನೇ ಉಂಟುಮಾಡುವ ಮುನಿಮುಖ್ಯರೆಲ್ಲರನ್ನೂ ಆ ಭವಸಾಗರದಿಂದ ದಾಟಿಸುವೆನು. ಅವರ ಬುದ್ಧಿಗೆ ತಿಳುವಳಿಕೆಯನ್ನು ನೀಡುವೆನು, (ಅವರು ಮಾಡುವ) ಕಾರ್ಯಗಳೆಲ್ಲವನ್ನೂ ತಡೆಯುವೆನು" ಎಂದು

ಮುಂದೆ ಮಾಡುವ ಮಾಟಕೂಟದ
ದಂದುಗಂಗಳ ತನುಮನಂಗಳ
ಹೊಂದದೋಜೆಯ ಮಾಟದಿಂದಿವರುಗಳ ಬಗೆಬಗೆಯ
ಸಂದ ಮಾಯಾಪಾಶದಾಶಾ
ಬಂಧನಂಗಳ ಬಿಡಿಸಿ ಪರಮಾ
ನಂದಸುಖಿಗಳ ಮಾಡುವೆನು ನಾನೆನುತ ಗುರು ಬಂದ ೩೫

ಅದಱೊಳಗೆ ಕೆಲಕೆಲರು ಯಜ್ಞದ
ವಿಧಿಯ ವಿರಚಿಸುತಿರಲು ಕಾಣುತ
ಅದಱಲೇನುಂಟಕಟ ಬಂಧನ ಮೋಕ್ಷವಾದಪುದೆ
ಇದಿರಲಿದಿರಿಟ್ಟಾವ ಕರ್ಮವ
ನೊದಗಿ ಮಾಡಲು ದುಃಖವಲ್ಲದೆ
ಸದಮಲ ಸ್ವಾತಂತ್ರಸುಖವಿಲ್ಲೆಂದ ಗುರುರಾಯ ೩೬

ಜನನಮರಣಭ್ರಮೆಯ ಭವಬಂ
ಧನಕೆ ತಾರದ ಕರ್ಮವೇ ಕಾ
ರಣವಲಾ ಕೈವಲ್ಯಪದವಿಯನೊಲಿವ ಜೀವರಿಗೆ
ಇನಿತನೇನುವನಱಿಯಲಱಿಯದೆ
ಮನಸಿನಿಚ್ಛೆಗೆ ಹರಿವುದನುಚಿತ
ವೆನುತಲುಪದೇಶಿಸಿದನಾ ಪ್ರಭು ಮುನಿಜನಂಗಳಿಗೆ ೩೭

ಲೇಪಿಸಿದಹಂಕಾರವೇ ಪಶು
ಯೂಪಕಂಭವೆ ಮನಸು ಪವನ
ಸ್ಥಾಪಿತವೆ ಬಂಧಿಸುವ ಪಾಶ ವಿವೇಕವೇ ಶಸ್ತ್ರ
ವ್ಯಾಪಿಸಿದ ಸುಜ್ಞಾನವಹ್ನಿ ಸ
ದಾ ಪುನೀತಮಯಾತ್ಮನಧ್ವರಿ
ಯಾ ಪರಿಯನಱುಹಿಸಿದನಾ ಪ್ರಭು ಪರಮಮುನಿಗಳಿಗೆ ೩೮

ಅಲ್ಲಮನು ಹೇಳುತ್ತಿದ್ದನು. ೩೫. "ಇವರುಗಳು ಮುಂದೆಮಾಡುವ ಕಾರ್ಯಸಂಬಂಧದ ಚಿಂತೆಗಳು ತನು ಮನಗಳನ್ನು ಹೊಂದದ ರೀತಿಯಲ್ಲಿ ನಾನಾಬಗೆಯಾಗಿ ಸೇರಿರುವ ಮಾಯಾಪಾಶದ ಆಶೆಯ ಬಂಧನಗಳನ್ನು ಬಿಡಿಸಿ, ಪರಮಾನಂದಸುಖಿಗಳನ್ನಾಗಿ ನಾನು ಮಾಡುವೆ" ಎಂದು ಗುರುವಾದ ಅಲ್ಲಮನು ಬಂದನು. ೩೬. ಆ ಕಾಡಿನಲ್ಲಿ ಕೆಲವರು ಯಜ್ಞಕಾರ್ಯಮಾಡುತ್ತಿರಲು (ಅದನ್ನು) ಕಂಡು "ಅಯ್ಯೋ, ಅದರಲ್ಲೇನಿದೆ? ಕರ್ಮ ಬಂಧನದಿಂದ ಬಿಡುಗಡೆಯಾಗುತ್ತದೆಯೆ? ಎದುರೆದುರಾಗಿ ಯಾವ ಕರ್ಮವನ್ನೇ ಅಗಲಿ ಹೆಚ್ಚುಗಾರಿಕೆಯಿಂದ ಮಾಡಲು ದುಃಖವಲ್ಲದೆ ಪರಿಶುದ್ಧವಾದ ಸ್ವಾತಂತ್ರಸುಖವಿಲ್ಲ" ವೆಂದು ಗುರುರಾಯನು ನುಡಿದನು. ೩೭. ಮೋಕ್ಷಪದವಿಯನ್ನು ಬಯಸುವ ಜೀವರಿಗೆ ಹುಟ್ಟು ಸಾವುಗಳ ಭ್ರಮೆಯೂ ಭವಬಂಧನಕ್ಕೆ ತಾರದ ಕರ್ಮವೂ ಕಾರಣವಾಗಿವೆ. ಇವಾವುದನ್ನೂ ತಿಳಿಯಲಾರದೆ ಮನಸ್ಸಿನ ಇಚ್ಛೆಗೆ (ಒಳಗಾಗಿ) ನಡೆಯುವುದು ಸರಿಯಲ್ಲವೆಂದು ಆ ಪ್ರಭುವು ಮುನಿಜನರಿಗೆ ಉಪದೇಶಿಸಿದನು. ೩೮. "ಅಂಟಿದ ಅಹಂಕಾರವೇ ಪಶು. ಮನಸ್ಸೇ ಯಜ್ಞಪಶುವನ್ನು ಕಟ್ಟುವ ಕಂಬ. ವಾಯುಬಂಧವೇ ಪಶುವನ್ನು ಕಟ್ಟುವ ಹಗ್ಗ.

ಮಿಥ್ಯವೆಲ್ಲವು ಹೋಮದಾಹುತಿ
ತಥ್ಯವೇ ಶೇಷಪ್ರಸಾದವು
ನಿತ್ಯನಿರ್ಮಲ ನಿಜದ ಪರಮಾನಂದವೇ ತೃಪ್ತಿ
ಸತ್ಯ ಶಾಶ್ವತ ಸ್ವಸ್ವರೂಪದ
ತತ್ವ ತಾನೆಂದಜಿವುದೇ ಫಲ
ವೃತ್ತಿಯೆಂದುಪದೇಶಿಸಿದನಾ ಪ್ರಭು ಮುನಿವ್ರಜಕೆ ೩೯

ಜಪವ ಮಾಡಿದೊಡೇನಹುದು ಮೇಣ್
ತಪವ ಮಾಡಿದೊಡೇನಹುದು ಮೇ
ಣಪರಿಮಿತದುದ್ದೇಶಖಂಡಜ್ಞಾನಮಾರ್ಗದಲಿ
ಉಪನಯನ ಮೊದಲಾದ ನಾನಾ
ಚಪಳತರವಹ ಬಾಹ್ಯಭಾವನೆ
ಯುಪಚರಣೆ ಮುನಿಗಳಿಗೆಯನುಚಿತವೆಂದನಲ್ಲಮನು ೪೦

ಎನುತ ಯಾಗಕೆಯಾತ್ಮಯಾಗವ
ನನುರತಿಗೆ ನಿಜರತಿಯ ದೇವಾ
ರ್ಚನೆಗೆ ಹೃದಯವನುಪನಯನಕಾ ನಿಜ ನಿರೀಕ್ಷಣೆಯ
ಎನಿತು ಬಾಹ್ಯದ ಕರ್ಮಭಕ್ತಿಗ
ಳನಿತನಂತಮಾರ್ಗದಲಿ ಸೂ
ಚನೆಯ ಮಾಡಿದನಲ್ಲಮಪ್ರಭು ಪರಮ ಮುನಿಗಳಿಗೆ ೪೧

ವಿವೇಕವೇ ಆಯುಧ. ವ್ಯಾಪಿಸಿದ ಸುಜ್ಞಾನವೇ ಅಗ್ನಿ. ಸದಾ ಪವಿತ್ರಮಯವಾದ ಆತ್ಮನೇ ಯಜ್ಞವನ್ನು ನಡೆಸುವವನು." ಈ ಕ್ರಮವನ್ನು ಆ ಶ್ರೇಷ್ಠಮುನಿಗಳಿಗೆ ಪ್ರಭುವು ತಿಳಿಸಿದನು. ೩೯. "ಸುಳ್ಳೆಲ್ಲವೂ ಹೋಮದ ಆಹುತಿ. ಸತ್ಯವೇ ಶೇಷಪ್ರಸಾದ. ನಿತ್ಯವೂ ನಿರ್ಮಲವೂ ಆದ ಶಿವನ ಪರಮಾನಂದವೇ ತೃಪ್ತಿ. ಸತ್ಯ-ಶಾಶ್ವತ-ಸ್ವಸ್ವರೂಪದ ತತ್ವ ತಾನು ಎಂದು ತಿಳಿಯುವುದೇ ಫಲಕಾರ್ಯ" ಎಂದು ಆ ಮುನಿಗಳ ಸಮೂಹಕ್ಕೆ ಪ್ರಭುವು ಉಪದೇಶಿಸಿದನು. ೪೦. "ಜಪವನ್ನು ಮಾಡಿದರೇನು ಆಗುವುದು? ತಪಸ್ಸನ್ನು ಮಾಡಿದರೇನು ಆಗುವುದು? ಹೆಚ್ಚಿನ ಉದ್ದೇಶದಿಂದ ಅಖಂಡಜ್ಞಾನಮಾರ್ಗದ ಉಪನಯನ ಮೊದಲಾದ ನಾನಾ (ಬಗೆಯ) ಚಂಚಲವಾದ ಬಾಹ್ಯಾಚರಣೆಯು ಮುನಿಗಳಿಗೆ ಅನುಚಿತ" ಎಂದು ಅಲ್ಲಮನು ನುಡಿದನು. ೪೧. ಯಜ್ಞಕ್ಕೆ ಆತ್ಮಯಜ್ಞವನ್ನು, ಬಾಹ್ಯಾಸಕ್ತಿಗೆ ಆತ್ಮಶಕ್ತಿಯನ್ನು, ದೇವಾರ್ಚನೆಗೆ ಹೃದಯವನ್ನು, ಉಪನಯನಕ್ಕೆ ಆತ್ಮ ಸಾಕ್ಷಾತ್ಕಾರವನ್ನು (ಹೀಗೆ) ಸತ್ಯನಿರೀಕ್ಷಣೆಯಲ್ಲಿ ಎಷ್ಟು ಬಾಹ್ಯದ ಕರ್ಮಭಕ್ತಿಗಳಿವೆಯೊ ಅಷ್ಟನ್ನೂ ಅನಂತಮಾರ್ಗದಲ್ಲಿ ಅಲ್ಲಮಪ್ರಭುವು ಶ್ರೇಷ್ಠರಾದ ಮುನಿಗಳಿಗೆ ಸೂಚನೆ ಮಾಡಿದನು.

ಅವರು ತಿಳಿದರು ಮಾಯೆ ಹುಟ್ಟಿದ
ದಿವಸದಲಿ ದೂರ್ವಾಸಮುನಿಪತಿ
ವಿವರಿಸಿದ ಹದನಿಂದಲಾ ಪ್ರಭುವೀತನಹುದೆಂದು
ತವಕದಲಿ ತಮತಮ್ಮ ಮನದು
ತ್ಸವವ ಹಡೆದು ಕೃತಾರ್ಥರಾದರು
ಭುವನದೊಳಗೆಮ್ಮಲ್ಲಮಪ್ರಭು ಲಿಂಗಲೀಲೆಯಲಿ ೪೨

ಸಾವ ಹುಟ್ಟುವ ವಿಧಿಯ ಮಾನವ
ಜೀವಜಾಳಕೆಯವರವರು ಮು
ನ್ನಾವ ಕಾಯಕವಿಡಿದು ತಾವಿಹರಾ ಪ್ರಕಾರದಲಿ
ತೀವಿಯಂತರ್ನಿಷ್ಠೆಯಲಿ ನಾ
ನಾವಿಧೋಪಾಯವನು ಬೋಧಿಸಿ
ಪಾವನವ ಮಾಡಿದನು ಸರ್ವರನೆಮ್ಮ ಗುರುರಾಯ ೪೩

ಭೂತನಾಥನ ನೇಮದಿಂದಲಿ
ಭೂತದೊಳಿಹ ಕಾರಣೀಕರ
ನೀತರದಲವರವರಿಗುಚಿತ ಜ್ಞಾನಮಾರ್ಗದಲಿ
ಓತು ಸದ್ಯೋನುಕ್ತರೆನಿಸಿದ
ನಾತಗಳನೆಲ್ಲರನು ಲೀಲಾ
ಪ್ರೀತಿಯಿಂದೆಮ್ಮಲ್ಲಮಪ್ರಭು ಲಿಂಗಲೀಲೆಯಲಿ ೪೪

ಅಂತು ಗತಿ ೨೦ಕ್ಕಂ ಪದ ೮೫೩ಕ್ಕಂ ಮಂಗಳಂ

೪೨. ಮಾಯೆ ಹುಟ್ಟಿದ ದಿನವೇ ದೂರ್ವಾಸಮುನಿಪತಿ ವಿವರಿಸಿದ ಸಂಗತಿಯಿಂದ ಆ ಮುನಿಗಳು ಆ ಪ್ರಭುವೇ ಈತನಾಗಿರುವನೆಂದು ತಿಳಿದರು. ಕುತೂಹಲದಿಂದ ತಮ್ಮ ತಮ್ಮ ಮನದಲ್ಲಿ ಸಂತೋಷವನ್ನು ಹೊಂದಿ ಭುವನದಲ್ಲಿ ನಮ್ಮ ಅಲ್ಲಮ ಪ್ರಭುಲಿಂಗನ ಲೀಲೆಯಿಂದ ಧನ್ಯರಾದರು. ೪೩. ಮಾನವಜೀವಸಮೂಹಕ್ಕೆ ಅವರವರು ಹಿಂದೆ ಯಾವ ಕಾಯಕ ಹೊಂದಿದ್ದರೋ ಆ ಪ್ರಕಾರವಾದ ಸಾಯುವ ಹುಟ್ಟುವ ಕ್ರಮವನ್ನು ತಿಳುಹಿ, ಅಂತರಾತ್ಮನ ಅನುಸಂಧಾನದ ನಾನಾ ಬಗೆಯ ಉಪಾಯವನ್ನು ಬೋಧಿಸಿ ಸರ್ವರನ್ನೂ ನಮ್ಮ ಗುರುರಾಯನು ಪವಿತ್ರರನ್ನಾಗಿ ಮಾಡಿದನು. ೪೪. ಅಲ್ಲಮಪ್ರಭುಲಿಂಗನು ಶಿವನ ನೇಮಕದಿಂದ ಭುವಿಯಲ್ಲಿ ಇರುವ ಕಾರಣಪುರುಷರನ್ನು ಈ ತೆರದಲ್ಲಿ ವಿನೋದದಿಂದ ಅವರವರಿಗೆ ಯೋಗ್ಯವಾದ ಜ್ಞಾನಮಾರ್ಗದಲ್ಲಿ ಬೋಧಿಸಿ ಸದ್ಯೋಮುಕ್ತರನ್ನಾಗಿ ಮಾಡಿದನು.

## ೨೧. ಬಸವೇಶ್ವರನು ಶೂನ್ಯಸಿಂಹಾಸನವನ್ನು ರಚಿಸಿದುದು

### ಗತಿ ೨೧

ಸೂಚನೆ : ತನ್ನೊಳಗೆ ತಾ ಸಾಧಿಸಿದ ಸಂ
ಪನ್ನತೆಯನಿದಿರಿಟ್ಟು ರಚಿಸಿದ
ಶೂನ್ಯಸಿಂಹಾಸನವನೆಮ್ಮಯ ಬಸವದಂಡೇಶ

ಗುರು ಗುಹೇಶ್ವರ ತಾನದಾರಿಗೆ
ಕರುಣಿಸಿದನವರವರನಾಕ್ಷಣ
ಪರಮ ಪದವಿಯಲಿರಿಸಿ ತಾನೊಲಿದಾಡುತಿರಲಿತ್ತ
ಗರುವ ಗುಣನಿಧಿ ಬಸವದಂಡೇ
ಶ್ವರನು ಕಲ್ಯಾಣದಲಿ ರಚಿಸಿದ
ಪರಿಯನೆಲ್ಲರು ತಿಳಿವುದೀ ಪ್ರಭುಲಿಂಗಲೀಲೆಯಲಿ ೧

ಬೇಸಱದೆ ನೆಱೆ ಪೂರ್ವಯೋಗಾ
ಭ್ಯಾಸದಲಿ ಪಶ್ಚಿಮದ ಪವನಾ
ವಾಸದಲಿ ಸರ್ವೇಂದ್ರಿಯಂಗಳ ನಿಗ್ರಹಂಗಳಲಿ
ಸೂಸದಂತಃಕರಣಶುದ್ಧಿಯ
ಭಾಸುರತೆಯಲಿ ಬಸವದಂಡಾ
ಧೀಶನೊಪ್ಪಿದನೇಕನಿಷ್ಠೆಯ ದಿವ್ಯತೇಜದಲಿ ೨

ಸೂ : ತನಗೆ ತಾನೇ ಸಾಧಿಸಿ ಸಿದ್ಧಿಯೆಂಬ ಸಂಪತ್ತನ್ನು ಪಡೆದು ಅದನ್ನು ಮುಂದುಮಾಡಿ ಶೂನ್ಯಸಿಂಹಾಸನವನ್ನು ನಮ್ಮ ಬಸವದಂಡೇಶನು ನಿರ್ಮಿಸಿದನು. ೧. ಗುರು ಗುಹೇಶ್ವರನು ಯಾರು ಯಾರನ್ನು ಕರುಣಿಸಿದನೋ ಅವರವರನ್ನು ಆ ಕ್ಷಣವೆ ಪರಮಪದವಿಯಲ್ಲಿರಿಸಿ ತಾನು ಸಂತೋಷದಿಂದಿರುತ್ತಿರಲು ಮಹತ್ತಾದ ಗುಣಗಳನ್ನೇ ನಿಧಿಯಾಗಿ ಹೊಂದಿರುವ ಬಸವದಂಡಾಧಿಪತಿಯು ಕಲ್ಯಾಣದಲ್ಲಿ (ಶೂನ್ಯ ಸಿಂಹಾಸನವನ್ನು) ನಿರ್ಮಿಸಿದ ರೀತಿಯನ್ನು ಈ ಪ್ರಭುಲಿಂಗಲೀಲೆಯಲ್ಲಿ ಎಲ್ಲರೂ ತಿಳಿಯುವುದು. ೨. ಬಸವೇಶ್ವರನು ಬೇಸರ ಹೊಂದದೆ ವಿಶೇಷವಾಗಿ ಮೊದಲ ಯೋಗಾಭ್ಯಾಸವನ್ನು (ಪ್ರಾರಂಭಿಸಿ) ಪಶ್ಚಿಮಚಕ್ರದಲ್ಲಿ ವಾಯುವನ್ನು ನಿಲ್ಲಿಸುವಿಕೆಯಲ್ಲಿ, ಸಕಲ ಇಂದ್ರಿಯಗಳ ನಿಗ್ರಹಗಳಲ್ಲಿ, ಅಂತರ್ಗತಗೊಳಿಸಿದ ಅಂತಃಕರಣ ಶುದ್ಧಿಯ ಪ್ರಖರತೆಯಲ್ಲಿ, ಒಂದೇ ಆದ ನಿಷ್ಠೆಯ ದಿವ್ಯ ತೇಜಸ್ಸಿನಲ್ಲಿ ಶೋಭಿಸಿದನು.

ಆರಿಗಳೆಂಬಭಿಧಾನವಡಗಿದ
ವರರೆ ಅರಿಷಡ್ವರ್ಗನೃಪರಿಗೆ
ಸಿರುತ ನಿರ್ಮದವಾದವಂಡಲೆವಷ್ಟಮದಗಜಕೆ
ನೆರೆದ ತನುಗುಣರಾಜಿ ರಾಜಿಸಿ
ಪರಿಚರಿಯಕರರಾದರಿಂತೀ
ಪರಿಯಲೆಸೆದುವು ಬಸವರಾಜನ ರಾಜಯೋಗದಲಿ ೩

ಹೇಳಿದಂತಿರಕಲಿತವಿಂದ್ರಿಯ
ಜಾಳವಾಜ್ಞಾ ಮಾತ್ರದಿಚ್ಛೆಗೆ
ಮೇಳವಿಸಿ ನೆಲೆಗೊಂಡವಂತಃಕರಣ ಶರಣೆಂದು
ಕೀಲಿಸಿದ ಕುಂಡಲಿಯ ಸರ್ಪನ
ಕಾಲುಚೊಡಕದು ಸುಸರವಾಯಿತು
ಹೇಳಲೇನಾ ಬಸವರಾಜನ ರಾಜಯೋಗದಲಿ ೪

ಹೋಗ ಹೊಗಲಿಕೆ ಕುಂಡಲಿಯ ಹೆ
ಬ್ಬಾಗಿಲಲಿ ಕೆಡಹಿದನು ಕಾಮನ
ಮೇಗೆ ಹೃದಯಕವಾಟದಲಿ ಕಡಿದಿಕ್ಕಿದನು ಜವನ
ಲಾಗಿಸಿದನಖಿಳಾಧಿಪತ್ಯವ
ಭೋಗಿಸುವ ಭ್ರೂಮಧ್ಯಭುವನಕೆ
ರಾಗದಿಂದನುಭಾವಮುಖದಲಿ ಬಸವದಂಡೇಶ ೫

೩. ಆಹಾ! ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳೆಂಬ ಅರಿಷಡ್ವರ್ಗಗಳೆಂಬ ರಾಜರುಗಳು ಶತ್ರುತ್ವವನ್ನು ಕಳೆದುಕೊಂಡು ಮಿತ್ರತ್ವವನ್ನು ತಾಳಿದರು. ಪೀಡಿಸುವ ಅಸ್ತ್ರ, ಅರ್ಥ, ಯೌವನ, ಸ್ತ್ರೀ, ವಿದ್ಯೆ, ಕುಲ, ರೂಪು, ಉದ್ಯೋಗಗಳೆಂಬ ಎಂಟು ಮದ್ದಾನೆಗಳಿಗೆ ನಿಜವಾಗಿಯೂ ಮದವಿಳಿಯಿತು. ಹಸಿವು, ತೃಷೆ ಮೊದಲಾದ ಶಾರೀರಿಕ ಗುಣಗಳೆಲ್ಲವೂ ಒಟ್ಟುಗೂಡಿ ಸೇವಾವೃತ್ತಿಯನ್ನು ತಾಳಿದುವು. ಹೀಗೆ ಬಸವರಾಜನ ರಾಜಯೋಗವು ಶೋಭಿಸಿತು. ೪. ಪಂಚೇಂದ್ರಿಯಗಳ ಸಮೂಹವು ಆಜ್ಞೆಮಾಡಿದಂತೆ ಇರಲು ಕಲಿತುವು. ಅಂತಃಕರಣಗಳು ಆಜ್ಞೆಗೆ ಒಳಗಾಗಿ ಇಚ್ಛಾನುಸಾರ ಶರಣು ಎಂದು ಇರತೊಡಗಿದುವು. ಹೃದಯದಲ್ಲಿ ಅಳವಟ್ಟ ಯೋಗಶಕ್ತಿಯ ಕೇಂದ್ರವು ನಿರ್ಬಾಧಿತವಾಗಿ ಕೆಲಸಮಾಡತೊಡಗಿತು. ಬಸವರಾಜನ ರಾಜಯೋಗದ (ಬಗೆಗೆ) ಏನು ಹೇಳಲಿ! ೫. ಬಸವದಂಡೇಶನು ಅನುಭಾವ ಮಾರ್ಗವನ್ನು ಹಿಡಿದು, ಕುಂಡಲಿಯ ಹೆಬ್ಬಾಗಿಲಿನಲ್ಲಿ ತನ್ನ ಮನಸ್ಸನ್ನು ಪ್ರವೇಶಿಸಿದ ಕಾಮನನ್ನು ಬಂಧಿಸಿದನು; ಹೃದಯದ ಅನಾಹತಚಕ್ರದ ಬಾಗಿಲಲ್ಲಿ ಯಮನನ್ನು ಸೆರೆಹಿಡಿದನು; ಪ್ರೀತಿಯಿಂದ ಅನುಭಾವ ಮುಖದಲ್ಲಿ ಹುಬ್ಬುಗಳ ನಡುವಿನ ಆಜ್ಞಾಚಕ್ರದಲ್ಲಿ ಸಕಲಾಧಿಪತ್ಯವನ್ನು ಜಾಗೃತಗೊಳಿಸಿದನು.

ಇಂತು ಸಲೆ ಸಂಧಾನುಭಾವದ
ಲಂತರಂಗದ ರಾಜ್ಯವೆಲ್ಲವ
ಸಂತವಿಟ್ಟು ಸಮಸ್ತದಲಿ ಸಂಪನ್ನನಾಗಿರುತ
ಮುಂತೆ ನಿರ್ಗುಣ ಯೋಗಮಾರ್ಗವ
ನೆಂತು ಕಾಂಬೆನೆನುತ್ತ ಮನದಲಿ
ಚಿಂತಿಸುತಲಾ ಬಸವದಂಡಾಧೀಶನಿಂತೆಂದ ೬

ಗುರುಗುಹೇಶ್ವರ ಚಾರುಚರಣಾಂ
ಬುರುಹಗಳ ನಾನಾವ ಪರಿಯಲಿ
ವರಿಸಿಯೆನ್ನ ಮನಃಸಮಾಧಿಯನೆಂದು ಪಡೆದಪೆನೊ
ಪರಮ ಪುರುಷನದಾವ ವೇಷವ
ಧರಿಸಿ ಬಹನೋ ಆ ಮಹಾತ್ಮನ
ಹುರುಳನಾನೆಂತಱಿವೆನೆನುತಲಿ ಬಸವ ಚಿಂತಿಸಿದ ೭

ಆವ ವೇಷದಲಾದೊಡೆಮ್ಮಯ
ದೇವನೊಲಿದೈತಂದೊಡಾತನ
ಭಾವಭಣಿತೆಯನಱಿವವೊಲು ನಾನೊಂದುಪಾಯವನು
ತೀವಿ ತೆಕ್ಕನೆ ಸಿಕ್ಕಿಸುವೆನಾ
ನಾವ ಪರಿಯಿಂದಾದೊಡೆಯು ಮ
ಜ್ಜೀವಿತೇಶನನೆನುತಲಾ ಬಸವಣ್ಣನನುಗೆಯ್ದು ೮

ಅನುಗೊಳಿಸಿದನು ಶೂನ್ಯಸಿಂಹಾ
ಸನವಿದೆಂದದಕಿಟ್ಟು ಹೆಸರನು
ವಿನುತ ಪಶ್ಚಿಮಮಾರ್ಗದಲಿ ತಾ ಕಂಡುದೆಲ್ಲವನು
ಕನಕ ಮರಕತ ಮುಖ್ಯ ಮಣಿಗಳ
ಘನತರದ ಕೇವಣದ ಲಹರಿಯ
ಮಿನುಗ ಮಿಸುಗುವ ವಿಮಲಪೀಠವ ಬಸವ ನಿರ್ಮಿಸಿದ ೯

೬. ಹೀಗೆ (ಸಗುಣಯೋಗದಲ್ಲಿ ತೊಡಗಿದ) ಬಸವರಾಜನು ಪ್ರಸಿದ್ಧವಾದ ಅನುಭಾವದಲ್ಲಿ ಅಂತರಂಗದ ರಾಜ್ಯವೆಲ್ಲವನ್ನೂ ಸಮಾಧಾನಿಸಿ, ಎಲ್ಲದರಲ್ಲೂ ಸಂಭಾವಿತನಾಗಿ ಇರುತ್ತಾ, ಮುಂದೆ ನಿರ್ಗುಣಯೋಗಮಾರ್ಗವನ್ನು ಹೇಗೆ ಕಾಣುವೆನೆಂದು ಮನಸ್ಸಿನಲ್ಲಿ ಚಿಂತಿಸುತ್ತಾ ಹೀಗೆಂದನು. ೭. ಗುರು ಗುಹೇಶ್ವರನ ಮನೋಹರವಾದ ಪಾದಕಮಲಗಳನ್ನು ನಾನಾವ ರೀತಿಯಲ್ಲಿ ಒಲಿಸಿಕೊಂಡು ನನ್ನ ಮನಃಸಮಾಧಿಯನ್ನು ಎಂದು ಪಡೆಯುತ್ತೇನೆಯೊ? ಪರಮಪುರುಷನು ಯಾವ ವೇಷವನ್ನು ಧರಿಸಿ ಬರುವನೊ? ಆ ಮಹಾತ್ಮನ ತಿರುಳನ್ನು ನಾನು ಹೇಗೆ ತಿಳಿಯುವೆನು? ಎಂದು ಬಸವಣ್ಣನು ಚಿಂತಿಸಿದನು. ೮. "ನನ್ನ ದೇವನು ಯಾವ ವೇಷದಲ್ಲಿ ಪ್ರೀತಿಪಟ್ಟು ಬಂದರೂ ಅವನ ಭಾವನೆಯನ್ನು ತಿಳಿಯಲು ಒಂದು ಉಪಾಯವನ್ನು ಕೈಗೊಂಡು ಪಕ್ಕನೆ ನನ್ನ ಪ್ರಾಣೇಶ್ವರನನ್ನು ಯಾವರೀತಿಯಿಂದಲಾದರೂ ಸಿಕ್ಕಿಸುವೆನು" ಎಂದು ಆ ಬಸವಣ್ಣನು ಸಿದ್ಧತೆಯನ್ನು ಮಾಡಿದನು. ೯. ಬಸವೇಶ್ವರನು ತಲೆಯ ಹಿಂಭಾಗದ ಹೊಗಳಲ್ಪಟ್ಟ ಪಶ್ಚಿಮಚಕ್ರದಲ್ಲಿ ತಾನು ಕಂಡ ಪ್ರಕಾಶಮಾನವಾದ

ಇಂದುಕಾಂತದ ಶಿಲೆಯ ಹಪ್ಪಳೆ
ಬಂಧಿಸಿದ ಸೋಪಾನ ಸುತ್ತಲು
ಹಿಂದೆ ಹೊರೆಗಾಣಿಸದ ಸಪ್ತಾವರಣಮಯಭಿತ್ತಿ
ಒಂದಱಿಂದೊಂದಧಿಕತರವೆನ
ಲೊಂದುಗೂಡಿದ ಶೂನ್ಯಪೀಠದ
ನಿಂದ ನಿಲವರಿದಾಯ್ತು ಲೋಕದ ಜನದ ಕಣ್ಮನಕೆ ೧೦

ಕೀಲಣೆಯ ನವರತುನರಾಜಿಯ
ಮೇಳವದ ಪ್ರತ್ಯೇಕ ಪಙ್ತಿಗ
ಳೋಳಿಯಲಿ ತೆತ್ತಿಸಿದ ತಳಪದ ಸಪ್ತಲೋಹಗಳ
ಮೇಲೆ ಮೇಲಡಕಿಲುಗಳಂದದ
ಲೇಳು ನೆಲೆಯಲಿ ಭಕ್ತಿಭೂಮಿಾ
ಪಾಲ ಬಸವನು ಶೂನ್ಯಸಿಂಹಾಸನವ ವಿರಚಿಸಿದ ೧೧

ಹೊಱವಳಯದೊಂಬತ್ತು ಬಾಗಿಲು
ಮೆಱೆವ ಮಧ್ಯಕೆ ನಾಲ್ಕು ಬಾಗಿಲು
ನೆಱೆ ವಿರಾಜಿಸುವೆರಡು ಬಾಗಿಲು ಗರ್ಭವಳಯದಲಿ
ಮಿಱುಪ ಮೇಲಣ ಕೆಲಸಗತಿ ಕಣ್
ತೆಱೆವ ಬಾಗಿಲು ಶಿಖರದಲಿ ಮಹ
ದಱಿವಿನಂಬರಪೀಠವೆಸೆದುದು ಬಸವನಾಜ್ಞೆಯಲಿ ೧೨

ಪೀಠಕ್ಕೆ (ಬಾಹ್ಯರೂಪುಗೊಟ್ಟು) ಮರಕತಗಳೇ ಮುಖ್ಯವಾದ ರತ್ನಗಳನ್ನು ಪೋಣಿಸಿ ಕಾಂತಿಯನ್ನು ಹೊರಚೆಲ್ಲುವ ಸಿಂಹಾಸನವನ್ನು ನಿರ್ಮಾಣ ಮಾಡಿದನು. ಮತ್ತು ಅದಕ್ಕೆ ಶೂನ್ಯ ಸಿಂಹಾಸನವೆಂದು ಹೆಸರಿಟ್ಟನು. ೧೦. ಚಂದ್ರ ಕಾಂತಶಿಲೆಯ ತೆಳ್ಳನೆಯ ಹಾಳೆಗಳಿಂದ ಕಟ್ಟಿದ ಸುತ್ತುಮೆಟ್ಟಲು, ಅದರ ಹಿಂದೆ ಒಂದಕ್ಕಿಂತ ಮತ್ತೊಂದು ಶ್ರೇಷ್ಠವೆನ್ನುವಂತೆ ಒಂದುಗೂಡಿದ ಅಸಮಾನವಾದ ಏಳುಸುತ್ತಿನ ಗೋಡೆ ಲೋಕದ ಜನರ ಕಣ್ಮನಗಳಿಗೆ ನಿಲುಕಲಸಾಧ್ಯವಾಯಿತು. ೧೧. ನವರತ್ನಗಳ ಸಮೂಹದಿಂದ ಜೋಡಣೆಗೊಂಡು ಬೇರೆ ಬೇರೆ ಸಾಲುಗಳಲ್ಲಿ ಕ್ರಮವಾಗಿ ಹೊಂದಿಸಿದ ಸಪ್ತಲೋಹಗಳ ತಳಪದ; ಮೇಲು ಮೇಲಕ್ಕೆ ಒಂದರ ಮೇಲೊಂದನ್ನಿಟ್ಟಂತೆ ಏಳು ಹಂತಗಳಲ್ಲಿ ಭಕ್ತಿಯ ಒಡೆಯನಾದ ಬಸವನು ಶೂನ್ಯಸಿಂಹಾಸನವನ್ನು ನಿರ್ಮಿಸಿದನು. ೧೨. ಹೊರ ಆವರಣದಲ್ಲಿ ಒಂಬತ್ತು ಬಾಗಿಲುಗಳು; ಶೋಭಿಸುವ ಮಧ್ಯದಲ್ಲಿ ನಾಲ್ಕು ಬಾಗಿಲುಗಳು; ಗರ್ಭಾಂಗಣ ದಲ್ಲಿ ಅತಿಶಯುವಾಗಿ ಶೋಭಿಸುವ ಎರಡು ಬಾಗಿಲುಗಳು; ಶಿಖರದಲ್ಲಿ ಹೊಳೆಯುವ ಮೇಲ್ಗೆಲಸದಿಂದ ಅಚ್ಚರಿಗೊಳಿಸುವ ಒಂದು ಬಾಗಿಲು- ಹೀಗೆ ಮಹಾ ಜ್ಞಾನದ ಶೂನ್ಯಪೀಠವು ಬಸವನ ಆಜ್ಞಾನುಸಾರ (ನಿರ್ಮಿಸಲ್ಪಟ್ಟು) ಶೋಭಿಸಿತು.

ಸ್ವಾನುಭಾವಾಧಾರ ಸ್ವಾಧಿ
ಷ್ಠಾನ ಮಣಿಪೂರಕವನಾಹತ
ವಾ ನವೀನದ ಕೆಲಸಗತಿಯ ವಿಶುದ್ಧಿಯಾಜ್ಞೇಯ
ಸ್ಥಾನಗಳ ನೆಲೆಗೊಳಿಸಿ ಬ್ರಹ್ಮ
ಸ್ಥಾನವನು ಮೇಲೆನಿಸಿ ರಚಿಸಿದ
ಮಾನನಿಧಿ ಬಸವಣ್ಣನೀಪರಿ ಶೂನ್ಯಪೀಠವನು ೧೩

ಪರಿವಿಡಿಯಲಿಳೆ ಸಲಿಲ ಪಾವಕ
ಮರುತ ಗಗನಾತುಮ ನಿರಾಳದ
ತರತರದ ಶಿವಭಕ್ತ ಮಾಹೇಶ ಪ್ರಸಾದಿಗಳ
ಪರಮವರದ ಪ್ರಾಣಲಿಂಗಿಯ
ಶರಣನೈಕ್ಯನ ಭೇದ ನೆಲೆಗಳ
ನೆರವಿಯಂತಿರೆ ಶೂನ್ಯಪೀಠವ ಬಸವ ನಿರ್ಮಿಸಿದ ೧೪

ನೆಲದ ನೆಲೆಯಲಿ ಕಠಿಣತರವನು
ಜಲದ ನೆಲೆಯಲಿ ರಸಮಯವನಾ
ಜ್ವಲನ ನೆಲೆಯಲಿ ಬಿಸಿಯ ಮರುತನ ನೆಲೆಗೆ ಮಾರುತನ
ಸಲೆ ನಭದ ನೆಲೆಗಂಬರವ ಮನ
ನಿಲುಕದನುಪಮದೆಡೆಗೆ ಶೂನ್ಯವ
ನಿಲಿಸಿ ಬಸವನು ಶೂನ್ಯಸಿಂಹಾಸನವ ನಿರ್ಮಿಸಿದ ೧೫

ಈಡೆ ಪಿಂಗಳ ವರ ಸುಷುಮ್ನಾ
ನಾಡಿಗಳು ಬಲಿದೆಂಟು ದಿಕ್ಕಿನ
ಕೋಡ ಕೈಯಲಿ ಮದಗಜಂಗಳು ಮೇಲು ನೆಲೆಯೊಳಗೆ
ಕೂಡೆ ಬೆಳಗುವ ಸೋಮಸೂರಿಯ
ರಾಡುತಿಹ ವೀದಿಗಳು ಭುವನದ
ಬೀಡಿದೆನಲಾ ಬಸವನೊಡ್ಡಿದನಂಬರಾಸನವ ೧೬

೧೩. ಹೀಗೆ ಮಾನನಿಧಿ ಬಸವೇಶ್ವರನು ಸ್ವಾನುಭಾವದಿಂದ ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞೇಯ ಎಂಬ ಷಟ್‌ಚಕ್ರಗಳಲ್ಲಿ ಕ್ರಮವಾಗಿ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ ಗಳನ್ನು ನೆಲೆಗೊಳಿಸಿ ಬ್ರಹ್ಮಸ್ಥಾನವನ್ನು ಹಿರಿದೆನ್ನಿಸಿ ಶೂನ್ಯಪೀಠವನ್ನು ರಚಿಸಿದನು. ೧೪. ಕ್ರಮವಾಗಿ ಭೂಮಿ, ಜಲ, ಅಗ್ನಿ, ವಾಯು, ಆಕಾಶ, ಆತ್ಮಗಳ ಪ್ರಶಾಂತತೆಯ ಹಾಗೂ ಭಕ್ತ, ಮಹೇಶ, ಪ್ರಸಾದಿಗಳ, ಶ್ರೇಷ್ಠವರವನ್ನು ಕೊಡುವ ಪ್ರಾಣಲಿಂಗಿ, ಶರಣ, ಐಕ್ಯರ ಪ್ರತ್ಯೇಕ ನೆಲೆಗಳನ್ನು ಸೂಚಿಸುವ ಶೂನ್ಯಪೀಠವನ್ನು ಬಸವನು ನಿರ್ಮಿಸಿದನು. ೧೫. ಭೂಮಿಯ ನೆಲೆಯಲ್ಲಿ ಕಾಠಿಣ್ಯವನ್ನು, ಜಲದ ನೆಲೆಯಲ್ಲಿ ರಸವನ್ನು, ಅಗ್ನಿಯ ನೆಲೆಯಲ್ಲಿ ಬಿಸಿಯನ್ನು, ವಾಯುವಿನ ನೆಲೆಯಲ್ಲಿ ಗಾಳಿಯನ್ನು, ಆಕಾಶದ ನೆಲೆಯಲ್ಲಿ ಶಬ್ದಗುಣವನ್ನು ಮನಸ್ಸು ನಿಲುಕದ ಅನುಪಮದ ಎಡೆಗೆ ಶೂನ್ಯವನ್ನು ನಿಲ್ಲಿಸಿ ಬಸವನು ಶೂನ್ಯಸಿಂಹಾಸನವನ್ನು ನಿರ್ಮಿಸಿದನು. ೧೬. ಈಡೆ, ಪಿಂಗಳ, ಸುಷುಮ್ನಾ ಎಂಬ ಮುಖ್ಯವಾದ ನಾಡಿಗಳು ಬಲಗೊಂಡು, ಎಂಟೂ ದಿಕ್ಕುಗಳಲ್ಲಿ ಅಂಜಿಕೆಯನ್ನುಂಟು

ಪರಮ ಪ್ರಣವವೆ ಬೇರು ಸಕಲ
ಸ್ವರವೆ ಬುಡ ವರ ಶೈವಪಂಚಾ
ಕ್ಷರಿಯೆ ಶಾಖೆ ಸುವರ್ಣಕುಸುಮಗಳಕ್ಷರಾಳಿಗಳು
ವರ ಪದಾರ್ಥವೆ ಫಲಗಳೆಂಬಂ
ತಿರಲು ನಾದಮಹೀಜದೊಲು ವಿ
ಸ್ತರಿಸಿದುದು ಮಣಿಮಯದ ತರುವಾ ಶೂನ್ಯಪೀಠದಲಿ ೧೭

ಆ ಮರನ ಹಬ್ಬಿರ್ದ ಲತೆಯವೊ
ಲಾ ಮಹಾಶಿವ ತತ್ವದಹಿಯ ಫ
ಣಾಮಣಿಯ ಬೆಳಗೆನೆ ಪರಂಜ್ಯೋತಿ ಪ್ರಕಾಶತೆಯ
ಸೀಮೆಯೆನಲಾ ಪ್ರತಿನಿಧಿಗೆ ನಾ
ನಾಮಯದ ನೆಮ್ಮುಗೆಯ ನಿಲಿಸಿದ
ನಾ ಮನೋಹರ ಶೂನ್ಯಸಿಂಹಾಸನಕೆ ಬಸವಣ್ಣ ೧೮

ಅಳವಡಿಸಿದನು ಪಂಚಭೂತದ
ನೆಲೆಗಳಲಿ ಹದಿನಾಲ್ಕು ಲೋಕದ
ಹೊಲಿಗೆಯನು ಮೇಲಾತ್ಮತತ್ವದಲೈಕ್ಯಪದವಿಯನು
ನಿಲಿಸಿ ನಿರುಪಮ ನಿರ್ವಿಕಾರ
ಸ್ಥಲವನಲ್ಲಿಂದೇಳನೆಯ ತುದಿ
ನೆಲೆಯಳೊಡ್ಡಿದ ಶೂನ್ಯಸಿಂಹಾಸನಕೆ ಬಸವಣ್ಣ ೧೯

ಮಾಡುವ ಅಷ್ಟಮದಗಳನ್ನು ಸೂಚಿಸುವ ಮದಿಸಿದ ಆನೆಗಳು, ಮೇಲಿನ ನೆಲೆಯಲ್ಲಿ ಜಾಜ್ವಲ್ಯಮಾನವಾಗಿ ಬೆಳಗುವ ಚಂದ್ರಬೀದಿಗಳು, ಇದು ಬ್ರಹ್ಮಾಂಡದ ನೆಲೆಮನೆ ಎನ್ನುವಂತೆ ಬಸವನು ಆ ಶೂನ್ಯಸಿಂಹಾಸನವನ್ನು ನಿರ್ಮಿಸಿದನು. ೧೭. ಶ್ರೇಷ್ಠವಾದ ಓಂಕಾರಮಂತ್ರವೇ ಬೇರು; ಸರ್ವ ಸ್ವರಗಳೇ ಬುಡ; ಶ್ರೇಷ್ಠವಾದ ಶೈವಧರ್ಮದ ಪಂಚಾಕ್ಷರಿ ಮಂತ್ರವೆ ಶಾಖೆ; ಅಕ್ಷರಗಳ ಸಮೂಹವೆ ಚಿನ್ನದ ಹೂವುಗಳು; ಶ್ರೇಷ್ಠ ಪದಾರ್ಥವೇ ಫಲಗಳು ಎನ್ನುವಂತಿರಲು ನಾದವೆಂಬ ವೃಕ್ಷದಂತೆ ಶೂನ್ಯಪೀಠದಲ್ಲಿ ಮಣಿ ಖಚಿತವಾದ ವೃಕ್ಷವು ಹರಡಿತು. ೧೮. ಆ ಮರವನ್ನು ಹಬ್ಬಿರುವ ಬಳ್ಳಿಯಂತೆ, ಆ ಮಹಾಶಿವತತ್ವವೆಂಬ ಸರ್ಪನ ಹಣೆಯ ರತ್ನದ ಪ್ರಕಾಶವೆನ್ನುವಂತೆ, ಪರಂಜ್ಯೋತಿಯ ಪ್ರಕಾಶದ ಗಡಿ ಎನ್ನುವಂತೆ, ಮೇಲೆ ಹೇಳಿದವುಗಳನ್ನು ಪ್ರತಿಪಾದಿಸುವ ಸಾಧನ ಗಳನ್ನು ಆ ಮನೋಹರವಾದ ಶೂನ್ಯಸಿಂಹಾಸನಕ್ಕೆ ಬಸವಣ್ಣನು ಹೊಂದಿಸಿದನು. ೧೯. ಪೃಥ್ವಿ ಮೊದಲಾದ ಪಂಚಭೂತಗಳ ನೆಲೆಗಳಲ್ಲಿ ಭೂಲೋಕ ಮೊದಲಾದ ಹದಿನಾಲ್ಕು ಲೋಕಗಳ ಹೊಲಿಗೆಯನ್ನು ಹೊಂದಿಸಿದನು. ಮೇಲೆ ಆತ್ಮತತ್ವದಲ್ಲಿ ಐಕ್ಯಪದವಿಯನ್ನು ನಿಲ್ಲಿಸಿ ಅಲ್ಲಿಂದ ಏಳನೆಯ ತುದಿನೆಲೆಯಲ್ಲಿ ನಿರುಪಮ, ನಿರ್ವಿಕಾರ ಸ್ಥಲವನ್ನು ಶೂನ್ಯಸಿಂಹಾಸನಕ್ಕೆ ಬಸವಣ್ಣನು ಹೊಂದಿಸಿದನು.

ಅಲ್ಲಿಗಲ್ಲಿಗೆ ಬೇಹ ಶಕ್ತಿಗ
ಳಲ್ಲಿಗಲ್ಲಿಗೆ ಬೇಹ ನಾಡಿಗ
ಳಲ್ಲಿಗಲ್ಲಿಗೆ ಕರ್ಮ ಭಕ್ತಿ ಜ್ಞಾನತತ್ವಗಳು
ಅಲ್ಲಿಗಲ್ಲಿಗೆ ಸಗುಣ ನಿರ್ಗುಣ
ವೆಲ್ಲವನು ತಾ ಕಂಡ ತೆಱನಲಿ
ಪಲ್ಲವಿಸಿ ಬಸವಣ್ಣ ರಚಿಸಿದನಂಬರಾಸನವ ೨೦

ಅಂಡಪಿಂಡನ್ಯಾಯವೊಂದೇ
ಕಂಡಿರೇ ಎಂದೆಂಬುದನು ಭೂ
ಮಂಡಲದೊಳಾ ಶೂನ್ಯಸಿಂಹಾಸನದಲಱಿವಂತೆ
ದಂಡಿಯಾಗಿರೆ ನಿರ್ಮಿಸಿದನದ
ಕಂಡವರು ಬೆಱಗಾಗೆ ಬಸವನು
ದಂಡನಾಯಕನಲ್ಲಮನ ಬರವಿಂಗೆ ಭರದಿಂದೆ ೨೧

ಈ ತೆಱದಲನುಭವದಲಱಿದ ಮ
ಹಾತಿಶಯದ ಮನಸ್ಸಮಾಧಿಯ
ರೀತಿಯಂತಿರೆ ಶೂನ್ಯಸಿಂಹಾಸನವನಿದಿರಿಟ್ಟು
ಪ್ರೀತಿ ಮಿಗೆ ಪಿರಿದೆನಿಸಿ ನಾನಾ
ಜಾತಿ ಭಾವದಲೊಡ್ಡಿಯುಪಮಾ
ತೀತವೆಂದೆನೆ ಬಸವದಂಡಾಧೀಶ ವಿರಚಿಸಿದ ೨೨

ಇನ್ನಱಿಯಬಹುದಾವನಿಂತೀ
ಶೂನ್ಯಸಿಂಹಾಸನವನೇಱಿದೊ
ಡೆನ್ನ ಹೃದಯಾಂಬುಜ ರವಿ ಪ್ರಭುರಾಯನಹುದೆಂದು
ತನ್ನೊಳಗೆ ನಿಶ್ಚೈಸಿ ನಿಜಸಂ
ಪನ್ನತೆಯಲಿರುತಿರ್ದನವನೀ
ಮಾನ್ಯನೆಮ್ಮಯ ಬಸವದಂಡಾಧೀಶನರ್ತಿಯಲಿ ೨೩

೨೦. ಅಲ್ಲಿಗಲ್ಲಿಗೆ ಸಮರ್ಥರಾದ ಶಕ್ತಿಗಳನ್ನು, ಅಲ್ಲಿಗಲ್ಲಿಗೆ ಮುಖ್ಯವಾದ ನಾಡಿಗಳನ್ನು, ಅಲ್ಲಿಗಲ್ಲಿಗೆ ಕರ್ಮ ಭಕ್ತಿ ಜ್ಞಾನ ತತ್ವಗಳನ್ನು, ಅಲ್ಲಿಗಲ್ಲಿಗೆ ಸಗುಣ ನಿರ್ಗುಣಗಳೆಲ್ಲವನ್ನು ತಾನರಿತ ರೀತಿಯಲ್ಲಿ ವಿಸ್ತರಿಸಿ ಶೂನ್ಯಸಿಂಹಾಸನವನ್ನು ಬಸವಣ್ಣನು ನಿರ್ಮಿಸಿದನು. ೨೧. ಅಂಡಪಿಂಡ ನ್ಯಾಯವು ಒಂದೇ (ಒಂದು) ತಿಳಿಯಿತೆ ಎಂಬುದನ್ನು ಭೂಮಂಡಲದಲ್ಲಿ ಆ ಶೂನ್ಯಸಿಂಹಾಸನದಿಂದ ತಿಳಿಯುವಂತೆ ಮತ್ತು ಅದನ್ನು ಕಂಡವರು ಆಶ್ಚರ್ಯಗೊಳ್ಳುವಂತೆ ದಂಡನಾಯಕನಾದ ಬಸವನು ಅಲ್ಲಮನ ಆಗಮನಕ್ಕಾಗಿ ಜಾಗ್ರತೆಯಿಂದ ಎಣೆಯಿಲ್ಲದಂತೆ ನಿರ್ಮಿಸಿದನು. ೨೨. ಈ ರೀತಿಯಲ್ಲಿ ಅನುಭವದಿಂದ ತಿಳಿದ ಮಹಾತಿಶಯದ ಮನಸ್ಸಮಾಧಿಯ ರೀತಿಯಂತೆ ಶೂನ್ಯಸಿಂಹಾಸನವನ್ನು ಇದಿರಿಗೆ ಇಟ್ಟು, ಹೆಚ್ಚಾದ ಪ್ರೀತಿಯಿಂದ ಮಹತ್ತೆನ್ನಿಸಿ ನಾನಾ ಬಗೆಯ ಭಾವಗಳನ್ನು ಸೇರಿಸಿ ಹೋಲಿಕೆಗೆ ಅಸಾಧ್ಯವೆನ್ನುವಂತೆ ಬಸವದಂಡಾಧಿಪತಿಯು (ಅದನ್ನು) ನಿರ್ಮಿಸಿದನು. ೨೩. ಯಾವನು ಈ ಶೂನ್ಯಸಿಂಹಾಸನವನ್ನು ಏರುವನೋ ಅವನು ನನ್ನ ಹೃದಯಕಮಲವನ್ನು ಅರಳಿಸುವ ಸೂರ್ಯನಂತಿರುವ ಪ್ರಭುರಾಯನೆಂದು ತಿಳಿಯಬಹುದು. ಇದು ನಿಜ ಎಂದು ತನ್ನಲ್ಲೇ ತೀರ್ಮಾನಿಸಿ

ನಡೆವ ಗತಿಯಲಿ ಹಂಸೆಯನು ಸರ
ವಿಡುವ ಗತಿಯಲಿ ಕೋಗಿಲೆಯ ನುಣ್
ನುಡಿಗಳಿಂದಲಿ ರಾಜಕೀರನನಱಿವ ತೆಱನಂತೆ
ಸಡಗರಿಸಿದೀ ಶೂನ್ಯಪೀಠವ
ನಡಱಿ ನಿಲುವ ಮಹಾತ್ಮನೇ ಯೆ
ನ್ನೊಡೆಯನಹುದಹುದೆಂದು ನಿಶ್ಚೈಸಿದನು ಬಸವಣ್ಣ ೨೪

ಕಂಗಳಿದಿರಿನ ಕತ್ತಲೆಯನು ಪ
ತಂಗನಲ್ಲದೆ ಕಳೆಯಬಹುದೇ
ಅಂಗಸಹಜಾನಾರಿಗತ ಮಾಯಾತಮಂಧವನು
ಹಿಂಗಿಸುವೊಡಾ ಗುರು ಗುಹೇಶ್ವರ
ಲಿಂಗನೆಯ್ತಂದಲ್ಲದಹುದೇ
ಸಂಗ ತಾನೇ ಬಲ್ಲನೆಂದೆನುತಿರ್ದ ಬಸವಣ್ಣ ೨೫

ತೃಷೆಯ ಕಳೆಯಲಿ ಬಹರು ಕೆಲಬರು
ಹಸಿವು ಕಳಯಲಿ ಬಹರು ಕೆಲಬರು
ವ್ಯಸನಗಳಿಗರ್ಥವನು ಬೇಡಲಿ ಬಹರು ಕೆಲಕೆಲರು
ಸಸಿನೆ ಬಂದೀ ಶೂನ್ಯಪೀಠದ
ದೆಸೆಯ ನೋಡುವ ಪರಮ ಪುರುಷರ
ಹೆಸರ ಕಾಣೆನದೇನ ಹೇಳುವೆನದಱ ಕೌತುಕವ ೨೬

ಮಾಯಾರಹಿತನೂ ಭೂಮಂಡಲದಲ್ಲಿ ಗೌರವಿಸಲ್ಪಟ್ಟವನೂ ಆದ ನಮ್ಮ ಬಸವ ದಂಡಾಧೀಶನು ಪ್ರೀತಿಯಿಂದ ಇರುತ್ತಿದ್ದನು. ೨೪. ನಡೆಯುವ ರೀತಿಯಿಂದ ಹಂಸಪಕ್ಷಿಯನ್ನು, ಧ್ವನಿಮಾಡುವ ರೀತಿಯಿಂದ ಕೋಗಿಲೆಯನ್ನು, ಲಲಿತವಾದ ನುಡಿಗಳಿಂದ ರಾಜಗಿಳಿಯನ್ನು ತಿಳಿಯುವಂತೆ ಸಂಭ್ರಮಿಸಿದ ಈ ಶೂನ್ಯಪೀಠವನ್ನು ಏರಿ ನಿಲ್ಲುವ ಮಹಾತ್ಮನೇ ನನ್ನ ಒಡೆಯನೆಂದು ತಿಳಿಯಬಹುದು. ಇದು ನಿಜ ಎಂದು ಬಸವಣ್ಣನು ತೀರ್ಮಾನಿಸಿದನು. ೨೫. "ಕಣ್ಣುಗಳಿಗೆ ಎದುರಾಗಿರುವ ಕತ್ತಲೆಯನ್ನು ಸೂರ್ಯನಲ್ಲದೆ (ಇತರರು) ನಿವಾರಿಸಬಹುದೆ? ದೇಹದೊಂದಿಗೆ ಸಹಜವಾಗಿ ಬಹಳ ಕಾಲದಿಂದಲೂ ಸೇರಿಕೊಂಡಿರುವ ಮಾಯೆ ಎನ್ನುವ ಕತ್ತಲೆಯನ್ನು ಹಿಂಗಿಸುವುದಾದರೆ ಗುರು ಗುಹೇಶ್ವರನು ಬಂದಲ್ಲದೆ ಸಾಧ್ಯವೆ? (ಇದನ್ನು) ಕೂಡಲಸಂಗನೇ ಬಲ್ಲನು" ಎಂದು ಬಸವಣ್ಣನು ಹೇಳುತ್ತಿದ್ದನು. ೨೬. ಕೆಲವರು ಬಾಯಾರಿಕೆಯನ್ನು ಕಳೆಯಲು ಬರುವರು; ಕೆಲವರು ಹಸಿವನ್ನು ಕಳೆಯಲು ಬರುವರು; ಕೆಲಕೆಲರು (ತಮ್ಮ ತಮ್ಮ) ವ್ಯಸನಗಳಿಗೆ ಹಣವನ್ನು ಬೇಡಲು ಬರುವರು. ಈ ಶೂನ್ಯಪೀಠದ ಸಮೀಪಕ್ಕೆ ಬಂದು ಇದರ ಸ್ಥಿತಿಯನ್ನು ಪರಿಕಿಸುವ ಪರಮಪುರುಷರ ಹೆಸರನ್ನು ಕಾಣೆನು; ಆ ಆಶ್ಚರ್ಯವನ್ನು ಏನು ಹೇಳಲಿ!

ಆರು ಬಲ್ಲರು ಬಸವನೊಡ್ಡಿದ
ಪ್ರೇರಣೆಯನೆಂದೆನುತಲೆಲ್ಲರು
ದೂರದಲಿ ನೆಱೆನೋಡಿ ಬೆಱಗಹರಲ್ಲದದಱಿನುವ
ಆರು ಬಲ್ಲವರಾರು ಮೊಗಸುವ
ರಾರು ಹುಗುವವರಾರು ಮಹವಿ
ಸ್ತಾರವೆನಿಸಿದ ಶೂನ್ಯಸಿಂಹಾಸನದ ಸುಳಿವಳಿಯ ೨೭

ಹುತ್ತಿನೊಳಗಣ ಹೊಳ್ಳು ಹಾವಿಂ
ಗೆತ್ತ ಹೋದೊಡೆ ಸುಸರವಲ್ಲದೆ
ಮತ್ತೆ ಮಿಕ್ಕಿನ ಜೀವಜಾಳಕಭೇದ್ಯವಾದಂತೆ
ಎತ್ತ ಬಲ್ಲರು ಭಕ್ತರಲ್ಲದ
ಮತ್ತ ಭವಿಗಳು ಶೂನ್ಯಪೀಠದ
ಬಿತ್ತರವನೆಂದೆನುತ ಬೆಱಗಾದುದು ಬುಧಸ್ತೋಮ ೨೮

ಮಂತ್ರ ಹಠ ಲಯ ರಾಜಯೋಗದ
ಸಂತೆಗಳ ಶಬ್ದಗಳ ಜಾಣರು
ಯಂತ್ರವಾದಿಗಳಾರು ದರ್ಶನ ವೇಷಧಾರಿಗಳು
ಇಂತು ಮೆಱೆವವರೆಲ್ಲರೆಮ್ಮ ಮ
ಹಂತನೊಡ್ಡಿದ ಶೂನ್ಯಪೀಠದ
ಚಿಂತೆಯನೆ ವಿಸ್ತರಿಸದೇನೆಂದೆಂಬೆನಚ್ಚರಿಯ ೨೯

೨೭. ಬಸವನು ಒಡ್ಡಿರುವ ಪ್ರೇರಣೆಯನ್ನು ಯಾರು ಬಲ್ಲರು? ಎಂದು ಎಲ್ಲರೂ ಹೇಳುತ್ತ ದೂರದಿಂದ ನೋಡಿ ಆಶ್ಚರ್ಯಗೊಂಡರಲ್ಲದೆ ಅದರ ಸ್ಥಿತಿಯನ್ನು ಯಾರು ಬಲ್ಲರು? ಯಾರು ತಿಳಿಯಲು ಪ್ರಯತ್ನಪಡುವರು? ಅತಿ ವಿಸ್ತಾರವೆನ್ನಿಸಿರುವ ಶೂನ್ಯಸಿಂಹಾಸನದ ಕುರುಹಿನ ದಾರಿ ತಿಳಿದು ಯಾರು ಪ್ರವೇಶಿಸುವರು? ೨೮. "ಹುತ್ತದ ಒಳಗಿನ ಹಾವಿಗೆ ಎತ್ತ ಹೋದರೂ ಅದು ಸುಗಮವಾಗಿರುತ್ತದೆ. ಉಳಿದ ಜೀವಸಮೂಹಕ್ಕೆ ಹೊಗಲು ಸಾಧ್ಯವಾದೀತೆ? ಭಕ್ತರಲ್ಲದ ಮದಿಸಿದ ಭವಿಗಳು ಶೂನ್ಯಪೀಠದ ವಿಸ್ತಾರವನ್ನು ಎಲ್ಲಿ ಬಲ್ಲರು?" ಎಂದು ಹೇಳುತ್ತಾ ಜ್ಞಾನಿಗಳ ಸಮೂಹ ಆಶ್ಚರ್ಯಗೊಂಡಿತು. ೨೯. ಮಂತ್ರಯೋಗ, ಹಠಯೋಗ, ಲಯಯೋಗ, ರಾಜಯೋಗ ಇವುಗಳ ಸಂತೆಯ ಶಬ್ದದ ಜಾಣರು, ಯಂತ್ರವಾದಿಗಳು, ಷಡ್ದರ್ಶನದ ವೇಷಧಾರಿಗಳು ಹೀಗೆ ಎಲ್ಲರೂ ಶೋಭಿಸುವವರೇ; ನಮ್ಮ ಮಹಂತನು ಇದಿರಿಗೆ ನಿಲಿಸಿದ ಶೂನ್ಯಪೀಠದ ಚಿಂತೆಯನ್ನು ವಿಸ್ತರಿಸರು. ಈ ಆಶ್ಚರ್ಯವನ್ನು ಏನು ಹೇಳಲಿ!

ಸಾಱೆ ಲಕ್ಕದ ಮೇಲೆ ತೊಂಬ
ತ್ತಾಱುಸಾವಿರ ಮಿಂಡಜಂಗಮ
ಮಿಾಱೆ ಬಾಲರು ವೃದ್ಧರೆಯ್ತಹುದೆಣಿಕೆಗರಿದೆನಿಸಿ
ಹೇಱೆ ದಣಿದರು ತಮ್ಮ ಮನಸಿಗೆ
ತೋಱೆದಿಷ್ಟಾರ್ಥಂಗಳಿಂದಲಿ
ನೀಱೆ ಬಸವನ ಮನೆಯಲನುದಿನವಖಿಳ ಜಗವಱೆಯೆ ೩೦

ಏನನೆಂಬೆನು ಬಸವನಾ ಸು
ಜ್ಞಾನ ಸಿಂಹಾಸನದ ತನ್ನ ಮ
ಹಾನುಭಾವದ ಭಣಿತೆಯಂತೆ ಸಮಸ್ತ ವಿಧದಿಂದೆ
ತಾನು ನಿರ್ಮಿಸಿ ಬಳಿಕ ತನ್ನ ಮ
ನೋನುರಾಗದಲಮಳ ಹೃದಯ
ಧ್ಯಾನದಲಿ ನೆಱೆ ನೆನೆವುತಿರ್ದನು ಗುರು ಗುಹೇಶ್ವರನ ೩೧

ಗತಿ ೨೧ಕ್ಕಂ ಪದ ೯೨೪ಕ್ಕಂ ಮಂಗಳಂ

೩೦. ಲಕ್ಷದ ಮೇಲೆ ತೊಂಬತ್ತಾರು ಸಾವಿರ ಮಿಂಡ ಜಂಗಮರು, ಎಣಿಕೆಗೆ ಮೀರಿದ ಬಾಲಕರು, ವೃದ್ಧರು ಸಮೀಪಿಸಿ ಬರುವರು. ಇವರನ್ನು ಎಣಿಸಲು ಅಸಾಧ್ಯ. (ಇವರೆಲ್ಲರೂ) ತಮಗೆ ಪ್ರಿಯನಾದ ಬಸವನ ಮನೆಯಲ್ಲಿ ಪ್ರತಿನಿತ್ಯವೂ ಸೇರಿ ಸಕಲ ಲೋಕಕ್ಕೂ ತಿಳಿಯುವಂತೆ ತಮ್ಮ ಮನಸ್ಸಿಗೆ ತೋರಿದ ಇಷ್ಟಾರ್ಥಗಳನ್ನು (ಪಡೆದು ಅವನ್ನು) ಹೊತ್ತು ದಣಿವರು. ೩೧. ಬಸವನ ಆ ಸುಜ್ಞಾನ ಸಿಂಹಾಸನವನ್ನು ಏನೆಂದು ಹೇಳಲಿ? ತನ್ನ ಮಹಾನುಭಾವತ್ವದ ರೀತಿಯಂತೆ ಸರ್ವವಿಧದಿಂದ ತಾನೇ ನಿರ್ಮಿಸಿ, ಅನಂತರ ತನ್ನ ಮನಸ್ಸಿನಲ್ಲಿ ಪ್ರೀತಿಬಟ್ಟು ಪರಿಶುದ್ಧಹೃದಯದಿಂದ ಕೂಡಿ ಗುರು ಗುಹೇಶ್ವರನನ್ನು ವಿಶೇಷವಾಗಿ ನೆನೆಯುತ್ತಿದ್ದನು.

# ೨೨. ಪ್ರಭುದೇವರು ಶೂನ್ಯಸಿಂಹಾಸನವನೇರಿದುದು

**ಗತಿ ೨೨**

ಸೂಚನೆ : ಪ್ರಾರ್ಥನೆಗೆ ಪರಿಣಮಿಸಿ ಕಾರಣ
ಕರ್ತುವೆನಿಸಿದ ಗುರು ಗುಹೇಶ್ವರ
ಮೂರ್ತಿಗೊಂಡನು ಶೂನ್ಯಸಿಂಹಾಸನದ ಶಿಖರದಲಿ

ಪ್ರತಿರಹಿತ ಪರಮಾರ್ಥ ಚಾರಿ
ತ್ರತೆಯನೊಳಕೊಂಡಪ್ರಮೇಯನ
ಗತಿಯ ಗಂಭೀರತೆಯ ನಿರ್ದೇಹಿಯ ನಿಜಾಕೃತಿಯ
ಮತಿಯುತರು ಮಿಗೆ ತತ್ತ್ವವಿತ್ತುಗ
ಳತಿಶಯದಿ ಲಾಲಿಸುವುದೀ ಸಂ
ಗತಿಯ ಸಂಗ್ರಹಿಸಿದ ಮಹಾಪ್ರಭುಲಿಂಗಲೀಲೆಯಲಿ ೧

ದೂರದಲಿ ಪತಿಯಿರಲು ಸತ್ಕುಲ
ನಾರಿ ಪುಷ್ಪಿತೆಯಾಗಿ ಸಲೆ ಸುಕು
ಮಾರನಾಪೇಕ್ಷೆಯಲಿ ತನ್ನಯ ವಲ್ಲಭನ ಬರವ
ಹಾರುವಂತೆ ಶಿವಾನುಭಾವವಿ
ಚಾರದಿಂದಲಿ ನಿತ್ಯಸುಖಮಯ
ಕಾರಣಕೆ ಬಸವಣ್ಣ ಬಯಸಿದನಲ್ಲಮನ ಬರವ ೨

ಹಣ್ಣೆ ಹನ್ನೆರಡಬ್ದವಾಯಿತು
ಶೂನ್ಯಸಿಂಹಾಸನವನಕಟಾ
ಎನ್ನ ಗುರುವಿನ್ನೆಂದು ಬಿಜಯಂಗೈದು ಕರುಣದಲಿ
ಕಣ್ಣಬಜಿನನು ತಿಳುಹಿ ತೆಕ್ಕನೆ
ತನ್ನ ಮೂರ್ತಿಯ ತೋಜೆ ತೊಲಗದೆ
ಮನ್ನಿಸುವನೋ ಎನುತಲಾ ಬಸವಣ್ಣ ಚಿಂತಿಸಿದ ೩

ಸೂ : ಕೋರಿಕೆಗೆ ತೃಪ್ತನಾಗಿ ಕಾರಣಪುರುಷನಾದ ಗುರುಗುಹೇಶ್ವರನು ಶೂನ್ಯಸಿಂಹಾಸನದ ಮೇಲೆ ಮಂಡಿಸಿದನು. ೧. ಪ್ರತಿಯಿಲ್ಲದ ಅಲೌಕಿಕಚಾರಿತ್ರ್ಯವನ್ನು ಹೊಂದಿದ, ಅಳೆಯಲಾಗದ ಗಂಭೀರ ನಡಿಗೆಯ, ದೇಹವೇ ಇಲ್ಲದ ಪರವಸ್ತು ಸ್ವರೂಪವನ್ನು ಬುದ್ಧಿವಂತರು, ತತ್ವವೇತ್ತರು ಹಿರಿದಾದ ಪ್ರಭುಲಿಂಗಲೀಲೆಯಲ್ಲಿ ಸಂಗ್ರಹಿಸಿದ ಈ ಪ್ರಸಂಗವನ್ನು ಅತಿಶಯದಿಂದ ಕೇಳುವುದು. ೨. ಪತಿ ದೂರದಲ್ಲಿರಲು ಒಳ್ಳೆಯ ವಂಶದಲ್ಲಿ ಹುಟ್ಟಿದ ಹೆಣ್ಣು ಪುಷ್ಪವತಿಯಾಗಿ ಒಳ್ಳೆಯ ಮಗನ ಬಯಕೆಯಲ್ಲಿ ತನ್ನ ಗಂಡನ ಆಗಮನವನ್ನು ನಿರೀಕ್ಷಿಸುವಂತೆ, ಶಿವಾನುಭಾವ ವಿಚಾರದಿಂದ ನಿತ್ಯಸುಖಮಯ ಕಾರಣಕ್ಕೆಂದು ಅಲ್ಲಮನ ಆಗಮನವನ್ನು ಬಸವಣ್ಣನು ಇಚ್ಛಿಸಿದನು. ೩. ಅಯ್ಯೋ, ಶೂನ್ಯ ಸಿಂಹಾಸನವನ್ನು ಸಿದ್ಧಗೊಳಿಸಿ ಹನ್ನೆರಡು ವರುಷಗಳಾದುವು. ನನ್ನ ಗುರುವು ಇನ್ನು ಯಾವಾಗ ಕರುಣೆಯಿಂದ ದಯಮಾಡಿಸಿ ನಿಸ್ತೇಜವಾದ ಕಣ್ಣಿಗೆ ಕಾಂತಿಯನ್ನು ತುಂಬಿ ಇದ್ದಕ್ಕಿದ್ದಂತೆ

ಅರಸನಱಿಯದ ಬಟ್ಟಗೆಲಸದ
ಪರಿಯಲಾಯಿತೆ ಎನ್ನ ಮಾಟದ
ಪರಿಕರಣೆ ಫಲವೀಯಲಱಿಯದೆ ಶಿವ ಮಹಾದೇವ
ಹರ ಹರಾ ಎಂದೆನುತ ಚಿಂತಾ
ತುರತೆಯಲಿ ಹೊಱಗೊಳಗನಾಲಿಸು
ತಿರುತಲಿದ್ದನು ಬಯಸಿ ಬರವನು ಬಸವನಲ್ಲಮನ ೪

ಆತನಂತಃಕರಣವಾತನ
ಮಾತ ಕೇಳುವವಾಗಿ ದಿಟ ಬಳಿ
ಕಾತನಾಜ್ಞಾಮಾತ್ರದಿಂದಾ ಸ್ಥೂಲ ತನುವಿನಲಿ
ಓತಿರಲು ಬೇಡೆಂದೊಡಾಗಳೆ
ಭೀತಿಯಿಂದೊಳವೊಕ್ಕು ತಮ್ಮಯ
ಧಾತುಗೆಟ್ಟಹದೇನನೆಂಬೆನು ಬಸವನನುಭವವ ೫

ಈ ತೆಱದಲಾ ಶಿವಸಮಾಧಿ
ಪ್ರೀತಿಯಿಂದಿರಲೊಂದು ದಿನ ತಾ
ನೋತು ತನ್ನಯ ಸುಲಲಿತಾಂತರ್ಮುಃಖದ ಮುಕುರದಲಿ
ಪ್ರೀತಿಯಲಿ ತನಗಲ್ಲಮಪ್ರಭು
ವೈತಹುದನೊಲಿದಮಲತತ್ತ್ವವಿ
ಭೂತಿಯನು ತನಗೀವುದನು ನೆಱೆ ಕಂಡ ಬಸವಣ್ಣ ೬

ಕಂಡು ಕಡು ಸುಮ್ಮಾನ ಸುಖವೆಡೆ
ಗೊಂಡು ರೋಮಾಂಚನದ ಬಿಗುಹಿನ
ದಂಡಿ ಕಡು ದಟ್ಟೈಸುತಿರೆ ಬಳಿಕಿತ್ತಲಾ ಮನವ
ಮಂಡಿಸಿದನಾ ಸ್ಥೂಲಕಾಯದ
ಮಂಡೆಯಲಿ ಪಸರಿಸಿದುವಾಗಳೆ
ತಂಡ ತಂಡದ ನಾಡಿಗಳು ಬಸವಣ್ಣನವಯವದ ೭

ತನ್ನ ಆಕಾರವನ್ನು ಕಾಣಿಸಿ ಹೊರಟುಹೋಗದೆ ಇದ್ದು (ನನ್ನನ್ನು) ಮನ್ನಿಸುವನೋ ಎಂದು ಬಸವಣ್ಣನು ಚಿಂತಿಸಿದನು. ೪. "ನನ್ನ ಕಾರ್ಯದ ಸಿದ್ಧತೆಯು ಅರಸನು ತಿಳಿಯದ ಬಿಟ್ಟಿಯ ಕೆಲಸದ ರೀತಿಯಲ್ಲಾಯಿತು, ಶಿವ ಮಹಾದೇವ, ಹರ ಹರಾ" ಎಂದು ಚಿಂತಾತುರತೆಯಿಂದ ಅಲ್ಲಮನ ಆಗಮನವನ್ನು ಬಯಸಿ ಬಸವನು ಕಾಲ ಸಪ್ಪಳವನ್ನು ಆಲಿಸುತ್ತ ಇದ್ದನು. ೫. ಆತನ ಅಂತಃಕರಣವು ಆತನ ಮಾತನ್ನು ನಿಜವಾಗಿ ಕೇಳುವವಾಗಿ, ಆತನ ಆಜ್ಞಾಮಾತ್ರದಿಂದ ಆ ಸ್ಥೂಲದೇಹದಲ್ಲಿ ಪ್ರೀತಿಯಿಂದಿದ್ದವು. ಆತನು ಬೇಡವೆನ್ನಲು ಆಗಲೇ ಭಯದಿಂದ ಕೂಡಿ ಒಳಗೆ ಪ್ರವೇಶಿಸಿ ತಮ್ಮ ಧೈರ್ಯ ಕಳೆದುಕೊಂಡಿರುವುವು. ಏನು ಹೇಳಲಿ ಬಸವನ ಅನುಭವವನ್ನು! ೬. ಈ ರೀತಿಯಲ್ಲಿ ಬಸವಣ್ಣನು ಶಿವಸಂಬಂಧ ವಾದ ಚಿಂತೆಯ ಸಮಾಧಿಯಲ್ಲಿ ಇರುತ್ತಿರಲು ಒಂದು ದಿನ ತಾನೇ ಬಯಸಿ ತನ್ನ ಮನೋಹರವಾದ ಒಳಮನದ ಕನ್ನಡಿಯಲ್ಲಿ ಪ್ರೀತಿಯಿಂದ ತನ್ನಲ್ಲಿಗೆ ಅಲ್ಲಮ ಬರುವುದನ್ನು ಪರಿಶುದ್ಧವಾದ ತತ್ತ್ವವಿಭೂತಿಯನ್ನು ತನಗೆ ಅನುಗ್ರಹಿಸುವುದನ್ನೂ ಚೆನ್ನಾಗಿ ಕಂಡನು. ೭. (ಹಾಗೆ) ಕಂಡು ಅತಿಶಯವಾದ ಆನಂದ (ಹಾಗೂ) ಸುಖವು ಪ್ರಾಪ್ತವಾಗಿ, ರೋಮಾಂಚನದ ಕಟ್ಟಿನ ಬಿಗುಹು ಹೆಚ್ಚು ದಟ್ಟವಾಗುತ್ತಿರಲು, ಇತ್ತ ಮನವನ್ನು

ಬಲದ ಭುಜ ಬಲಗಣ್ಣು ಬಲಮೈ
ಯಲುಗತೊಡಗಿದುದೊಡನೊಡನೆ ಮಿಗೆ
ನಲಿವುತಿರ್ದುದು ಚಿತ್ತ ಚಿಂತಾಯಕನ ಬರವಿಂಗೆ
ಒಲಿದು ಬಳಿಕಾ ಹದನನೆಲ್ಲವ
ತಿಳುಹಿದನು ವಿಸ್ತರಿಸಿ ಭಕ್ತಿಗೆ
ತಿಲಕವೆನಿಸಿದ ಚೆನ್ನಬಸವಣ್ಣಂಗೆ ಬಸವಣ್ಣಾ ೮

ತಡೆಯದೀಕ್ಷಣ ವಿಕಟ ಸಿದ್ಧಿಯ
ಕೊಡುವ ಶುಭಸೂಚನೆಗಳಾದುವು
ಬಿಡು ದುಮಾನವ ಕಟ್ಟಿಸಿನ್ನೇಳುಪ್ಪರದ ಗುಡಿಯ
ಅಡಸಿ ವೇದನಿಕಾಯವಱಸಿದೊ
ಡಡಿಯ ತೋಱಸದಮಲ ಬೊಮ್ಮನೆ
ನಡೆದು ಬರುತಿಹನೆಂದು ನುಡಿದನು ಚೆನ್ನಬಸವಣ್ಣಾ ೯

ಭಣಿತೆಯಲಿ ಬಸವನು ನಿರೂಪದ
ಲಣಿವಱದು ಪುರದೊಳಗೆ ಗುಡಿತೋ
ರಣ ಪತಾಕೆಗಳಾದಿಯಾದ ಸಮಸ್ತ ಸಂಭ್ರಮವ
ಕ್ಷಣದೊಳಗೆ ರಚಿಸಿದರು ಸುರಪುರ
ಕೆಣೆಯೆನಲು ಸೌರಂಭದಿಂದಲಿ
ಕಣುಮನಕೆ ಕಲ್ಯಾಣವೇ ತಾನಾಯ್ತು ಕಲ್ಯಾಣ ೧೦

ಸ್ಥೂಲದೇಹದ ಶಿರಸ್ಸಿನಲ್ಲಿ ನೆಲೆಗೊಳಿಸಿದನು. ಅಲ್ಲಿ ಬಸವಣ್ಣನ ಅಂಗಾಂಗಗಳಲ್ಲೆಲ್ಲಾ ಗುಂಪುಗುಂಪಾದ ನಾಡಿಗಳು ಚೈತನ್ಯ ಹೊಂದಿದುವು. ೮. ಬಲದ ಭುಜ, ಬಲಗಣ್ಣು, ಬಲಮೈ ಅಲುಗತೊಡಗಿದವು. ಜೊತೆಜೊತೆಯಲ್ಲೇ ಮನಸ್ಸು ಚಿಂತಿತವ್ಯಕ್ತಿಯ ಆಗಮನಕ್ಕಾಗಿ ವಿಶೇಷವಾಗಿ ಸಂತೋಷಗೊಳ್ಳುತ್ತಿದ್ದಿತು. ಆ ಬಳಿಕ ಬಸವಣ್ಣನು ಪ್ರೀತಿಯಿಂದ ಆ ಸುದ್ದಿಯನ್ನೆಲ್ಲ ವಿವರವಾಗಿ ಭಕ್ತಿಗೆ ತಿಲಕಪ್ರಾಯನಾದ ಚೆನ್ನಬಸವಣ್ಣನಿಗೆ ತಿಳಿಸಿದನು. ೯. "ತಡಮಾಡದೆ ಈ ಕ್ಷಣವೆ ಇಷ್ಟಸಿದ್ಧಿಯನ್ನು ಅನುಗ್ರಹಿಸುವ ಶುಭಸೂಚನೆಗಳಾದುವು. ಚಿಂತೆಯನ್ನು ಬಿಡು. ಇನ್ನು ಎತ್ತರವಾದ ಮಂಟಪವನ್ನು ಕಟ್ಟಿಸಲು ಮೇಲೇಳು. ವಿಶೇಷವಾಗಿ ಪ್ರಯತ್ನಿಸಿ ವೇದಸಮೂಹವನ್ನು ಹುಡುಕಿದರೂ (ತನ್ನ) ಪಾದಗಳನ್ನು ಕಾಣಿಸದ ಪರಿಶುದ್ಧ ಬ್ರಹ್ಮನೇ (ನಿನ್ನಲ್ಲಿಗೆ) ನಡೆದು ಬರುತ್ತಿರುವನು" ಎಂದು ಚೆನ್ನಬಸವಣ್ಣನು ಬಸವಣ್ಣನೊಂದಿಗೆ ನುಡಿದನು. ೧೦. ಬಸವನ ಆಜ್ಞಾ ರೀತಿಯಂತೆ ಕ್ರಮವಿಡಿದು ಪುರದಲ್ಲಿ ಮಂಟಪ, ತೋರಣ, ಬಾವುಟ ಇತ್ಯಾದಿ ಸಕಲಸಂಭ್ರಮವನ್ನು ಕ್ಷಣದಲ್ಲಿ ನಿರ್ಮಿಸಿದರು. ಅಮರಾವತಿಗೆ ಸಮಾನವೆನ್ನುವಂತೆ ಕಲ್ಯಾಣಪಟ್ಟಣವು ಸಂಭ್ರಮದಿಂದ ಕೂಡಿ ಕಣ್ಣು ಮನಗಳಿಗೆ ಮಂಗಳಕರವಾಯಿತು.

ಕತ್ತುರಿಯ ಕರ್ದಮದ ಕದಡಿನ
ಸುತ್ತುವಳಯದ ತೊಳಗಿ ಬೆಳಗುವ
ಮುತ್ತಿನೋಳಿಯ ರಂಗವಾಲಿಯ ಚಿತ್ರವೀದಿಗಳ
ತೆತ್ತಿಸಿದ ಪೂವಲಿಯ ಪೂರದ
ಹೊತ್ತಿ ಹೊಗೆವ ಸುಗಂಧ ಧೂಪದ
ಲೆತ್ತ ನೋಡಿದೊಡತ್ತ ಕಡು ಚೆಲುವಾಯ್ತು ಕಲ್ಯಾಣ ೧೧

ತಳಿತ ಗುಡಿ ತೋರಣ ಪತಾಕೆಯ
ನೆಳಲು ರವಿಕಿರಣಗಳ ದಾಳಿಯ
ದಳದುಳಕೆ ಮಾಱಾಂತು ನಿಂದುವು ಬೀದಿ ಬೀದಿಯಲಿ
ಸುಳಿವ ಗಣಿಕಾಜನದ ನಗೆಗಂ
ಗಳ ವಿಳಾಸದ ಬೆಳಗು ಬೆಳುದಿಂ
ಗಳನೆ ಬೀಱುತ್ತಿರ್ದುದಾ ಕಲ್ಯಾಣಪುರದೊಳಗೆ ೧೨

ಮನದೊಡನೆ ಮನೆ ತಳಿತ ರೋಮಾಂ
ಚನದೊಡನೆ ಗುಡಿ ಹೆಚ್ಚಿ ಹಿಗ್ಗುವ
ತನುವಿನೊಡನೆ ಸಮಸ್ತ ಭಕ್ತಸ್ತೋಮ ನಿಮಿಷದಲಿ
ಅನುಕರಿಸಿ ಕೈಗೆಯ್ದುದಾಗಳೆ
ಘನಕೆ ಘನವೆನೆ ಬಸವರಾಜನ
ಮನೆಯೊಳಾ ಪ್ರಭುರಾಯ ಬಹ ಮಂಗಳ ಮಹೋತ್ಸವಕೆ ೧೩

ಆವ ವೇಷವ ತೊಟ್ಟಿಹನೊ ಮೇ
ಣಾವ ಪಥದಲಿ ಸುಳಿವನೋ ದಿಟ
ವಾವ ವೇಳೆಯಲೊಲಿದು ಬಹನೋ ಶಿವ ಮಹಾದೇವ
ಭಾವಿಸುವೊಡರಿದೆನುತಲಾ ಪ್ರಭು
ದೇವರಿಗೆ ತಾನಿದಿರುವೋಗುತ
ಲೀ ವಿಚಾರವನೆಣಿಸುತಿರ್ದನು ಬಸವದಂಡೇಶ ೧೪

೧೧. ಕಸ್ತೂರಿಯ ಬಗ್ಗಡದಿಂದ (ಕೂಡಿದ) ಸುತ್ತುವಳಯ, ಪ್ರಕಾಶದಿಂದ ಬೆಳಗುವ ಮುತ್ತಿನ ಸಾಲು, ರಂಗೋಲಿ, ಚಿತ್ರಮಯ ಬೀದಿ, ಪೋಣಿಸಿದ ಹೂಗಳ ಮಾಲೆಯ ಗಡಣ, ಸುತ್ತೆಲ್ಲ ಕವಿದ ಸುಗಂಧ ಧೂಪ-ಇವುಗಳಿಂದ ಎಲ್ಲಿ ನೋಡಿದರಲ್ಲಿ ಕಲ್ಯಾಣ ಪಟ್ಟಣವು ಚೆಲುವನ್ನು ಹೊಂದಿತು. ೧೨. ಬೀದಿಬೀದಿಗಳಲ್ಲಿ ಮಂಟಪ, ತೋರಣ, ಬಾವುಟಗಳು, ಹರಡಿದ ನೆಳಲು ಸೂರ್ಯಕಿರಣಗಳ ದಾಳಿಯ ಸೂರೆಗೆ ಪ್ರತಿಭಟಿಸಿ ನಿಂತುವು. ಆ ಕಲ್ಯಾಣಪುರದೊಳಗೆ ಸುಳಿದಾಡುವ ವೇಶ್ಯಾಸ್ತ್ರೀಯರ ನಗೆಯುಕ್ತವಾದ ಕಣ್ಣಿನ ವಿಲಾಸದ ಬೆಳಗು ಬೆಳುದಿಂಗಳಿನ ಬೆಳಕನ್ನು ಚೆಲ್ಲುತ್ತಿದ್ದಿತು. ೧೩. ಹಿರಿದಾದುದಕ್ಕೆ ಹಿರಿದು ಎನ್ನುವಂತೆ ಬಸವರಾಜನ ಮನೆಯಲ್ಲಿ ಪ್ರಭುರಾಯನ ಆಗಮನದ ಮಹೋತ್ಸವಕ್ಕೆ ಮನಸ್ಸಿನೊಡನೆ ಮನೆ ಹೆಚ್ಚಿ, ರೋಮಾಂಚದೊಡನೆ ಮಂಟಪ ಹೆಚ್ಚಿ, ಹಿಗ್ಗುವ ದೇಹದೊಂದಿಗೆ ಸಕಲ ಭಕ್ತಸಮೂಹವು ಹೆಚ್ಚಿ ನಿಮಿಷದಲ್ಲಿ ಆಗಲೇ ಸಿದ್ಧವಾಯಿತು. ೧೪. "ಯಾವ ವೇಷವನ್ನು ಧರಿಸಿರುವನೊ ಮತ್ತಾವ ಮಾರ್ಗದಲ್ಲಿ ಸುಳಿಯುವನೊ ನಿಜವಾಗಿ ಯಾವ ವೇಳೆಯಲ್ಲಿ ಒಲಿದು ಬರುವನೊ ಶಿವ ಮಹಾದೇವ, ಊಹಿಸಲು

ಇಡಿದ ಸರ್ವಾಂಗದ ವಿಭೂತಿಯ
ಜಡಿದ ರುದ್ರಾಕ್ಷಿಗಳ ಮಾಲೆಯ
ತೊಡಿಗೆಗಳ ಧವಳಾಂಬರಂಗಳ ಮೆಯ್ಯ ಮುಖಕಳೆಯ
ಮಡಿವಳಯ್ಯನು ಚೆನ್ನಬಸವನು
ಹಡಪದಪ್ಪಣ್ಣಗಳು ಸಹಿತವೆ
ನಡೆದನಿದಿರನು ಬಸವದಂಡಾಧೀಶನಲ್ಲಮಗೆ ೧೫

ದೆಸೆದೆಸೆಯ ಕಂಪಿಡಲು ತನುಲೇ
ಪಿಸಿದ ಮೆಯ್ಗಂಪುಗಳ ಭೂಷಣ
ವಿಸರ ಲಹರಿಯ ರತ್ನರಾಜಿಯ ಬೆರಕೆವೆಳಗುಗಳೆ
ಮುಸುಕೆ ಮುಂಗುಡಿಗಳಲಿ ಕೈವಾ
ರಿಸುವ ಕೈವಾರಿಗಳ ನೆರವಿಯ
ವಸುಮತೀಶರು ಸಹಿತ ನಡೆದನು ಬಸವದಂಡೇಶ ೧೬

ಎಡಬಲಂಗಳೊಳೆಯ್ದೆ ಭಕ್ತರ
ಗಡಣ ಹಿಂಭಾಗದಲಿ ನಾನಾ
ಪೊಡವಿಪಾಲಕುಮಾರಕರ ಸಂದಣಿಯ ಸಂದೋಹ
ಬಿಡದೆ ಕೈವಾರಿಸುವ ನೆಲನು
ಗ್ಗಡಣೆಕಾಱರ ಮೊತ್ತಗಳು ಮುಂ
ಗುಡಿಯಲೊಪ್ಪಿರೆ ನಡೆದನಿದಿರನು ಬಸವದಂಡೇಶ ೧೭

ಅಸಾಧ್ಯವೆಂದೆ"ನ್ನುತ್ತ ಬಸವದಂಡಾಧಿಪತಿಯು ಪ್ರಭುದೇವರ ಆಗಮನವನ್ನು ಇದಿರುನೋಡುತ್ತ ವಿಚಾರಮಾಡುತ್ತಲಿದ್ದನು. ೧೫. ಭಸ್ಮೋದ್ಧೂಳನದ ಸಕಲ ಅಂಗಗಳು, ರುದ್ರಾಕ್ಷಿಯ ಆಭರಣ, ಶುಭ್ರವಸ್ತ್ರಗಳನ್ನು ಧರಿಸಿದ ದೇಹ, ತೇಜಸ್ಸಿನಿಂದ ಕೂಡಿದ ಮುಖ-ಇವುಗಳಿಂದ ಶೋಭಿಸುವ ಮಡಿವಳ ಮಾಚಿದೇವ, ಚೆನ್ನಬಸವ, ಹಡಪದ ಅಪ್ಪಣ್ಣ-ಇವರುಗಳ ಜೊತೆಯಲ್ಲಿ ಪ್ರಭುವನ್ನು ಇದಿರುಗೊಳ್ಳಲು ಬಸವದಂಡಾಧಿಪತಿಯು ನಡೆದನು. ೧೬. ದೇಹಕ್ಕೆ ಲೇಪಿಸಿದ ಸುವಾಸನಾದ್ರವ್ಯಗಳು ದಿಕ್ಕುದಿಕ್ಕುಗಳಿಗೆ (ತಮ್ಮ) ಕಂಪನ್ನು ಬೀರುತ್ತಿರಲು, ಆಭರಣಗಳ ಸಮೂಹದ ಕಾಂತಿ ರತ್ನಗಳ ಮೊತ್ತದ ಪ್ರಭೆ ತಮ್ಮ ಸಮ್ಮಿಶ್ರಕಾಂತಿಯನ್ನು ಚೆಲ್ಲುತ್ತಿರಲು, ಮುಂದಿನ ಹೊಗಳುವ ಹೊಗಳುಭಟ್ಟರ ಸಮೂಹ ಮತ್ತು ಭೂಮಿಪಾಲರುಗಳ ಜೊತೆಯಲ್ಲಿ ಬಸವದಂಡಾಧಿ ಪತಿಯು ನಡೆದನು. ೧೭. ಎಡ ಬಲಗಳಲ್ಲಿ ವಿಶೇಷವಾಗಿ ಭಕ್ತರ ಸಮೂಹ, ಹಿಂಭಾಗದಲ್ಲಿ ನಾನಾ ದೇಶದ ಅರಸುಗುವರರ ಗುಂಪಿನ ಕೂಟ, ಮುಂಭಾಗದಲ್ಲಿ ಎಡೆ ಬಿಡದೆ ಹೊಗಳುವ ಮತ್ತು ನೆಲವನ್ನು ಸಪ್ಪಳಿಸುವವರ ಸಮೂಹಗಳು - ಇವು

ಮಾವುತರು ಮನ್ನೆಯರು ರಥಿಕರು
ರಾವುತರು ಕರಣಿಕರು ಕವಿಗಳು
ಭಾವಕರು ಭರತಜ್ಞರೆಲ್ಲಾ ಪರಿಯ ಪರಿಣತೆಯ
ಸೇವಕರು ಸಹಿತಲ್ಲಮಪ್ರಭು
ದೇವರಡಿಗಿದಿರಾಗಿ ನಡೆದನು
ಪಾವನಾತ್ಮಕ ಬಸವದಂಡಾಧೀಶನರ್ತಿಯಲಿ ೧೮

ಪರಿಪರಿಯ ಸತ್ತಿಗೆಯ ಸಾಲಿನ
ಪರಿಪರಿಯ ಚಾಮರದ ಚೌಳಿಯ
ಪರಿಪರಿಯ ಕೈಕಂಬಿಕಾಜಿರು ಜಡಿವ ಗಡಿಬಿಡಿಯ
ಪರಿಪರಿಯ ಮೆಯ್ದೊಡಹಿನುಲುಹಿನ
ಪರಿಪರಿಯ ಭುಜಬಲದ ಸುಭಟರ
ನೆರವಿ ಸಹಿತಿದಿರಾಗಿ ನಡೆದನು ಬಸವನಲ್ಲಮಗೆ ೧೯

ಕನ್ನಡಿಯ ಕಳಸಗಳ ವಿಳಸದ
ಹೊನ್ನಗೇದಗೆಗಜೆಯ ಮುತ್ತಿನ
ಚೆನ್ನದಂಡೆಯ ಪೂಬಿಡಿದ ನಱುಗಂಪುಗಳ ಮುಡಿಯ
ರನ್ನದಲಿ ರಂಜಿಸಿದ ತೊಡಿಗೆಗ
ಳುನ್ನತಿಯ ಸಿಂಗಾರವೊಪ್ಪುವ
ಕನ್ನೆಯರು ಸಹಿತಿದಿರುವೋದನು ಬಸವನಲ್ಲಮಗೆ ೨೦

ಶೋಭಿಸಿರಲು ಬಸವದಂಡಾಧಿಪತಿಯು ಪ್ರಭುವನ್ನು ಇದಿರುಗೊಳ್ಳಲು ನಡೆದನು. ೧೮. ಮಾವುತರು, ಮಾನ್ಯರು, ಸಾರಥಿಗಳು, ಕುದುರೆ ಸವಾರರು, ಕರಣಿಕರು, ಕವಿಗಳು, ವಿದ್ವಾಂಸರು, ಭರತಮುನಿಯ ನಾಟ್ಯಶಾಸ್ತ್ರವನ್ನು ತಿಳಿದವರು, ನಾನಾ ಬಗೆಯ ಕಾರ್ಯಗಳಲ್ಲಿ ನುರಿತ ಸೇವಕರು-ಇವರುಗಳೊಂದಿಗೆ ಅಲ್ಲಮಪ್ರಭುದೇವರ ಪಾದಗಳಿಗೆ ಇದಿರಾಗಿ ಪಾವನಪುರುಷನಾದ ಬಸವದಂಡಾಧಿಪತಿಯು ಪ್ರೀತಿಯಿಂದ ನಡೆದನು. ೧೯. ಬಗೆ ಬಗೆಯ ಸತ್ತಿಗೆಯ ಸಾಲುಗಳಿಂದ, ಬಗೆಬಗೆಯ ಚಾಮರಗಳ ಬೀಸುವಿಕೆಯಿಂದ ಬಗೆಬಗೆಯ ಕೈಬೆತ್ತ ಹಿಡಿದವರುಗಳಿಂದ, ಬಡಿಯುವ ಗಡಿಬಿಡಿ ವಾದ್ಯಗಳಿಂದ, ಬಗೆಬಗೆಯ ದೇಹದ ಮೇಲೆ ಧರಿಸಿರುವ ಆಭರಣಗಳ ಝಣತ್ಕಾರದಿಂದ, ಬಗೆಬಗೆಯ ತೋಳ್ಬಲದ ವೀರರ ಸಮೂಹದಿಂದ ಕೂಡಿ ಬಸವನು ಅಲ್ಲಮನಿಗೆ ಇದಿರಾಗಿ ನಡೆದನು. ೨೦. ಕನ್ನಡಿ, ಕಳಶ, ಸೌಂದರ್ಯದಿಂದ ಕೂಡಿದ ಹೊಂಗೇದಗೆಯ ಗರಿ, ಮುತ್ತಿನ ಸೊಗಸಾದ ಮಾಲೆ, ಸುವಾಸನಾಯುತವಾದ ಪುಷ್ಪಗಳನ್ನು ಧರಿಸಿರುವ ಮುಡಿ, ರತ್ನಗಳಿಂದ ಮೆರೆಯುವ ಆಭರಣಗಳು, ಅತಿಶಯವಾದ ಸಿಂಗಾರ-ಇವುಗಳಿಂದ ಶೋಭಿಸುವ ಕನ್ನೆಯರೊಡಗೂಡಿ ಬಸವನು ಅಲ್ಲಮನನ್ನು ಇದಿರುಗೊಳ್ಳಲು ಹೋದನು.

ನಡೆವ ಗಮಕದ ನಗುವ ಚೆಲುವಿನ
ನುಡಿಯ ಸಂಪಿನ ಸೊಬಗನೇ ಸಾ
ಲಿಡುವ ನೋಟದ ನಟನೆಯನೆ ನಾಟಿಸುವ ತನುಲತೆಯು
ಒಡನೆ ಕವಿತಹ ತುಂಬಿಗುಚಿತವ
ಕೊಡುವ ಮೆಯ್ಗಂಪುಗಳ ಸೊಂಪಿನ
ಮಡದಿಯರು ಪಿಡಿದೆಯ್ದುತಿರ್ದರು ಮಂಗಳಾರತಿಯ ೨೧

ಒಳುದೊಡೆಯ ನಸುದೋಱಲಿಕೆ ನಿಱಿ
ತೊಲಗೆ ನಳಿತೋಳುಗಳ ಬೀಸುವ
ಚೆಲುವಿಕೆಯಲೋಸರಿಸೆ ಮೇಲುದ ತೋರ ಮೊಲೆಯಲುಗೆ
ಬಳಲುಮುಡಿ ಬಸವಳಿಯೆ ಬಡನಡು
ಬಳುಕೆ ರವೆಯದ ರತ್ನಭೂಷಣ
ಘುಲುಘುಲಿಸುತಿರಲಿದಿರ ನಡೆದರು ವಾರವನಿತೆಯರು ೨೨

ಓರಿದು ಗರ್ಜಿಸುವಾನೆಗಳು ಕೇಂ
ಕರಿಸುತಿಹ ವಾಜಿಗಳು ದಿಗುತಟ
ಬಿರಿಯೆ ಚೀಱುವ ಶಂಖ ಮೌರಿಯ ಕೊಂಬು ಕಹಳೆಗಳು
ಧರಣಿಯದಿರಲು ಗಿರಿಗಳುರುಳಲು
ನೆರೆದು ಮೊಳಗುವ ಭೇರಿ ತಂಬಟೆ
ಕರಡೆ ನಿಸ್ಸಳ ಸಹಿತಲಿದಿರೆಯ್ದಿದನು ಬಸವಣ್ಣ ೨೩

ಎಲ್ಲಿ ನೋಡಲು ಛತ್ರಚಾಮರ
ವೆಲ್ಲಿ ನೋಡಲು ಸಿಂಧ ಸೀಗುರಿ
ಯೆಲ್ಲಿ ನೋಡಲು ಸೊಕ್ಕಿದಾನೆಯ ಸುಳಿವ ಹೆಕ್ಕಳವು
ಎಲ್ಲಿ ನೋಡಲು ಕುಣಿವ ಕುದುರೆಗ
ಳೆಲ್ಲಿ ನೋಡಲು ನಲಿವ ಪುರಜನ
ವೆಲ್ಲ ಸಹಿತಿದಿರಾಗಿ ನಡೆದನು ಬಸವದಂಡೇಶ ೨೪

೨೧. ನಡೆಯುವ ರೀತಿ, ನಗುವ ಚೆಲುವು, ನುಡಿಯ ನುಣ್ಪು, ಸೊಬಗನ್ನೇ ಸಾಲಿಡುವ ನೋಟ, ನಟನೆಮಾಡುವ ಬಳ್ಳಿಯಂತಹ ದೇಹ, ತಕ್ಷಣ ಕವಿದುಬರುವ ದುಂಬಿಗಳಿಗೆ ತಕ್ಕುದನ್ನು ಕೊಡುವ ಅಂಗದ ಸುಗಂಧ-ಇವುಗಳಿಂದ ಕೂಡಿದ ಮನೋಹರಿಯರು ಮಂಗಳಾರತಿಯನ್ನು ಹಿಡಿದುಬರುತ್ತಿದ್ದರು. ೨೨. ಚೆಲುವಿನ ತೊಡೆಗಳನ್ನು ಸ್ವಲ್ಪವೇ ತೋರಿಸಲು ಸೀರೆಯ ನಿರಿ ಸರಿಯಲು, ಚಲಿಸುವ ನಳಿದೋಳ್ಗಳ ಚೆಲುವಿಕೆಯಲ್ಲಿ ಮೇಲುವಸ್ತ್ರ ಪಕ್ಕಕ್ಕೆ ಸರಿಯಲು ದಪ್ಪ ಕುಚಗಳು ಅಲುಗಾಡಲು, ಸೋರ್ಮುಡಿಯು ಆಯಾಸ ಹೊಂದಲು, ಕೃಶವಾದ ನಡು ಬಳುಕಲು, ಮನೋಹರವಾದ ರತ್ನಭೂಷಣಗಳು ಘುಲುಘುಲಿಸುತ್ತಿರಲು ವೇಶ್ಯಾಸ್ತ್ರೀಯರು (ಪ್ರಭುವನ್ನು) ಇದಿರುಗೊಳ್ಳಲು ನಡೆದರು. ೨೩. ಜೋರಾಗಿ ಘೀಳಿಡುವ ಆನೆಗಳು, ಕೇಂಕರಿಸುವ ಕುದುರೆಗಳು, ದಿಕ್ತಟ ಬಿರಿಯುವಂತೆ ಶಬ್ದಮಾಡುವ ಶಂಖ ಮೌರಿ ಕೊಂಬು ಕಹಳೆಗಳು, ಭೂಮಿ ನಡುಗುವಂತೆ ಪರ್ವತಗಳು ಉರುಳುವಂತೆ ಒಟ್ಟುಗೂಡಿ ಧ್ವನಿಮಾಡುವ ದೊಡ್ಡನಗಾರಿ, ತಂಬಟೆ, ಕರಡೆ, ಡೋಲು-ಇವುಗಳೊಂದಿಗೆ ಬಸವಣ್ಣನು ಪ್ರಭುವನ್ನು ಇದಿರುಗೊಳ್ಳಲು ನಡೆದನು. ೨೪. ಎಲ್ಲಿ ನೋಡಿದರೂ ಛತ್ರಿ, ಚಾಮರಗಳು; ಎಲ್ಲಿ ನೋಡಿದರೂ ಪತಾಕೆ, ಸೀಗುರಿಗಳು;

ಬೊಟ್ಟನನಿತು ವಿಭೂತಿಯಿಟ್ಟೊಡೆ
ಬೆಟ್ಟದನಿತು ಪಿಶಾಚತನವಳ
ವಟ್ಟು ನಿಲುವುದು ದಿಟವಲಾ ಬಳಿದೇಕೆ ಪುರದೊಳಗೆ
ಕಟ್ಟಿಸಿದ ಗುಡಿಗಳನು ಬಸವನ
ಕಟ್ಟಳೆಯೆ ಕಡುಚೋದ್ಯವೆನುತಲಿ
ಮುಟ್ಟಿಸಿದರಾ ಹದನನಾಗಳೆ ಖಳರು ಬಿಜ್ಜಳಗೆ ೨೫

ಕನಸಿನಲಿ ಪಕ್ವಾನ್ನಫಲಗಳ
ಘನತರವ ಕಂಡೆದ್ದು ಕರೆ ಬಿ
ದ್ದಿನರಿಗುಣಲಿಕ್ಕೆಂಬರಂತೀ ಬಸವದಂಡೇಶ
ತನಗೆ ಶುಭಸೂಚನೆಗಳೊದಗಿದು
ವೆನುತ ವಿಭವದಲಿದಿರು ಹೋದನು
ಜನಕ ಚಿತ್ತೈಸೆಂದರಾ ಲಾವಕರು ಬಿಜ್ಜಣಗೆ ೨೬

ಏನು ಕೌತುಕ ದಂಡನಾಯಕ
ನೇನ ನೆಗಳಿದನಾರು ಬಂದಹ
ರೇನ ಕಂಡರದೇನನೆಂಬೆವು ಭಕ್ತರಭಿಮತವ
ತಾನೆ ಬಲ್ಲನು ತನ್ನ ಮಹಿಮೆಯ
ನೇನ ನಾವೆನಬಹುದು ತುದಿಯಲಿ
ತಾನೆ ಕಾಣಲಿಬಹುದು ಕಾರಿಯವೆಂದನವನೀಶ ೨೭

ಎಲ್ಲಿ ನೋಡಿದರೂ ಉತ್ಸಾಹದ ಮದಿಸಿದ ಆನೆಗಳು; ಎಲ್ಲಿ ನೋಡಿದರೂ ಕುಣಿಯುವ ಕುದುರೆಗಳು; ಎಲ್ಲಿ ನೋಡಿದರೂ ಸಂತೋಷದಿಂದಿರುವ ಪುರಜನರು ಹೀಗೆ ಎಲ್ಲರೊಂದಿಗೆ ಬಸವದಂಡೇಶನು ಪ್ರಭುವಿಗೆ ಇದಿರಾಗಿ ನಡೆದನು. ೨೫. "ಬೊಟ್ಟಿನಷ್ಟು ವಿಭೂತಿಯನ್ನು ಧರಿಸಿದರೆ ಬೆಟ್ಟದಷ್ಟು ಪಿಶಾಚತನವು ಬಂದು ಸೇರುವುದು ಸತ್ಯ. ಅಷ್ಟೇ ಏನು, ಬಸವನು ಪುರದೊಳಗೆ ಧ್ವಜಗಳನ್ನು ಕಟ್ಟಿಸಿದನು. ಬಸವನ ಆಜ್ಞೆಗಳೇ ಅತ್ಯಾಶ್ಚರ್ಯಕರ ವಾದುವು" ಎಂದು ಆ ಸಂಗತಿಯನ್ನು ಆಗಲೇ ದುಷ್ಟರು ಬಿಜ್ಜಳನಿಗೆ ಮುಟ್ಟಿಸಿದರು. ೨೬. "ಮಹಾರಾಜಾ ಚಿತ್ತವಿಟ್ಟು ಕೇಳು. ಕನಸಿನಲ್ಲಿ ವಿಶೇಷವಾದ ಪಕ್ವಾನ್ನಫಲಗಳನ್ನು ಕಂಡು ಎಚ್ಚತ್ತು ಅತಿಥಿಗಳನ್ನು ಉಣಲಿಕ್ಕೆ ಕರೆ ಎನ್ನುವವರಂತೆ ಬಸವದಂಡಾಧಿಪತಿಯು ತನಗೆ ಶುಭಸೂಚನೆಗಳುಂಟಾದುವು ಎಂದು ವೈಭವದಿಂದ (ಪ್ರಭುವನ್ನು) ಇದಿರುಗೊಳ್ಳಲು ಹೋದನು" ಎಂದು ಚಾಡಿಕೋರರು ಬಿಜ್ಜಳನಿಗೆ ಹೇಳಿದರು. ೨೭. "ವಿಚಿತ್ರವೇನು? ದಂಡನಾಯಕನೇನು ಮಾಡಿದನು? ಯಾರು ಬರುವರು? ಭಕ್ತರ ಅಭಿಪ್ರಾಯವನ್ನು ಅದೇನೆಂದು ಹೇಳೋಣ? ತನ್ನ ಮಹಿಮೆಯನ್ನು ಅವನೇ ಬಲ್ಲನು. ನಾವು ಹೇಳಬಹುದೆ? ಕಾರ್ಯವನ್ನು ಕೊನೆಯಲ್ಲಿ ನಾವೇ ಕಾಣಬಹುದು? ಎಂದು ಬಿಜ್ಜಳನು ನುಡಿದನು.

ಇತ್ತಲೀ ಹದನಾಯ್ತು ಬಳಿಕಿ
ನ್ನತ್ತಲಾ ಬಸವಣ್ಣ ತನ್ನಯ
ಚಿತ್ತದಲಿ ಚಿಂತಿಸಿದನಾ ಪ್ರಭು ಬಾರನೇ ಎನುತ
ಅತ್ತಲೀ ಸ್ಥಿತಿಗತಿಯನಾ ಸ
ರ್ವೋತ್ತಮ ಪ್ರಭುರಾಯ ಲೀಲಾ
ವೃತ್ತಿಯಿಂದಱಿದನುವ ನೆನೆದನು ತಾನೆ ತನ್ನೊಳಗೆ ೨೮

ವಂದನೆಯ ವೇಷಂಗಳಂದವ
ಹೊಂದದೆಲ್ಲರ ಕಂಗೆ ಮರುಳಿನ
ಚಂದದಿಂಗಿತದಿಂದೆ ಸುಳಿದರೆ ಬಸವ ಬಳಿಕೆನ್ನ
ಅಂದದೊಳಗನು ತಿಳಿವನೋ ಮೇಣ್
ಮಂದಮತಿಯಾಗಿಹನೊ ನಾನಿದ
ನಿಂದು ನೋಡುವೆನೆನುತಲಾ ಪ್ರಭುರಾಯನನುಗೆಯ್ದ ೨೯

ಅಣಕಿಸುವ ಬಾಧಕರ ಬಾಯನೆ
ಟೊಣೆದು ಬಸವನ ಭಕ್ತಿಭಾರದ
ಹೊಣಕೆಯನೆ ಹುಂಕೊಂಡು ಪೂರೈಸಲಿಕೆ ಬೇಕೆನುತ
ಎಣಿಸಬಾರದ ನೆರೆದ ನೆರವಿಯ
ಕಣುಮನಕೆ ಕಾಣಿಸಿದನೊಂದೇ
ಕ್ಷಣದೊಳಗೆ ನಮ್ಮಲ್ಲಮಪ್ರಭುಲಿಂಗ ಲೀಲೆಯಲಿ ೩೦

ಬೀದಿ ಬೀದಿಗಳೊಳಗೆ ನೋಟಕ
ರಾದಿಯಾದ ಸಮಸ್ತ ಪುರಜನ
ವೆಯ್ದೆ ನಿರ್ಮಲರಾಗಿಯೊಂದೇ ಬಾರಿ ಕಾಂಬಂತೆ
ಆದಿಮಧ್ಯಾಂತಂಗಳಿಲ್ಲದ
ನಾದಿ ಸಿದ್ಧನು ಹಲವು ಮೈಯಲಿ
ಭೇದವಿಲ್ಲದೆ ಸುಳಿದನಾ ಪ್ರಭುಲಿಂಗ ಲೀಲೆಯಲಿ ೩೧

೨೮. ಇತ್ತ ಈ ವಿಚಾರವಾಯಿತು. ಬಳಿಕ ಅತ್ತ ಬಸವಣ್ಣನು ತನ್ನ ಮನಸ್ಸಿನಲ್ಲಿ ಪ್ರಭು ಬರುವುದಿಲ್ಲವೆ? ಎಂದು ಚಿಂತಿಸಿದನು. ಬೇರೊಂದು ಕಡೆ ಈ ಸ್ಥಿತಿಗತಿಯನ್ನು ಸರ್ವೋತ್ತಮನಾದ ಪ್ರಭುರಾಯನು (ತನ್ನ) ವಿನೋದವೃತ್ತಿಯಿಂದ ತಿಳಿದು ತನ್ನಲ್ಲಿ ತಾನೇ (ಕಾರ್ಯ) ಸಿದ್ಧತೆಯನ್ನು ಆಲೋಚಿಸಿದನು. ೨೯. ಸ್ತುತ್ಯರ್ಹವಾದ ವೇಷಗಳ ರೀತಿಯನ್ನು ಹೊಂದದೆ ಎಲ್ಲರ ಕಣ್ಣಿಗೆ ಹುಚ್ಚನಂತೆ ಕಾಣಿಸಿಕೊಂಡರೆ ಬಳಿಕ ಬಸವಣ್ಣನು ನನ್ನ ಸ್ಥಿತಿಯ ಒಳಗನ್ನು ತಿಳಿಯುವನೋ ಅಥವಾ ತಿಳಿಯದೆ ಮಂದಮತಿಯಾಗುವನೊ, ನಾನಿದನ್ನು ಇಂದು ಪರೀಕ್ಷಿಸುವೆನು" ಎಂದು ಆ ಪ್ರಭುರಾಯನು ಸಿದ್ಧನಾದನು. ೩೦. ಚೇಷ್ಟೆ ಮಾಡುವ ಪೀಡಕರ ಬಾಯನ್ನೇ ಸೀಳಿ ಬಸವನ ಭಕ್ತಿಭಾರದ ಶಪಥವನ್ನು ಸ್ವೀಕರಿಸಿ ಪೂರೈಸಬೇಕು ಎಂದು ಗುಂಪುಗೂಡಿದ ಅಸಂಖ್ಯಾತ ಜನರ ಕಣ್ಣು ಮನಗಳಿಗೆ ಒಂದೇ ಕ್ಷಣದಲ್ಲಿ ನಮ್ಮ ಅಲ್ಲಮಪ್ರಭುಲಿಂಗನು ಲೀಲೆಯಿಂದ ಕಾಣಿಸಿಕೊಂಡನು. ೩೧. ಬೀದಿಬೀದಿಗಳಲ್ಲಿ ನೋಟಕರೇ ಮೊದಲಾದ ಸಮಸ್ತ ಪುರಜನರು ನೆರೆಯಲು ಶುದ್ಧನಾಗಿ ಒಮ್ಮೆಗೇ ಕಾಣುವಂತೆ

ಪಟ್ಟಣಕೆ ಬೇಕಾಗಿ ರಚಿಸಿದ
ಬಟ್ಟೆಬಟ್ಟೆಗಳೊಳಗೆ ನಡೆತಂ
ದಿಟ್ಟಣಿಸಿ ನೋಡುವರಿಗಲ್ಲಲ್ಲಿಗೆ ವಿನೋದದಲಿ
ನೆಟ್ಟನಾ ಪ್ರಭು ಕಪಟ ಕಾಯದ
ಕಟ್ಟಳೆಯ ಕಾಣಿಸಿದನಂತರ
ನಿಟ್ಟಿಸುವೊಡರಿದಾದುದೇನೆಂದೆಂಬೆನಚ್ಚರಿಯ ೩೨

ಬಿಟ್ಟ ಮಂಡೆಯ ಕೆಂಚುಗೂದಲ
ನಿಟ್ಟೊಡಲ ನಿಡುದೋಳ ತೊನಹಿನ
ಮುಟ್ಟದೆವೆಗಳ ನಟ್ಟನೋಟದ ಲಂಬಕರ್ಣಗಳ
ದಟ್ಟಡಿಯ ಮಲೆವಂಗದೊಲಹಿನ
ಕಟ್ಟಳೆಯ ಕಡು ಮರುಳುವೇಷವ
ತೊಟ್ಟು ತೊಟ್ಟನೆ ಸುಳಿದನಾ ಪ್ರಭುಲಿಂಗ ಲೀಲೆಯಲಿ ೩೩

ಉಱುಗು ಟೊಂಕದ ಕುಂಟಗಾಲಿನ
ಬೆಱೆತ ಬಿಂಕದ ಮೆಯ್ಯ ಬಿಗುಹಿನ
ತಱಿದ ಬಾಸುಳ ಬದಿಯ ಮುಸುಱುವ ನೊಣದ ಹುಣ್ಣುಗಳ
ಕಿಱುನಗೆಯ ಕಟವಾಯ ಜೋಱಿನ
ಕುಱುಹನಡಗಿಸಿಕೊಂಡು ಹಸ್ತದ
ನಿಱಿಗೆಯಲಿ ನೆಱೆ ಸುಳಿದನಾ ಪ್ರಭುಲಿಂಗ ಲೀಲೆಯಲಿ ೩೪

ಆದಿ ಮಧ್ಯ ಅಂತ್ಯಗಳಿಲ್ಲದ, ಅನಾದಿಸಿದ್ಧನಾದ ಪ್ರಭುಲಿಂಗನು (ತನ್ನ) ಲೀಲೆಯಿಂದ ಹಲವು ದೇಹಗಳನ್ನು ತಾಳಿ ವ್ಯತ್ಯಾಸವಿಲ್ಲದೆ ಕಾಣಿಸಿಕೊಂಡನು. ೩೨. ಪುರದಲ್ಲಿ ಉದ್ದೇಶಪೂರ್ವಕವಾಗಿಯೇ ನಿರ್ಮಿಸಿದ ಮಾರ್ಗಮಾರ್ಗಗಳಲ್ಲಿ ನಡೆದುಬಂದು ಅಲ್ಲಲ್ಲಿ ನೋಟಕರಿಗೆ ವಿನೋದದಿಂದ ನೇರವಾಗಿ ಪ್ರಭುವು (ತನ್ನ) ಕಪಟವೇಷ ಧರಿಸಿದ ದೇಹದ ರೂಪವನ್ನು ಕಾಣಿಸಿದನು. ಹಾಗೆ ಅದನ್ನು ನೋಡಲು ಅಸಾಧ್ಯವಾಯಿತು. ಆ ಆಶ್ಚರ್ಯವನ್ನು ಏನು ಹೇಳಲಿ! ೩೩. ತಲೆಯ ಇಳಿಬಿಟ್ಟ ಕೆಂಚುಗೂದಲು, ಉದ್ದವಾದ ದೇಹ, ತೂಗಾಡುವ ಉದ್ದವಾದ ತೋಳು, ಮುಚ್ಚದ ರೆಪ್ಪೆ, ನೆಟ್ಟ ನೋಟ, ಉದ್ದ ಕಿವಿ, ದಪ್ಪ ಕಾಲು, ಮದವೇರಿದ ದೇಹದ ತೂಗಾಟ-ಈ ವಿಶೇಷಗಳಿರುವ ಹುಚ್ಚನ ವೇಷವನ್ನು ಧರಿಸಿ ತಕ್ಷಣ ಆ ಪ್ರಭುಲಿಂಗನು ಲೀಲೆಯಿಂದ ಸುಳಿದನು. ೩೪. ಡೊಂಕಾದ ಸೊಂಟ, ಕುಂಟುಗಾಲು, ಬಿಂಕದಿಂದ ಕೂಡಿದ ದೇಹದ ಬಿಗುಹು, ತರಚಿಹೋದ ಬಾಸುಂಡೆಯ ಪಕ್ಕದ ಹುಣ್ಣುಗಳನ್ನು ಮುತ್ತುವ ನೊಣಗಳು, ಕಿರುನಗೆ, ಜೊಲ್ಲುಸೋರುವ ಕಟವಾಯಿಯನ್ನು ಮುಚ್ಚಿದ ಸುಕ್ಕುಗಟ್ಟಿದ ಕೈ-ಇವುಗಳಿಂದ ಕೂಡಿ ಪ್ರಭುಲಿಂಗನು

ನೋಡುವರ ನೆಱೆಯಟ್ಟಿ ಮುಟ್ಟಿಸಿ
ಯೋಡಿಹೋಗುತ ಮರಳಿ ಹಿಂದಕೆ
ಕೋಡಕೆಯ್ಯವರುಗಳನೇಡಿಸಿ ಬೀಳುತೇಳುತಲಿ
ಹಾಡುತಲಿ ನಲಿನಲಿದು ಹರಿಸುಟಿ
ಯಾಡುತಲಿ ನಾನಾ ವಿನೋದವ
ಮಾಡುತಿರ್ದನು ಜಗದೊಳಾ ಪ್ರಭುಲಿಂಗ ಲೀಲೆಯಲಿ ೩೫

ಒಮ್ಮೆ ಶಿಶುವಹನೊಮ್ಮೆ ಗುರುವಹ
ನೊಮ್ಮೆ ಬಣಗಹನೊಮ್ಮೆ ಪಟುವಹ
ನೊಮ್ಮೆ ರೂಪಹನೊಮ್ಮೆ ಬಕ್ಕಟ ಬಟ್ಟ ಬಯಲಹನು
ಒಮ್ಮೆಯಿಲ್ಲಿಹನೊಮ್ಮೆಯಲ್ಲಿಹ
ನೊಮ್ಮೆಯೆಲ್ಲಾಯೆಡೆಯೊಳಿಹ ಪರ
ಬೊಮ್ಮನಲ್ಲಮಲಿಂಗ ನಟಿಸಿದನೀ ಪ್ರಕಾರದಲಿ ೩೬

ಹಾಡಿದೊಡೆ ಹಾಡುವನು ಪಾತ್ರವ
ನಾಡಿದೊಡೆ ತಾನಾಡುವನು ಕೊಂ
ಡಾಡಿದೊಡೆ ಕೊಂಡಾಡುವನು ನಮಿಸಿದೊಡೆ ನಮಿಸುವನು
ನೋಡಿದೊಡೆ ನೋಡುವನು ಜೀವರು
ಮಾಡಿದಂತಿರೆ ಮಾಡಿ ನಿರ್ಗುಣ
ಗಾಢವನೆ ಪಸರಿಸಿದನಾ ಪ್ರಭುಲಿಂಗ ಲೀಲೆಯಲಿ ೩೭

ಕಂಡವರು ಬೆಱಗಾಗಿ ಬೆಬ್ಬಳ
ಗೊಂಡು ನೋಡುತಲಿರ್ದರಾತನ
ದಂಡಿಯನು ತಾವಱಿಯಲಱಿಯದೆ ಕೂಡೆ ಜನವೆಲ್ಲ
ಕಂಡನಾತನ ಕಪಟವೇಷದ
ಕಂಡಿಯನು ನೆಱೆ ನೋಡಿ ಭಾವಿಸಿ
ದಂಡನಾಯಕ ಬಳಿಕ ನಿಶ್ಚೈಸಿದನು ಗುರುವೆಂದು ೩೮

ಲೀಲೆಯಿಂದ ಕಾಣಿಸಿಕೊಂಡನು. ೩೫. ನೋಡುತ್ತಿದ್ದವರನ್ನು ಚೆನ್ನಾಗಿ ಅಟ್ಟಿ ಮುಟ್ಟಿಸಿ ಓಡಿಹೋಗಿ ಹಿಂದಕ್ಕೆ ಮರಳಿ (ಬಂದು) ಕೊಡುಗೈ ದಾನಿಗಳನ್ನು ಅಣಕಿಸುತ್ತ, ಬೀಳುತ್ತ ಏಳುತ್ತ, ಹಾಡುತ್ತ ನಲಿನಲಿದು ಸುತ್ತಾಡುತ್ತ ನಾನಾ ಬಗೆಯ ವಿನೋದಗಳನ್ನು ಆ ಪ್ರಭುಲಿಂಗನು ಲೀಲೆಯಿಂದ ಮಾಡುತ್ತಿದ್ದನು. ೩೬. ಒಮ್ಮೆ ಶಿಶುವಾಗುವನು. ಒಮ್ಮೆ ಗುರುವಾಗುವನು. ಒಮ್ಮೆ ದುರ್ಬಲನಾಗುವನು. ಒಮ್ಮೆ ಚಟುವಟಿಕೆಯಿಂದ ಕೂಡಿದವನಾಗುವನು. ಒಮ್ಮೆ ರೂಪುಹೊಂದಿರುವನು. ಒಮ್ಮೆ ಬರಿದು ಬರಿದೋ ಆದ ಬಯಲಾಗುವನು. ಒಮ್ಮೆ ಇಲ್ಲಿರುವನು, ಒಮ್ಮೆ ಅಲ್ಲಿರುವನು. ಒಮ್ಮೆ ಎಲ್ಲಾ ಕಡೆ ಇರುವನು. ಈ ಪ್ರಕಾರವಾಗಿ ಪರಬ್ರಹ್ಮನಾದ ಅಲ್ಲಮಲಿಂಗನು ನಟಿಸಿದನು. ೩೭. ಹಾಡಿದರೆ ಹಾಡುವನು. ವೇಷಧಾರಿಯಾಗಿ ಆಡಿದರೆ ತಾನು ಆಡುವನು. ಕೊಂಡಾಡಿದರೆ ಕೊಂಡಾಡುವನು. ನಮಸ್ಕರಿಸಿದರೆ ನಮಸ್ಕರಿಸುವನು. ನೋಡಿದರೆ ನೋಡುವನು. ಜೀವಿಗಳು ಮಾಡಿದಂತೆ ನಿರ್ಗುಣನಾದ ಪ್ರಭುಲಿಂಗನು (ತನ್ನ) ಲೀಲೆಯನ್ನು ಅತಿಶಯವಾಗಿ ಹರಡಿದನು. ೩೮. ಜನರು ಆಶ್ಚರ್ಯದಿಂದ ಗಲಿಬಿಲಿಗೊಂಡು ಆತನ ವಿಪರೀತವಾದ ವರ್ತನೆಯನ್ನು ತಿಳಿಯಲಾಗದೆ ನೋಡುತ್ತಲಿದ್ದರು. ಬಸವದಂಡಾಧಿಪತಿಯು ಆತನನ್ನು ಕಂಡು ಹುಸಿವೇಷದ ಸ್ಥಿತಿಯನ್ನು

ನೆಲನ ಮಱೆಗೊಂಡಿಹ ವಿಧಾನದ
ಹೊಲಬನಂಜನವಿಡಿದ ಕಣ್ಣಿನ
ಬಲುಹನುಳ್ಳವ ಕಾಬವೊಲು ಕರ ವಿಕೃತವೇಷದಲಿ
ಸುಳಿವ ಸಾಕ್ಷಾದಪ್ರಮೇಯನ
ನಿಲವನಱಿದನು ಕರಣಗಳ ನಿ
ರ್ಮಲತೆಯೊಳು ನಿಶ್ಚೈಸಿ ಬಳಿಕಾ ಬಸವದಂಡೇಶ ೩೯

ಉಕ್ಕಿದುದು ಮನವಱಿದು ಕಂಗಳು
ಮುಕ್ಕುಳಿಸಿದುವು ಮೂರ್ತಿಯನು ಕವಿ
ದೊಕ್ಕುದಾನಂದಾಶ್ರು ತಲೆದೋಱಿದುವು ತನುಪುಳಕ
ಮಿಕ್ಕು ಮಿಗೆ ಮತಿ ಮಱಿದು ಹರುಷವು
ಹಕ್ಕೆಗೊಂಡುದು ನಲವಿನಲಿ ಮೈ
ಯಿಕ್ಕಿದನು ಬಸವಣ್ಣನಲ್ಲಮಲಿಂಗನಂಘ್ರಿಯಲಿ ೪೦

ಘನಮಹಿಮ ಶಿವಭಕ್ತರೆಲ್ಲರು
ತನತನಗೆ ಹರಿತಂದು ತಮ್ಮಯ
ತನುವನೀಡಾಡಿದರು ಬಳಿಕಾ ಪ್ರಭುವಿನಂಘ್ರಿಯಲಿ
ವನಿತೆಯರು ನಲವಿನಲಿ ಜಯ ಜಯ
ವೆನುತ ಕರ ನಖ ನಯನಗಳ ಬೆಳ
ಗನೆ ನಿವಾಳಿಸುತೆತ್ತುತಿರ್ದರು ಮಂಗಳಾರತಿಯ ೪೧

ಶರಣು ಶರಣೆಂದಿದಿರುಗೊಂಡರು
ತಿರುಗಿದುದು ಜನವೆಲ್ಲ ನೆರೆದ
ಬ್ಬರಿಸಿದುವು ವಾದ್ಯಗಳು ಮಿಗೆ ಕಲ್ಯಾಣಪುರದೊಳಗೆ
ಬರುತಲಿರ್ದನು ಸಕಲ ಪದದಲಿ
ಭರಿತನಾಗಿಯಿದೇನು ಮಹಿಮೆಯ
ಹರಹಿಕೊಂಡೆಯ್ತಂದನೋ ಪ್ರಭುಲಿಂಗ ಲೀಲೆಯಲಿ ೪೨

ಚೆನ್ನಾಗಿ ಪರಿಕಿಸಿ ವಿಚಾರಮಾಡಿ ಬಳಿಕ (ಈತನೇ) ಗುರುವೆಂದು ನಿಶ್ಚಯಿಸಿದನು. ೩೯. ಬಳಿಕ ನೆಲದ ಮರೆಯಲ್ಲಿರುವ ಸಂಪತ್ತಿನ ರಹಸ್ಯವನ್ನು ಅಂಜನ ಹಚ್ಚಿದ ಕಣ್ಣಿನ ಶಕ್ತಿಯುಳ್ಳವನು ಕಾಣುವಂತೆ ಅತಿ ವಿಕೃತವೇಷದಿಂದ ಕಾಣಿಸಿದ ಸಾಕ್ಷಾತ್ ಅಪ್ರಮೇಯನ ಇರುವಿಕೆಯನ್ನು ಕರಣಗಳ ಪರಿಶುದ್ಧತೆಯಿಂದ ದೃಢಮಾಡಿ ಆ ಬಸವದಂಡೇಶನು ತಿಳಿದನು. ೪೦. (ಈತನೇ ಪ್ರಭುವೆಂಬುದನ್ನು) ತಿಳಿದು ಮನಸ್ಸು ಉಬ್ಬಿತು; ಕಣ್ಣುಗಳು (ನೋಟ ಆ ಮಂಗಳ) ಮೂರ್ತಿಯನ್ನು ಕವಿದು ಮುಕ್ಕುಳಿಸಿದುವು; ಆನಂದದ ಕಣ್ಣೀರು ಸುರಿಯಿತು; ರೋಮಾಂಚನವಾಯಿತು; ಅತಿಶಯವಾಗಿ ಬುದ್ಧಿ ಮರೆಯಾಗಿ ಹರುಷವು ಆಶ್ರಯ ಪಡೆಯಿತು. ಬಸವಣ್ಣನು ಸಂತಸದಿಂದ ಅಲ್ಲಮಲಿಂಗನ ಪಾದಗಳ ಮೇಲೆ ಮೈಚೆಲ್ಲಿದನು. ೪೧. ಅನಂತರ ಅತಿ ಮಹಿಮಾವಂತರಾದ ಶಿವಭಕ್ತರೆಲ್ಲರು ತಾವು ತಾವಾಗಿಯೇ ನಡೆದು ಬಂದು ತಮ್ಮ ದೇಹವನ್ನು ಪ್ರಭುವಿನ ಪಾದಗಳಲ್ಲಿ ಚೆಲ್ಲಿದರು. ಸ್ತ್ರೀಯರು ಸಂತೋಷದಿಂದ ಜಯಜಯವೆಂದು ತಮ್ಮ ಕೈ, ಉಗುರು, ಕಣ್ಣುಗಳ ಕಾಂತಿಯಿಂದ ಇಳಿತೆಗೆದು ಮಂಗಳಾರತಿಯನ್ನು ಎತ್ತುತ್ತಿದ್ದರು. ೪೨. ಶರಣು ಶರಣೆಂದು ಗುಂಪುಗೂಡಿ ಜನರೆಲ್ಲ ಇದಿರುಗೊಂಡರು. ಕಲ್ಯಾಣಪುರದಲ್ಲಿ ವಾದ್ಯಗಳು ವಿಶೇಷವಾಗಿ ಧ್ವನಿಸಿದುವು. ಎಲ್ಲಾ

ಬಗೆವೊಡಾ ಹನ್ನೆರಡು ಯೋಜನ
ದಗಲವಾಗಿಯೆ ಬಹಳವೆನಿಸಿದ
ನಗರದೊಳಗೆಲ್ಲೆಲ್ಲಿ ನೋಡಿದೊಡಲ್ಲಿಯಲ್ಲಮನು
ಬಗಿದು ಹುಗಲೆಡೆಯಿಲ್ಲವೆಂಬವೊ
ಲಗಣಿತಪ್ರತಿಯಾಗಿ ಸುಳಿದನು
ಪೊಗಳಬಲ್ಲವರಾರು ದಿಟವಾತನ ಮಹಾತ್ಮೆಯನು ೪೩

ಕೇರಿಕೇರಿಯೊಳಾಡುತಿಹ ಸುಕು
ಮಾರಕರ ಕಂಡಾಡುವನು ಪರಿ
ವಾರದೊಳು ದಿಟದಂತೆ ಪಾಯಕತನವ ಪಸರಿಸುವ
ಆರು ಕಂಡರೆಯವರವೊಲು ಸಾ
ಕಾರನಾಗಿಹನಲ್ಲದೊಂದು ಶ
ರೀರ ತಾನಲ್ಲೆಂಬುದನು ತೋಱಿದನು ಪ್ರಭುರಾಯ ೪೪

ಹಸು ತೃಷೆಯ ಹದವರಿಯನಱಿಯದೆ
ಮಿಸುಗುವೆವೆ ಕಣ್ಣಾಲಿಗಳನಾ
ಡಿಸದೆ ನಡೆತಂದಾ ಮಹಾತ್ಮನ ಕೂಡೆ ನೋಡುತಲಿ
ಎಸೆವ ಪುರುಜನವೆಯ್ದೆ ತಾವನಿ
ಮಿಷರ ತೆಱದಲಿ ಮೆಱೆಯುತಿರ್ದರು
ದೆಸೆದೆಸೆಯ ಬೀದಿಗಳಲಾ ಕಲ್ಯಾಣಪುರದೊಳಗೆ ೪೫

ಬಂದನಾಗಳೆ ಬಸವರಾಜನ
ಮಂದಿರಕೆ ಸಲೆ ಸಕಲ ಸಂಭ್ರಮ
ದಿಂದಲಾ ಪ್ರಭುಲಿಂಗ ಭಕ್ತಾಧೀನ ಯುಕ್ತಿಯಲಿ
ಮುಂದೆ ಜಯ ಜಯವೆನುತ ಪರಮಾ
ನಂದದಲಿ ಪರಿಪರಿಯ ಭಕ್ತರ
ಸಂದಣಿಯ ಸೌರಂಭದಿಂದಾ ಶೂನ್ಯವಿಷ್ಟರಕೆ ೪೬

ಹಾದಿಗಳಲ್ಲಿ ತುಂಬಿದವನಾಗಿ (ಪ್ರಭುವು) ಬರುತ್ತಲಿದ್ದನು. ಪ್ರಭುಲಿಂಗನು (ತನ್ನ) ಲೀಲೆಯಲ್ಲಿ ಇದೇನು ಮಹಿಮೆಯನ್ನು ವಿಸ್ತರಿಸಿಕೊಂಡು ನಡೆದು ಬಂದನೋ! ೪೩. ವಿಚಾರ ಮಾಡುವುದಾದರೆ ಹನ್ನೆರಡು ಯೋಜನ ಅಗಲವಾಗಿ ದೊಡ್ಡದೆನ್ನಿಸಿದ ನಗರದ ಒಳಗೆ ಎಲ್ಲಿ ನೋಡಿದರಲ್ಲಿ ಅಲ್ಲಮನು ಸೀಳಿ ಹೋಗಲು ದಾರಿಯಿಲ್ಲವೆಂಬಂತೆ ಲೆಕ್ಕವಿಲ್ಲದಷ್ಟು ಪ್ರತಿಮೂರ್ತಿಯಾಗಿ ಕಾಣಿಸಿದನು. ನಿಜವಾಗಿಯೂ ಆತನ ಮಹಿಮೆಯನ್ನು ಹೊಗಳಬಲ್ಲವರಾರು? ೪೪. ಕೇರಿಕೇರಿಯಲ್ಲಿ ಆಡುತ್ತಿರುವ ಸುಕುಮಾರರನ್ನು ಕಂಡು ಅವರ ಜೊತೆ ಆಡುವನು. ಸೇವಕರ ನಡುವೆ ನಿಜವಾದ ಸೇವಕರಂತೆ ವರ್ತಿಸುವನು. ಯಾರನ್ನು ಕಂಡರೂ ಅವರ ರೀತಿಯಲ್ಲಿ ಆಕಾರವನ್ನು ತಾಳುವನು. ಅಷ್ಟಲ್ಲದೆ ಒಂದೇ ಒಂದು ಶರೀರ ತಾನಲ್ಲ ಎಂಬುದನ್ನು ಪ್ರಭುರಾಯನು ಪ್ರಕಟಿಸಿದನು. ೪೫. ಹಸಿವು ಬಾಯಾರಿಕೆಗಳ ನೆಲೆಯನ್ನು ತಿಳಿಯದೆ, ಪ್ರಕಾಶಿಸುವ ಕಣ್ಣರೆಪ್ಪೆ, ಬೊಂಬೆಗಳನ್ನು ಚಲಿಸದೆ ನಡೆದುಬಂದ ಪುರಜನರು ದೇವತೆಗಳ ರೀತಿಯಲ್ಲಿ ಆ ಮಹಾತ್ಮನನ್ನು ನೋಡುತ್ತ ಕಲ್ಯಾಣಪುರದೊಳಗೆ ದಿಕ್ಕುದಿಕ್ಕಿನ ಬೀದಿಗಳಲ್ಲಿ ರಂಜಿಸುತ್ತಿದ್ದರು. ೪೬. ಹೆಚ್ಚಿನ ಸಕಲ ಸಂಭ್ರಮಗಳಿಂದ ಆ ಪ್ರಭುಲಿಂಗನು (ತಾನು) ಭಕ್ತಾಧೀನನೆಂಬ ನ್ಯಾಯದಿಂದ, ಮುಂದೆ

ಜಗದ ಜಂತ್ರದ ಸೂತ್ರಧಾರಿಗೆ
ಸಗುಣ ನಿರ್ಗುಣನಹ ಮಹಾತ್ಮಗೆ
ಬಗೆದು ನೋಡಲು ಬಲ್ಲಿತಾವುದು ದಿಟ ವಿಚಾರಿಪೊಡೆ
ಹಗಲುಗತ್ತಲೆಯೆನಿಸಿ ಹಲಬರ
ಬೆಗಡುಗೊಳಿಸುವ ಶೂನ್ಯಪೀಠವ
ನಗುತಲಡಱಿದನಲ್ಲಮಪ್ರಭುಲಿಂಗ ಲೀಲೆಯಲಿ ೪೭

ನಾಡಿಗಳನಾವಾವ ಪರಿಯಲಿ
ತೀಡಿ ಜೀವರ ದೇಹಯಂತ್ರವ
ನಾಡಿಸುವವೊಲು ಶೂನ್ಯಸಿಂಹಾಸನದ ಸೂತ್ರವನು
ಕೂಡಿ ನೋಡಿ ಷಡುಸ್ಥಲದ ಸಮ
ಜೋಡನೆಲ್ಲವ ಮುಟ್ಟಿ ಮುಂದಕೆ
ನೀಡಿ ನಡೆದೇಱಿದನು ಬಳಿಕಾ ಪ್ರಭು ವಿನೋದದಲಿ ೪೮

ಆಱು ಚಕ್ರವನಾಱು ಶಕ್ತಿಯ
ನಾಱು ಮತಿಗಳನಾಱು ಗತಿಗಳ
ನಾಱು ವರ್ಣವನಾಱು ನಿರ್ಣಯವಾದ ಸಂಪದವ
ಆಱು ಪರಿಯಲಿ ಸವೆದು ಸಲೆ ನೆಲೆ
ದೋಱುವೆಡೆಗಳನೆಯ್ದೆ ನೋಡುತ
ಲೇಱುತಿರ್ದನು ಶೂನ್ಯಸಿಂಹಾಸನವ ಪ್ರಭುರಾಯ ೪೯

ಕುಂಡಲಿಯನಂಡಲೆದು ರವಿಶಶಿ
ಮಂಡಲಕಂಗಳ ಮೀಱಿ ಕಾಮದ
ಕಂಡಿಗಳ ಕೀಲಿಸಿ ಸುಷುಮ್ನಾನಾಳದೊಳಗಡಱಿ
ಮಂಡಿಸಿದನಾ ಶೂನ್ಯಪೀಠದ
ಮಂಡೆಯೊಳು ತೊಳತೊಳಗಿ ಬೆಳಗಿಯ
ಖಂಡ ತೇಜೋಮೂರ್ತಿಯಲ್ಲಮಲಿಂಗ ಲೀಲೆಯಲಿ ೫೦

ಜಯಜಯವೆನ್ನುತ್ತ ಪರಮಾನಂದದಿಂದ (ನಡೆದ) ನಾನಾ ಬಗೆಯ ಭಕ್ತರ ಗುಂಪಿನ ಸಂಭ್ರಮದೊಂದಿಗೆ, ಆ ಬಸವರಾಜನ ಮನೆಯ ಶೂನ್ಯಪೀಠದಲ್ಲಿಗೆ ಬಂದನು. ೪೭. ಜಗದ ಯಂತ್ರದ ಸೂತ್ರಧಾರಿಗೆ, ಸಗುಣನೂ ನಿರ್ಗುಣನೂ ಆದ ಮಹಾತ್ಮನಿಗೆ, ನಿಜವಾಗಿ ವಿಚಾರಮಾಡಿ ನೋಡಲು ದೊಡ್ಡದಾವುದು? ಹಗಲಿನಲ್ಲೇ ಕತ್ತಲೆಯೆನ್ನಿಸಿ ಹಲವರನ್ನು ಆಶ್ಚರ್ಯಗೊಳಿಸುವ ಶೂನ್ಯಪೀಠವನ್ನು ಅಲ್ಲಮ ಪ್ರಭುಲಿಂಗನು ಲೀಲೆಯಿಂದ ಏರಿದನು. ೪೮. ಜೀವರ ನಾಡಿಗಳನ್ನು ಆಯಾ ರೀತಿಯಲ್ಲಿ ತೀಡಿ ದೇಹಯಂತ್ರವನ್ನು ಆಡಿಸುವ ರೀತಿಯಲ್ಲಿ ಆ ಪ್ರಭುವು ಶೂನ್ಯಸಿಂಹಾಸನದ ಸೂತ್ರವನ್ನು ನೋಡಿ, ಷಟ್ಸ್ಥಲದ ಸಮಜೋಡಿಯನ್ನೆಲ್ಲ ಸ್ಪರ್ಶಿಸಿ, ಮುಂದಕ್ಕೆ ಪಾದಗಳನ್ನು ಚಾಚಿ ನಡೆದು ಬಳಿಕ ವಿನೋದದಿಂದ ಅದನ್ನು ಹತ್ತಿದನು. ೪೯. ಷಟ್ಚಕ್ರವನ್ನು, ಷಟ್ಶಕ್ತಿಯನ್ನು, ಷಣ್ಮತಿಯನ್ನು, ಷಡ್ಗತಿಯನ್ನು, ಷಡ್ವರ್ಣವನ್ನು, ಷಟ್ಸಂಪದವನ್ನು ಆರು ರೀತಿಯಲ್ಲಿ ನಿರ್ಮಿಸಿ, ಚೆನ್ನಾಗಿ ನೆಲೆ ಕಾಣಿಸುವ ಸ್ಥಳಗಳನ್ನು ವಿಶೇಷವಾಗಿ ಪರಿಶೀಲಿಸುತ್ತ ಶೂನ್ಯಸಿಂಹಾಸನವನ್ನು ಪ್ರಭುರಾಯನು ಏರಿದನು. ೫೦. ಕುಂಡಲಿಯನ್ನು ಬಂಧಿಸಿ, ಸೂರ್ಯಚಂದ್ರ

ಪ್ರಣವತರುವನೆ ನೆಮ್ಮಿ ಮಂತ್ರಾ
ಗ್ರಣಿಯ ಪಂಚಬ್ರಹ್ಮ ಸರ್ಪನ
ಫಣಿಯ ಮಣಿಯಿಂದತ್ತಲದ್ವೈತಸ್ಥಲಾದಿಗಳ
ಕಣಿಯನೆಲ್ಲವ ಕಳೆದು ನೆಜಿಸ್ ನಿ
ರ್ಗುಣ ನಿರಾಳದ ನಿರುಪಮದ ಮೇ
ಲಣ ಮಹಾಸನದಲ್ಲಿಯಾ ಪ್ರಭುಲಿಂಗ ಮಂಡಿಸಿದ ೫೧

ಅಲ್ಲಿಗಲ್ಲಿಗೆ ತಕ್ಕ ರೂಪಿನ
ಲಲ್ಲಿಗಲ್ಲಿಗೆ ತಕ್ಕ ನಡೆಗಳ
ಲಲ್ಲಿಗಲ್ಲಿಗೆ ತಕ್ಕ ಸಕಲೈಶ್ವರ್ಯ ಶಕ್ತಿಯಲಿ
ಅಲ್ಲಿಗಲ್ಲಿಗೆ ಸುಳಿದು ಸೂತ್ರಗ
ಳೆಲ್ಲವನು ಚೇಷ್ಟಿಸುತಲೇಜೆದ
ನಲ್ಲಮಪ್ರಭು ಶೂನ್ಯಸಿಂಹಾಸನದ ಶಿಖರದಲಿ ೫೨

ಆದಿಮಧ್ಯಾಂತಂಗಳಿಲ್ಲದ
ವೇದ ಶಾಸ್ತ್ರಂಗಳಿಗೆ ನಿಲುಕದ
ನಾದಬಿಂದುಗಳೆಂಬ ಸಂಪುಟದೊಳಗೆ ಸಮನಿಸದ
ಆದರಿಸುವಾತ್ಮತ್ರಯಂಗಳ
ಹಾದಿಯಲಿ ಹಂಗಿಲ್ಲದನುಪಮ
ವಾದ ಘನ ಗುರು ಮೂರ್ತಿಗೊಂಡನು ಶೂನ್ಯಪೀಠದಲಿ ೫೩

ಭಾಪುರೇ ಬಸವಣ್ಣ ಭುವನ
ವ್ಯಾಪಿಯಹುದೈ ದಿಟ ವಿಚಾರಿಸ
ಲೀ ಪರಿಯಲಾರಜೆವರಂತರ್ಮಾರ್ಗದೊಡ್ಡಣೆಯ
ತ್ರೈಪುರಂಗಳನಳಿಯಬಲ್ಲ ಮ
ಹಾಪುರುಷ ನೀನೆನುತ ಹೊಗಳಿದ
ನಾ ಪರಬ್ರಹ್ಮಸ್ವರೂಪನು ದಂಡನಾಯಕನ ೫೪

ಮಂಡಲಗಳನ್ನು ಮೀರಿ, ಕಾಮದ ರಂಧ್ರಗಳನ್ನು ಮುಚ್ಚಿ, ಸುಷುಮ್ನಾನಾಳದೊಳಗೆ ಏರಿ, ಶೂನ್ಯ ಪೀಠಸ್ಥಲದ ಮೇಲೆ ಅಖಂಡ ತೇಜೋಮೂರ್ತಿಯಾದ ಅಲ್ಲಮಲಿಂಗನು (ತನ್ನ) ಲೀಲೆಯಲ್ಲಿ ಜಾಜ್ವಲ್ಯಮಾನನಾಗಿ ಬೆಳಗಿ ಕುಳಿತನು. ೫೧. ಓಂಕಾರವೆಂಬ ವೃಕ್ಷವನ್ನು ಆಶ್ರಯಿಸಿ, ಮಂತ್ರಮುಖ್ಯವಾದ ಪಂಚಬ್ರಹ್ಮನೆಂಬ ಸರ್ಪನ ಹೆಡೆಯ ಮಣಿಯಿಂದತ್ತ ಅದ್ವೈತಸ್ಥಲಾದಿಗಳ ಉತ್ಪತ್ತಿಸ್ಥಾನವನ್ನೆಲ್ಲಾ ಕಳೆದು, ಅಸಮಾನವಾದ ಶಾಂತಿಯ, ನಿರ್ಗುಣಮಹಾಸನದಲ್ಲಿ ಆ ಪ್ರಭುಲಿಂಗನು ಕುಳಿತನು. ೫೨. ಅಲ್ಲಿಗಲ್ಲಿಗೆ ತಕ್ಕ ರೂಪನ್ನು, ಅಲ್ಲಿಗಲ್ಲಿಗೆ ತಕ್ಕ ನಡುವಳಿಕೆಗಳನ್ನು, ಅಲ್ಲಿಗಲ್ಲಿಗೆ ತಕ್ಕ ಸಕಲೈಶ್ವರ್ಯಶಕ್ತಿಯನ್ನು ಅಲ್ಲಿಗಲ್ಲಿಗೆ ಸುಳಿದು ಸೂತ್ರಗಳೆಲ್ಲವನ್ನು ಆಡಿಸುತ್ತ ಶೂನ್ಯಸಿಂಹಾಸನ ಶಿಖರಕ್ಕೆ ಅಲ್ಲಮಪ್ರಭು ಏರಿದನು. ೫೩. ಆದಿ ಮಧ್ಯ ಅಂತ್ಯಗಳಿಲ್ಲದ, ವೇದಶಾಸ್ತ್ರಗಳಿಗೆ ಸಿಗದ, ನಾದ ಬಿಂದುಗಳೆಂಬ ಸಂಪುಟದೊಳಗೆ ಒದಗದ, ಪ್ರೀತಿಸುವ ಆತ್ಮತ್ರಯಗಳ ದಾರಿಯ ಹಂಗಿಲ್ಲದ, ಎಣೆಯಿಲ್ಲದ ಘನ ಗುರುವು ಶೂನ್ಯಪೀಠದಲ್ಲಿ ಕುಳಿತನು. ೫೪. "ಭೇಷ್! ಬಸವಣ್ಣ ವಿಚಾರ ಮಾಡಲು

ತಳಿತ ತನುವಿನ ರೋಮಕೂಪದ
ಕುಳಿಗಳೆಲ್ಲವು ಕಂಗಳಾಗಿರೆ
ಬಳಸಿ ಭಾವಿಸಿ ಪರಮಗುರುವಿನ ದಿವ್ಯಮೂರ್ತಿಯನು
ತೊಲಗದೀಕ್ಷಿಸಿ ಚಿತ್ತದಲಿ ಮು
ಕ್ಕುಳಿಸಿಯಾನಂದಾಶ್ರುಜಲಧಿಯ
ತುಳುಕುತಿರ್ದನು ಬಸವದಂಡಾಧೀಶ ಭಕ್ತಿಯಲಿ ೫೫

ಹಾಡುತಿರ್ದರು ಕೆಲರು ನೃತ್ಯವ
ನಾಡುತಿರ್ದರು ಕೆಲರು ಸೇವೆಯ
ಮಾಡುತಿರ್ದರು ಕೆಲರು ಜಯ ಜಯ ಉಘೇ ಉಘೇ ಎನುತ
ನೋಡುತಿರ್ದರು ನಲಿದು ಭಕ್ತಿಯ
ಗಾಡಿಕಾಱರು ತಮತಮಗೆ ಹರಿ
ದಾಡುತಿರ್ದರು ಹರುಷದಲಿ ಗುರು ಮೂರ್ತಿಗೊಂಡಿರಲು ೫೬

ಹಲವು ಚೆಲುವಿನ ಭದ್ರಮಂಟಪ
ದೊಳಗೆ ನೆರೆದಿಹ ಜಂಗಮದ ಸಂ
ಕುಳದ ಭಕ್ತರ ಪರಿಚರದ ಭಾವೆಯರ ಮಧ್ಯದಲಿ
ತೊಳಗಿ ಬೆಳಗುವ ಶೂನ್ಯಪೀಠದ
ನೆಲೆಯನೆಲ್ಲವ ಮೀಱಿ ಬಯಲಲಿ
ನೆಲಸಿ ನಿಂದನಿದೇನು ಮಹಿಮೆಯೊ ಗುರು ಗುಹೇಶ್ವರನ ೫೭

ಅಂತು ಗತಿ ೨೨ಕ್ಕಂ ಪದ ೯೮೧ ಕ್ಕಂ ಮಂಗಳಂ

ಒಳಮಾರ್ಗದ ಗುಂಪನ್ನು ನಿಜವಾಗಿ ಈ ರೀತಿಯಲ್ಲಿ ಯಾರಿಗೆ ತಿಳಿಯಲು ಸಾಧ್ಯ. ಅದು ಲೋಕದಷ್ಟೇ ಹರಡಿಕೊಂಡಿರುವುದು. ತ್ರಿಪುರಗಳನ್ನು ನಾಶಮಾಡಬಲ್ಲ ಮಹಾಪುರುಷ ನೀನು" ಎಂದು ಆ ಪರಬ್ರಹ್ಮಸ್ವರೂಪನಾದ ಪ್ರಭುವು ದಂಡನಾಯಕನನ್ನು ಹೊಗಳಿದನು. ೫೫. ಪಕ್ವವಾದ ದೇಹವಿರಲು, ಕೂದಲಿನ ಬುಡದ ಕುಳಿಗಳೆಲ್ಲವೂ ಕಣ್ಣುಗಳಾಗಿರಲು ಶ್ರೇಷ್ಠ ಗುರುವಿನ ದಿವ್ಯಮೂರ್ತಿಯನ್ನು ಬಳಸಿ ನೋಡಿ, ಬಿಡದೆ ನೋಡಿ, ಮನವಲ್ಲಿ ಮುಕ್ಕುಳಿಸಿ ಬಸವದಂಡಾಧೀಶನು ಆನಂದಾಶ್ರುವೆಂಬ ಸಮುದ್ರದಲ್ಲಿ ಭಕ್ತಿಯಿಂದ ತುಳುಕಾಡುತ್ತಿದ್ದನು. ೫೬. ಗುರುವು (ಶೂನ್ಯಸಿಂಹಾಸನದಲ್ಲಿ) ಕುಳಿತಿರಲು ಕೆಲವರು ಹಾಡುತ್ತಿದ್ದರು. ಕೆಲವರು ನೃತ್ಯ ಮಾಡುತ್ತಿದ್ದರು. ಕೆಲವರು ಸೇವೆಯನ್ನು ಮಾಡುತ್ತಿದ್ದರು. ಕೆಲವರು ಜಯ ಜಯ ಉಘೇ ಉಘೇ ಎಂದು ನಲಿದು ನೋಡುತ್ತಿದ್ದರು, ಭಕ್ತಿಯ ಸೊಗಸುಗಾರರು ತಮಗೆ ತಾವೇ ಹರುಷದಿಂದ ಓಡಾಡುತ್ತಿದ್ದರು. ೫೭. ಹಲವು (ಬಗೆಯ) ಚೆಲುವಿನ ಮಂಗಳಮಂಟಪದೊಳಗೆ ಸೇರಿರುವ ಜಂಗಮ ಸಮೂಹ, ಭಕ್ತರು, ಊಳಿಗದ ಸ್ತ್ರೀಯರು-ಇವರುಗಳ ಮಧ್ಯದಲ್ಲಿ ಪ್ರಜ್ವಲಿಸಿ ಬೆಳಗುವ ಶೂನ್ಯಪೀಠದ ನೆಲೆಯನ್ನೆಲ್ಲಾ ಮೀರಿ ಬಯಲಿನಲ್ಲಿ (ಆ ಪ್ರಭುವು) ನೆಲಸಿ ನಿಂತನು. ಇದೇನು ಗುರು ಗುಹೇಶ್ವರನ ಮಹಿಮೆಯೊ!

# ೨೩. ಪ್ರಭುದೇವರು ಆರೋಗಣೆ ಮಾಡಿದುದು

ಗತಿ ೨೩

ಸೂಚನೆ : ಒಸೆದು ತಾನುಂಡಖಿಳ ಜೀವದ
ಹಸಿವ ನೂಕಿದ ಲೋಕವಱಿಯಲು
ಬಸವರಾಜನ ಭಕ್ತಿವತ್ಸಲ ಗುರು ಗುಹೇಶ್ವರನು

ಅನುವಿಡಿದು ಗುರು ಲಿಂಗ ಜಂಗಮ
ದನುವ ನಿಶ್ಚೈಸುವರು ನಿರ್ವಂ
ಚನೆಯ ಭಕ್ತಿಗೆ ತನು ಮನೋಧನಗಳನು ಸವೆವವರು
ವಿನುತ ಮತಿಯುತರೆಲ್ಲರತಿ ವಂ
ದನೆಯ ಲಾಲಿಸಿ ಕೇಳಿ ಸುಖಿಸುವು
ದನುಪಮದ ಸಂಗತಿಯನೀ ಪ್ರಭುಲಿಂಗಲೀಲೆಯಲಿ ೧

ಬಯಲು ಸಿಂಹಾಸನದ ಮೇಲಣ
ಬಯಲು ಬಯಲಲಿ ತೊಳಗಿ ಬೆಳಗುತ
ಬಯಲ ತನುವಿಡಿದಲ್ಲಮಪ್ರಭು ಮೂರ್ತಿಗೊಂಡಿರಲು
ಪ್ರಿಯದಲುಬ್ಬುವ ಭುಲ್ಲವಿಪ ಬು
ದ್ಧಿಯನು ಬೋಳೈಸುತಲಿ ಬಳಿಕತಿ
ಶಯದ ಸತುಕರಣೆಗಳನನುಗೊಳಿಸಿದನು ಬಸವಣ್ಣ ೨

ಸೂ : ಲೋಕಕ್ಕೆ ತಿಳಿಯುವಂತೆ ಬಸವರಾಜನ ಭಕ್ತಿಯಲ್ಲಿ ಪ್ರೀತಿಯುಳ್ಳ ಗುರು ಗುಹೇಶ್ವರನು ಸಂತೋಷದಿಂದ ತಾನು ಉಂಡು ಸರ್ವಜೀವಿಗಳ ಹಸಿವನ್ನು ನಿವಾರಿಸಿದನು. ೧. ಒಂದು ಕ್ರಮವನ್ನು ಅನುಸರಿಸಿ ಗುರು ಲಿಂಗ ಜಂಗಮಗಳ ಸಂಬಂಧವನ್ನು ನಿರ್ಣಯಿಸುವವರು, ವಂಚನೆಯಿಲ್ಲದ ಭಕ್ತಿಗೆ ತನು ಮನ ಧನಗಳನ್ನು ವ್ಯಯಿಸುವವರು, ಹೊಗಳಿಕೆಗೆ ಅರ್ಹರಾದ ಬುದ್ಧಿವಂತರು-ಎಲ್ಲರೂ ಆದರದಿಂದ ಈ ಪ್ರಭುಲಿಂಗಲೀಲೆಯಲ್ಲಿ ಎಣೆಯಿಲ್ಲದ ಸಂಗತಿಯನ್ನು ಮನವಿಟ್ಟು ಕೇಳಿ ಆನಂದಿಸುವುದು. ೨. ಶೂನ್ಯ ಸಿಂಹಾಸನದ ಮೇಲಿರುವ ಶೂನ್ಯಾಕಾಶದಲ್ಲಿ ಪ್ರಕಾಶಮಾನವಾಗಿ ಬೆಳಗುವ ನಿರಾಕಾರನಾದ ಅಲ್ಲಮಪ್ರಭುವು ಆಕಾರಗೊಂಡಿರಲು, ಸಂತೋಷದಿಂದ ಉಕ್ಕಿಬರುವ ಹೆಚ್ಚುಗೆಯ ಬುದ್ಧಿಯನ್ನು ಸಂತೈಸಿ ಬಸವಣ್ಣನು ಪ್ರಭುವನ್ನು ವಿಶೇಷವಾಗಿ ಉಪಚರಿಸಲು ಸಿದ್ಧತೆಗಳನ್ನು

ಚೆನ್ನಬಸವನು ಬಾಚರಸನ
ಪ್ಪಣ್ಣ ಮಡಿವಳ ಮಾಚಿದೇವನು
ಕಿನ್ನರಿಯ ಬೊಮ್ಮಯ್ಯಗಳು ಮೋಳಿಗೆಯ ಮಾರಯ್ಯ
ಮಾನ್ಯತೆಯ ಶಿವಭಕ್ತರೆಲ್ಲರು
ಶೂನ್ಯಸಿಂಹಾಸನದ ಗುರುವಿನ
ಬಿನ್ನಣಕೆ ಬೆಱಗಾಗುತಿರ್ದರು ನಟ್ಟ ನೋಟದಲಿ ೩

ಬಂದು ಲಿಂಗಾರ್ಚನೆಯ ಮಾಡಲಿ
ಕೆಂದು ಮುನ್ನಿನ ದಿವಸ ದಿವಸದ
ಛಂದದಿಂದಲಿ ಮೂರ್ತಿಗೊಂಡು ಮನೋನುರಾಗದಲಿ
ಮುಂದೆ ನಾನಾ ರಾಗರಂಜನೆ
ಯಿಂದಲಾದ್ಯರ ವಚನಗಳನೊಲ
ವಿಂದೆ ಕೇಳುತಲೊಪ್ಪುತಿರ್ದುದು ಜಂಗಮವ್ರಾತ ೪

ಜಡೆಯ ರುದ್ರಾಕ್ಷಿಯ ವಿಭೂತಿಯ
ಕೊಡೆಯ ಕೌಪೀನದ ಮೃಗಾಜಿನ
ದುಡುಗೆಗಳ ನಿರ್ವಾಣ ಕಾಷಾಂಬರದ ಹಾವುಗೆಯ
ಹಿಡಿದ ಲಿಂಗದ ಯೋಗದಂಡದ
ಮೃಡನ ಹೋಲುವ ಮೂರ್ತಿವೆತ್ತಿಹ
ವೊಡೆಯರಿರ್ದರು ಶೂನ್ಯಸಿಂಹಾಸನದ ಬಳಸಿನಲಿ ೫

ನೆರೆದುದಾರೋಗಣೆಗೆ ನಾನಾ
ಪರಿಯ ಜಡೆಗಳ ತಾಳುಬೋಳಿನ
ವರ ವಿಭೂತಿಯ ಲಿಂಗದಂಗದ ಕರಕಮಂಡಲದ
ಬೆರಳ ಜಪಮಣಿ ಮಾಲಿಕೆಯ ವಿ
ಸ್ತರದ ಕಂಬಳಿ ಕಂಥೆಗಳ ಭಾ
ಸುರದ ಜಂಗಮ ಶೂನ್ಯಸಿಂಹಾಸನದ ಬಳಸಿನಲಿ ೬

ಮಾಡಿದನು. ೩. ಚೆನ್ನಬಸವಣ್ಣ, ಬಾಚರಸ, ಅಪ್ಪಣ್ಣ, ಮಡಿವಾಳ ಮಾಚಿದೇವ, ಕಿನ್ನರಿ ಬೊಮ್ಮಯ್ಯ, ಮೋಳಿಗೆ ಮಾರಯ್ಯ, ಮನ್ನಣೆವಡೆದ ಎಲ್ಲ ಶಿವಭಕ್ತರು ಶೂನ್ಯಸಿಂಹಾಸನವನ್ನೇರಿದ ಗುರುವಿನ ಮನೋಹರತೆಯನ್ನು ರೆಪ್ಪೆ ಬಡಿಯದೆ ನೋಡಿ ಆಶ್ಚರ್ಯಗೊಳ್ಳುತ್ತಿದ್ದರು. ೪. ಬಗೆಬಗೆಯಾಗಿ ಲಿಂಗಪೂಜೆ ಮಾಡಬೇಕೆಂದು ಹಿಂದಣ ದಿವಸಗಳಲ್ಲೇ ನೆರೆದಿದ್ದ ಜಂಗಮರ ಸಮೂಹವು ಪ್ರಭುವನ್ನು ನೋಡಿ ಮನಸ್ಸಿನಲ್ಲುಂಟಾದ ಸಂತೋಷದಿಂದ (ನಲಿದು), ನಾನಾಬಗೆಯ ರಾಗಗಳಿಂದ ಇಂಪಾಗಿ ಹಾಡುವ ಪ್ರಮಥರ ವಚನಗಳನ್ನು ಪ್ರೀತಿಯಿಂದ ಕೇಳುತ್ತ ಶೋಭಿಸುತ್ತಲಿದ್ದಿತು. ೫. ಜಡೆ, ರುದ್ರಾಕ್ಷಿ, ವಿಭೂತಿ, ಕೊಡೆ, ಕೌಪೀನ, ಚರ್ಮಾಂಬರದ ಉಡಿಗೆಯ ಹಾಗೂ ಬತ್ತಲೆಯ, ನಾರುಮಡಿಯ, ಹಾವುಗೆಯ, ಅಂಗೈಯಲ್ಲಿ ಧರಿಸಿರುವ ಲಿಂಗದ, ಕೈಯಲ್ಲಿ ಹಿಡಿದಿರುವ ಯೋಗದಂಡದ ಶಿವನನ್ನು ಹೋಲುವಂತಹ ರೂಪುಳ್ಳ ಒಡೆಯರು ಶೂನ್ಯಸಿಂಹಾಸನದ ಸುತ್ತಲೂ ನೆರೆದಿದ್ದರು. ೬. ಶೂನ್ಯಸಿಂಹಾಸನದ ಸುತ್ತಲೂ ಪ್ರಸಾದ ವಿನಿಯೋಗಕ್ಕಾಗಿ ನಾನಾಬಗೆಯ ಜಡೆಗಳ, ಬೋಳುತಲೆಯ, ಧರಿಸಿರುವ ಪವಿತ್ರ ಭಸ್ಮದ, ಲಿಂಗವನ್ನು ಧರಿಸಿರುವ ಅಂಗದ, ಕಮಂಡಲು ಹಿಡಿದಿರುವ ಕೈಯ, ಜಪಿಸುತ್ತಿರುವ ಕೈಯ ಜಪಮಾಲೆಯ, ವಿಸ್ತಾರವಾದ

ಧ್ಯಾನ ಧಾರಣ ಯಮ ನಿಯಮ ಸುಯಿ
ದಾನ ಸೂಕ್ಷ್ಮ ವಿಚಾರ ಶೀಲ ವಿ
ಧಾನ ಹೂವಗ್ಗವಣಿಯಾರತಿ ಧೂಪ ಬೋನಗಳ
ಮೌನ ಮೊದಲಾಗಿರ್ದ ಹಲವವ
ಧಾನ ನಿಷ್ಠೆಯ ನಿತ್ಯನೇಮದ
ಮಾನಿಗಳು ನೆರೆದಿರ್ದರಾ ಮಂಟಪದ ಬಳಸಿನಲಿ ೭

ಬಳಸಿದಗ್ಗದ ಸಭೆಯೊಳಗೆ ತೊಳ
ತೊಳಗಿ ಬೆಳಗುವ ಶೂನ್ಯಪೀಠದ
ತಲೆಯ ಬಯಲಾಸನದಲಮಲಬ್ರಹ್ಮ ನೆಲಸಿರಲು
ನಲಿದು ನೋಡುವ ಕಣ್ಣು ಮನಂಗಳ
ತೊಲಗಲಜೆಯದೆ ಬಂದ ಜಂಗಮ
ಗಳನದೇನೆಂದಜೆಯದಿರ್ದನು ಬಸವದಂಡೇಶ ೮

ಹೊಸತ ಮಾಡಿದನಿಂದು ಜಂಗಮ
ಹಸಿದು ಬಜಯಂಗ್ಯೆದೊಡಿತ್ತಣ
ದೆಸೆಯ ನೋಡುವುದಿಲ್ಲ ಸತುಕರಿಸುವುದು ಮುನ್ನಿಲ್ಲ
ಬಸವನಾದೊಡೆಯಿಂದ್ರಜಾಲದ
ಹಸರಿಗಗೆ ಮರುಳಾದನಾತನ
ಗಸಣೆ ನಮಗೇಕೆನುತಲೆದ್ದುದು ಜಂಗಮಸ್ತೋಮ ೯

ಕಂಬಳಿ, ಕೌದಿಗಳನ್ನು (ಹೊದ್ದ) ಪ್ರಕಾಶಮಾನರಾದ ಜಂಗಮರು ನೆರೆದರು. ೭. ಧ್ಯಾನ, ಧಾರಣ, ಯಮ, ನಿಯಮಗಳಲ್ಲಿ ಎಚ್ಚರಿಕೆ, ಸೂಕ್ಷ್ಮವಿಚಾರಗಳ ಆಚರಣೆ, ಹೂವು, ಪವಿತ್ರೋದಕ, ಆರತಿ, ಧೂಪ, ಅನ್ನ (ಹಾಗೂ) ಮೌನವೇ ಮೊದಲಾದ ಹಲವು ಬಗೆಯ ಒಮ್ಮನದ ನಿಷ್ಠೆ ಇವುಗಳೇ ನಿತ್ಯನಿಯಮಗಳಲ್ಲಿ ಎಚ್ಚರಿಕೆಯ ಆಚರಣೆಯುಳ್ಳ ಮಹನೀಯರು ಆ ಮಂಟಪದ ಸುತ್ತಲೂ ಸೇರಿದ್ದರು. ೮. (ಮೇಲೆ ಹೇಳಿದವರಿಂದ) ಸುತ್ತುವರಿಯಲ್ಪಟ್ಟ ಶ್ರೇಷ್ಠವಾದ ಸಭೆಯೊಳಗೆ ಪ್ರಜ್ವಲಿಸಿ ಬೆಳಗುವ ಶೂನ್ಯ ಸಿಂಹಾಸನದ ತುದಿಯ ಬಯಲಾಸನದಲ್ಲಿ ಶುದ್ಧಬ್ರಹ್ಮನು ನೆಲಸಿರಲು (ಅದನ್ನು) ಸಂತೋಷದಿಂದ ನೋಡುವ ಕಣ್ಣು ಮನಗಳ ಮತ್ತು ಕಾಲ್ತೆಗೆಯದೆ (ಸಮ್ಮೋಹಿತರಾಗಿ) ನಿಂತ ಜಂಗಮರುಗಳ (ಸ್ಥಿತಿಯನ್ನು ನೋಡಿ) ಏನು ಹೇಳಲೂ ತೋಚದೆ ಬಸವ ದಂಡಾಧಿಪತಿಯು ಇದ್ದನು. ೯. "ಇಂದು ಬಸವನು ಹೊಸತು ಮಾಡಿದನು. ಜಂಗಮರು ಹಸಿದು ಇಲ್ಲಿಗೆ ದಯಾಮಾಡಿಸಿದರೆ ಈ ಕಡೆ ಗಮನಹರಿಸುವುದಿಲ್ಲ. (ಹೀಗಿರಲು) ಅವನು (ನಮ್ಮನ್ನು) ಉಪಚರಿಸುವುದು ಇನ್ನೆಲ್ಲಿ ಬಂತು? ಅವನಾದರೊ ಇಂದ್ರಜಾಲದ ಮನ್ನಣೆವಂತನಿಗೆ ವಶವಾದನು. ಆತನ ಚಿಂತೆ ಇನ್ನು ನಮಗೇಕೆ?" ಎಂದು ಜಂಗಮಸಮೂಹವು ಎದ್ದು ನಡೆಯಿತು.

ಘೋರನಲ್ಲಿಂದುಭಯ ಶಂಖವ
ಪೂರವಿಸಿಕೊಳುತೆದ್ದು ಹೋದರು
ಸಾರಭಕ್ತಿಯ ಶರಧಿಯಱಿದನು ಬಳಿಕಲಾ ಹದನ
ದೂರವಾದೆನೆ ಸಮಯಕವರುಪ
ಚಾರಗಳ ನಾನವರಿಗೊದಗದೆ
ಮೇರೆದಪ್ಪಿದೆನೇ ಶಿವಾ ಎನುತಿರ್ದ ಬಸವಣ್ಣ ೧೦

ನಾವು ಬಡಜಂಗಮವು ಬಂದೊಡೆ
ನೀವು ನಮ್ಮ ಸುತುಷ್ಟಿಬಡಿಸದ
ದಾವ ಕಾರಣ ನೀನು ಚಿಂತಿಸುತಿರ್ದೆ ಬಸವಣ್ಣ
ಭಾವಿಸುವೊಡಾ ಸಾಧನದ ಸಂ
ಭಾವನೆಗಳು ಸಮಗ್ರವವನಿ
ನ್ನಾವನಾರೋಗಿಸುವನ್ಯೆ ಪ್ರಭುರಾಯ ಹೇಳೆಂದ ೧೧

ಮೀಱಿ ನುಡಿವೊಡೆ ನಿನ್ನೊಳಗೆ ನಾ
ನಾಱಿ ಲಕ್ಕದ ಮೇಲೆ ತೊಂಬ
ತ್ತಾಱುಸಾವಿರ ಜಂಗಮವು ಸಂತುಷ್ಟಿಬಡುವಂತೆ
ತೋಱುವೆನು ಮೊದಲೆನ್ನ ಹಸಿವಿನ
ದೂಱ ನೀ ದಿಟ ನಿಲಿಸಬಲ್ಲೊಡೆ
ಮಾಱುಮಾತುಗಳೇನುಕಾರಣ ಬಸವ ಕೇಳೆಂದ ೧೨

ಎನಲು ಪನ್ನೀರಿನಲಿ ಪಾದಾ
ರ್ಚನೆಯ ಮಲಯಜಹಿಮಗಳನು ಲೇ
ಪನವ ಮೌಕ್ತಿಕದಕ್ಷತೆಯ ನವಕುಸುಮಪೂಜೆಗಳ
ವಿನುತ ಧೂಪವ ರತ್ನದೀಪವ
ನನುಗೊಳಿಸಿ ವಂದಿಸಿದನೀ ಪರಿ
ಮನವೊಲಿದು ಬಸವಣ್ಣನಾ ಪ್ರಭುಲಿಂಗಮೂರ್ತಿಯನು ೧೩

೧೦. ಜೋರಾಗಿ ಎಲ್ಲರೂ ಶಂಖಧ್ವನಿ ಮಾಡುತ್ತಾ ಅಲ್ಲಿಂದ ಕಾಲ್ತೆಗೆದರು. ಅನಂತರ ಶ್ರೇಷ್ಠಭಕ್ತಿಯ ಸಮುದ್ರನಾದ ಬಸವನು ಆ ಸುದ್ದಿಯನ್ನು ತಿಳಿದನು. "ಅವರನ್ನು ಸತ್ಕರಿಸಬೇಕಾದ ಧರ್ಮದಿಂದ ದೂರವಾದೆನೆ, ಅವರನ್ನು ಉಪಚರಿಸಲು ನೆರವಾಗದೆ ನಿಯಮತಪ್ಪಿದೆನೆ, ಶಿವಾ" ಎಂದು ಬಸವಣ್ಣನು (ನೊಂದು) ನುಡಿಯುತ್ತಿದ್ದನು. ೧೧. "ಬಸವಣ್ಣಾ, ಬಡಜಂಗಮರಾದ ನಾವು ಬಂದರೆ ನೀನು ನಮ್ಮನ್ನು ಸಂತೃಪ್ತಿಗೊಳಿಸದೆ ಏನು ಕಾರಣದಿಂದ ಚಿಂತಿಸುತ್ತಿದ್ದೆ? ಭಾವಿಸುವುದಾದರೆ ಆರೋಗಣೆಯ ಸಮಸ್ತ ಸಾಮಗ್ರಿಗಳನ್ನು ಸನ್ಮಾನವನ್ನು ಇನ್ನಾವನು ಸ್ವೀಕರಿಸುವನು ಹೇಳು" ಎಂದು ಪ್ರಭುರಾಯನು ಬಸವಣ್ಣನನ್ನು ಪ್ರಶ್ನಿಸಿದನು. ೧೨. "ಬಸವ ಕೇಳು, ಹೆಚ್ಚಿಗೆ ಹೇಳುವುದಾದರೆ ನಿನ್ನಲ್ಲಿಗೆ ಬಂದಿರುವ ಲಕ್ಷದ ಮೇಲಿನ ತೊಂಬತ್ತಾರು ಸಾವಿರ ಜಂಗಮರು ಚೆನ್ನಾಗಿ ತೃಪ್ತಿಗೊಳ್ಳುವಂತೆ ತೋರಿಸುವೆನು. ಮೊದಲು ನನ್ನ ಹಸಿವಿನ ಚಿಂತೆಯನ್ನು ನೀನು ನಿಜವಾಗಿಯೂ ನಿಲ್ಲಿಸಬಲ್ಲವನಾದರೆ ಬೇರೆ ಮಾತೇಕೆ" ಎಂದು ಪ್ರಭು ನುಡಿದನು. ೧೩. ಹೀಗೆಂದು ಪ್ರಭು ನುಡಿಯಲು ಪನ್ನೀರಿನಿಂದ ಪಾದಗಳನ್ನು ತೊಳೆದು ಪೂಜೆಮಾಡಿ, ಮಲಯ

ಎಸೆವ ನವರತ್ನಾಳಿಯಲಿ ತೆ
ತ್ತಿಸಿದ ಹೊನ್ನಡ್ಡಣಿಗೆಗಳು ಮಿಗೆ
ಪಸರಿಸಿದ ಪರಿಮಾಣಗಳು ಕೆಲವಟ್ಟಲೋಳಿಯಲಿ
ಬಿಸಿಬಿಸಿಯ ಪರಿಪಾಕತೆಯ ಷಡು
ರಸಮಯಂಗಳ ಬೋನವನು ಗಡ
ಣಿಸಿ ಸಮರ್ಪಿಸಿದನು ಮಹೋತ್ಸಾಹದಲಿ ಬಸವಣ್ಣ ೧೪

ತೆಗೆದನೊಂದೆವೆ ಹಳಚುವದಱೊಳ
ಗಗಲಲಿಕ್ಕಿದ ಬೋನದೊಳಗೊಂ
ದಗುಳು ಮಿಗದಂತೆಲ್ಲವನು ಬಸವಣ್ಣನದ ಕಂಡು
ಹೊಗಳಿ ಹಿಗ್ಗುತ ಹರುಷದಲಿ ಮಿಗೆ
ಮೊಗಮೊಗದು ತಂದೊಟ್ಟಲಂತವ
ನಗಿದನಾಗಳೆ ನಿಮಿಷದೊಳಗಾ ಪ್ರಭು ವಿನೋದದಲಿ ೧೫

ಊಡಬಹುದಿಂತುಂಬ ದೇವಗೆ
ನೀಡಬಹುದಹುದಲ್ಲವೆಂಬೀ
ಖೋಡಿಯಿಲ್ಲದೆ ಕೊಂಡು ಸುಖಿಸುವ ಸರ್ವಭಕ್ಷಂಗೆ
ಮಾಡಿ ಮನೆಗಳಲಿದ್ದ ಬೋನವ
ತೋಡಿ ತನ್ನಿಯೆನಲ್ಕೆ ಪುನರಪಿ
ನೀಡತೊಡಗಿದರೆಂಟು ದೆಸೆಯಲಿ ಬಸವ ನೇಮಿಸಲು ೧೬

ಪರ್ವತದಲ್ಲಿ ಹುಟ್ಟಿದ ತಣ್ಣನೆಯ ಗಂಧವನ್ನು ಲೇಪಿಸಿ, ಮುತ್ತಿನ ಅಕ್ಷತೆ, ಹೊಸದಾದ ಹೂವುಗಳಿಂದ ಪೂಜೆ ಮಾಡಿ, ಹೊಗಳಲ್ಪಟ್ಟ ಧೂಪ, ರತ್ನದೀಪಗಳನ್ನು ಸಜ್ಜುಗೊಳಿಸಿ (ಬೆಳಗಿ) ಈ ರೀತಿ ಮನಃಪೂರ್ವಕವಾಗಿ ಬಸವಣ್ಣನು ಆ ಪ್ರಭುಲಿಂಗಮೂರ್ತಿಯನ್ನು ವಂದಿಸಿದನು. ೧೪. ಬಸವಣ್ಣನು ಉತ್ಸಾಹದಿಂದ ನವರತ್ನಗಳನ್ನು ಕೆತ್ತಿದ ಚಿನ್ನದ ಮೂರುಕಾಲಿನ ಮಣೆಗಳು, ಹೆಚ್ಚಾಗಿ ಹರಡಿದ ತಟ್ಟೆ ಬಟ್ಟಲುಗಳು, ಬಿಸಿಬಿಸಿಯಾದ ಚೆನ್ನಾಗಿ ಬೆಂದ ಷಡ್ರಸಭರಿತವಾದ ಅನ್ನ ಇವನ್ನು ಒಟ್ಟುಗೂಡಿಸಿ ಪ್ರಭುವಿಗೆ ಸಮರ್ಪಿಸಿದನು. ೧೫. ಒಮ್ಮೆ ರೆಪ್ಪೆ ಬಡಿಯುವುದರೊಳಗೆ ತಟ್ಟೆಯಲ್ಲಿ ಬಡಿಸಿದ ಆಹಾರವನ್ನು ಒಂದಗಳೂ ಮಿಗದಂತೆ ಪ್ರಭುವು ಸ್ವೀಕರಿಸಿದನು. ಅದನ್ನು ಕಂಡ ಬಸವಣ್ಣನು (ಪ್ರಭುವನ್ನು) ಹೊಗಳಿ, ಉಬ್ಬುತ್ತಾ ಸಂತಸದಿಂದ ಹೆಚ್ಚು ಹೆಚ್ಚಾಗಿ ತೆಗೆದು ತೆಗೆದು ತಂದು ಬಡಿಸಲು ಕೂಡಲೆ ಒಂದು ನಿಮಿಷದೊಳಗೇ ಪ್ರಭು ವಿನೋದದಿಂದ ಅವೆಲ್ಲವನ್ನೂ ತಿಂದನು. ೧೬. ಹೀಗೆ ಊಟಮಾಡುವ ದೇವನಿಗೆ ಬಡಿಸಲು ಸಾಧ್ಯವೆ? ಬೇಕು-ಬೇಡ ಎನ್ನದೆ ಕೊರತೆಯಿಲ್ಲದೆ ಸ್ವೀಕರಿಸಿ ಸುಖಿಸುವ ಈ ಸರ್ವಭಕ್ಷನಿಗೆ ನೀಡಬಹುದೆ? ಮನೆಗಳಲ್ಲಿ ಅಡಿಗೆಮಾಡಿ ಇಟ್ಟಿದ್ದ ಆಹಾರ ಪದಾರ್ಥಗಳನ್ನು ತೋಡಿ ತೆಗೆದುಕೊಂಡು ಬನ್ನಿ ಎನ್ನಲು, ಬಸವನ ನೇಮಕದಂತೆ ಎಂಟೂ ದಿಕ್ಕುಗಳಿಂದ ಮತ್ತೆ ಮತ್ತೆ (ತಂದು) ಬಡಿಸತೊಡಗಿದರು.

ಹೊನ್ನ ಹೆಡಗೆಗಳಡಿಗಡಿಗೆ ರಾ
ಜಾನ್ನದೋಗರ ತುಂಬಿ ಭಕ್ತರ
ಚೆನ್ನ ಹಸ್ತಂಗಳಲಿ ಬರುತಿರ್ದುವು ಸಮಗ್ರದಲಿ
ಎಣ್ಣೆಯೂರಿಗೆಯಿಡ್ಡಲಿಗೆ ಕಡು
ಸಣ್ಣ ಸೇವಗೆ ಸರವಳಿಗೆ ಮಿಗೆ
ಕಣ್ಣಗಾರಿಗೆಯೊಟ್ಟುತಿರ್ದುವು ದೇವನಿದಿರಿನಲಿ ೧೭

ಕ್ಷೀರಗಾರಿಗೆಯೊಟ್ಟಲನು ಬೆ
ಚ್ಚೂರಿಗೆಯ ಬಣಬೆಗಳನೊಡೆಗಳ
ತೋರ ರಾಶಿಯ ಶಾಳಿ ಸೊಪ್ಪುಳಿ ಘೇಣಿ ಪರಡಿಗಳ
ನೀರವತ್ತಿಗೆ ತಱಗು ಕಡಬುಗ
ಳೇರಿಗಳನೊಟ್ಟಿದರೆ ಕಾಣುತ
ಘೋರನೊಂದೇ ತುತ್ತಿನಲಿ ಕಬಳಿಸಿದ ಗುರುರಾಯ ೧೮

ಪ್ರೀತಿಯಿಂದಾರೋಗಿಸುವ ಗುರು
ವೀತನಹುದೆನ್ನೊಯೆಡೆಯನೇ ಪರಿ
ಯಾತನಾದೊಡೆ ನೀಡುವೆನು ತಾ ಮಚ್ಚುವಂತೆನುತ
ಓತು ಮತ್ತೆ ಸಮಸ್ತ ಭಕ್ಷ್ಯ ಸ
ಮೇತವನು ಪಾಯಸಗಳನು ನವ
ನೀತ ಸದ್ಯೋಘೃತವನರ್ಪಿಸುತಿರ್ದ ಬಸವಣ್ಣ ೧೯

ಮುಸುಡ ಮುಂದಕೆ ತಂದು ಮಿಗೆ ತೋ
ಱಸದ ಮುನ್ನವೆ ಸಕಲ ಪಾಕ
ಪ್ರಸರವೆಲ್ಲವನೊಂದು ನಿಮಿಷಾರ್ಧದಲಿ ಕಬಳಿಸಿದ
ದೆಸೆದೆಸೆಯಲರ್ಪಿಸುತಲಿರೆ ಭ
ಕ್ಷಿಸಿದನವನಲ್ಲಲ್ಲಿ ಗುರುವಿನ
ಹಸು ಮಹೋನ್ನತವಾಗುತಿರ್ದುದು ಲೋಕ ಬೆಱಗಾಗೆ ೨೦

೧೭. ಚಿನ್ನದ ಹೆಡಗೆಗಳಲ್ಲಿ ಮೇಲಿಂದ ಮೇಲೆ ರಾಜರು ಉಣ್ಣುವ ಅನ್ನ, ತಿನಿಸುಗಳು ತುಂಬಲ್ಪಟ್ಟ ಭಕ್ತರ ಶುದ್ಧಹಸ್ತಗಳಿಂದ ಸರ್ವಸ್ವವೂ ಬರುತ್ತಿದ್ದವು. ಎಣ್ಣೆ, ಊರಿಗೆ, ಇಡ್ಡಲಿ, ಕಿರಿಸೇವಗೆ, ಸರವಳಿಗೆ, ಕಣ್ಣಗಾರಿಗೆ-ಇವುಗಳನ್ನು ಪ್ರಭುವಿನ ಇದಿರಿನಲ್ಲಿ, ಸುರಿಯುತ್ತಿದ್ದರು. ೧೮. ಹಾಲುಂಡಿಗೆಯ ರಾಶಿಯನ್ನು, ಬೆಚ್ಚೂರಿಗೆಯ ಮೆದೆಗಳನ್ನು, ಒಡೆಗಳ ದೊಡ್ಡ ರಾಶಿಯನ್ನು, ಅನ್ನ, ಸೊಪ್ಪು, ಹುಳಿ, ಘೇಣಿ, ಪರಡಿ, ನೀರವತ್ತಿಗೆ, ತರಗು, ಕಡಬುಗಳ ಏರಿಗಳನ್ನು ಹಾಕಲು ಅವನ್ನು ತಕ್ಷಣ ಗುರುರಾಯನು ಒಂದೇ ತುತ್ತಿಗೆ ಕಬಳಿಸಿದನು. ೧೯. "ಪ್ರೀತಿಯಿಂದ ಊಟಮಾಡುವ ಗುರುವು ಈತನಾಗಿರುವನು. ನನ್ನ ಒಡೆಯನು ಈ ರೀತಿಯವನಾದರೆ ಅವನು ಮೆಚ್ಚುವಂತೆ ಕೊಡುವೆನು" ಎಂದು ಸಂತೋಷದಿಂದ ಮತ್ತೆ ನಾನಾ ವಿಧವಾದ ಭಕ್ಷ್ಯಗಳನ್ನು, ಪಾಯಸ, ಒಳ್ಳೆಯ ಬೆಣ್ಣೆ ತುಪ್ಪಗಳನ್ನು ಬಸವಣ್ಣನು ಅರ್ಪಿಸುತ್ತಿದ್ದನು. ೨೦. ಬಗ್ಗಿ ನೋಡುವ ಮುನ್ನವೆ ಆಹಾರ ಪದಾರ್ಥಗಳನ್ನೆಲ್ಲಾ ಅರೆನಿಮಿಷದಲ್ಲಿ ತಿಂದನು. ದಿಕ್ಕು ದಿಕ್ಕುಗಳಿಂದ ಆಹಾರವನ್ನು

ದಂಡನಾಥಂಗೆನಿತೆನಿತುವು
ದ್ದಂಡತೆಯ ದಾಸೋಹ ಧೈರ್ಯದ
ದಂಡೆ ಹೆಚ್ಚಿದುದದಕೆ ಶತಸಾವಿರಕೆ ಮೆಗ್ಗಳಿಸಿ
ಮಂಡಳಿಸಿ ಮಾಱಾಂತು ಮಿಗೆ ಮುಂ
ಕೊಂಡು ಗುರು ಹಸಿದುಣುತಲಿರ್ದನು
ಕಂಡುದಿಲ್ಲಾ ಮಹಿಮರಿಬ್ಬರ ಮಾಟಗಳ ಕಡೆಯ ೨೧

ಹೊನ್ನ ಕೊಪ್ಪರಿಗೆಗಳ ಪಾನವ
ಹೊನ್ನ ಕೊಪ್ಪರಿಗೆಗಳ ತುಪ್ಪವ
ಹೊನ್ನ ಕೊಪ್ಪರಿಗೆಗಳ ಪಾಯಸ ಫಳದ ಶಿಖರಿಣಿಯ
ಹೊನ್ನ ಕೊಪ್ಪರಿಗೆಗಳ ಬೋನವ
ತನ್ನ ಮುಂದಕೆ ತಂದು ನಿಲಿಸಿದ
ಮುನ್ನಲಾರೋಗಿಸಿದನಾ ಪ್ರಭುಲಿಂಗ ನಸುನಗುತ ೨೨

ಹೆಡೆಗೆಗಳಲೇ ಭಕ್ಷ್ಯ ಮಾಡಿದ
ಮಡಕೆಗಳಲೇ ಶಾಖ ತುಂಬಿದ
ಕುಡಿಕೆಗಳಲೇ ಪಕ್ವ ಫಲ ಸಂಕುಲವ ಸಂಡಣಿಸಿ
ಅಡಕುತಿರ್ದರು ಭಕ್ತರೆಲ್ಲರು
ತುಡುಕಿ ಕಬಳಿಸುತಿರ್ದನಲ್ಲಮು
ನೆಡೆಬಿಡಂಗಳ ಕಾಣೆನಾತನ ದೀಪನೋತ್ಸವಕೆ ೨೩

ಕಟ್ಟುಮಂಡಗೆ ಹಾಲು ಸಕ್ಕರೆ
ಗಟ್ಟಿ ಮೊಸರುಂಡೆಗಳ ರುಚಿಗಳ
ಮೊಟ್ಟೆಯನೆ ಮುಂದಿಡುತಲುಪ್ಪಿನಕಾಯ ಕಚರಿಗಳ
ಬಟ್ಟ ಸಂಡಗೆ ಬಾಳುಕಂಗಳ
ನೊಟ್ಟುತಿರ್ದರು ಬೇಸಱದೆ ಬೆಂ
ಬಿಟ್ಟುದಿಲ್ಲಾ ಪ್ರಭುವಿನಾರೋಗಣೆಯ ಸಡಗರಣೆ ೨೪

ಅರ್ಪಿಸುತ್ತಿರಲು ಅವೆಲ್ಲವನ್ನು ಆಗಾಗಲೇ ಮುಗಿಸುತ್ತಿದ್ದನು. ಲೋಕವೇ ಆಶ್ಚರ್ಯಗೊಳ್ಳು ವಂತೆ ಗುರುವಿನ ಹಸಿವು ಅತಿಶಯವಾಗುತ್ತಿದ್ದಿತು. ೨೧. ದಂಡನಾಥ ಬಸವಣ್ಣನಿಗೆ ಎಷ್ಟೆಷ್ಟು ಹೆಮ್ಮೆ ದಾಸೋಹದ ಧೈರ್ಯಗಳ ಮಾಲೆ ಹೆಚ್ಚಿತೊ ಅದಕ್ಕೆ ನೂರು ಸಾವಿರ ಅಧಿಕವಾಗಿ ಗುರುವಿಗೆ (ಹಸಿವು) ಆವರಿಸಲು ಅವನು ಸಿದ್ಧನಾಗಿ ಮುಂದಾಗಿ ಉಣ್ಣುತ್ತ ಲಿದ್ದನು. ಆ ಮಹಿಮಾವಂತರಿಬ್ಬರ ಕಾರ್ಯಗಳ ಕೊನೆಯನ್ನು ಕಂಡುದಿಲ್ಲ. ೨೨. ಚಿನ್ನದ ಕೊಪ್ಪರಿಗೆಗಳಲ್ಲಿ ಪಾನೀಯಗಳನ್ನು, ತುಪ್ಪವನ್ನು, ಹಣ್ಣಿನ ಗುಡ್ಡೆಗಳನ್ನು ಇನ್ನಿತರ ಆಹಾರ ಪದಾರ್ಥಗಳನ್ನು ತನ್ನ ಮುಂದೆ ತಂದಿರಿಸುವ ಮುನ್ನವೇ ಪ್ರಭುಲಿಂಗನು ನಸುನಗುತ್ತಾ ಸ್ವೀಕರಿಸಿದನು. ೨೩. ಭಕ್ತರೆಲ್ಲರು ದೊಡ್ಡ ಹೆಡಗೆಗಳಲ್ಲಿ ಆಹಾರ ಪದಾರ್ಥಗಳನ್ನು (ತುಂಬಿ) ಅರ್ಪಣೆ ಮಾಡಿದರು. ಮಡಕೆ ಕುಡಿಕೆಗಳಲ್ಲೇ ಕಾಯಿಪಲ್ಲೆ ಹಣ್ಣುಗಳನ್ನು ತುಂಬಿ ಅರ್ಪಿಸಿದರು. ಅಲ್ಲಮ ಅವೆಲ್ಲವನ್ನೂ ಆತುರಾತುರವಾಗಿ ಹಿಡಿದು ಕಬಳಿಸುತ್ತಿದ್ದನು. ಆತನ ಹುರುಪಿನ ಸಡಗರದಲ್ಲಿ ಬಿಡುವೇ ಕಾಣುತ್ತಿರಲಿಲ್ಲ. ೨೪. ಕಟ್ಟಿದ ಹಂಡೆಗಳಲ್ಲಿ ಹಾಲು ಸಕ್ಕರೆ, ಗಟ್ಟಿಮೊಸರಿನ ಉಂಡೆಗಳ ರುಚಿಯ ಮೊತ್ತವನ್ನೇ ಮುಂದಿಡುತ್ತಾ

ಮಾಡುತಿರಹೇಳಡಿಗೆಗಳ ನೆಱೆ
ನೀಡುತಿರಹೇಳಾದ ಬೋನವ
ಕೂಡುತಿರಹೇಳಖಿಳವೆನಿಸಿದ ಸಕಲ ಸಾಧನವ
ತೋಡಿ ತರಹೇಳಿದ್ದುದೆಲ್ಲವ
ನೋಡಬೇಹುದು ದೇವನೂಟದ
ಗಾಡಿಕೆಯನೆಂದೆನುತಲಬ್ಬರಿಸಿದನು ಬಸವಣ್ಣ ೨೫

ಆತ ಹೇಳದ ಮುನ್ನಲಾತನ
ಮಾತು ಹಿಂಚಿತು ಮಿಂಚಿತೋ ಎನ
ಲಾತು ಬಂದುವು ಮನೆಯಲಾದ ಸಮಸ್ತ ಸಾಧನವು
ಪ್ರೀತಿ ಮಿಗಲಾ ಬಂದ ವಸ್ತುವ
ನೋತು ನೀಡಿದ ಬಯಲ ಬಸುಱಲಿ
ಕೌತುಕವನೇ ನಟಿಸುತಿರ್ದನು ಗುರು ವಿನೋದದಲಿ ೨೬

ಉಂಬನೊಬ್ಬನೆ ಪಕ್ವ ಫಲಗಳ
ನಿಂಬುಗೊಟ್ಟೆಯ್ದಿಸುವರಗಣಿತ
ಕೊಂಬನೊಬ್ಬನೆ ಕೋಟಿಮುಖದಲಿ ನೀಡಿದೆಲ್ಲವನು
ತುಂಬಿ ತುತ್ತಿದ ಹೊಟ್ಟೆ ನೆಱೆ ಘಾ
ರೆಂಬುತಿರ್ದುದು ಮತ್ತೆಯಲ್ಲಮ
ನುಂಬುದಕೆ ಕಡೆಗಾಣೆವೆನುತಿರ್ದುದು ಗಣಸ್ತೋಮ ೨೭

ಉಪ್ಪಿನಕಾಯಿ, ಗೊಜ್ಜು, ದುಂಡಗಿನ ಸಂಡಿಗೆ, ಬಾಳಕ ಇವುಗಳನ್ನು ಬಡಿಸುತ್ತಾ ಇರಲು ಪ್ರಭುವು ಊಟದ ಸಡಗರದಲ್ಲಿ ಬೇಸರ ಹೊಂದಿ ಯಾವುದನ್ನೂ ಬಿಡಲಿಲ್ಲ. ೨೫. "ಅಡುಗೆಯನ್ನು (ಬಿಡದೆ) ಮಾಡುತ್ತಿರಲು ಹೇಳು. ಸಿದ್ಧವಾದ ಅನ್ನವನ್ನು ಬಡಿಸುತ್ತಿರಲು ಹೇಳು. ಇದ್ದುದೆಲ್ಲವನ್ನೂ ತೋಡಿ ತರಲುಹೇಳು. ಪ್ರಭುದೇವನ ಊಟದ ವಿಲಾಸವನ್ನು ನೋಡಬೇಕು" ಎಂದು ಬಸವಣ್ಣನು ಅಬ್ಬರಿಸಿದನು. ೨೬. ಬಸವಣ್ಣನು ಹೇಳುವುದಕ್ಕೆ ಮುನ್ನವೇ ಮನೆಯಲ್ಲಿ ಮಾಡಿದ ಸಕಲ ಆಹಾರ ಪದಾರ್ಥಗಳು ಬಂದುವು. ಪ್ರಭುವು ಅತಿಶಯವಾದ ಪ್ರೀತಿಯಿಂದ ಕೂಡಿ, ಬಂದ ವಸ್ತುಗಳೆಲ್ಲವನ್ನು ಹೊಟ್ಟೆಗೆ ತುಂಬಿಕೊಳ್ಳುತ್ತ ತುದಿಮೊದಲಿಲ್ಲದ ಸಂತೋಷದಿಂದ (ಎಲ್ಲರೂ) ಆಶ್ಚರ್ಯಪಡುವಂತೆ ವಿನೋದದಿಂದ ನಟಿಸುತ್ತಿದ್ದನು. ೨೭. "ಮಾಗಿದ ಹಣ್ಣುಗಳನ್ನೆಲ್ಲಾ ಸವಿಯುವವನು ಒಬ್ಬನೆ. (ಆದರೆ) ಅದನ್ನು ಹೊತ್ತುತಂದು ಬಡಿಸುವವರು ಅನೇಕರು. ಕೋಟಿಸಂಖ್ಯೆಯ ಜನರು ನೀಡುತ್ತಿದ್ದರು. ಅದೆಲ್ಲವನ್ನು ಸ್ವೀಕರಿಸುವವನು ಒಬ್ಬನೇ. ನುಂಗಿ ತುಂಬಿದ ಹೊಟ್ಟೆ ಡರ್ರೆಂದು ತೇಗುತ್ತಿದ್ದಿತು. ಆದಾಗ್ಯೂ ಅಲ್ಲಮ ಉಣ್ಣುವುದರ ಕೊನೆಯನ್ನೇ ಕಾಣುತ್ತಿಲ್ಲ" ಎಂದು ಗಣಸಮೂಹವು ನುಡಿಯುತ್ತಿದ್ದಿತು.

ಆವ ಬೇಗದಲಾಗಹುದೊ ಮ
ತ್ತಾವ ಬೇಗದಲೀತನೀವನೊ
ಆವ ಬೇಗದಲಾತನುಂಬನೊ ಶಿವ ಮಹಾದೇವ
ಭಾವಿಸುವೊಡಾ ಚಳಬಳಿಕೆಯನು
ತಾವೆ ಬಲ್ಲರು ದೇವಭಕ್ತರು
ನಾವೆ ತಿಳಿವೊಡೆ ನಮ್ಮ ಹವಣಲ್ಲೆಂದುದಖಿಳಜನ ೨೮

ಏನು ಹೇಳುವೆನಾವ ಮುಖದಲಿ
ಬೋನವೆಯ್ದಿದ ದೀಪನಪ್ರಭೆ
ಹೀನವಾಗದು ಸಚ್ಚಿದಾನಂದಸ್ವರೂಪಂಗೆ
ಊನವಾಗದು ಮಾಟದೊಂದಭಿ
ಮಾನ ಬಸವಗೆಯವರಿಗಿನ್ನು ಸ
ಮಾನವಾರು ಸದಾಶಿವಾ ಎಂದುದು ಗಣಸ್ತೋಮ ೨೯

ಅಲ್ಲಮಪ್ರಭುವುಂಬ ತವಕದ
ಭುಲ್ಲವಣೆಯನೆ ಕಂಡು ಹರಿಹರಿ
ದೆಲ್ಲ ಭಕ್ತರು ತಮ್ಮ ಮನೆಮನೆಗಳಲಿ ಮಾಡಿರ್ದ
ಸಲ್ಲಲಿತ ಪಕ್ವಾನ್ನಪಾನವ
ನೊಳ್ಳಿತಾಗೆಯೆ ತಂದು ಸಲಿಸಲು
ಪಲ್ಲವಿಸಿದುದು ಮತ್ತೆ ಹಸು ಗುರುವಿಂಗೆ ನೂರ್ಮಡಿಸಿ ೩೦

ಪುರದ ಬೀದಿಯೊಳಗಲ್ಲಿಗಲ್ಲಿಗೆ
ಹರಿಹರಿದು ಮನೆ ಮನೆಗಳೊಳು ಹೊ
ಕ್ಕುರವಣಿಸಿ ತಂದಡಕುತಿರ್ದರು ಸಕಲ ಸಾಧನವ
ನೆರೆದುದಾರೋಗಣೆಗೆ ನಿಮಿಷಕೆ
ಸರಿವುತಲ್ಲಮನಾನನಕೆಯು
ಚ್ಚರಿಯದಾಯಿತು ದೇವಭಕ್ತರ ಛಲದ ಚಳಬಳಿಕೆ ೩೧

೨೮. "ಯಾವ ವೇಗದಲ್ಲಿ ಪದಾರ್ಥಗಳು ಸಿದ್ಧವಾಗುತ್ತವೆಯೊ? ಮತ್ತಾವ ವೇಗದಲ್ಲಿ ಈತ ನೀಡುತ್ತಿರುವನೊ? ಯಾವ ವೇಗದಲ್ಲಿ ಪ್ರಭುವು ಉಣ್ಣುತ್ತಿರುವನೊ? ಶಿವ, ಮಹಾದೇವಾ ಭಾವಿಸುವುದಾದರೆ ಆ ಚಮತ್ಕಾರವನ್ನು ಅವರೇ ಬಲ್ಲರು. ನಾವು ಭಕ್ತರು ಮಾತ್ರವೇ ನಮಗೆ ತಿಳಿಯಲು ಸಾಧ್ಯವಿಲ್ಲ" ಎಂದು ಸಕಲ ಜನರು ನುಡಿದರು. ೨೯. "ಏನು ಹೇಳಲಿ, ಸಚ್ಚಿದಾನಂದಸ್ವರೂಪನಾದ ಪ್ರಭುವಿಗೆ ಯಾವ ಮುಖದಿಂದ ಆಹಾರ ಮುಟ್ಟಿತೊ? ಆ ಹುರುಪಿಗೆ ಕೊರತೆಯಾಗಲಿಲ್ಲ. ಬಸವನ ಕಾರ್ಯದ ಒಂದು ಗೌರವಕ್ಕೆ ಭಂಗವಿರಲಿಲ್ಲ. ಇವರೀರ್ವರಿಗೆ ಸಮಾನರಾರು ಸದಾಶಿವ" ಎಂದು ಗಣ ಸಮೂಹವು ನುಡಿಯಿತು. ೩೦. ಅಲ್ಲಮಪ್ರಭು ಉಣ್ಣುವ ಉತ್ಸಾಹದ ಸಂಭ್ರಮವನ್ನು ಕಂಡು ಭಕ್ತರು ನಡೆತಂದು, ತಮ್ಮ ಮನೆಗಳಲ್ಲಿ ಮಾಡಿದ್ದ ಯೋಗ್ಯವಾದ ಮೃಷ್ಟಾನ್ನ ಪಾನಗಳನ್ನು ಮಡಿಯಾಗಿ ತಂದು ಸಲ್ಲಿಸಲು ಗುರುವಿಗೆ ಮತ್ತೆ ಹಸಿವು ನೂರುಪಾಲು ಹೆಚ್ಚಿತು. ೩೧. ಪಟ್ಟಣದ ಬೀದಿಗಳಲ್ಲಿ ಅಲ್ಲಲ್ಲಿ ಓಡಾಡಿ ಮನೆಮನೆಗಳನ್ನು ಹೊಕ್ಕು ಉತ್ಸಾಹದಿಂದ ಸಕಲ ಆಹಾರ ಪದಾರ್ಥಗಳನ್ನು ತಂದು ಸುರಿಯುತ್ತಿದ್ದರು. (ಹೀಗೆ) ಆಹಾರವು ಉಣ್ಣಲಿಕ್ಕೆ ಒಟ್ಟುಗೂಡಲು ಅವೆಲ್ಲ ನಿಮಿಷಮಾತ್ರದಲ್ಲಿ ಅಲ್ಲಮನ ಬಾಯನ್ನು

೨೩. ಪ್ರಭುದೇವರು ಆರೋಗಣೆ ಮಾಡಿದುದು ೩.೨೩

ಪರಿಪರಿಯ ಸೌಕರಿಯದೋಗರ
ಪರಿಪರಿಯ ಪಾಯಸ ಘೃತಂಗಳು
ಪರಿಪರಿಯ ನವನೀತ ಸಕ್ಕರೆ ತೋವೆ ಪಳದೆಗಳು
ಪರಿಪರಿಯ ಭಕ್ಷ್ಯಗಳು ನಾನಾ
ಪರಿಪರಿಯ ವನರುಹ ಫಲಂಗಳು
ಪರಿಪರಿಯ ಶಾಖದ ಸಮೂಹಗಳಿತ್ತರಲ್ಲಮಗೆ ೩.೨

ಹಲವು ರೀತಿಯ ಕಣಿಕದಡಿಗೆಯ
ಹಲವು ರೀತಿಯ ಹಿಟ್ಟಿನಡಿಗೆಯ
ಹಲವು ರೀತಿಯ ಪಾನವಂಬಲಿಯುಪ್ಪುಗಾಯಿಗಳ
ಹಲವು ರೀತಿಯ ತಕ್ರ ದಧಿಗಳ
ಹಲವು ರೀತಿಗಳಗ್ಘವಣಿಗಳ
ಸಲಿಸುತಿರ್ದರು ಭಕ್ತರಾ ಪ್ರಭುಲಿಂಗನಾನನಕೆ ೩.೩

ಅಂಬರವೆ ಬಾಯ್ದೆಱೆದು ಜೀರ್ಣಿಸಿ
ಕೊಂಬೊಡದಕಿನ್ನಾರು ದಿಟ ಸಾ
ಕೆಂಬ ತೆಱದಲಿ ತೇಗುವಂತುಣಲಿಕ್ಕಬಲ್ಲವರು
ಇಂಬುಗೊಟ್ಟರೆ ಸಕಲ ಲೋಕವ
ನುಂಬ ಮಹಿಮಗೆ ನೀಡುತ್ತೈದನೆ
ನಂಬಬಲ್ಲರೆ ಬಸವನೇ ಶಿವನೆಂದುದಖಿಳಜನ ೩.೪

ಜಂಗಮಕೆ ಭಕ್ತರಿಗೆ ಪ್ರತಿದಿವ
ಸಂಗಳಂ ತಾ ಮೂರು ಲಕ್ಕ ಜ
ನಂಗಳಿಗೆ ಸವೆದಿರ್ದ ಬಸವನ ಮನೆಯ ದಿವ್ಯಾನ್ನ
ಹಿಂಗದುಳಿದ ಸಮಸ್ತ ಭಕ್ತಗೃ
ಹಂಗಳಲಿ ತಂದಡಕಿದಗಣಿತ
ನುಂಗುತಿರ್ದನದೆಲ್ಲವನು ತಣಿವಿಲ್ಲದಲ್ಲಮನು ೩.೫

ಸೇರಿದುವು. (ಆಗ) ಶಿವಭಕ್ತರ ಛಲಯುಕ್ತವಾದ ಚಮತ್ಕಾರಕ್ಕೆ ಆಶ್ಚರ್ಯವುಂಟಾಯಿತು. ೩.೨. ನಾನಾ ಬಗೆಯ ಅನುಕೂಲಕರವಾದ ಆಹಾರ; ಬಗೆಬಗೆಯ ಪಾಯಸ, ತುಪ್ಪಗಳು; ಬಗೆಬಗೆಯ ಬೆಣ್ಣೆ, ಸಕ್ಕರೆ, ತೊವ್ವೆ, ಕಾಯಿ ಹುಳಿಗಳು, ಬಗೆಬಗೆಯ ತಿನಿಸುಗಳು, ವನದಲ್ಲಿ ಬೆಳೆದ ನಾನಾಬಗೆಯ ಹಣ್ಣುಗಳು, ಬಗೆಬಗೆಯ ಪಲ್ಯಗಳು ಇವುಗಳನ್ನು ಅಲ್ಲಮನಿಗೆ ಬಡಿಸಿದರು. ೩.೩. ಹಲವು ಬಗೆಯ ಕಣಿಕದ ಅಡಿಗೆ, ಹಿಟ್ಟಿನ ಅಡಿಗೆ, ಪಾನೀಯಗಳು, ಅಂಬಲಿ, ಉಪ್ಪಿನಕಾಯಿಗಳು, ಮಜ್ಜಿಗೆ ಮೊಸರು, ಪವಿತ್ರೋದಕಗಳು ಇವುಗಳನ್ನು ಆ ಭಕ್ತರು ಪ್ರಭುಲಿಂಗನ ಬಾಯಿಗೆ ನೀಡುತ್ತಿದ್ದರು. ೩.೪. "ಆಕಾಶವೇ ಬಾಯಿತೆರೆದು ಜೀರ್ಣಿಸಿಕೊಳ್ಳುವುದಾದರೆ ಅದಕ್ಕೆ ಮತ್ತಾರು ನಿಜವಾಗಿಯೂ ಸಾಕು ಎನ್ನುವ ರೀತಿಯಲ್ಲಿ, ತೃಪ್ತಿಯ ತೇಗು ಬರುವಂತೆ ಉಣ್ಣಲು ಬಡಿಸಬಲ್ಲರು? ಅವಕಾಶಕೊಟ್ಟರೆ ಸರ್ವಲೋಕವನ್ನೇ ಉಣ್ಣಬಲ್ಲ ಮಹಾಮಹಿಮನಿಗೆ ಬಸವನೇ ನೀಡುತ್ತಲಿರುವನು, ಶಿವಾ, ನಂಬಲು ಸಾಧ್ಯವೆ?" ಎಂದು ಸಮಸ್ತ ಜನರು ನುಡಿದರು. ೩.೫. ಪ್ರತಿದಿನವೂ ಮೂರುಲಕ್ಷಜನ ಜಂಗಮರಿಗೆ, ಭಕ್ತರಿಗೆ ಮಾಡಿದ್ದ ಬಸವನ ಮನೆಯ ದಿವ್ಯಾನ್ನ, ಸಮಸ್ತ ಭಕ್ತರ ಮನೆಯಿಂದ ತಂದ ಆಹಾರ ಪದಾರ್ಥಗಳಿಗಂತೂ ಲೆಕ್ಕವಿಲ್ಲ,

ಗಣಿಸುವೊಡೆ ಬ್ರಹ್ಮಾಂಡಕೋಟಿಗ
ಳಣಲಗೆಯ್ದಿದ ಹರಿ ವಿರಿಂಚಿಗ
ಳಿಣಿಕೆಗಡಿಮುಡಿದೋಱದಾ ಮಹಿಮಾವಲಂಬಂಗೆ
ಉಣಿಸುಗಳ ತಂದೊಟ್ಟಿ ಮುಟ್ಟಿಸಿ
ತಣಿಸುವೆನು ನೋಡೆನುತ ಪುನರಪಿ
ಹೊಣಕೆವಿಡಿದನು ತಾನೆ ತನ್ನಲಿ ಮತ್ತೆ ಬಸವಣ್ಣ ೩೬

ಕಣಜಗಳನೊಡೆದೊಡೆದು ತರಹೇ
ಳಿಣಿಸದಿರ್ದ ಸಮಸ್ತ ಭಂಡವ
ನುಣಿಸುಗಾಱನ ಪರಿಯ ನೋಡುವೆನೆನುತ ತಮತಮಗೆ
ಕಣಕ ಸಕ್ಕರೆ ತುಪ್ಪ ಗೋದುವೆ
ಚಣಗಿ ಹೆಸಱುದ್ದುಗಳನಡಕಿದ
ರಣಿವಱಿದು ಪುರದೊಳಗೆ ಬಸವಣ್ಣನ ನಿರೂಪದಲಿ ೩೭

ಶಾಳಿ ಸಾವಿರ ಪರಿಯು ಭರಣಿಯ
ಜೋಳ ಬರಗಲಸಂದೆ ಹಾರಕ
ಕೀಳು ಧಾನ್ಯ ಸಮೇತ ಕಂಡುಗ ಕೋಟಿ ಸಂಖ್ಯೆಯಲಿ
ಮೇಲೆ ಮೇಲಿಟ್ಟಣಿಸಿ ಭಕ್ತರು
ಲೀಲೆಯಲಿ ಹೊತ್ತಡಕುತಿರ್ದರು
ಹೇಳುವರೆ ಹೊಸತಾಯಿತಲ್ಲಮನೂಟದಾಟೋಪ ೩೮

ನೀಡುತಿರ್ದರು ಗಂಜಿಯಂಬಲಿ
ತೌಡು ನುಱುಗವಲಕ್ಕಿಗಚ್ಚನು
ಕೂಡೆ ಸಾರದ ಮೇಲೆ ಸಾರವ ಕಟ್ಟಿ ತನತನಗೆ
ಹಾಡದೆಣ್ಣೆಯ ಹೊಟ್ಟು ನುಚ್ಚಿನ
ಗೂಡೆಗಳನವ ನುಂಗಿ ಕಡು ಪಟು
ಮಾಡುತಿರ್ದನು ದೇವ ಮತ್ತೆ ಮಹಾ ಕ್ಷುಧಾಗ್ನಿಯನು ೩೯

ಅವೆಲ್ಲವನ್ನೂ ಅಲ್ಲಮನು ದಣಿವಿಲ್ಲದೆ ನುಂಗುತ್ತಿದ್ದನು. ೩೬. ಲೆಕ್ಕಿಸುವುದಾದರೆ ಬ್ರಹ್ಮಾಂಡ ಕೋಟಿಗಳನ್ನು (ತೃಪ್ತಿಪಡಿಸುವ) ಬಾಯಿಯಾಗಿರುವಂತಹ ಸಾಧನೆಗೆ ಪಾದ ಶಿರಸ್ಸುಗಳನ್ನು ಕಾಣಿಸದಂತಹ ಆ ಮಹಿಮಾನ್ವಿತನಾಗಿರುವ ಪ್ರಭುವಿಗೆ ಉಣಿಸುಗಳನ್ನು ತಂದು ರಾಶಿಹಾಕಿ, ಸಂತೃಪ್ತಿಗೊಳ್ಳುವಂತೆ ಮಾಡುವೆನು ನೋಡು ಎಂದು ಬಸವಣ್ಣನು ಮರಳಿ ತನಗೆ ತಾನೆ ಸ್ಪರ್ಧೆ ಹೂಡಿದನು. ೩೭. ಪಟ್ಟಣದೊಳಗಿರುವ ಕಣಜಗಳನ್ನೆಲ್ಲಾ ಒಡೆದೊಡೆದು ಲೆಕ್ಕಮಾಡದಿರುವ ಸಮಸ್ತ ಭಂಡಾರವನ್ನು ತರಹೇಳು, ಊಟ ಮಾಡುವವನ ಸ್ಥಿತಿಯನ್ನು ಪರೀಕ್ಷಿಸುವೆ ಎಂದು (ಆಜ್ಞೆಮಾಡಲು) ಕಣಕ, ಸಕ್ಕರೆ, ತುಪ್ಪ, ಗೋದುವೆ, ಚಣಗಿ, ಹೆಸರು, ಉದ್ದುಗಳನ್ನು ಬಸವಣ್ಣನ ಆಜ್ಞೆಯಂತೆ (ಪುರಜನರು) ಸಾಲಾಗಿ ರಾಶಿಹಾಕಿದರು. ೩೮. ಭಕ್ತರುಗಳು ಒತ್ತೊತ್ತಾಗಿ (ನಿಂತು) ಸಾವಿರ ಬಗೆಯ ಭರಣಿಯ ಜೋಳ, ಬರಗಲಸಂದೆ, ಹಾರಕ, ಕೀಳುಧಾನ್ಯ-ಇವುಗಳನ್ನು ಕೋಟಿಸಂಖ್ಯೆಯ ಕಂಡುಗಗಳನ್ನು ಮೇಲಿಂದಮೇಲೆ ಸಂತೋಷದಿಂದ ಹೊತ್ತು ಸುರಿಯುತ್ತಿದ್ದರು. ಹೇಳುವುದಾದರೆ ಅಲ್ಲಮನ ಊಟದ ಸಂಭ್ರಮ ಹೊಸತಾಯಿತು. ೩೯. ಗಂಜಿ, ಅಂಬಲಿ, ತೌಡು, ನುಚ್ಚವಲಕ್ಕಿ-ಇವುಗಳ ಜೊತೆಗೆ ಅತ್ಯಂತ ರುಚಿಕಟ್ಟಾದ ಅಳತೆಗೆ ಸಿಕ್ಕದ ಎಣ್ಣೆಯ ಹರಿವೆ, ಹೊಟ್ಟು,

೨೩. ಪ್ರಭುದೇವರು ಆರೋಗಣೆ ಮಾಡಿದುದು 

ನೆನೆದು ಹಿಡಿಯದ ಮುನ್ನಲರ್ಪಿತ
ನೆನೆದು ಸೋಂಕದ ಮುನ್ನಲರ್ಪಿತ
ನೆನೆದು ನೋಡದ ಮುನ್ನಲರ್ಪಿತ ಗುರುಪದಾಂಬುಜವ
ನೆನೆದೊಡಲ್ಲಿಯದಲ್ಲಿಯರ್ಪಿತ
ವೆನಿಸಿ ನಿರ್ವಯಲಾಗುತಿರ್ದುದು
ಘನತರದ ಸಾಧನಸಮಗ್ರತೆ ನಿಮಿಷಮಾತ್ರದಲಿ ೪೦

ಬಡಬನಣಲಿಗೆಯಾಲಿಕಲ್ಲಿನ
ಕಡಿಗಳಾನಲು ಬಲ್ಲುವೇ ಜಗ
ದೊಡೆಯನುಂಡಿಹೆನೆಂದೊಡಕಟಂತೊಂದು ಪಟ್ಟಣದ
ಒಡವೆ ನೆಱೆವುದೆ ಬಂದ ಭಂಡವ
ನೊಡಲೊಳಡಗಿಸಿಕೊಂಡನಾತನ
ಬೆಡಗ ಬಲ್ಲವರಿಲ್ಲವೇನೆಂದೆಂಬೆನಚ್ಚರಿಯ ೪೧

ವಿಶ್ವತೋಮುಖ ವಿಶ್ವತೋಕರ
ವಿಶ್ವತೋದರ ವಿಶ್ವತೋಪದ
ವಿಶ್ವತೋಮಯನೆನಿಸಿ ಮೆಱೆವ ಮಹಾಮಹಾತ್ಮಂಗೆ
ಶಾಶ್ವತಂಗಳನೀವ ಘನಮಹಿ
ಮಸ್ವರೂಪನ ಲೀಲೆಗಾವುದು
ವಿಶ್ವದೊಳಗರಿದೆನುತಲಿರ್ದುದು ಭಕ್ತಸಂದೋಹ ೪೨

ಪಂಚ ಪರುಷವನುಳ್ಳ ಬಸವನು
ಸಂಚಿಸಿದ ಸಾಧನಸಮಗ್ರತೆ
ಮುಂಚೆ ಜೀರ್ಣಿಸಿ ಹೋದುದೂಟದ ಮೊದಲಚೂಣಿಯಲಿ
ಮುಂಚುತಿರ್ದುದು ದೀಪನಪ್ರಭೆ
ಸಂಚಲಿಸದಲೆ ತೊಳಗಿ ಬೆಳಗಿನ
ಗೊಂಚಲಂದದಲಲ್ಲಮಪ್ರಭುರಾಯನಂಗದಲಿ ೪೩

ನುಚ್ಚುಗಳ ಗೂಡೆಗಳನ್ನು (ಮುಂದಿಡಲು ಆ ಪದಾರ್ಥಗಳನ್ನೆಲ್ಲಾ) ನುಂಗಿ ಅಲ್ಲಮಪ್ರಭುವು ತನ್ನ ಜಠರಾಗ್ನಿಯನ್ನು ವಿಶೇಷವಾಗಿ ಉದ್ದೀಪಿಸುತ್ತಿದ್ದನು. ೪೦. ಗುರುವಾದ ಪ್ರಭುವಿನ ಪಾದಕಮಲಗಳನ್ನು ನೆನೆದು ಹಿಡಿಯುವ ಮುನ್ನ, ನೆನೆದು ಸ್ಪರ್ಶಿಸುವ ಮುನ್ನ, ನೆನೆದು ನೋಡುವ ಮುನ್ನ (ಎಲ್ಲವೂ) ಅರ್ಪಿತವಾಗುತ್ತಿದ್ದುವು. ನೆನೆದರೆ ಅಲ್ಲಿ ಅದು ಅರ್ಪಿತವೆನ್ನಿಸಿ ಅಪಾರವಾದ ಸಾಧನಸಾಮಗ್ರಿಗಳು ನಿಮಿಷಮಾತ್ರದಲ್ಲಿಯೇ ಮಾಯವಾಗುತ್ತಿದ್ದುವು. ೪೧. ಬಡಬಾಗ್ನಿಯ ಬಾಯಿಯನ್ನು ಆಲಿಕಲ್ಲಿನ ತುಂಡುಗಳು ಎದುರಿಸಲು ಬಲ್ಲುವೆ? ಜಗತ್ತಿನ ಒಡೆಯನಾದವನು ಊಟಮಾಡುವೆನೆಂದರೆ ಅಯ್ಯೋ ಇಷ್ಟೊಂದು ಪುರದ ಸಾಮಗ್ರಿಗಳು ಸಾಕಾಗುವವೆ? ಬಂದಂತಹ ಭಂಡಾರವನ್ನು ಪ್ರಭುವು ತನ್ನ ದೇಹದೊಳಗೆ ಅಡಗಿಸಿಕೊಂಡನು. ಆತನ ವಿಲಾಸವನ್ನು ತಿಳಿದವರಿಲ್ಲ, ಏನು ಹೇಳಲಿ ಆ ಆಶ್ಚರ್ಯವನ್ನು! ೪೨. "ವಿಶ್ವವೇ ಮುಖ, ವಿಶ್ವವೇ ಕೈ, ವಿಶ್ವವೇ ಉದರ, ವಿಶ್ವವೇ ಪಾದ (ಹೀಗೆ) ವಿಶ್ವವ್ಯಾಪಿಯೆನ್ನಿಸಿಕೊಂಡು ಶೋಭಿಸುವ ಮಹಾಮಹಾತ್ಮನಿಗೆ, (ಭಕ್ತರಿಗೆ) ಶಾಶ್ವತ ಪದವನ್ನೀವ ಘನಮಹಿಮನ ಲೀಲೆಗೆ ಯಾವುದು ತಾನೇ ಅಸಾಧ್ಯ" ಎಂದು ಭಕ್ತಸಮೂಹ ನುಡಿಯುತ್ತಿತ್ತು. ೪೩. ಪಂಚಪರುಷ ಸಿದ್ಧಿಯುಳ್ಳ ಬಸವೇಶ್ವರನು ಸಂಗ್ರಹಿಸಿದ ಸಾಧನ ಸಾಮಗ್ರಿಗಳು ಊಟದ ಮೊದಲ ಭಾಗದಲ್ಲೇ ಮೊದಲಿಗೇ ಜೀರ್ಣವಾಗಿ ಹೋದುವು.

ಆವ ಮುಖದಲಿ ಬಂದು ಬೇಡಿದೊ
ಡೀವೆನಾತನಿಗೆಂಬ ಭಕ್ತಿಯ
ಸೇವೆಗೂಣೆಯವಾದುದೇ ಶಿವ ಶಿವ ಮಹಾದೇವ
ದೇವನೇ ಹಸಿದುಣುತಿಹನೆಯಿ
ನ್ನಾವ ಪರಿಯಲಿ ದಣಿಸುವೆನೊ ಮಹ
ದೇವ ಎನುತಲಿ ಮನದೊಳಗೆ ಬಸವಣ್ಣ ಚಿಂತಿಸಿದ ೪೪

ಕಳನೊಳಗೆ ಹಗೆ ಕಟ್ಟಬಂದಿರೆ
ಬಳಿಕ ಗರುಡಿಯ ಹೊಕ್ಕು ಸಾಧನೆ
ಗಳನು ಮಾಡಿಹೆನೆಂಬನಂತಿರೆ ಗುರುವೆ ಹಸಿದಿರಲು
ಸಲಿಸಲೊಲ್ಲದೆ ಬೋನಗಳನು
ಮ್ಮಳಿಸುವರೆ ಬಸವಣ್ಣ ಚಿಂತೆಯ
ತೊಲಗನೂಕೆಂದೆನುತಲಿರ್ದುದು ಭಕ್ತಿಬಂಧುಗಳು ೪೫

ಕಡುಗಲಿಗೆ ಕರುಳೊಗಲು ಕೈಯಲಿ
ಹಿಡಿದು ಸಮರಕೆ ನಡೆವನಲ್ಲದೆ
ಕಡೆಗೆ ಸಾರಲಿಬಹುದೆ ಭಕ್ತನ ಧನ ಸಮರ್ಪಿಸಲು
ಒಡಲು ಮನಗಳನೊಡನೆಯರ್ಪಿಸಿ
ಕಡೆಯ ಕಾಣಿಪುದೆಂದು ನುಡಿದರು
ಮಡಿವಳಯ್ಯನು ಚೆನ್ನಬಸವನು ಬಸವರಾಜಂಗೆ ೪೬

ತೊಳಗಿ ಬೆಳಗುವ ಮಿಂಚಿನ ಗೊಂಚಲಿನ ರೀತಿಯಲ್ಲಿ ಹುರುಪಿನ ಉತ್ಸಾಹವು ಪ್ರಭುರಾಯನ ದೇಹದಲ್ಲಿ ಚಂಚಲಗೊಳ್ಳದೆ ಹೊಮ್ಮುತ್ತಿದ್ದಿತು. ೪೪. "ಯಾವ ಮುಖದಲ್ಲಿ ಬಂದು ಬೇಡಿದರೂ ಬೇಡಿದಾತನಿಗೆ ಕೊಡುವೆನೆಂಬ ಭಕ್ತಿಯ ಊಳಿಗಕ್ಕೆ ಕೊರತೆ ಬಂದುದೆ, ಶಿವ ಶಿವಾ ಮಹಾದೇವ! ದೇವನೇ ಹಸಿದು ಉಣ್ಣುತ್ತಿರುವನಲ್ಲಾ! ಇನ್ನಾವ ರೀತಿಯಲ್ಲಿ ತೃಪ್ತಿಪಡಿಸಲಿ? ಮಹಾದೇವ" ಎಂದು ಮನದಲ್ಲಿ ಬಸವಣ್ಣನು ಚಿಂತಿಸಿದನು. ೪೫. "ವೈರಿಯು ಯುದ್ಧರಂಗಕ್ಕೆ ಬಂದಿರಲು ಅನಂತರ ತಾನು ಗರುಡಿಮನೆಗೆ ಹೋಗಿ ಸಾಧನೆಗಳನ್ನು ಮಾಡಿಬರುವೆನು ಎನ್ನುವವನಂತೆ ಗುರುವೇ ಹಸಿದಿರುವಾಗ ಆಹಾರವನ್ನು ಕೊಡಲೊಲ್ಲದೆ ದುಃಖಿಸುವರೆ? ಬಸವಣ್ಣಾ ಚಿಂತೆಯನ್ನು ಬದಿಗಿರಿಸು" ಎಂದು ಭಕ್ತಿಯ ಬಂಧುಗಳು ಸಮಾಧಾನಿಸುತ್ತಿದ್ದರು. ೪೬. ವೀರಾಧಿವೀರನಿಗೆ ಕರುಳು ಹೊರಬರಲು (ಆಗ ಆತ ಅದನ್ನು) ಕೈಯಲ್ಲಿ ಹಿಡಿದು ಯುದ್ಧಕ್ಕೆ ನಡೆಯುವನಲ್ಲದೆ ಪಕ್ಕಕ್ಕೆ ಸರಿಯುವನೆ? ಭಕ್ತನ ಧನವನ್ನು ಸಮರ್ಪಿಸಿ ಕೊನೆಗೆ ತನುಮನಗಳನ್ನೂ ಅರ್ಪಿಸಿ ಕೊನೆಗಾಣಿಸುವುದೆಂದು ಮಡಿವಾಳ ಮಾಚಿದೇವಯ್ಯ ಹಾಗೂ ಚೆನ್ನಬಸವಣ್ಣ ಬಸವರಾಜನಿಗೆ (ಹಿತ) ನುಡಿದರು.

ತೆತ್ತಿಗರು ತಾವಾದಕಾರಣ
ತತ್ತ ವೇಳೆಯಲಾದಿರೈ ದಿಟ
ಹೆತ್ತ ತಂದೆಗಳಹುದು ಮಡಿವಳ ಚೆನ್ನಬಸವಗಳು
ಹೊತ್ತು ಹೋಗದ ಮುನ್ನ ತನುವಿನ
ತುತ್ತ ನೀಡುವೆ ಗುರುವಿಗೆನುತಲಿ
ಚಿತ್ತದಲಿ ಹಾರೈಸುತಿರ್ದನು ಬಸವದಂಡೇಶ ೪೭

ಭಸಿತದಂಗದ ಭಾವಶುದ್ಧದ
ಮಿಸುಗುವಂತರ್ಮುಖದ ಬುದ್ಧಿಯ
ದಶವಿಧದ ಪ್ರಾಣೇಂದ್ರಿಯಂಗಳ ನಿರ್ವಿಕಾರತೆಯ
ಬಸವ ಬಸವಗಳಾಳ್ವನಾರೋ
ಗಿಸುವೊಡೋಗರವಾಗಿ ಬಂದನು
ನಸುನಗುತಲಾ ದೇವನೀಕ್ಷಿಸಿದನು ಕಟಾಕ್ಷದಲಿ ೪೮

ಹಸಿದು ಬಂದವನಲ್ಲವರ್ಥದ
ದೆಸೆಗೆ ಬಂದವನಲ್ಲ ಕಾಮದ
ಮಸೆಗೆ ಮನದಲಿ ನೊಂದು ಬಂದವನಲ್ಲ ನಾ ನಿನ್ನ
ಹಸರಿಸಿದ ದಾಸೋಹತನವನು
ಸಸಿನೆ ನೋಡಲು ಬಂದೆನಲ್ಲದೆ
ವ್ಯಸನದಾಸೆಗಳೆನ್ನಲುಂಟೇ ಬಸವ ಕೇಳೆಂದ ೪೯

ಶುದ್ಧ ಸಾಕ್ಷಾದಮೃತದೇಹದ
ಬದ್ದಿನಂಗುಣಲಿಕ್ಕುದುಂಟೇ
ನಿದ್ದ ಸಾಧನೆ ಕೆಟ್ಟುದಕಟಕಟೆಂದು ನೀನೆನಲು
ತಿದ್ದಬೇಕೆಸುತಾನೆ ಹವಣಿಸಿ
ಮೆದ್ದೆನಲ್ಲದೆ ದಿಟ ವಿಚಾರಿಸೆ
ಹೊದ್ದುವುವೆ ಹಸು ತೃಷೆಗಳೆನ್ನಲಿ ಬಸವ ಕೇಳೆಂದ ೫೦

೪೭. "ಸಂಬಂಧಿಗಳು ತಾವಾದ ಕಾರಣ ಒದಗಿಬಂದ ಕಾಲದಲ್ಲಿ ಸಹಾಯಕರಾದಿರಿ. ನಿಜವಾಗಿಯೂ ಮಡಿವಳಯ್ಯ ಚೆನ್ನಬಸವರುಗಳು ತಂದೆಯಾಗಿರುವರು. ಕಾಲ ಮಿಂಚುವ ಮುನ್ನವೇ ನನ್ನ ಶರೀರವನ್ನು ಗುರುವಿಗೆ ಆಹಾರವಾಗಿ ನೀಡುವೆ" ಎಂದು ಮನಸ್ಸಿನಲ್ಲಿ ಬಸವದಂಡಾಧಿಪತಿಯು ಯೋಚಿಸುತ್ತಿದ್ದನು. ೪೮. ಭಸ್ಮೋದ್ಧೂಳನ ದೇಹದ, ಭಾವಶುದ್ಧದ, ಪ್ರಕಾಶಿಸುವ ಅಂತರಂಗದ, ದಶವಿಧಬುದ್ಧಿಗಳ, ನಿರ್ವಿಕಾರದಿಂದಿರುವ ಪ್ರಾಣೇಂದ್ರಿಯಗಳ ವೃಷಭಾವತಾರದ ಬಸವಣ್ಣನು ಒಡೆಯನು ಉಣ್ಣಲು ಆಹಾರವಾಗಿ ಬಂದನು! (ಆಗ) ಆ ಪ್ರಭುದೇವನು ನಸುನಗುತ್ತಾ ಕಡೆಗಣ್ಣೋಟದಲ್ಲಿ (ಅವನನ್ನು) ನೋಡಿದನು. ೪೯. "ನಾನು ಹಸಿದು ಬಂದವನಲ್ಲ. ಹಣಕ್ಕಾಗಿ ಬಂದವನಲ್ಲ, ಮನದಲ್ಲಿ ಬಯಕೆಯ ತಿಕ್ಕಾಟವಾಗಿ ನೊಂದು ಬಂದವನಲ್ಲ; ನಾನು ನಿನ್ನಲ್ಲಿ ವ್ಯಾಪಿಸಿರುವ ದಾಸೋಹತನವನ್ನು ಚೆನ್ನಾಗಿ ನೋಡಲು ಬಂದವನಲ್ಲದೆ, (ದುರ್ವ್ಯಸನದ ಆಸೆಗಳಿಗಾಗಿ ಬಂದವನಲ್ಲ). ವ್ಯಸನದ ಆಸೆಗಳು ನನ್ನಲ್ಲಿವೆಯೇ? ಬಸವ ಕೇಳು" ಎಂದು ಪ್ರಭುವು ನುಡಿದನು. ೫೦. "ಶುದ್ಧ ಸಾಕ್ಷಾತ್ ಅಮೃತದೇಹದ ಅತಿಥಿಗೆ ಉಣಬಡಿಸುವುದುಂಟೆ? ಅಯ್ಯೋ, ಬೇಡುವವರಿಲ್ಲದೆ ನನ್ನ (ದಾನಿಯೆಂಬ) ಯಶಸ್ಸು ಕೆಟ್ಟುಹೋಯಿತು ಎಂದು

ಕನ್ನಡಿಯ ಪ್ರತಿಬಿಂಬಕಿನ್ನೊಂ
ದನ್ನ ಚೆಲುವಿಕೆಯಾಗಬಲ್ಲದೆ
ನಿನ್ನ ಮನದಲಿ ಮಾಟಕೂಟದ ಬುದ್ಧಿ ಮಮಕರಿಸೆ
ನನ್ನ ಹಸು ಹರಿದುಂಡಿತಲ್ಲದೆ
ನಿನ್ನ ಮನದಲಿ ಮಾಟವಿಲ್ಲದೊ
ಡೆನ್ನ ತನುವಿಗೆಯೂಟವಿಲ್ಲೈ ಬಸವ ಕೇಳೆಂದ ೫೧

ಅಷ್ಟಮದಗಳ ಸೊಗಡ ಸೊಕ್ಕಿನ
ದಷ್ಟವಿಲ್ಲದ ಮೂಜಿವಸ್ಥೆಯ
ದೃಷ್ಟಿ ತಾಗದ ವ್ಯಸನವೇಳಜ ಕಿಡಿಯ ಖಂಡಿಸಿದ
ದೃಷ್ಟವೆನಿಸಿದ ನಿಮ್ಮ ಕಾಯ
ಶ್ರೇಷ್ಠ ನೈವೇದ್ಯವನು ಕಾಣುತ
ತುಷ್ಟಿ ತನುವಿಗೆ ತುಂಬಿತೀಗಳು ಬಸವ ಕೇಳೆಂದ ೫೨

ಉಣಿಸುವುಣಿಸೆಂದೆಂಬರೆಲ್ಲರು
ವುಣಿಸನುಂಬುದನಿಂದು ಕಂಡೆವು
ದಣಿಸಿದಿರಿ ನೀವಾದೊಡೆಮ್ಮನು ಭಕ್ತ ನಿಮ್ಮಾಣೆ
ಅಣಕವಲ್ಲಿದು ನರಸುರೋರಗ
ರೆಣಿಕೆಯೊಳು ನಿನಗಾರು ಸರಿ ಕಾ
ರಣಕಳಾತ್ಮಕ ನೀನೆಲೈ ಬಸವಣ್ಣ ಕೇಳೆಂದ ೫೩

ನೀನು ಮನಸ್ಸಿನಲ್ಲಿ ಭಾವಿಸಿರಲು (ನಿನ್ನನ್ನು) ತಿದ್ದಬೇಕೆಂದು ನಾನೇ ಆಲೋಚಿಸಿ ಉಂಡೆನಲ್ಲದೆ, ನಿಜವಾಗಿ ವಿಚಾರಮಾಡಲು, ಹಸಿವು ಬಾಯಾರಿಕೆಗಳು ನನ್ನಲ್ಲಿ ಸೇರುವುವೆ? ಬಸವ ಕೇಳು" ಎಂದು ಅಲ್ಲಮನು ನುಡಿದನು. ೫೧. "ಕನ್ನಡಿಯಲ್ಲಿ ಬೀಳುವ ಪ್ರತಿಬಿಂಬವು ಬಿಂಬದಂತಲ್ಲದೆ ಬೇರೆಯ ಒಂದು ಚೆಲುವನ್ನು ಹೊಂದಲು ಸಾಧ್ಯವೆ? ನಿನ್ನ ಮನಸ್ಸಿನಲ್ಲಿ ಮಾಡುತ್ತೇನೆ ಎಂಬ ಭಾವನೆ ಹೆಚ್ಚಾಗಲು ನನ್ನ ಹಸಿವೂ ಹೆಚ್ಚಾಗಿ ಉಂಡಿತಲ್ಲದೆ ನಿನ್ನ ಮನಸ್ಸಿನಲ್ಲಿ ಆ ಭಾವನೆ ಇಲ್ಲದೇ ಇದ್ದರೆ ನನ್ನ ದೇಹಕ್ಕೆ ಹಸಿವಾಗುತ್ತಿರಲಿಲ್ಲ, ಬಸವಾ ಕೇಳು" ಎಂದು ಅಲ್ಲಮನು ನುಡಿದನು. ೫೨. ಜಾಗ್ರತ್, ಸ್ವಪ್ನ, ಸುಷುಪ್ತಿ ಎಂಬ ಮೂರು ಅವಸ್ಥೆಗಳಲ್ಲೂ ಅಸ್ತ್ರ, ಅರ್ಥ, ಯೌವನ, ಸ್ತ್ರೀ, ವಿದ್ಯೆ, ಕುಲ, ರೂಪ, ಉದ್ಯೋಗ ಎಂಬ ಹೆಮ್ಮೆಗೆ ಕಾರಣವಾದ ಎಂಟು ಮದಗಳನ್ನೂ, ಬೇಟೆ, ಮದ್ಯಪಾನ, ದ್ಯೂತ, ಕಠಿನ ನುಡಿ, ಕಠಿನ ಶಿಕ್ಷೆ, ಕಠಿನ ದಂಡ, ವ್ಯಭಿಚಾರ ಎಂಬ ಏಳು ವ್ಯಸನಗಳನ್ನೂ ಹೊಂದಿರದ ನಿಮ್ಮ ಶ್ರೇಷ್ಠವಾದ ಅರ್ಪಿತಕಾಯವನ್ನು ಕಂಡು ಈಗ (ನನ್ನ) ದೇಹಕ್ಕೆ ಪೂರ್ಣತೃಪ್ತಿಯಾಯಿತು, ಬಸವ ಕೇಳು" ಎಂದು ಅಲ್ಲಮನು ನುಡಿದನು. ೫೩. "ಊಟ ಮಾಡಿಸು, ಊಟ ಮಾಡಿಸು ಎಂದು ಎಲ್ಲರೂ ಹೇಳುವರು. ಊಟ ಮಾಡಿಸುವುದನ್ನು ಇಂದು ನೋಡಿದೆವು. ನೀನಾದರೂ ನನ್ನನ್ನು ತೃಪ್ತಿಪಡಿಸಿದೆ. ಬಸವಣ್ಣ, ನಿನ್ನಾಣೆಗೂ ಇದು ಹಾಸ್ಯದ ಮಾತಲ್ಲ. ಮಾನವರು, ದೇವತೆಗಳು, ನಾಗರು ಇವರುಗಳಲ್ಲಿ ನಿನಗೆ ಸಮಾನರು ಯಾರೂ ಇಲ್ಲ. ಕಾರಣಪುರುಷನೂ ಚಿದ್‌ರೂಪನೂ ನೀನಾಗಿರುವೆ,

ಬಳಿಕ ಹಸ್ತೋದಕವನತಿ ನಿ
ರ್ಮಳ ಸುಗಂಧ ವಿಲೇಪನವ ಪರಿ
ಮಳದ ಕರ್ಪುರ ವೀಳೆಯಂಗಳನಿತ್ತು ಭಕ್ತಿಯಲಿ
ನಲಿದು ಗುರುವಿನ ಪಾದಪಂಕಜ
ಗಳ ಸಮೀಪದಲೊಪ್ಪುತಿರ್ದರು
ಬಳಸಿದಳಿಕುಲದಂತೆ ಬಸವಣ್ಣಾದಿ ಭಕ್ತಗಣ ೫೪

ಬಸವ ಬಾರೈ ನಿನ್ನ ಜಂಗಮ
ಹಸಿದರಲ್ಲಾ ಕರೆಯಹೋಗೆನೆ
ಬೆಸನ ಕೈಕೊಂಡಲ್ಲಮಪ್ರಭುವಿಂದೆ ಬೀಳ್ಕೊಂಡು
ಒಸೆದು ಬಂದು ಮಹಂತರನು ಪ್ರಾ
ರ್ಥಿಸುತಲಾರೋಗಣೆಗೆ ಕರೆಯಲು
ಬಸವರಾಜಗೆ ಬಳಿಕ ನುಡಿದುದು ಜಂಗಮಸ್ತೋಮ ೫೫

ಎಂದಿನಾರೋಗಣೆಯ ಮಾಡಿದ
ಚೆಂದದಿಂ ಮಿಗಿಲಾಗಿ ಪರಮಾ
ನಂದವಾಗಿದೆ ತೇಗಿದರೆ ಷಡುರುಚಿರಸಾಯನದ
ಸಂದ ವಾಸನೆ ಸೂಸುತಿದೆ ಡ
ಹ್ರೆಂದುದಿದೆಕೋ ಎನುತ ಮಹಿಮರು
ಮುಂದೆ ಬಸವನು ಕಾಣಲಿಕೆ ದಣಿದಿರ್ದರೊಲವಿನಲಿ ೫೬

ನಿನ್ನ ಗುರುವಿನ ಮಹಿಮೆಯೋ ಮೇಣ್
ನಿನ್ನ ಮಹಿಮೆಯೊ ಜಂಗಮಕೆ ದಿಟ
ನಿನ್ನ ಗುರುವಾರೋಗಿಸಲು ತಣಿವಾಯಿತೆಮಗೆಲ್ಲ
ನಿನ್ನ ಗುರು ಸಚರಾಚರದ ಚೈ
ತನ್ಯಮೂರ್ತಿಯೊ ಎನುತಲಾ ಬಸ
ವಣ್ಣನಿದಿರಲಿ ನುಡಿವುದಿರ್ದುದು ಜಂಗಮಸ್ತೋಮ ೫೭

ಬಸವಣ್ಣ ಕೇಳು" ಎಂದು ಅಲ್ಲಮನು ನುಡಿದನು. ೫೪. ಅನಂತರ ಕೈಗೆ ನೀರನ್ನು ಕೊಟ್ಟು, ಅತಿನಿರ್ಮಳವಾದ ಸುಗಂಧ ಬಳಿದು, ಪರಿಮಳಭರಿತವಾದ ಕರ್ಪೂರ ವೀಳಯವನ್ನು ಭಕ್ತಿಯಿಂದ ಕೊಟ್ಟು, ಸಂತೋಷದಿಂದ ಗುರುವಿನ ಪಾದಕಮಲಗಳ ಸಮೀಪದಲ್ಲಿ ಆವರಿಸಿದ ದುಂಬಿಗಳ ಮೊತ್ತದಂತೆ ಬಸವಣ್ಣನೇ ಆದಿಯಾದ ಭಕ್ತರ ಸಮೂಹವು ಶೋಭಿಸುತ್ತಿದ್ದಿತು. ೫೫. ಬಸವ ಬಾರಾ, ನಿನ್ನ ಜಂಗಮರು ಹಸಿದಿರುವರಲ್ಲವೆ? ಅವರನ್ನು ಕರೆಯ ಹೋಗು (ಎಂದು ಪ್ರಭುವು ಹೇಳಲು) ಆ ಆಜ್ಞೆಯನ್ನು ಬಸವಣ್ಣನು ಸ್ವೀಕರಿಸಿ ಅಲ್ಲಮಪ್ರಭುವಿನಿಂದ ಬೀಳ್ಕೊಂಡು ಪ್ರೀತಿಯಿಂದ ಬಂದು ಮಹಂತರನ್ನು ಪ್ರಾರ್ಥಿಸುತ್ತಾ ಊಟಕ್ಕೆ ಕರೆಯಲು ಜಂಗಮಸಮೂಹವು ಅವನಿಗೆ ಹೀಗೆಂದಿತು. ೫೬. "ನಿತ್ಯವೂ ಮಾಡಿದ ಆರೋಗಣೆಗೆ ಮಿಗಿಲೆನಿಸಿ ಪರಮಾನಂದವಾಗಿದೆ. ಷಡ್ರುಚಿಯ ರಸಾಯನದ ಸುವಾಸನೆ ತೇಗಿದರೆ ಹೊರಚೆಲ್ಲುತ್ತಿದೆ. ತೃಪ್ತಿಯ ತೇಗು ಬಂದುದು. ಇದೋ ನೋಡು" ಎನ್ನುತ್ತ ಬಸವನ ನೋಟಕ್ಕೆ ಜಂಗಮರು ಸಂತೃಪ್ತಿಯಿಂದ ದಣಿದವರಂತೆ ಕಂಡುಬರುತ್ತಿದ್ದರು. ೫೭. "ನಿನ್ನ ಗುರುವಿನ ಮಹಿಮೆಯೊ ಅಥವಾ ನಿನ್ನ ಮಹಿಮೆಯೊ? ನಿಜವಾಗಿಯೂ ನಿನ್ನ ಗುರು ಉಣ್ಣಲು ಜಂಗಮರಾದ ನಮಗೆಲ್ಲಾ ತೃಪ್ತಿಯಾಯಿತು. ನಿನ್ನ ಗುರು

ನಮ್ಮ ನಾಚಿಸಲೆಂದು ಬಂದ್ಯೆ
ನಮ್ಮೊಳಿನಿತಿಲ್ಲದಜಿ ನಾಚಿಕೆ
ನಮ್ಮ ಸಮಯದೊಳಾರಿಗಾದೊಡೆ ಹೆಮ್ಮೆ ಹುಟ್ಟಿದೊಡೆ
ನಮ್ಮ ಹೆಮ್ಮೆ ವಿಚಾರಿಸುವೊಡದು
ನಮ್ಮ ಜಯವದು ಸಾಕು ಹೋಗೆಂ
ದೆಮ್ಮ ಬಸವನ ಬೀಳುಕೊಟ್ಟುದು ಜಂಗಮಸ್ತೋಮ ೫೮

ಗುರುವಿಗೊರೆದ ಸುಗಂಧಲೇಪನ
ಗುರುವಿಗಿಟ್ಟಕ್ಷತೆಗಳೆಲ್ಲವು
ಗುರುವಿಗಿಕ್ಕಿದ ಪುಷ್ಪಮಾಲೆಗಳೈದೆ ಜಂಗಮಕೆ
ಭರಿತವಾಗಿರೆ ತಿಳಿದನಿಂಗಿತ
ದಿರವಿನಲಿ ದಣಿವಾಜ ಭೇದವ
ಕರಣದಲಿ ನೆಜೆ ಕಂಡು ಸರಿದನು ಬಳಿಕ ಬಸವಣ್ಣ ೫೯

ಬಂದನಾಗಳೆ ಬಸವ ತನ್ನಯ
ಮಂದಿರಕೆ ಗುರುಪಾದದಲಿ ಶರ
ಣೆಂದು ಬಳಿಕಾ ಹದನನೆಲ್ಲವನೊಲಿದು ಬಿನ್ನೈಸೆ
ಮುಂದೆ ಮೋಹಿಸಿ ನೆರೆದ ಭಕ್ತರ
ಸಂದಣಿಗಳುಘೆ ಎನಲು ಪರಮಾ
ನಂದಶರಧಿಯ ಲಹರಿಯಂತಿರೆ ಮೆಜೆದುದಾಸ್ಥಾನ ೬೦

ಬಸುಜಿ ಹೆಂಡತಿಯೂಟ ಹೊಟ್ಟೆಯ
ಶಿಶುವ ದಣಿಸುವವೊಲು ಜಗಂಗಳ
ಬಸುಜಿಲಡಗಿಸಿಕೊಂಡು ನೀ ದಣಿಯುಣಲು ಜಂಗಮಕೆ
ಹಸಿವದೆಲ್ಲಿಯದೆಲ್ಲರಿಗೆ ಸಂ
ತಸವು ಸಂತುಷ್ಟತೆಯಲಿದ್ದರು
ಹೊಸತಿದಾದುದು ಲೋಕದೊಳು ಗುರುರಾಯ ಕೇಳೆಂದ ೬೧

ಸಹರಾಚರಗಳಿಗೆ ಚೈತನ್ಯಮೂರ್ತಿಯಾಗಿರುವನು" ಎಂದು ಆ ಜಂಗಮ ಸಮೂಹವು ಬಸವಣ್ಣನ ಎದುರಿಗೆ ಹೇಳುತ್ತಿದ್ದಿತು. ೫೮. "ನಮ್ಮನ್ನು ನಾಚಿಸಲೆಂದು ನೀನು ಬಂದೆ. ನಮ್ಮಲ್ಲಿ ಸ್ವಲ್ಪವೂ ನಾಚಿಕೆಯಿಲ್ಲ. ನಮ್ಮ ಧರ್ಮದಲ್ಲಿ ಯಾರಿಗಾದರೂ ಹೆಮ್ಮೆ ಹುಟ್ಟಿದರೆ, ಅದೇ ನಮಗೆ ಹೆಮ್ಮೆ. ಅದು ನಮ್ಮ ಜಯವು, ಅಷ್ಟೇ ಸಾಕು ಹೋಗು" ಎಂದು ನಮ್ಮ ಬಸವನನ್ನು ಜಂಗಮಸ್ತೋಮವು ಹೋಗಗೊಟ್ಟಿತು. ೫೯. ಗುರುವಾದ ಅಲ್ಲಮನಿಗೆ ಹಚ್ಚಿದ ಸುಗಂಧಲೇಪನ, ಇಟ್ಟ ಅಕ್ಷತೆ, ಧರಿಸಿದ ಪುಷ್ಪಮಾಲೆ ಜಂಗಮರಲ್ಲಿ ಚೆನ್ನಾಗಿ ಹೊಂದಿರಲು ಅವರು ತೃಪ್ತಿಹೊಂದಿದ ರೀತಿಯನ್ನು ಮನಸ್ಸಿನಲ್ಲಿ ತಿಳಿದು ಬಳಿಕ ಬಸವಣ್ಣನು (ಅಲ್ಲಿಂದ) ಹೋದನು. ೬೦. ಆ ಕ್ಷಣವೆ ಬಸವನು ತನ್ನ ಮನೆಗೆ ಬಂದನು. ಗುರುವಿನ ಪಾದಕ್ಕೆ ಶರಣು ಎಂದು ಹೇಳಿ ಸುದ್ದಿಯೆಲ್ಲವನ್ನು ಪ್ರೀತಿಯಿಂದ ತಿಳಿಸಲು, ಮುಂದೆ ಪ್ರೀತಿಪಟ್ಟು ಗುಂಪುಗೂಡಿದ್ದ ಭಕ್ತರ ಸಮೂಹವು ಉಘೇ ಎನ್ನಲು ಪರಮಾನಂದ ಸಮುದ್ರದ ತೆರೆಯಂತೆ ಆಸ್ಥಾನವು ಶೋಭಿಸಿತು. ೬೧. "ಗರ್ಭ ಧರಿಸಿರುವ ಸ್ತ್ರೀಯ ಊಟವು ಹೊಟ್ಟೆಯಲ್ಲಿರುವ ಶಿಶುವನ್ನು ತೃಪ್ತಿಪಡಿಸುವ ರೀತಿಯಲ್ಲಿ, ಜಗತ್ತನ್ನೇ ಹೊಟ್ಟೆಯಲ್ಲಿ

ನಿನ್ನ ಭಾವನೆಯಿದ್ದ ಪರಿಯಲಿ
ನಿನ್ನ ಜಂಗಮ ತೃಪ್ತರಾದರೆ
ನನ್ನನೇತಕೆ ಬಟ್ಟುಮಾಡುವೆ ಬಜೆದೆ ಬಯಲಿಂಗೆ
ನಿನ್ನ ಕತದಿಂದಾದೆನಲ್ಲದೆ
ಮುನ್ನ ನೀನೆಂದೆಂಬ ವಾಸನೆ
ಯೆನ್ನಲುಂಟೇ ದಿಟ ವಿಚಾರಿಸೆ ಬಸವ ಕೇಳೆಂದ ೬೨

ಲಿಂಗ ನೀನಾರೋಗಿಸಿದೊಡಾ
ಜಂಗಮವು ಸಂತುಷ್ಟರಾದರು
ಜಂಗಮದ ಸಂತುಷ್ಟಿ ಸಚರಾಚರದೊಳೆಲ್ಲರಿಗೆ
ಹಿಂಗದಿತ್ತುದು ದಣಿವನೀ ಚಿ
ತ್ರಂಗಳಾಟದ ಸೂತ್ರವೆಲ್ಲವು
ಲಿಂಗ ನಿನ್ನಯ ಮಹಿಮೆಯೆಂದನು ಬಳಿಕ ಬಸವಣ್ಣ ೬೩

ಎನಲು ನಿರಹಂಕಾರಭಾವದ
ಮನದ ಬಸವಗೆ ಚೆನ್ನಬಸವಗೆ
ವಿನುತಮತಿ ಮಡಿವಾಳ ಮೊದಲಾದಖಿಳ ಭಕ್ತರಿಗೆ
ಅನುಪಮಾನಂದೈಕ್ಯ ನಿತ್ಯಾಂ
ಗನೆಯನೆಲ್ಲರಿಗೀವೆನೆನುತಲಿ
ನೆನೆವುತಿರ್ದನು ಗುರು ಗುಹೇಶ್ವರಲಿಂಗ ಲೀಲೆಯಲಿ ೬೪

ಅಂತು ಗತಿ ೨೩ಕ್ಕಂ ಪದ ೧೦೪೫ ಕ್ಕಂ ಮಂಗಳಂ

ಅಡಗಿಸಿಕೊಂಡ ನೀನು ದಣಿಯುವಂತೆ ಉಣ್ಣಲು ಜಂಗಮರಿಗೆ ಹಸಿವೆಯೆಲ್ಲಿಯದು? ಎಲ್ಲರೂ ಸಂತೋಷದಿಂದ ಸಂತೃಪ್ತಿಯಿಂದ ಇದ್ದರು. ಗುರುರಾಯ ಕೇಳು, ಲೋಕದಲ್ಲಿ ಇದು ಹೊಸತಾಯಿತು" ಎಂದು ಅಲ್ಲಮನಿಗೆ ಬಸವನು ನುಡಿದನು. ೬೨. "ನಿನ್ನ ಮನಸ್ಸಿನಲ್ಲಿದ್ದಂತೆ ನಿನ್ನ ಜಂಗಮರು ತೃಪ್ತರಾದರೆ ನನ್ನನ್ನೇತಕ್ಕೆ ಸುಮ್ಮನೆ ಬಯಲಿಗೆಳೆಯುವೆ? ನಿನ್ನ ಕಾರಣದಿಂದ ನಾನು ಆದೆನಲ್ಲದೆ ಮುನ್ನ ನಾನು ಎಂಬ ವಾಸನೆ ನನ್ನಲ್ಲುಂಟೆ? ವಿಚಾರಮಾಡಲು ಇದು ಸತ್ಯ, ಬಸವ ಕೇಳು" ಎಂದು ಅಲ್ಲಮನು ನುಡಿದನು. ೬೩. "ಲಿಂಗಸ್ವರೂಪಿಯಾದ ನೀನು ಆರೋಗಿಸಿದರೆ ಜಂಗಮರು ಸಂತೃಪ್ತರಾದರು. ಜಂಗಮದ ಸಂತೃಪ್ತಿ ಸಚರಾಚರ ವಸ್ತುಗಳಿಗೆ ಕೊರತೆಯಾಗದಂತೆ ತೃಪ್ತಿಯನ್ನುಂಟು ಮಾಡಿತು. ಈ ವಿಚಿತ್ರದಾಟದ ಸೂತ್ರವೆಲ್ಲವೂ ಅಲ್ಲಮಲಿಂಗನೆ, ನಿನ್ನ ಮಹಿಮೆ" ಎಂದು ಬಸವಣ್ಣನು ಪ್ರಭುವಿಗೆ ನುಡಿದನು. ೬೪. ಹೀಗೆಂದು ನುಡಿಯಲು ನಿರಹಂಕಾರಭಾವದ ಮನದ ಬಸವಣ್ಣ, ಚೆನ್ನಬಸವ, ಹೊಗಳಲ್ಪಡುವ ಬುದ್ಧಿಯುಳ್ಳ ಮಡಿವಳ ಮಾಚಿದೇವ ಮೊದಲಾದ ಸಕಲ ಭಕ್ತರಿಗೆ ಎಣೆಯಿಲ್ಲದ ಆನಂದ ಹಾಗೂ ಮುಕ್ತಿವನಿತೆಯನ್ನು ನೀಡುವೆನೆಂದು ಗುರು ಗುಹೇಶ್ವರ ಲಿಂಗನು ತನ್ನ ಲೀಲೆಯಲ್ಲಿ ಆಲೋಚಿಸುತ್ತಿದ್ದನು.

# ೨೪. ಮನೋಲಯ

**ಗತಿ ೨೪**

ಸೂಚನೆ : ಉದ್ಧರಿಸಿ ಬಸವಣ್ಣ ಮೊದಲಾ
ಗಿರ್ದ ಭಕ್ತರಿಗೊಲಿದು ಕೊಟ್ಟನು
ಸಿದ್ಧಿಗಳನುಚಿತದಲಿ ನಮ್ಮಯ ಗುರು ಗುಹೇಶ್ವರನು

ಸಕಲವನು ಸಂಭವಿಸಿ ಮನಸಿಗೆ
ಮಕರಿಸುವಹಂಕಾರಭಾವದ
ಮುಕುರವನು ಮುಚಿದಚಲಪದವಿಗೆ ನಿಲುವ ನಿರ್ಣಯವ
ಸಕಲ ಭಕ್ತರು ಸಕಲ ಯುಕ್ತರು
ಸಕಲ ಮುಕ್ತರು ಮುಖ್ಯವಾಗಿಹ
ಸಕಲರೆಲ್ಲರು ತಿಳಿವುದೀ ಪ್ರಭುಲಿಂಗಲೀಲೆಯಲಿ ೧

ಪರಮ ಪರಿಣಾಮದಲಿ ತನ್ನಯ
ಚರಣಸನ್ನಿಧಿ ಸಂಗವಾಗಿಹ
ಶರಣರೆಲ್ಲರ ಕಂಡು ಕರುಣರಸಾರ್ದ್ರಚಿತ್ತದಲಿ
ವರದನಾಗಲಿಬೇಕೆನುತ ಮಿಗೆ
ದರಹಸಿತವದನಪ್ರಭಾಶಶಿ
ಕಿರಣಗಳ ಸುರಿವುತ ಮಹಾಪ್ರಭುಲಿಂಗನಿಂತೆಂದ ೨

ಪಾವನೆಯಾಯ್ತಿಷ್ಟಲಿಂಗದ
ಸೇವೆಯಲಿ ಬಹಿರಂಗವಂತ
ರ್ಭಾವಮಾದೊಡೆ ಶಿವಸಮಾಧಿಯಲಾಯ್ತು ನಿರ್ಮಲತೆ
ನೀವು ನೋಡಲು ನೀವು ನೆನೆಯಲ
ದಾವುದರಿದಿನ್ನೆನುತ ಭಕ್ತರ
ನೋವಿ ಹೊಗಳಿದನಲ್ಲಮಪ್ರಭುಲಿಂಗ ಲೀಲೆಯಲಿ ೩

ಸೂ : ಬಸವಣ್ಣನೇ ಮೊದಲಾದ ಭಕ್ತರನ್ನು ಪ್ರೀತಿಯಿಂದ ಉದ್ಧರಿಸಿ ಯೋಗ್ಯವಾದ ಸಿದ್ಧಿಗಳನ್ನು ನಮ್ಮ ಗುರು ಗುಹೇಶ್ವರನು ಅನುಗ್ರಹಿಸಿದನು. ೧. ಎಲ್ಲವನ್ನೂ ಆಗುಮಾಡಿ, ಮನಸ್ಸಿನಲ್ಲಿ ಪ್ರಬಲಿಸುವ ಅಹಂಕಾರಭಾವದ ಕನ್ನಡಿಯನ್ನು ಒಡೆದು, ಅಚಲವಾದ ಪದವಿಗೆ ನಿಲ್ಲುವ ನಿರ್ಧಾರವನ್ನು ಈ ಪ್ರಭುಲಿಂಗಲೀಲೆಯಲ್ಲಿ ಸರ್ವಭಕ್ತರು, ಸರ್ವಯುಕ್ತಿಯನ್ನು ಬಲ್ಲವರು, ಸರ್ವ ಮುಕ್ತರು, ಮುಖ್ಯರಾದ ಸಕಲರೂ ತಿಳಿಯುವುದು. ೨. ಮಹಾಪ್ರಭುಲಿಂಗನು ತನ್ನ ಪಾದಸನ್ನಿಧಿಯಲ್ಲಿ ನೆರೆದಿರುವ ಶರಣರೆಲ್ಲರನ್ನು ಹೆಚ್ಚಿನ ಸಂತೋಷದಿಂದ ನೋಡಿ, ಕರುಣರಸದಿಂದ ಒದ್ದೆಯಾದ ಮನದಿಂದ ಕೂಡಿ (ಅವರಿಗೆ) ಕೃಪೆಮಾಡಬೇಕೆಂದು ವಿಶೇಷವಾದ ಮಂದಹಾಸಯುಕ್ತ ಮುಖದಿಂದ ಚಂದ್ರಕಿರಣಗಳ ಪ್ರಭೆಯನ್ನು ಚೆಲ್ಲುತ್ತಾ ಹೀಗೆಂದನು. ೩. "ಇಷ್ಟಲಿಂಗದ ಅರ್ಚನೆಯಿಂದ ಬಾಹ್ಯ ಶರೀರವು ಪಾವನವಾಯಿತು; ಅಂತರಂಗವು ಶಿವಸಮಾಧಿಯಿಂದ ನಿರ್ಮಲತ್ವವನ್ನು ಪಡೆಯಿತು.

ಎನಿತು ಸಂಪದವಾದೊಡೇನದ
ಱನಿತು ದಂದುಗ ಬೆಂಬಿಡದು ದಿಟ
ವೆನಿತು ಮಾಡಿದೊಡೇನು ಮಾಡಿದ ಫಲವನುಣಬೇಕು
ಇನಿತು ಸಾಕೆನ್ನೆಮಗೆ ನಿನ್ನನೆ
ನೆನೆದು ನೆಱೆ ನಿಶ್ಚಿಂತರಹ ಸುಖ
ದನಿತನೇ ಪೇಳೆನುತ ಬಿನ್ನೈಸಿದನು ಬಸವಣ್ಣ ೪

ಆವ ವಾಸನೆವಿಡಿದು ಜನಿಸಿದ
ಜೀವರುಗಳಭಿಲಾಷೆ ನಿಲುಕುವು
ದಾ ವಿಳಾಸತೆ ತಪ್ಪದದು ಶಿವನಿತ್ತ ಬೆಸನಿಂದೆ
ನೀವು ನಮ್ಮೊಳು ಪರಮಸುಖಸಂ
ಭಾವನೆಯನಱಿಯಲಿಕೆ ಬಂದಿರಿ
ನಾವು ನಿಮಗದನೊರೆಯಬೇಹುದು ಬಸವ ಕೇಳೆಂದ ೫

ಮಾನವಾಕೃತಿಯಿಂದೆ ತದ್ಭವ
ಕಾನನಂಗಳ ಸುಡುವ ಸಮ್ಯಗ್
ಜ್ಞಾನವಾಗಲಿಬೇಕೆನುತೆ ಶಿವಭಕ್ತಿಭರದಿಂದೆ
ಸ್ವಾನುಭಾವನೆಗೆಂದು ಬಂದಿರಿ
ನಾ ನಿಮಗೆ ಬೋಧಿಸುವೆನದನವ
ಧಾನಿಸೆನುತಾ ಭಕ್ತರಿಗೆ ಗುರುರಾಯನಿಂತೆಂದ ೬

ನಿಮ್ಮ ನೋಟ ಭಾವನೆಗಳಿಗೆ ಅವುದು ತಾನೆ ಇನ್ನು ಅಸಾಧ್ಯ" ಎಂದು ಭಕ್ತರನ್ನು ಪ್ರೀತಿಯಿಂದ ಅಲ್ಲಮಪ್ರಭುಲಿಂಗನು (ತನ್ನ) ಲೀಲೆಯಿಂದ ಹೊಗಳಿದನು. ೪. "ಎಷ್ಟು ಸಂಪತ್ತಿದ್ದರೇನು? ಅಷ್ಟು ಚಿಂತೆ ಬೆನ್ನುಬಿಡದು, ಇದು ಸತ್ಯ. ಎಷ್ಟು ಮಾಡಿದರೇನು? ಮಾಡಿದ್ದಕ್ಕೆ ತಕ್ಕ ಫಲವನ್ನು ಅನುಭವಿಸಬೇಕು. ನಮಗೆ ಇಷ್ಟೇ ಸಾಕು. ನಿನ್ನನ್ನು ನೆನೆದು ಹೆಚ್ಚಿನ ಚಿಂತೆಯಿಲ್ಲದವರಾಗುವ ಸುಖವಷ್ಟನ್ನೇ ಹೇಳು" ಎಂದು ಬಸವಣ್ಣನು ಪ್ರಭುವನ್ನು ಪ್ರಾರ್ಥಿಸಿದನು. ೫. "ಯಾವ (ಪೂರ್ವಜನ್ಮದ) ಕರ್ಮಫಲವನ್ನು ಹಿಡಿದು ಜೀವರುಗಳು ಜನ್ಮವೆತ್ತಿದರೊ (ಹಾಗೆ ಅವರ) ಬಯಕೆ ನೆರವೇರುವುದು. ಆ ಆಟ ತಪ್ಪದು. ಅದು ಶಿವನಿತ್ತ ಆಜ್ಞೆ. ಇಂದು ನೀವು ನಮ್ಮಲ್ಲಿ ಪರಮಸುಖದ ಸಂಪತ್ತನ್ನು ತಿಳಿಯಲಿಕ್ಕಾಗಿ ಬಂದಿರಿ. ನಾವು ನಿಮಗೆ ಅದನ್ನು ತಿಳಿಸಬೇಕಾಗಿದೆ. ಬಸವ ಕೇಳು" ಎಂದು ಅಲ್ಲಮನು ನುಡಿದನು. ೬. "ಮಾನವರೂಪದಿಂದ ನಿಮ್ಮ ಜನ್ಮಗಳೆಂಬ ಕಾಡನ್ನು ಸುಡುವ ಪರಿಪೂರ್ಣಜ್ಞಾನ ಪ್ರಾಪ್ತವಾಗಬೇಕು ಎಂದು ಶಿವಭಕ್ತಿಯನ್ನು ತುಂಬಿಕೊಂಡು ತಮ್ಮ ಮನಸ್ಸಿನ ಅಭಿಪ್ರಾಯವನ್ನು ಪ್ರಕಟಮಾಡಲಿಕ್ಕಾಗಿ ಬಂದಿರಿ. ನಾನು ನಿಮಗೆ ಅದನ್ನು ಬೋಧಿಸುವೆನು", ಲಕ್ಷ್ಯವಿಟ್ಟು ಕೇಳಿ ಎಂದು ಭಕ್ತರಿಗೆ ಗುರುರಾಯನು ಹೇಳಿ (ಮತ್ತೆ

ಇಲ್ಲದಿಹ ಮಾಯಾಪ್ರಪಂಚುಗ
ಳುಳ್ಳವೆಂದೆಂಬಂತೆ ವಿಷಯದ
ಭುಲ್ಲವಣಿಗಳಲಿಂದ್ರಿಯದ್ವಾರದಲಿ ರಂಜಿಸುವ
ಎಲ್ಲವನು ಕಾಣಿಸುವದದಱೊಳು
ಹೊಲ್ಲವೊಳ್ಳಿತ್ತೆಂದು ಕೆಲವನು
ಸಲ್ಲವಿಡುವುದು ಮನವು ಮನವಳಿದವನೆ ಸುಖಿಯೆಂದ ೭

ಸ್ಥೂಲತನುವಿನ ಜಾಗ್ರಸ್ವಪ್ನದ
ಕಾಲದಲಿ ಹುಸಿ ಸೂಕ್ಷ್ಮತನುವಿಗೆ
ಮೇಲೆ ಕಾರಣ ತನುವಿನಲ್ಲಿ ಸುಷುಪ್ತಿ ಪಸರಿಸಲು
ಬೀಳು ಬಿದ್ದುವು ಜಾಗ್ರಸ್ವಪ್ನಗ
ಳಾಳುತಿಹುದಿವನೊಂದೆ ಮನವಾ
ಕಾಳುಮನವೊಂದಳಿದುದಾದರೆ ನಿತ್ಯರಹರೆಂದ ೮

ಸುರನರೋರಗರೆಂಬ ಮರುಳರ
ಹುರುಳುಗೆಡಿಸಿದ ಮೂಱವಸ್ಥೆಗೆ
ಪಿರಿದೆನಿಸುವಾ ತೂರ್ಯ ತೂರ್ಯಾತೀತವೆಂಬೆರಡು
ಸರಸತರವಹ ಬಲೆಯ ಬೀಸಿಯೆ
ಹರಹಿಕೊಂಡಿಹುದೀ ಮನಸ್ಸದ
ನುರುಹಬಲ್ಲವನವನೆ ನಿತ್ಯನು ಬಸವ ಕೇಳೆಂದ ೯

ಅವರಿಗೆ) ಹೀಗೆಂದನು. ೭. "ಇಲ್ಲದಿರುವ ಮಾಯಾಪ್ರಪಂಚದ ವಸ್ತುಗಳು ಇರುವುವು ಎನ್ನುವಂತೆ ವಿಷಯದ ಮೋಹದಲ್ಲಿ ಇಂದ್ರಿಯಗಳ ಮೂಲಕ ಮೆರೆಯುವ ಸರ್ವಸ್ವವನ್ನೂ ಮನಸ್ಸು ಕಾಣಿಸುವುದು. ಇವುಗಳಲ್ಲಿ ಕೆಟ್ಟುದೇ ಒಳ್ಳೆಯದೆಂದು ತಿಳಿದು ಕೆಲವನ್ನು ಮನಸ್ಸು ಒಪ್ಪುವುದು. ಇಂತಹ ಮನಸ್ಸನ್ನು ನಾಶಮಾಡಿದವನೆ ಸುಖಿ" ಎಂದು ಅಲ್ಲಮಪ್ರಭು ನುಡಿದನು. ೮. "ಸ್ಥೂಲಶರೀರದ ಎಚ್ಚರದಲ್ಲಿ ಕಾಣುವ ವಸ್ತುಗಳು ಸೂಕ್ಷ್ಮ ಶರೀರದ ಸ್ವಪ್ನದಲ್ಲಿ ಹುಸಿಯಾಗುತ್ತವೆ. ಸೂಕ್ಷ್ಮಶರೀರಕ್ಕೆ ಕಾಣುವ ಸ್ವಪ್ನವಿಷಯವು ಕಾರಣಶರೀರದ ಗಾಢ ನಿದ್ರಾವಸ್ಥೆ ಹರಡಲು ಜಾರಿಬೀಳುವುದು. ಒಂದೇ ಒಂದಾದ ಮನವು ಜಾಗ್ರತ್‌ಸ್ವಪ್ನಗಳನ್ನು ಆಳುತ್ತಿರುವುದು. ಆ ದುಷ್ಟಮನಸ್ಸು ನಾಶವಾದುದಾದರೆ (ಜೀವಿಗಳು) ಹುಟ್ಟು ಸಾವುಗಳಿಲ್ಲದವರಾಗುವರು. ೯. ದೇವ ಮಾನವ ನಾಗರುಗಳೆಂಬ ಹುಚ್ಚರನ್ನು ತಿರುಳುಗೆಡಿಸಿದ ಜಾಗ್ರತ್ ಸ್ವಪ್ನ ಸುಷುಪ್ತಿ ಎಂಬ ಮೂರು ಅವಸ್ಥೆಗಳನ್ನು ಮೀರಿದ ತೂರ್ಯ ಹಾಗೂ ತೂರ್ಯಾತೀತ ಎಂಬ ಎರಡು ಸರಸಮಯವಾದ ಬಲೆಯನ್ನು ಬೀಸಿ ಈ ಮನಸ್ಸು ಹರಡಿಕೊಂಡಿರುವುದು. ಅದನ್ನು ಸುಡಬಲ್ಲವನೆ ಹುಟ್ಟು ಸಾವುಗಳಿಲ್ಲದವನು, ಬಸವ ಕೇಳು" ಎಂದು ಅಲ್ಲಮನು ನುಡಿದನು. ೧೦. "ಮನಸ್ಸನ್ನು ಬಹಿರಂಗವಾಗಿ ಚಲನೆಗೊಳಿಸುವ ಮನುಷ್ಯನು ಅಜ್ಞಾನಿ. ಮತ್ತೆ ಆ

ಮನವ ಬಹಿರಂಗದಲಿ ಚಲಿಸುವ
ಮನುಜನವನಜ್ಞಾನಿ ಮತ್ತಾ
ಮನವನಂತರ್ಮುಖದಲಾಚರಿಸಿದೊಡೆ ಸರ್ವಜ್ಞ
ಮನವು ಮನದಲಿ ನಿಂದು ನಿರ್ವಾ
ಸನೆಯಲಿರೆ ಸುಜ್ಞಾನಿಯಂತಾ
ಮನವನಳಿದರೆ ನಿತ್ಯನೈ ಬಸವಣ್ಣ ಕೇಳೆಂದ ೧೦

ಎನಿತು ತೋಱುವ ತೋಱಿಕೆಗಳನಿ
ತನಿತು ಮನಸಿಂದಾದುವಲ್ಲದೆ
ಮನವನಳಿದರೆ ಮತ್ತೆ ಕಾಣಿಸಲುಳಿದುದೊಂದಿಲ್ಲ
ಮನವೆ ಬೆಸಲಾದಖಿಳವಹ ವಾ
ಸನೆಗಳಿಗೆ ಬಿದ್ದಾಸೆಗೆಯ್ದರೆ
ಮನುಜಜಾತಿಯಲಾತನಧಮನು ಬಸವ ಕೇಳೆಂದ ೧೧

ಆಶೆಯೆಂಬುದು ತಾನೆ ಮಾಯಾ
ಪಾಶವದು ಮುಸುಕಿದರೆ ತಾನೇ
ಕ್ಲೇಶವಿಂತಿವು ಬಗೆಗೆ ಬಲಿಯಲು ತಾನೆ ಭವಬಂಧ
ದೋಷದುರಿತದ ಪುಂಜವದು ಕೀ
ನಾಶಗೊಡ್ಡಿದ ಹರಕೆ ಗುರಿಯೀ
ಯಾಶೆವೊಂದಳಿದವನೆ ನಿತ್ಯನು ಬಸವ ಕೇಳೆಂದ ೧೨

ಮನಸ್ಸನ್ನು ಒಳಮನದಲ್ಲಿ ನಡೆಸಿದ ಮನುಷ್ಯನು ಎಲ್ಲವನ್ನೂ ತಿಳಿದವನು. ಮನಸ್ಸು ಅಂತರಂಗದಲ್ಲಿ ನಿಂತು ವಾಸನಾರಹಿತವಾದರೆ (ಆತನೆ) ಸುಜ್ಞಾನಿ. ಹಾಗೆ ಆ ಮನಸ್ಸನ್ನು ನಾಶಮಾಡಿದರೆ ಹುಟ್ಟು ಸಾವುಗಳಿಲ್ಲದವನಾಗುವನು, ಬಸವಣ್ಣ ಕೇಳು" ಎಂದು ಅಲ್ಲಮನು ನುಡಿದನು. ೧೧. "ಎಷ್ಟು ವಿಧವಾದ ತೋರಿಕೆಗಳು ಕಾಣುವವೊ ಅವಷ್ಟೂ ಮನಸ್ಸಿನಿಂದಲೇ ಆದುವು. ಅಷ್ಟಲ್ಲದೆ ಮನಸ್ಸನ್ನು ಇಲ್ಲವಾಗಿಸಿದರೆ ಮತ್ತೆ ಕಾಣಿಸಲು ಒಂದೂ ಉಳಿಯುವುದಿಲ್ಲ. ಮನಸ್ಸೇ ತಾನು ಸೃಷ್ಟಿಸಿದ ವಿಷಯವಾಸನೆಗಳಿಗೆ ವಶವಾಗಿ ಅವನ್ನು ಕಾಮಿಸಿದರೆ ಮನುಷ್ಯಜಾತಿಯಲ್ಲಿ ಆತನು ನೀಚನು, ಬಸವ ಕೇಳು" ಎಂದು ಅಲ್ಲಮನು ನುಡಿದನು. ೧೨. "ಆಶೆಯೆಂಬುದು ಮಾಯಾಪಾಶವು. ಅದು ಕವಿದರೆ ಚಿಂತೆ. ಇವು ಮನಸ್ಸಿನಲ್ಲಿ ಬಲಿಯಲು ಅದೇ ಭವಬಂಧವು. ಅದು ದೋಷ ಮತ್ತು ಪಾಪಗಳ ಸಮೂಹವು. ಅದು ಯಮನಿಗೆ ಒಡ್ಡಿದ ಹರಕೆಯ ಕುರಿ. ಈ ಆಶೆಯನ್ನು ಬಿಟ್ಟವನೆ ನಿತ್ಯನೆನಿಸುವನು, ಬಸವ ಕೇಳು" ಎಂದು ಅಲ್ಲಮನು ನುಡಿದನು.

ಬೇಕು ಬೇಡೆಂದೆಂಬುದೊಂದವಿ
ವೇಕವುಳ್ಳನ್ನಬರ ನಾನಾ
ಶೋಕ ಮೋಹಾದಿಗಳು ಮುಂಗುಡಿವಱೆದು ಮುಸುಱುವುವು
ಲೋಕರಂಜನೆಗೆಱಗಿದವರೀ
ಕಾಕುತನದಲಿ ಕೆಟ್ಟುಹೋಹರು
ಬೇಕು ಬೇಡೆಂಬೆರಡನಳಿದರೆ ನಿತ್ಯರಹರೆಂದ ೧೩

ಅನವರತವೇನಾದೊಡೊಂದನು
ನೆನೆವುತಿಹುದೀ ಮನಸು ಮನಸಿನ
ನೆನಹಿನಿಂದವೆ ತೋಱುವುವು ಸರ್ವಪ್ರಪಂಚಗಳು
ಇನಿತನಱೆದು ಸಮಾಧಿಯಲಿ ತ
ನ್ನನವನೆಲ್ಲವ ತಿಂದುತೇಗುವ
ಘನ ಪರಾಕ್ರಮವುಳ್ಳೊಡಾತನೆ ಮುಕ್ತನಹನೆಂದ ೧೪

ಘನಮಹಿಮ ಚಿತ್ತೈಸು ದಿಟವಾ
ಮನವನಳಿದಿಹೆನೆಂಬುದದು ತಾ
ಮನವೆಯಲ್ಲದೆಯಾ ಮನಸ್ಸನದೆಂತು ತಿನಬಹುದು
ಮನವನೆಂತಾದರೆಯು ನಿರ್ವಾ
ಸನೆಗೆ ತಹುದರಿದಲ್ಲವಲ್ಲದೆ
ಮನವನಳಿವುದು ಚೋದ್ಯವೆಂದನು ಬಳಿಕ ಬಸವಣ್ಣ ೧೫

೧೩. "ಬೇಕು ಬೇಡ ಎಂಬ ಅವಿವೇಕವಿರುವವರೆವಿಗೆ ನಾನಾಬಗೆಯ ಶೋಕ ಮೋಹಾದಿಗಳು ಮೊದಲಿಗೇ ಮುತ್ತಿ ಕವಿಯುವುವು. ಲೋಕದ ಸೊಗಸುಗಾರಿಕೆಯಲ್ಲಿ ತೊಡಗಿದವರು ಈ ವಕ್ರತನದಲ್ಲಿ ಹಾಳಾಗಿ ಹೋಗುವರು. ಬೇಕು ಬೇಡ ಎನ್ನುವ ಎರಡನ್ನು ಇಲ್ಲವಾಗಿಸಿದರೆ ಹುಟ್ಟುಸಾವುಗಳಿಲ್ಲದಾಗುವರು" ಎಂದು ಅಲ್ಲಮನು ನುಡಿದನು. ೧೪. "ಈ ಮನಸ್ಸು ಸದಾಕಾಲ ಏನಾದರೂ ಒಂದನ್ನು ನೆನೆಯುತ್ತ ಇರುವುದು. ಮನಸ್ಸಿನ ನೆನಹಿನಿಂದ ಎಲ್ಲ ಪ್ರಪಂಚಗಳು ಕಾಣಿಸುವುವು. ಇದನ್ನರಿತು ಧ್ಯಾನದಲ್ಲಿ ಆ ಮನಸ್ಸನ್ನು ಪೂರಾ ತಿಂದು ತೇಗುವ ಹಿರಿದಾದ ಪರಾಕ್ರಮವಿರುವುದಾದರೆ ಆತನೆ ಹುಟ್ಟು ಸಾವುಗಳಿಲ್ಲದವನಾಗುವನು" ಎಂದು ಅಲ್ಲಮನು ನುಡಿದನು. ೧೫. ಆ ಬಳಿಕ ಬಸವಣ್ಣನು ಪ್ರಭುವನ್ನು ಕುರಿತು "ಘನ ಮಹಿಮನೆ ಕೃಪೆಮಾಡು. ನಿಜವಾಗಿ ಆ ಮನಸ್ಸನ್ನು ಇಲ್ಲವಾಗಿಸಿರುವೆನೆನ್ನುವುದು ಆ ಮನಸ್ಸೆ. ಅಲ್ಲದೆ ಆ ಮನಸ್ಸು ಹೇಗೆ ತಿನ್ನಲು ಬರುವುದು? ಮನಸ್ಸನ್ನು ಹೇಗಾದರೂ (ಮಾಡಿ) ವಾಸನಾರಹಿತವನ್ನಾಗಿ ಮಾಡುವುದು ಅಸಾಧ್ಯವೇನಲ್ಲ. ಆದರೆ ಮನಸ್ಸನ್ನು ಇಲ್ಲವಾಗಿಸುವುದು ಸೋಜಿಗ" ಎಂದನು.

ಮನವನಱಿದಿಹೆನೆಂಬುದದು ಮನ
ಮನವ ನಿಲಿಸಿಹೆನೆಂಬುದದು ಮನ
ಮನವನಳಿದಿಹೆನೆಂಬುದದು ಮನವಾವ ರೀತಿಯಲಿ
ಮನವೆ ತಾ ಹೆಱಿಸಾಱಿ ಬಹು ಯೋ
ಚನೆಗಳನು ರಂಜಿಸುವುದಂತಾ
ಮನವನೆಲ್ಲವನಳಿದನಾದರೆ ನಿತ್ಯನಹನೆಂದ ೧೬

ದೇವ ಬಿನ್ನಹ ಮನವನಳಿದ ನಿ
ರಾವಲಂಬಿಯ ಕುಱುಹದೆಂತುಟು
ಜೀವನೋ ಪರಮನೊ ಪರಾಪರನಾಮವುಳ್ಳವನೊ
ಆವುದಾಗಿಹುದಾತನಂಕಿತ
ನಾವು ತಿಳಿವಂತಿರೆ ನಿರೂಪಿಸಿ
ಕಾವುದೆನುತಲಿ ಮತ್ತೆ ಬಿನ್ನೈಸಿದನು ಬಸವಣ್ಣ ೧೭

ನೇಮವಿಲ್ಲದೆ ಮನವನೇ ತಿಂ
ದಾ ಮಹಾ ನಿರುಪಮ ನಿರಾಳಗೆ
ನಾಮ ರೂಪು ಕ್ರಿಯೆಗಳುಂಟೇ ಕುಱುಹ ತೋಱುವರೆ
ಪ್ರೇಮದಿಂದೊಂದೊಂದು ಸುಱುಹನು
ಕಾಮಿಸುವರಿಂತಿವರಿದಲ್ಲದೆ
ಆ ಮಹಾತ್ಮನಭೇದ್ಯ ಕಾಣಾ ಬಸವ ಕೇಳೆಂದ ೧೮

೧೬. "ಮನಸ್ಸನ್ನು ತಿಳಿದಿರುವೆನು ಎನ್ನುವುದು ಮನಸ್ಸು. ಮನಸ್ಸನ್ನು ನಿಲ್ಲಿಸಿರುವೆನು ಎನ್ನುವುದು ಮನಸ್ಸು. ಮನಸ್ಸನ್ನು ಇಲ್ಲವಾಗಿಸಿರುವೆನು ಎನ್ನುವುದು ಮನಸ್ಸು. ಮನವೇ ಹಿಂದೆ ನಿಂತು ಹೆಚ್ಚಿನ ಯೋಚನೆಗಳನ್ನು ಮೆರೆಯಿಸುವುದು. ಹಾಗಿರುವ ಮನಸ್ಸನ್ನು ಇಲ್ಲವಾಗಿಸಿದನಾದರೆ (ಆತ) ಹುಟ್ಟುಸಾವುಗಳಿಲ್ಲದವನಾಗುವನು" ಎಂದು ಅಲ್ಲಮನು ನುಡಿದನು. ೧೭. ಪ್ರಭುವನ್ನು ಕುರಿತು ಮತ್ತೆ ಬಸವಣ್ಣನು "ದೇವಾ (ನಿನ್ನಲ್ಲೊಂದು) ಪ್ರಾರ್ಥನೆ, ಮನಸ್ಸನ್ನು ಇಲ್ಲವಾಗಿಸಿದ ನಿರಾವಲಂಬಿಯ ಚಿಹ್ನೆ ಯಾವುದು? (ಆತ) ಜೀವನೊ ಪರಮಾತ್ಮನೊ? ಪರಾಪರ ನಾಮವನ್ನುಳ್ಳವನೊ? ಆತನ ಚಿಹ್ನೆ ಯಾವುದು? ನಾವು ತಿಳಿಯುವಂತೆ ಹೇಳಿ ಕಾಪಾಡುವುದು" ಎಂದು ವಿಜ್ಞಾಪನೆ ಮಾಡಿದನು. ೧೮. "ನಿಯಮಗಳಿಲ್ಲದೆ ಮನಸ್ಸನ್ನೇ ನುಂಗಿದ ಉಪಮಿಸಲಾಗದ ನಿಶ್ಚಿಂತನಿಗೆ ನಾಮ ರೂಪು ಕ್ರಿಯೆಗಳು ಇವೆಯೆ? ಯಾರಾದರೂ ಚಿಹ್ನೆಯನ್ನು ತೋರಿಸಲು ಸಾಧ್ಯವೆ? ಪ್ರೀತಿಯಿಂದ ಒಂದೊಂದು ಗುರುತನ್ನು ಬಯಸುತ್ತಾರೆ. ಇಷ್ಟೇ ಹೊರತು ಆ ಮಹಾತ್ಮನು ಭೇದಿಸಲಾಗದವನು, ಬಸವ ಕೇಳು" ಎಂದು ಅಲ್ಲಮನು ನುಡಿದನು.

ಗುರುವೆ ಬಿನ್ನಹವಾ ಮನವನಿ
ಟ್ಟೊರಸಿದನುಪಮನೊಂದು ಲಕ್ಷ್ಯ
ಸ್ಮರಣೆಯಿಂದಾಗಾದನಲ್ಲದೆ ಬಜಿದೆ ಬಹುದಿಲ್ಲ
ಕರುಣಿಸಾ ಲಕ್ಷ್ಯವನು ನಮ್ಮೆ
ಲ್ಲರಿಗೆ ಬಳಿಕೆಮ್ಮನುಭವಂಗಳ
ಪರಿಯನವಧರಿಸೆನುತಲಿದ್ದನು ಚೆನ್ನಬಸವಣ್ಣ ೧೯

ಲಕ್ಷ್ಯವನು ಪೇಳುವೊಡೆ ಮಾತಿನ
ಲಕ್ಷ್ಯವಲ್ಲ ಮಹಾನುಭಾವದ
ಲಕ್ಷ್ಯವಲ್ಲಷ್ಟಾಂಗಯೋಗದ ಲಕ್ಷ್ಯ ಮುನ್ನಲ್ಲ
ಲಕ್ಷ್ಯವದು ನಿರ್ಲಕ್ಷ್ಯವೇ ತಾ
ಲಕ್ಷ್ಯವಾಗಿಹುದೆಂದು ಘನಗುರು
ಲಕ್ಷಣವ ಲಕ್ಷಿಸಿಯೆ ನುಡಿದನು ಚೆನ್ನಬಸವಂಗೆ ೨೦

ನೆನಹಿಗಿಲ್ಲದ ನೋಟಕಿಲ್ಲದ
ತನುವಿಗಿಲ್ಲದ ಸಾಧನದ ಭಾ
ವನೆಯೊಳಿಲ್ಲದ ಹೇಳಲಿಲ್ಲದ ಕೇಳಲಿಲ್ಲೆಂಬ
ಅನುಪಮವನಿನ್ನಾವ ಪರಿಯಿಂ
ದನುಭವಿಸಿ ನೆಱೆ ನಿತ್ಯರಹೆವೆಂ
ದೆನುತ ಕೇಳಿದನಲ್ಲಮನ ಮಡಿವಾಳ ಮಾಚಯ್ಯ ೨೧

ಇಲ್ಲದುದ ತಾವಱಿದೆವೆಂಬಱಿ
ವುಳ್ಳವರು ತನುಮನಗಳೊಳು ತಾ
ವಿಲ್ಲದಿರಬೇಕಾಗಿಹುದು ಸಂಸಾರಸ್ವಪ್ನದಲಿ
ಇಲ್ಲದೆಚ್ಚತ್ತಱಿವು ಮಱಿಹಿನ
ಗಲ್ಲಣೆಯನೀಡಾಡಿ ತಾನಿರ
ಬಲ್ಲೊಡಾತನೆ ಮುಕ್ತನೈ ಮಡಿವಾಳ ಕೇಳೆಂದ ೨೨

೧೯. "ಗುರುವೆ, (ತಮ್ಮಲ್ಲಿ ಒಂದು) ವಿನಂತಿ. ಆ ಮನವನ್ನು ಚೆನ್ನಾಗಿ ಇಲ್ಲವಾಗಿಸಿದ ಎಣೆಯಿಲ್ಲದವನು ಒಂದು ಗುರಿಯ ನೆನಪಿನಿಂದ ಆದನಲ್ಲದೆ ಸುಮ್ಮನೆ ಆಗಲಿಲ್ಲ. ಆ ಗುರಿಯನ್ನು ನಮ್ಮೆಲ್ಲರಿಗೆ ಕರುಣಿಸು. ಬಳಿಕ ನಮ್ಮ ಅನುಭವಗಳ ರೀತಿಯನ್ನು ಕೇಳು" ಎಂದು ಚನ್ನಬಸವಣ್ಣನು ಪ್ರಭುವಿಗೆ ಹೇಳಿದನು. ೨೦. "ಗುರಿಯನ್ನು ಹೇಳುವುದಾದರೆ ಮಾತಿನ ಗುರಿಯಲ್ಲ, ಮಹಾನ್ ಅನುಭಾವದ ಗುರಿಯಲ್ಲ, ಅಷ್ಟಾಂಗಯೋಗದ ಗುರಿ ಮೊದಲೇ ಅಲ್ಲ, ಗುರಿಯಾದುದು ಗುರಿಯಿಲ್ಲದಿರುವುದೇ ಆಗಿದೆ" ಎಂದು ಘನಗುರುವಾದ ಅಲ್ಲಮನು ಲಕ್ಷಣವನ್ನು ಪರಿಕಿಸಿಯೆ ಚೆನ್ನಬಸವಣ್ಣನಿಗೆ ಹೇಳಿದನು. ೨೧. "ನೆನಹಿಗೆ ಸಿಗದ, ನೋಟಕ್ಕೆ ಸಿಗದ, ದೇಹಕ್ಕೆ ಸಿಗದ, ಸಾಧನೆಯ ಭಾವನೆಯಲ್ಲಿ ಇಲ್ಲದ, ಹೇಳಲೂ ಕೇಳಲೂ ಇಲ್ಲದ ಎಣೆಯಿಲ್ಲದುದನ್ನು ಮತ್ತಾವ ರೀತಿಯಲ್ಲಾದರೂ ಅನುಭವಿಸಿ ವಿಶೇಷವಾಗಿ ಹುಟ್ಟು ಸಾವುಗಳಿಲ್ಲದವರಾಗುತ್ತೇವೆಯೆ?" ಎಂದು ಮಡಿವಳ ಮಾಚಿದೇವನು ಅಲ್ಲಮನನ್ನು ಪ್ರಶ್ನಿಸಿದನು. ೨೨. "ಇಲ್ಲದಿರುವುದನ್ನು ತಾವು ತಿಳಿದೆವೆಂಬ ಅರಿವುಳ್ಳವರು ದೇಹ ಮನಸ್ಸುಗಳೊಳಗೆ ತಾವು ಇಲ್ಲದಿರಬೇಕಾಗಿರುವುದು. ಸಂಸಾರವೆಂಬ ಸ್ವಪ್ನದಲ್ಲಿ

ಹುಸಿವೊಡೀ ಮಾಯಕದ ತನುಮನ
ದೆಸಕವವನಿನ್ನಿಲ್ಲವೆನಿಸುವ
ಗಸಣೆಯೇತಕೆ ಬೇಱೆ ಮುಕ್ತಿಯ ಬೆದಕುತಿರಲೇಕೆ
ಹುಸಿಯೆ ನಾನಾಗಿರ್ದು ಮೇಣ್ ಹೂ
ಣಿಸುವ ಬಗೆ ದಿಟವಹವೆ ಎನುತಾ
ಬಸವ ಮೊದಲಾಗಿರ್ದ ಭಕ್ತರು ಕೇಳ್ದರಲ್ಲಮನ ೨೩

ನೀರ ಹೊಳೆ ಕೆಸರಾಗದಿಹುದೆ ವಿ
ಚಾರಿಸಲು ಬಸವನ ಸಮೀಪದ
ಲಾರು ಸಮ್ಯಗ್ಜ್ಞಾನಸಾಧಕರಾಗರೆಂದೆನುತ
ಹಾರವಿಸಿ ಭಕ್ತರು ನಿರಾಳವ
ಹಾರಿ ಬಿನ್ನಹ ಮಾಡೆ ಕರುಣಾ
ಕಾರ ಘನಗುರುವದಕೆ ಸಂತಸವಡುತಲಿಂತೆಂದ ೨೪

ಮಾತಿನದ್ವೈತದಲಿ ಮಾಱಿಯ
ಘಾತಿ ಮಾಣದು ಮನದ ಸಂಕ
ಲ್ಪಾತಿಶಯದಲಿ ನಾಮ ರೂಪು ಕ್ರಿಯೆ ನಿವಾರಿಸಲು
ಪ್ರೀತಿ ನೀತಿಯ ನುಂಗಿದುಪಮಾ
ತೀತನಾದಂಗಲ್ಲದಾಗದು
ಕೌತುಕವ ನಾನೇನ ಹೇಳುವೆ ಬಸವ ಕೇಳೆಂದ ೨೫

ಇಲ್ಲದೆ ಎಚ್ಚರಗೊಂಡ ಜ್ಞಾನ ಅಜ್ಞಾನಗಳ ತೊಂದರೆಯನ್ನು ನಿವಾರಿಸಿ ತಾನು ಇರಬಲ್ಲವನಾದರೆ ಆತನೇ ಹುಟ್ಟುಸಾವುಗಳಿಲ್ಲದವನಾಗುವನು, ಮಡಿವಾಳ ಮಾಚಿದೇವ ಕೇಳು" ಎಂದು ಅಲ್ಲಮನು ನುಡಿದನು. ೨೩. "ಸುಳ್ಳಾಗುವುದಾದರೆ ಈ ಮಾಯಾ ದೇಹ ಮನಗಳ ಕಾರ್ಯಗಳನ್ನು ಇಲ್ಲವೆನ್ನಿಸುವ ಗೊಡವೆಯೇಕೆ? ಬೇರೆಯದಾದ ಮುಕ್ತಿಯನ್ನು ಹುಡುಕುತ್ತಿರಲೇಕೆ? ನಾವೇ ಸುಳ್ಳಾಗಿರುವಾಗ ಆ ಭಾವನೆಯನ್ನು ತರುವ ಮನಸ್ಸು ನಿಜವಾಗಿರುವುದೆ?" ಎಂದು ಬಸವನೇ ಮೊದಲಾದ ಭಕ್ತರು ಅಲ್ಲಮನನ್ನು ಪ್ರಶ್ನಿಸಿದರು. ೨೪. "ನೀರು ತುಂಬಿದ ಹೊಳೆ ಕೆಸರು ಹೊಂದದಿರುತ್ತದೆಯೆ? ವಿಚಾರ ಮಾಡಲು ಬಸವನಿಗೆ ಸಮನಾಗಿ ಯಾರೂ ಪೂರ್ಣಜ್ಞಾನ ಸಾಧಕರಾಗರು" ಎಂದು ಭಕ್ತರು ಅಪೇಕ್ಷಿಸಿ ಶಾಂತಿಯನ್ನು ನಿರೀಕ್ಷಿಸಿ ವಿನಯದಿಂದ ತಿಳಿಸಲು ಕರುಣಾಮೂರ್ತಿಯಾದ ಘನಗುರುವು ಅದಕ್ಕೆ ಸಂತೋಷಪಡುತ್ತಾ ಹೀಗೆಂದನು. ೨೫. "ವಾಗದ್ವೈತದಿಂದ ಮಾರಿಯನ್ನು ಕೊಲ್ಲಲು ಸಾಧ್ಯವಿಲ್ಲ. ಮನಸ್ಸಿನ ಸಂಕಲ್ಪದ ಹೆಚ್ಚುಗಾರಿಕೆಯಿಂದ ನಾಮ ರೂಪು ಕ್ರಿಯೆಗಳನ್ನು ನಿವಾರಿಸಲು, ಪ್ರೀತಿ ನೀತಿಗಳನ್ನು ನುಂಗಿದ ಉಪಮಾತೀತನಾದವನಿಗಲ್ಲದೆ (ಅನ್ಯರಿಗೆ) ಆಗದು. (ಆ) ಆಶ್ಚರ್ಯವನ್ನು ನಾನೇನು ಹೇಳಲಿ, ಬಸವ ಕೇಳು" ಎಂದು ಅಲ್ಲಮನು ನುಡಿದನು.

ತೆಂಗನಗಿದಗಿದೊಡೆಯದೊಯ್ಯನೆ
ನುಂಗಿ ತಿರುಳನೆ ಜೀರ್ಣಿಸುವ ಮಾ
ತಂಗದಂತಿರೆ ಶರಿರವಳಿಯದ ಪರಿಯಲವಗವಿಸಿ
ಅಂಗದೊಳಹೊಱಗಿಡಿದ ಮಾಯೆಯ
ಹಿಂಗಿಸುವ ಗುರುಮಹಿಮೆ ನಿನಗೊ
ಬ್ಬಂಗೆ ಸಲುವುದು ವೇದ ಪಚ್ಚಲು ದೇವ ಕೇಳೆಂದ ೨೬

ಬಸವನೇ ಗುರುವಾಗಿ ತಾ ಬೋ
ಧಿಸಿದನೊಡನಧ್ಯಾತ್ಮಭಾವದ
ಬೆಸುಗೆಯನು ಮಝ್ಝು ಭಾಪು ನೀನಹುದೈ ಸಮಾಧಿಯಲಿ
ಹಸನ ಮಾಡಿದೆ ತನುಮನಂಗಳ
ದೆಸೆಯನಲ್ಲದೋಡೀ ತೆಱನನಾ
ರುಸುರಬಲ್ಲರು ಚಾಗೆನುತ ಮಚ್ಚಿದನು ಗುರುರಾಯ ೨೭

ಧರೆಯ ಕಠಿಣವ ಕೆಡಿಸಿ ನೀರಿನ
ಸಿರಿಯ ರಸವನೆ ದಹಿಸಿ ಪಾವಕ
ನುರಿಯ ನಂದಿಸಿ ಮಾರುತನ ಸಂಚಲವ ಗತಿಗೆಡಿಸಿ
ಹಿರಿಯ ಗಗನವನಿಂಬುಗೊಂಡಿಹ
ಶರಣತನದ ಮಹಾತ್ಮೆ ನಿನ್ನನು
ಶರಣುವೊಕ್ಕುದು ಬಸವ ಮಝ್ಝು ಭಾಪೆಂದ ಗುರುರಾಯ ೨೮

೨೬. "ತೆಂಗನ್ನು ಅಗಿದಗಿದು ಒಡೆಯದೆ ಮೆಲ್ಲನೆ ನುಂಗಿ ಅದರ ತಿರುಳನ್ನೇ ಜೀರ್ಣಿಸುವ ಆನೆಯಂತೆ ಶರೀರವನ್ನು ನಾಶಮಾಡದ ರೀತಿಯಲ್ಲಿ ಕುಂದಿಸಿ, ದೇಹದ ಒಳಹೊರಗೆ ತುಂಬಿದ ಮಾಯೆಯನ್ನು ಹಿಮ್ಮೆಟ್ಟಿಸುವ ಘನವಾದ ಮಹಿಮೆ, ವೇದಗಳು ಹೊಗಳುವಂತೆ ನಿನಗೊಬ್ಬನಿಗೇ ಸಲ್ಲುವುದು ದೇವ, ಕೇಳು" ಎಂದು ಬಸವನು ನುಡಿದನು. ೨೭. ಬಸವನೇ ಗುರುವಾಗಿ ಕೂಡಲೇ ಅಧ್ಯಾತ್ಮಭಾವದ ಬೆಸುಗೆಯನ್ನು ತಾನೇ ಬೋಧಿಸಿದನು. "ಭೇಷ್, ಭೇಷ್! ನೀನು ನಿಜವಾಗಿ ಏಕಾಗ್ರಚಿತ್ತದಿಂದ ತನುಮನಗಳ ಸ್ಥಿತಿಯನ್ನು ಶುದ್ಧಮಾಡಿದೆ. ಹಾಗಿಲ್ಲದಿದ್ದರೆ ಈ ರೀತಿಯಲ್ಲಿ ಯಾರು ತಾನೇ ಹೇಳಬಲ್ಲರು? ಭಲರೇ" ಎನ್ನುತ್ತ ಗುರುರಾಯನು ಮೆಚ್ಚಿದನು. ೨೮. "ಭೂಮಿಯ ಕಾಠಿಣ್ಯವನ್ನೇ ನಿವಾರಿಸಿ, ನೀರಿನ ಸಂಪದ್ಭರಿತವಾದ ರಸವನ್ನೇ ಸುಟ್ಟು, ಅಗ್ನಿಯ ಬೆಂಕಿಯನ್ನೇ ನಂದಿಸಿ, ವಾಯುವಿನ ಚಲನಶಕ್ತಿಯನ್ನೇ ದಿಕ್ಕುತಪ್ಪಿಸಿ ದೊಡ್ಡದಾದ ಆಕಾಶವನ್ನೇ ಆಶ್ರಯವಾಗಿ ಮಾಡಿಕೊಂಡಿರುವ ನಿನ್ನ ಶರಣತನದ ಮಹಾತ್ಮೆ ನಿನ್ನಲ್ಲಿ ಶರಣು ಹೋದುದು. ಬಸವ ಭಲರೇ, ಭೇಷ್" ಎಂದು ಗುರುರಾಯನು ಹೊಗಳಿದನು.

ಬಸವ ಮಾಡಿದೊಡಾಯ್ತು ಗುರುನೆಲೆ
ಬಸವ ಮಾಡಿದೊಡಾಯ್ತು ಲಿಂಗವು
ಬಸವ ಮಾಡಿದೊಡಾಯ್ತು ಜಂಗಮವಜೆವ ಮಹಿಮಂಗೆ
ಬಸವನಿಂದಧ್ಯಾತ್ಮವೇ ಪಸ
ರಿಸಿತು ಲೋಕದೊಳಂತುಕಾರಣ
ಬಸವನೇ ಪರದೈವವೆಂದೆನುತಿರ್ದ ಗುರುರಾಯ ೨೯

ಮನವೆಯಕ್ಕನು ಚೆನ್ನಬಸವನೆ
ನೆನಹು ಮಡಿವಳನಱಿವು ಬಾಚರ
ಸನೆ ವಿವೇಕ ಸುಶೀಲವೇ ತಾ ಹಡಪದಪ್ಪಣ್ಣ
ತನುವೆ ಕಿನ್ನರ ಬಸವನೇ ಚೇ
ತನಕಳಾತ್ಮಕನಂತು ಬಸವ
ಣ್ಣನ ಮಹಾತ್ಮೆಯನೇನ ಹೊಗಳುವೆನೆಂದ ಗುರುರಾಯ ೩೦

ದೇವ ನಿನ್ನಯ ಭಕ್ತರೆಲ್ಲರು
ಜೀವ ನೀನೇ ಪರಮನಿಂತೀ
ಜೀವಪರಮರನೊಂದುಮಾಡಿ ನಿರಾವಲಂಬನದ
ಠಾವನೆಡೆಗುಡು ಸಾಕು ಹೊಗಳುವೊ
ಡಾವು ನಿನಗೊಂದಿದಿರೆ ಎನುತವೆ
ತೀವಿ ಭಯಭಕ್ತಿಯಲಿ ಬಿನ್ನೈಸಿದನು ಬಸವಣ್ಣ ೩೧

ಹೆಚ್ಚಿದನು ಗುರುಕರುಣದಿಂದಲಿ
ನಚ್ಚಿದನು ಗುರು ಬಸವರಾಜನ
ಮೆಚ್ಚಿದನು ಗುರು ತನ್ನ ಭಕ್ತಿಯ ಸವಿಯ ತನಿರಸವ
ಕೊಚ್ಚಿದನು ಗುರು ಮಱವೆಯೆಲ್ಲವ
ಮುಚ್ಚಿದನು ಗುರು ಭಿನ್ನಭಾವವ
ಬಿಚ್ಚಿದನು ಗುರು ಭವದ ಬಂಧವ ತನ್ನ ಭಕ್ತರಲಿ ೩೨

೨೯. "ಬಸವನಿಂದಲೇ ಗುರುವಾಯಿತು; ಬಸವನಿಂದಲೇ ಲಿಂಗವಾಯಿತು. ಬಸವನಿಂದಲೇ ಜಂಗಮವಾಯಿತು. ಜ್ಞಾನಿಯಾದ ಮಹಿಮನಿಗೆ ಬಸವನಿಂದ ಅಧ್ಯಾತ್ಮವೇ ಹರಡಿತು. ಆದ ಕಾರಣ ಲೋಕದಲ್ಲಿ ಬಸವನೇ ಪರದೈವ" ವೆಂದು ಗುರುರಾಯನು ಹೊಗಳುತ್ತಿದ್ದನು. ೩೦. ಮನಸ್ಸೇ ಮಹದೇವಿಯಕ್ಕನು. ನೆನಹೇ ಚನ್ನಬಸವನು. ಜ್ಞಾನವೇ ಮಡಿವಳ ಮಾಚಿದೇವನು. ವಿವೇಕವೇ ಬಾಚರಸನು. ಸುಶೀಲವೇ ಹಡಪದಪ್ಪಣ್ಣನು. ದೇಹವೇ ಕಿನ್ನರಿ ಬೊಮ್ಮಿತಂದೆಯು. ಇವೆಲ್ಲವುಗಳ ಚೇತನವೇ ಬಸವಣ್ಣ. ಹೀಗೆ ಬಸವಣ್ಣನ ಮಹಿಮೆಯನ್ನು ಎಷ್ಟೆಂದು ಹೊಗಳಲಿ!" ಎಂದು ಗುರುರಾಯನು ನುಡಿದನು. ೩೧. "ದೇವಾ, ಎಲ್ಲರೂ ನಿನ್ನ ಭಕ್ತರು. ನೀನೇ ಜೀವ. ನೀನೇ ಪೂರ್ಣನು. ಹೀಗೆ ಈ ಜೀವ ಪರಮರನ್ನು ಒಂದುಮಾಡಿ ನಿರಾಶ್ರಯದ ಸ್ಥಳಕ್ಕೆ ಅವಕಾಶ ಮಾಡಿಕೊಡು, ಅಷ್ಟು ಸಾಕು. ಹೊಗಳುವುದಾದರೆ ನಿನ್ನ ಮುಂದೆ ನಾವಾರು?"ಎಂದು ಹೇಳುತ್ತ ಭಯಭಕ್ತಿಯಿಂದ ಕೂಡಿ ಬಸವಣ್ಣನು ಪ್ರಭುವನ್ನು ಪ್ರಾರ್ಥಿಸಿದನು. ೩೨. ಗುರುವು ಕರುಣೆಯಿಂದ ಉಬ್ಬಿದನು. ಬಸವರಾಜನಲ್ಲಿ ವಿಶ್ವಾಸವಿಟ್ಟನು. ಗುರುವು ಭಕ್ತರು ತನ್ನಲ್ಲಿ ತೋರಿದ ಭಕ್ತಿಯ ಇನಿದಾದ

ಹಲವು ದಿನ ಮಱೆದೊಱಗಿ ನಿದ್ರೆಯ
ಬಲೆಯೊಳಗೆ ದುಸ್ವಪ್ನಕೋಟಿಯ
ಕೊಲೆಗೆಲಸಕೊಳಗಾದವರನೆಬ್ಬಿಸುವ ತೆಱನಂತೆ
ತೊಲಗಿಸುವೆ ಸಂಸಾರಸ್ವಪ್ನವ
ತಿಳುಹಿ ನಿಜಪದವಿಗಳ ಕೊಡುವೆನು
ಸುಲಭದಲಿ ನಾನೆನ್ನ ಭಕ್ತರಿಗೆಂದ ಗುರುರಾಯ ೩೩

ಎಂದು ಬಳಿಕವರವರಿಗುಚಿತಗ
ಳಿಂದಲವರವರನುಭವಂಗಳ
ಹೊಂದಿಕೆಯ ಹೋಲುವೆಯ ಬೆಂಬಳಿವಿಡಿದು ಕರುಣದಲಿ
ಸಂದ ಸಮ್ಯಗ್ಜ್ಞಾನ ಶಿರದ
ಲ್ಲಿಂದ ಮೀಱಿದ ಸುಖದ ಪರಮಾ
ನಂದವಹ ಸಂಕೇತಗಳ ಕರುಣಿಸಿದ ಗುರುರಾಯ ೩೪

ನಾನು ನೀನೆಂದೆಂಬ ಭೇದವಿ
ಧಾನವಲ್ಲದನದ್ವಿತೀಯವ.
ಧಾನವಲ್ಲದ ಜ್ಞಾತೃ ಜ್ಞಾನ ಜ್ಞೇಯ ವಿರಚಿಸಿದ
ಏನುವೆನಿಸದ ಏನುವಿಲ್ಲದ
ಏನುವಲ್ಲದ ನಿರುಪಮದ ಸುಯಿ
ದಾನ ಸುಖವನೆ ಕೊಟ್ಟನಾ ಗುರು ಬಸವರಾಜಂಗೆ ೩೫

ತನಿರಸವನ್ನು ಮೆಚ್ಚಿದನು. ಅಜ್ಞಾನವನ್ನೆಲ್ಲಾ ಕೊಚ್ಚಿಹಾಕಿದನು. ಭಿನ್ನಭಾವಗಳನ್ನು ಮುಚ್ಚಿದನು. ಗುರುವು ತನ್ನ ಭಕ್ತರಲ್ಲಿ ಭವದ ಕಟ್ಟನ್ನು ಬಿಚ್ಚಿದನು. ೩೩. "ಹಲವು ದಿವಸ ಮೈಮರೆತು ನಿದ್ರೆಯ ಬಲೆಯಲ್ಲಿ ಮಲಗಿ ಕೋಟಿಸಂಖ್ಯೆಯಲ್ಲಿ ಕೆಟ್ಟ ಕನಸುಗಾಣುತ್ತ, ಕೊಲೆಯ ಕೆಲಸಕ್ಕೆ ಒಳಗಾದವರನ್ನು ಎಚ್ಚರಿಸುವ ರೀತಿಯಲ್ಲಿ ಸಂಸಾರವೆಂಬ ಕೆಟ್ಟ ಕನಸನ್ನು ತಿಳಿಸಿ ಸುಲಭವಾಗಿ ಮಾಯಾರಹಿತ ಸ್ಥಿತಿಯನ್ನು ನಾನು ನನ್ನ ಭಕ್ತರಿಗೆ ಅನುಗ್ರಹಿಸುವೆನು" ಎಂದು ಗುರುರಾಯನು ಹೇಳಿದನು. ೩೪. ಹಾಗೆಂದು ಹೇಳಿ ಬಳಿಕ ಕರುಣೆಯಿಂದ ಅವರವರಿಗೆ ಯೋಗ್ಯವಾದ ರೀತಿಯಲ್ಲಿ, ಅವರವರ ಅನುಭವಗಳು ಹೊಂದಿಕೊಳ್ಳುವ, ಹೋಲಿಕೆಯಾಗುವ ರೀತಿಯನ್ನು ಅನುಸರಿಸಿ ಪ್ರಖ್ಯಾತವಾದ ಪರಿಪೂರ್ಣಜ್ಞಾನಕ್ಕೆ ಮೀರಿದ ಸುಖವನ್ನೂ ಪರಮಾನಂದದ ಚಿಹ್ನೆಗಳನ್ನೂ ಗುರುರಾಯನು ಅನುಗ್ರಹಿಸಿದನು. ೩೫. ಆ ಗುರುವು ಬಸವರಾಜನಿಗೆ ನಾನು ನೀನು ಎಂಬ ಭೇದವಿಲ್ಲದ, ಅದ್ವಿತೀಯವಾದ ಜ್ಞಾತೃ (ತಿಳಿಯತಕ್ಕವನು), ಜ್ಞಾನ (ತಿಳಿಯಲು ಸಾಧನ), ಜ್ಞೇಯ (ತಿಳಿಯುವ ವಸ್ತು)ಗಳಿಂದಾದ ಭೇದವಿಲ್ಲದ ನಿರುಪಮವಾದ ಜ್ಞಾನವನ್ನು ಉಂಟುಮಾಡಿ ಅನುಗ್ರಹಿಸಿದನು.

ಮರಣವಿಲ್ಲದ ಜನನವಿಲ್ಲದ
ಕರಣವಿಲ್ಲದ ಕರ್ಮವಿಲ್ಲದ
ಯಿಹಪರಂಗಳೊಳೊಡಲ ಬಿಟ್ಟಿಯ ಹೊಱೆಗಳನು ಹೊಱದ
ನಿರುಪಮದ ನಿಶ್ಚಿಂತ ನಿಶ್ಚಲ
ಪರಮ ನಿತ್ಯಾನಂದಪದವಿಯ
ಕರುಣಿಸಿದನಾ ಗುರು ಗುಹೇಶ್ವರಲಿಂಗ ಬಸವಂಗೆ ೩೬

ಭೂರುಹದ ತಾಯ್ಬೇರಿಗಮೃತದ
ನೀರನೆಱೆದೊಡೆ ಶಾಖೆಗಳಿಗೆ ಪ
ಸಾರ ವೇದಿಸುವಂತೆ ಬಸವನ ಭಕ್ತಿಬಂಧುಗಳು
ಹಾರವಿಸುವಂತೆಮ್ಮ ಬಸವನ
ಕಾರಣದಲೆಲ್ಲರಿಗೆ ತನ್ನಯ
ಸಾರ ನಿತ್ಯಾನಂದಪದವಿಯನಿತ್ತ ಗುರುರಾಯ ೩೭

ತಾನೆಯೊಡ್ಡಿದ ಮಾಯೆಯನು ದಿಟ
ತಾನೆ ಹುಸಿಯೆಂದಿಲ್ಲವೆನಿಸುವ
ದೇನರಿದು ಬಸವಣ್ಣ ಮೊದಲಾಗಿರ್ದ ಭಕ್ತರಿಗೆ
ತಾನೆ ಕರುಣಿಸಿ ನುಡಿದು ಪರಮ
ಜ್ಞಾನದೃಷ್ಟಿಯನಿತ್ತು ಕೊಟ್ಟನು
ತಾನೆ ತನ್ನೊಲವಿಂದಲಾ ಪ್ರಭು ತನ್ನ ನಿಜಪದವ ೩೮

ಪರಿಪರಿಯ ಬಣ್ಣದಲಿ ಬಂದ
ಬ್ಬರದ ಮುಗಿಲೊಡ್ಡವಣೆಯಾಕ್ಷಣ
ಹರಿದು ನಿರ್ಮಲವಾಗದೇ ಬಿರುಗಾಳಿ ಬೀಸಿದರೆ
ಹರಿದು ಹೋಯಿತು ನಿಮಿಷಮಾತ್ರಕೆ
ಹರಗಣಂಗಳ ಮನದ ವಾಸನೆ
ಪರಮಸುಖವಾಯ್ತವರಿಗಾ ಪ್ರಭುಲಿಂಗಲೀಲೆಯಲಿ ೩೯

೩೬. ಸಾವಿಲ್ಲದ, ಹುಟ್ಟಿಲ್ಲದ, ಇಂದ್ರಿಯಗಳಿಲ್ಲದ, ಕರ್ಮವಿಲ್ಲದ, ಇಹಪರಗಳಲ್ಲಿ ದೇಹದ ಬಿಟ್ಟಿಯ ಹೊರೆಗಳನ್ನು ಹೊರದ, ಹೋಲಿಕೆಯಿಲ್ಲದ, ಚಿಂತೆಯಿಲ್ಲದ, ಚಾಂಚಲ್ಯವಿಲ್ಲದ ಪರಮ ನಿತ್ಯಾನಂದ ಪದವಿಯನ್ನು ಗುರು ಗುಹೇಶ್ವರಲಿಂಗನು ಬಸವನಿಗೆ ಅನುಗ್ರಹಿಸಿದನು. ೩೭. ವೃಕ್ಷದ ತಾಯಿಬೇರಿಗೆ ಅಮೃತಸಮಾನವಾದ ನೀರನ್ನು ಎರೆದರೆ ಅದರ ಕೊಂಬೆಗಳಿಗೆ ಸಾರವು ಮುಟ್ಟುವಂತೆ ಬಸವನ ಭಕ್ತಿಯ ಬಂಧುಗಳು ಬಯಸುವಂತೆ ನಮ್ಮ ಬಸವಣ್ಣನ ಮೂಲಕವಾಗಿ ಎಲ್ಲರಿಗೂ ಗುರುರಾಯನು ತನ್ನ ಶ್ರೇಷ್ಠವಾದ ನಿತ್ಯಾನಂದ ಪದವಿಯನ್ನು ಅನುಗ್ರಹಿಸಿದನು. ೩೮. ತಾನೇ ನಿಲ್ಲಿಸಿದ ಮಾಯೆಯನ್ನು ನಿಜವಾಗಿ ತಾನೇ ಸುಳ್ಳೆಂದು ಇಲ್ಲವಾಗಿಸುವುದು ಅಸಾಧ್ಯವೆ? ತಾನೇ ಕರುಣಿಸಿ ನುಡಿದು ಬಸವಣ್ಣನೇ ಮೊದಲಾದ ಭಕ್ತರಿಗೆ ಪರಮಜ್ಞಾನದೃಷ್ಟಿಯನ್ನು ಕೊಟ್ಟು ಆ ಪ್ರಭುವು ತನ್ನಿಚ್ಛೆಯಿಂದ ತಾನೇ ಮಾಯಾರಹಿತ ಸ್ಥಿತಿಯನ್ನು ಅನುಗ್ರಹಿಸಿದನು. ೩೯. ಬಗೆಬಗೆಯ ಬಣ್ಣಗಳಲ್ಲಿ ಬಂದ ಅಬ್ಬರಯುಕ್ತವಾದ ಮೋಡಗಳ ಮೊತ್ತವು ಬಿರುಗಾಳಿ ಬೀಸಿದರೆ ಆ ಕ್ಷಣ ಸರಿದು

ಪೊಡವಿಯಜಿಯಲು ಬಸವರಾಜನು
ಮಡಿವಳಯ್ಯನು ಚೆನ್ನಬಸವನು
ಹಡಪದಪ್ಪಣ್ಣಗಳು ನಾಗಾಯಿಗಳು ಮೊದಲಾದ
ಮೃಡನ ಶರಣರು ಗುರು ಗುಹೇಶ್ವರ
ನಡಿಯ ಕರುಣದಲಚಲಪದವಿಯ
ಹಡೆದು ಹರುಷದಲಿದ್ದರನುದಿನ ಪರಮಸುಖದಿಂದೆ ೪೦

ಇತ್ತಲತಿ ಸುಲಭದಲಿ ಕರುಣಿಸಿ
ನಿತ್ಯಪದವಿಯನಖಿಳ ಶರಣರಿ
ಗಿತ್ತು ತಾ ಪರಿಪೂರ್ಣತೆಯ ನಿರ್ಲೇಪವೃತ್ತಿಯಲಿ
ತತ್ವಮಸಿ ವಾಕ್ಯಂಗಳಿಂದ
ತ್ತತ್ತಲನುಪಮನಾಗಿ ತೊಲಗದೆ
ಸತ್ಯಶರಣರ ಸಲಹುತಿರ್ದನು ಗುರು ಗುಹೇಶ್ವರನು ೪೧

ಅಂತು ಗತಿ ೨೪ ಕ್ಕಂ ಪದ ೧೦೮೬ಕ್ಕಂ ಮಂಗಳಂ

ನಿರ್ಮಲವಾಗುವುದಿಲ್ಲವೆ? ಶಿವಗಣಗಳ ಮನದ ವಾಸನೆ ನಿಮಿಷಮಾತ್ರದಲ್ಲಿಯೇ ಮಾಯವಾಗಿ ಹೋಯಿತು. ಅವರಿಗೆ ಪ್ರಭುಲಿಂಗನ ಲೀಲೆಯಿಂದಾಗಿ ಪರಮಸುಖ ಪ್ರಾಪ್ತಿಯಾಯಿತು. ೪೦. ಲೋಕ ತಿಳಿಯಲು ಬಸವರಾಜ, ಮಡಿವಳಯ್ಯ, ಚನ್ನಬಸವ, ಹಡಪದಪ್ಪಣ್ಣ, ನಾಗಾಯಿ ಮೊದಲಾದ ಶಿವನ ಶರಣರು ಗುರು ಗುಹೇಶ್ವರನ ಪಾದಗಳ ಕರುಣೆಯಿಂದ ಶಾಶ್ವತಪದವಿಯನ್ನು ಹೊಂದಿ ನಿತ್ಯವೂ ಸಂತೋಷದಿಂದ ಪರಮಸುಖದಿಂದ ಇದ್ದರು. ೪೧. ಈ ಕಡೆ ಅತಿ ಸುಲಭವಾಗಿ ಕರುಣಿಸಿ, ನಿತ್ಯಪದವಿಯನ್ನು ಸಕಲ ಶರಣರಿಗೆ ಇತ್ತು, ಆ ಕಡೆ ತಾನು ಪರಿಪೂರ್ಣತೆಯ ನಿರ್ಲೇಪವೃತ್ತಿಯಲ್ಲಿ ಆ ಪರಬ್ರಹ್ಮವಸ್ತುವು ನೀನೇ ಆಗಿರುವೆ ಎಂಬ ವಾಕ್ಯಗಳಿಂದ ಅನುಪಮನಾಗಿ ಸತ್ಯವಂತರಾದ ಶರಣರನ್ನು ಗುರು ಗುಹೇಶ್ವರನು ಕಾಪಾಡುತ್ತಿದ್ದನು.

## ೨೫. ಪರಮೇಶ್ವರನು ಗಿರಿಜೆಗೆ ಬೋಧಿಸಿದುದು

**ಗತಿ ೨೫**

ಸೂಚನೆ : ಸತ್ಯ ಶರಣರಿಗಲ್ಲಮಪ್ರಭು
ನಿತ್ಯಪದವಿಯನೀಯೆ ನಿಗಮ
ಸ್ತುತ್ಯ ಶಂಕರನದನು ವಿಸ್ತರಿಸಿದನು ಗಿರಿಸುತೆಗೆ

ಬಲ್ಲವರು ಭಾವಕರು ಭಕ್ತಿಯ
ನುಳ್ಳವರು ಸಾಧಕರು ರಸಿಕರು
ಸೊಲ್ಲಿನೊಳಗಜಿವವರು ಸಕಳ ಕಳಾವಿಳಾಸಿಗಳು
ಎಲ್ಲರಾಲಿಸಿ ಕೇಳುವುದು ಸಲೆ
ಸಲ್ಲಲಿತ ಸಂಗತಿಯ ಪದದೊಳ
ಗಲ್ಲಮನ ಮಹಿಮೆಗಳನೀ ಪ್ರಭುಲಿಂಗಲೀಲೆಯಲಿ ೧

ಶರಣಸಂದೋಹವನು ತನ್ನಯ
ಪರಮ ನಿತ್ಯಾನಂದಪದವಿಯ
ಲಿರಿಸಿ ತಾನಲ್ಲಿಂದೆ ಹೋಗತಲವರ ಬೀಳ್ಕೊಟ್ಟು
ಕರುಣದಿಂದಲಿ ಸಕಲ ಸಚರಾ
ಚರರೊಳಂತರಿಯಾಮಿಯಾಗಿಯೆ
ಗುರು ಗುಹೇಶ್ವರಲಿಂಗನಿರ್ದನು ತನ್ನ ಲೀಲೆಯಲಿ ೨

ಖರಕರಪ್ರತಿಬಿಂಬವಖಿಳರೊ
ಳಿರಲದೇನೆಲ್ಲರಿಗೆಯದು ಗೋ
ಚರವೆ ನಿರ್ಮಲ ನಿಶ್ಚಲದ ನೀರಿನಲಿ ತೋರ್ಪಂತೆ
ಭರಿತನಾಗಿರ್ದೆಲ್ಲರಿಗೆ ವಿ
ಸ್ತರಿಸಿ ತೋಜದೆ ಸತ್ಯ ಸದ್ಭ
ಕ್ತರಲಿ ಕಾಣಿಸುತಿರ್ದನಲ್ಲಮಲಿಂಗ ಲೀಲೆಯಲಿ ೩

ಸೂ : ಅಲ್ಲಮಪ್ರಭುವು ಸತ್ಯವಂತರಾದ ಶಿವಶರಣರಿಗೆ ಶಾಶ್ವತಪದವಿಯನ್ನು ಅನುಗ್ರಹಿಸಲು ಅದನ್ನು ವೇದಗಳಿಂದ ಸ್ತುತಿಸಲ್ಪಟ್ಟ ಶಂಕರನು ಗಿರಿಜೆಗೆ ವಿವರಿಸಿದನು. ೧. ತಿಳಿದವರು, ವಿದ್ವಾಂಸರು, ಭಕ್ತರು, ಸಾಧಕರು, ರಸಿಕರು, ಮಾತಿನ ಅಂತರಾರ್ಥವನ್ನು ತಿಳಿಯಬಲ್ಲವರು, ಸಕಲಕಲಾವಿಲಾಸಿಗಳು, ಎಲ್ಲರೂ ಅಲ್ಲಮನ ಮಹಿಮೆಗಳನ್ನು (ಸಾರುವ) ಅತ್ಯಂತ ಮನೋಹರವಾದ ಪ್ರಸಂಗಗಳನ್ನು ಈ ಪ್ರಭುಲಿಂಗಲೀಲೆಯ ಪದ್ಯಗಳ ಸಾಲುಗಳಲ್ಲಿ ಮನವಿಟ್ಟು ಕೇಳುವುದು. ೨. ತನ್ನ ಶರಣರ ಸಮೂಹವನ್ನು ಶ್ರೇಷ್ಠವಾದ ಶಾಶ್ವತಪದವಿಯಲ್ಲಿರಿಸಿ, ತಾನು ಅಲ್ಲಿಂದ ನಿರ್ಗಮಿಸುತ್ತ ಅವರನ್ನು ಬೀಳ್ಕೊಟ್ಟು, ಕರುಣೆಯಿಂದ ಸಕಲ ಸಚರಾಚರರಲ್ಲಿ ಅಂತರ್ಯಾಮಿಯಾಗಿ ತನ್ನ ಲೀಲೆಯಲ್ಲಿ ಗುರು ಗುಹೇಶ್ವರಲಿಂಗನು ಇದ್ದನು. ೩. ಸೂರ್ಯನ ಪ್ರತಿಬಿಂಬವು ಎಲ್ಲದರಲ್ಲಿ ಇದ್ದರೂ ಅದು ಎಲ್ಲರಿಗೂ ಕಾಣಿಸುವುದೆ? (ಅದು) ಪರಿಶುದ್ಧವೂ, ಪ್ರಶಾಂತವೂ (ಆದ) ನೀರಿನಲ್ಲಿ

ಗುರು ಗುಹೇಶ್ವರಲಿಂಗ ತನ್ನಯ
ಚರಣಭಕ್ತರ ಹೃದಯಕಮಲಾ
ಕರದಲಾಡುತ ಹಂಸೆಯಂತಿರುತಿರ್ದನೊಲಿದಿತ್ತ
ಹರುಷದಲಿ ಬಳಿಕತ್ತ ಪರಮೇ
ಶ್ವರನೊಳಾ ಕೈಲಾಸಪುರದೊಳು
ಸರಸಗೋಷ್ಠಿಯ ಮಾಡುತಂದಿಂತೆಂದಳಾ ಗಿರಿಜೆ ೪

ಎಲೆಸದಾಶಿವ ನನ್ನ ಸಾತ್ವಿಕ
ಕಳೆಯ ನಿನ್ನಯ ಗಣವ ನೀನಂ
ದಿಳೆಯಲುದಯಿಸಿಯಲ್ಲಮಪ್ರಭುಲಿಂಗನೊಲವಿಂದೆ
ತಿಳಿದು ನಿತ್ಯತ್ವವನ್ನು ಸಾಧಿಸಿ
ಕೊಳಲಿಯೆಂದನಿಬರನು ಕಳುಹಿದೆ
ಬಳಿಕಲವರೇನಾದರೆಂದಾಲಿಸಿದಳಾ ಗಿರಿಜೆ ೫

ಎನಲು ಬಸವಣ್ಣಾದಿ ಭಕ್ತರಿ
ಗನುಪಮದ ಪದವಾದುದನು ತಾ
ನೆನೆದ ನೆನಹಿಗೆ ಮುಂಚೆ ಕಂಡನು ಶರ್ವ ಸರ್ವಜ್ಞ
ಮನವೊಲಿದು ನಸುನಗೆಯ ಕಾಂತಿಯ
ನನೆಯನಲರಿಸುತಾ ಹದನ ನಿಜ
ವನಿತೆಗೊರೆವುತಲಿರ್ದನಾನಂದದಲಿ ಶಶಿಮೌಳಿ ೬

ಕಾಣಿಸುವುದು. ಹಾಗೆಯೇ ಅಲ್ಲಮಲಿಂಗನು ಎಲ್ಲರಲ್ಲಿಯೂ ತುಂಬಿದ್ದರೂ ಅವರೆಲ್ಲರಿಗೂ ವಿವರವಾಗಿ ಕಾಣಿಸದೆ ಸತ್ಯವಂತರೂ ಸದ್ಭಕ್ತರೂ ಆದವರಿಗೆ ಮಾತ್ರ ತನ್ನ ಲೀಲೆಯಲ್ಲಿ ದರ್ಶನವೀಯುತ್ತಿದ್ದನು. ೪. ಈ ಕಡೆ ಲೋಕಗುರುವಾದ ಗುಹೇಶ್ವರಲಿಂಗನು ಹರುಷದಿಂದ ತನ್ನ ಪಾದಗಳನ್ನೇ (ನಂಬಿರುವ) ಭಕ್ತರ ಹೃದಯಕಮಲವೆಂಬ ಸರೋವರದಲ್ಲಿ ಆಡುವ ಹಂಸದಂತೆ ಪ್ರೀತಿಯಿಂದ ಇರುತ್ತಿದ್ದನು. ಬಳಿಕ ಅತ್ತ ಕೈಲಾಸಪುರದಲ್ಲಿ ಪರಮೇಶ್ವರನೊಂದಿಗೆ ಗಿರಿಜೆ ಸರಸವಾಗಿ ಮಾತುಕತೆಯಾಡುತ್ತ ಹೀಗೆಂದಳು. ೫. "ಎಲೆ ಸದಾಶಿವ, ನನ್ನ ಸಾತ್ವಿಕಕಳೆಯಾದ ಮಹಾದೇವಿಯನ್ನೂ ನಿನ್ನ ಗಣಗಳನ್ನೂ ನೀನು ಅಂದು ಭೂಮಿಯಲ್ಲಿ ಹುಟ್ಟಿ ಅಲ್ಲಮಪ್ರಭುಲಿಂಗನಿಂದ ಮುಕ್ತಿಯ ಮಾರ್ಗವನ್ನು ಪ್ರೀತಿಯಿಂದ ತಿಳಿದು ಶಾಶ್ವತಪದವಿಯನ್ನು ಸಾಧಿಸಿಕೊಳ್ಳಲಿ ಎಂದು ಅವರೆಲ್ಲರನ್ನೂ ಕಳುಹಿಸಿದೆ. ಅನಂತರ ಅವರೇನಾದರು?" ಎಂದು ಗಿರಿಜೆಯು ಕೇಳಿದಳು. ೬. ಬಸವಣ್ಣನೇ ಮೊದಲಾದ ಭಕ್ತರಿಗೆ ಸಾಟಿಯಿಲ್ಲದ ಪದವಿ ಪ್ರಾಪ್ತವಾದುದನ್ನು ನೆನಪು ಬರುವುದಕ್ಕೆ ಮುನ್ನವೇ ಆ ಸರ್ವಜ್ಞನು ಕಂಡುಕೊಂಡನು. ಮನಮೆಚ್ಚಿ ಚಂದ್ರಮೌಳಿಯು ನಸುನಗೆಯೆಂಬ ಮೊಗ್ಗನ್ನು ಅರಳಿಸುತ್ತ ಆ ಸಂಗತಿಯನ್ನು ತನ್ನವಳಿಗೆ ಆನಂದದಿಂದ ಹೇಳುತ್ತಲಿದ್ದನು.

ದೇವಿ ನಿನ್ನಯ ಸಾತ್ವಿಕವೆ ಮಹ
ದೇವಿವೆಸರಲಿ ಹುಟ್ಟಿ ಬಳೆದಳು
ದೇವಗಣದೊಳು ವೃಷಭರಾಜನೆ ಬಸವವೆಸರಿನಲಿ
ಶೇವಿ ಮಿಕ್ಕವರೆಲ್ಲರುಚಿತವ
ಚೋವಿಳಾಸತೆ ಹೆಸರುವಡೆದಾ
ಭೂವಳಯದಲಿ ಸಂಜನಿಸಿದರು ಕಾಂತೆ ಕೇಳೆಂದ ೭

ಜನಿಸಿ ಬಳೆದೊಂದೊಂದು ಕಾಯಕ
ದನುವಿಡಿದು ತಾವಲ್ಲಮಪ್ರಭು
ವನೆ ಸದಾ ಧ್ಯಾನಿಸುತಲಿದ್ದರು ಭಕ್ತಿಭಾವದಲಿ
ಅನಿಬರಱೊಳಗೊಬ್ಬರಿಗದೊಬ್ಬರು
ಘನವೆನಲು ಸಂಪ್ರೀತಿಯಿಂದಲಿ
ತನುಮನಂಗಳ ಸವೆವುತಿರ್ದರು ಲಿಂಗ ಜಂಗಮಕೆ ೮

ಆತನಲ್ಲಮ ಸಕಲ ಸಮಯ
ಪ್ರೀತನಲ್ಲಿಯು ಶೈವದಲಿ ಸಂ
ಪ್ರೀತನದಱೊಳು ವೀರಶೈವದಲತಿ ಮಹಾಪ್ರೀತ
ಈ ತೆಱನನಱಿದಖಿಳ ಭಕ್ತ ಸ
ಮೇತವಂತಾ ವೀರಶೈವದ
ನೀತಿಯನೆ ನಿರ್ಣಯಿಸುತಿರ್ದರು ಕಾಂತೆ ಕೇಳೆಂದ ೯

ಉಳ್ಳ ಷಡುಸಮಯಗಳ ನುಡಿವಳಿ
ಯೆಲ್ಲವೇಕೆಂದವರ ಮಾರ್ಗವ
ನೊಲ್ಲ ನೀನೀ ಹೊಗಳಿ ಹೇಳಿದ ವೀರಶೈವದಲಿ
ಒಳ್ಳಿತೇನುಂಟೆಂದು ಮಚ್ಚಿದ
ನಲ್ಲಮನು ಹೇಳೆನುತ ತನ್ನಯ
ವಲ್ಲಭನ ಕೇಳಿದಳು ಮಾಣದೆ ಮತ್ತೆ ಗಿರಿಜಾತೆ ೧೦

೭. "ದೇವೀ, ನಿನ್ನ ಸಾತ್ವಿಕಾಂಶವು ಮಹದೇವಿ ಎಂಬ ಹೆಸರಿನಿಂದ ಹುಟ್ಟಿ ಬೆಳೆದಳು. ದೇವಗಣದಲ್ಲಿ ವೃಷಭರಾಜನು ಬಸವನೆಂಬ ಹೆಸರಿನಿಂದ ಬಳೆದನು. ಉಳಿದವರೆಲ್ಲರೂ ಭೂಮಿಯಲ್ಲಿ ಹುಟ್ಟಿ ಮಾತಿನ ಸೊಗಸುಗಾರಿಕೆಯಲ್ಲಿ ಹೆಸರು ಪಡೆದರು, ಕಾಂತೆ, ಕೇಳು" ಎಂದು ಶಿವನು ನುಡಿದನು. ೮. ಹುಟ್ಟಿ ಬಳೆದು (ಎಲ್ಲರೂ) ಒಂದೊಂದು ಕಾಯಕವನ್ನು ಕ್ರಮವಾಗಿ ಅನುಸರಿಸಿ ಭಕ್ತಿಭಾವದಿಂದ ಅವರೆಲ್ಲರೂ ಅಲ್ಲಮಪ್ರಭುವನ್ನು ಸದಾ ಧ್ಯಾನಿಸುತ್ತಲಿದ್ದರು. ಅವರಲ್ಲಿ ಒಬ್ಬರಿಗಿಂತ ಮತ್ತೊಬ್ಬರು ಘನವೆನ್ನುವಂತ ಅತಿಪ್ರೀತಿಯಿಂದ ಲಿಂಗ ಜಂಗಮರುಗಳಿಗೆ ದೇಹ ಮನಸ್ಸುಗಳನ್ನು ಸವೆಸುತ್ತಿದ್ದರು. ೯. ಕಾಂತೆ ಕೇಳು, ಅಲ್ಲಮನಾದರೊ ಸರ್ವಧರ್ಮಪ್ರಿಯನು, ಶೈವಧರ್ಮದಲ್ಲಿ ವಿಶೇಷ ಪ್ರೀತಿಯುಳ್ಳವನು. ಅದರಲ್ಲೂ ವೀರಶೈವದಲ್ಲಿ ಅತಿಹೆಚ್ಚಿನ ಪ್ರೀತಿಯುಳ್ಳವನು. ಈ ರೀತಿಯನ್ನು ತಿಳಿದು ಸರ್ವಭಕ್ತಸಮೇತ (ಬಸವಾದಿಗಳು) ಆ ವೀರಶೈವದ ನೀತಿಯನ್ನೇ ನಿರ್ಣಯಿಸುತ್ತಿದ್ದರು" ಎಂದು ಶಿವನು ನುಡಿದನು. ೧೦. "ರೂಢಿಯಲ್ಲಿ ಇರುವ ಆರುಧರ್ಮಗಳ ವಿಚಾರಗಳೇಕೆ ಎಂದು ಅವುಗಳ ಮಾರ್ಗವನ್ನು ಒಪ್ಪದೆ ನೀನು ಈಗ ಹೊಗಳಿ ಹೇಳಿದ ವೀರಶೈವದಲ್ಲಿ

ಆದೊಡಾಲಿಸಿ ಕೇಳು ಧರ್ಮಾ
ರ್ಥಾದಿಯಾಗಿಹ ಕಾಮ ಮೋಕ್ಷಾ
ಮೋದವಾಗಿಹವಖಿಳ ಸಮಯಗಳಾಗಮೋಕ್ತಿಯಲಿ
ವೇದವಹಿಯಲು ವೀರಶೈವದ
ಹಾದಿಯೆಂಬುದು ನಿಸ್ಪೃಹದ ಸಂ
ಬೋಧೆಯಾಗಿಹುದೇನನೆಂಬೆನು ಗಿರಿಜೆ ಕೇಳೆಂದ ೧೧

ಕರ್ಮಮಾತ್ರವೆ ಪಾಪವೆನ್ನದೆ
ಕರ್ಮಲಂಪಟರುಗಳು ಪಾಪದ
ಕರ್ಮ ಪುಣ್ಯದ ಕರ್ಮವೆಂಬಂತೆರಡ ಮಾಡಿದರು
ಕರ್ಮಮಾತ್ರವೆ ಭವದ ಬೀಜದ
ಧರ್ಮವೆಂದಾ ವೀರಶೈವದ
ಕರ್ಮಿಗಳು ನಿಷ್ಕರ್ಮರೆನಿಪರು ಗಿರಿಜೆ ಕೇಳೆಂದ ೧೨

ಊಹಿಸಲು ಕರ್ಮದಲಿ ಜೀವ
ದ್ರೋಹವಾ ದ್ರೋಹದಲಿ ಭವಸಂ
ದೋಹವಾ ಭವವುಳ್ಳ ಭವಿಗಳು ಶುದ್ಧ ನರಕಿಗಳು
ಮೋಹವಿಲ್ಲದೆ ಸಕಲ ಜೀವ
ಸ್ನೇಹವುಳ್ಳಾ ವೀರಶೈವದ
ಗಾಹುಕಾಜರು ಪರಮಸುಖಿಗಳು ಗಿರಿಜೆ ಕೇಳೆಂದ ೧೩

ಒಳ್ಳೆಯದು ಏನಿದೆಯೆಂದು ಅಲ್ಲಮನು ಮೆಚ್ಚಿದನು? ಹೇಳು" ಎಂದು ಬಿಡದೆ ಗಿರಿಜೆಯು ಶಿವನನ್ನು ಕೇಳಿದಳು. ೧೧. "ಹಾಗಾದರೆ ಗಿರಿಜೆ ಮನವಿಟ್ಟು ಕೇಳು. ಸರ್ವಧರ್ಮಗಳು ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನು ದೊರಕಿಸಿ ಕೊಟ್ಟು ಸಂತೋಷಗೊಳಿಸುವಂತಹವುಗಳಾಗಿವೆ. ಆಗಮಗಳು ಹೇಳುವಂತೆ, ವೇದಗಳು ತಿಳಿದಿರುವಂತೆ ವೀರಶೈವದ ಮಾರ್ಗವೆಂಬುದು ಪ್ರಾಮಾಣಿಕವಾದ ಹಿತಮಾರ್ಗವಾಗಿದೆ, ಏನು ಹೇಳಲಿ" ಎಂದು ಶಿವನು ನುಡಿದನು. ೧೨. "ಗಿರಿಜೆ ಕೇಳು, ಕರ್ಮಾಸಕ್ತರುಗಳು ಕರ್ಮಮಾತ್ರ ಪಾಪವೆನ್ನದೆ ಪಾಪದ ಕರ್ಮ ಪುಣ್ಯದ ಕರ್ಮ ಎಂದು ವಿಭಜಿಸಿದರು. ಕರ್ಮವೇ ಹುಟ್ಟುಸಾವುಗಳೆಂಬ ಬೀಜದ ಧರ್ಮವೆಂದು ಹೇಳಿದ ಆ ವೀರಶೈವರು ನಿಷ್ಕರ್ಮಿಗಳೆನ್ನಿಸುವರು" ಎಂದು ಶಿವನು ನುಡಿದನು. ೧೩. "ಗಿರಿಜೆ ಕೇಳು, ಊಹೆ ಮಾಡಲು ಕರ್ಮದಲ್ಲಿ ಜೀವದ್ರೋಹವು. ಆ ದ್ರೋಹದಲ್ಲಿ ಹುಟ್ಟು ಸಾವುಗಳ ಮೊತ್ತವು. ಆ ಹುಟ್ಟುಸಾವುಗಳಿಗೊಳಗಾದ ಭವಿಗಳು ಶುದ್ಧ ನರಕಿಗಳು. ಮೋಹವಿಲ್ಲದೆ ಸಕಲ ಜೀವಗಳಲ್ಲಿ ಸ್ನೇಹವಿರುವ ವೀರಶೈವದ ರಕ್ಷಕರು ಪರಮಸುಖಿಗಳು" ಎಂದು ಶಿವನು ನುಡಿದನು.

ವೀರಶೈವವನದು ನಿಮಿತ್ತದ
ಲಾರು ಹೊಕ್ಕಂಗೈಸಿ ಭಕ್ತಿಯ
ಪಾರವೆಯ್ದಿಸಬಲ್ಲರೇ ಅವರಲ್ಲದುಳಿದವರು
ಧಾರುಣಿಯಲಿದನಜೆದು ಕರುಣಾ
ಕಾರನಲ್ಲಮ ತನ್ನ ಭಕ್ತರು
ಹಾರವಿಸಿಕೊಂಬಂತೆ ಸುಳಿದನು ಗಿರಿಜೆ ಕೇಳೆಂದ ೧೪

ಬಂದು ಬಳಿಕವರವರಿಗುಚಿತಗ
ಳಿಂದಲನುಭವಮಾರ್ಗವನು ದಯೆ
ಯಿಂದಲುಪದೇಶಿಸಿ ಮಹಾ ಸುಜ್ಞಾನದೃಷ್ಟಿಯನು
ಕಂದೆಜಿಸಿ ಮಹದೇವಿಯಕ್ಕಗೆ
ಸಂದ ನಿಜ ಶರಣರಿಗೆ ನಿತ್ಯಾ
ನಂದಪದವಿಯನಿತ್ತನಲ್ಲಮ ಗಿರಿಜೆ ಕೇಳೆಂದ ೧೫

ಭವಭವದಲಜ್ಞಾನವಿಧಿಯಲಿ
ಭುವನಭವನವ ತೊಳಲಿ ಬಳಲುವ
ವ್ಯವಹರಣೆಯಂತಲ್ಲ ಗುರುಕೃಪೆಯಾದ ಶರಣರಿಗೆ
ಹವಣಿಸಲು ಬಾರದ ಪರಬ್ರ
ಹ್ಮವನು ಮೀಜಿದ ನಿರುಪಮಸ್ಥಾ
ನವನು ಸೂಜೆಯ ಕೊಟ್ಟನಲ್ಲಮ ಗಿರಿಜೆ ಕೇಳೆಂದ ೧೬

೧೪. "ಗಿರಿಜೆ ಕೇಳು, ಆ ಕಾರಣ ವೀರಶೈವಧರ್ಮಶಾಸ್ತ್ರದಲ್ಲಿ ಪ್ರವೇಶ ಹೊಂದಿ (ಅದನ್ನು) ಸ್ವೀಕರಿಸಿ, ಭುವಿಯಲ್ಲಿ ಅವರನ್ನುಳಿದು ಭಕ್ತಿಯ ಮೂಲಕ ಸಂಸಾರವೆಂಬ ಸಮುದ್ರವನ್ನು ದಾಟಿಸಿ ದಡವನ್ನು ಮುಟ್ಟಿಸಬಲ್ಲವರು ಇನ್ನಾರು? ಇದನ್ನು ತಿಳಿದು ಕರುಣಾಕಾರನಾದ ಅಲ್ಲಮನು ತನ್ನ ಭಕ್ತರು ನಿರೀಕ್ಷಿಸಿಕೊಂಡಿರಲು (ಅವರಿಗೆ ಕಾಣುವಂತೆ) ಸುಳಿದನು" ಎಂದು ಶಿವನು ನುಡಿದನು. ೧೫. "ಗಿರಿಜೆ ಕೇಳು, (ಹಾಗೆ ಭುವಿಗೆ) ಬಂದ ಮೇಲೆ ಭಕ್ತರಿಗೆ ಯೋಗ್ಯವಾದ ರೀತಿಯಲ್ಲಿ ಅನುಭವಮಾರ್ಗವನ್ನು ದಯೆಯಿಟ್ಟು ಉಪದೇಶಿಸಿ, ಅವರಲ್ಲಿರುವ ಅತಿಶಯವಾದ ಸುಜ್ಞಾನವೆಂಬ ದೃಷ್ಟಿಯನ್ನು ತೆರೆಯಿಸಿ, ಮಹದೇವಿಯಕ್ಕನಿಗೆ ಮತ್ತು ಪ್ರಖ್ಯಾತರಾದ ತನ್ನ ಶರಣರಿಗೆ ನಿತ್ಯಾನಂದ ಪದವಿಯನ್ನು ಅಲ್ಲಮನು ಅನುಗ್ರಹಿಸಿದನು" ಎಂದು ಶಿವನು ನುಡಿದನು. ೧೬. "ಗಿರಿಜೆ ಕೇಳು, ಗುರುಕೃಪೆಯಾದ ಶರಣರು ಜನ್ಮ ಜನ್ಮಗಳಲ್ಲಿ ಅಜ್ಞಾನದ ಮಾರ್ಗದಲ್ಲಿ ಲೋಕವೆಂಬ ಮನೆಯನ್ನು ಸುತ್ತಿ ಆಯಾಸಗೊಳ್ಳುವುದಿಲ್ಲ. ಲೆಕ್ಕಿಸಲು ಬಾರದ, ಪರಬ್ರಹ್ಮವನ್ನು ಮೀರಿದ, ಎಣೆಯಿಲ್ಲದ ಸ್ಥಾನವನ್ನು (ಅವರಿಗೆ) ಅಲ್ಲಮನು ಸೂರೆಮಾಡಿಕೊಟ್ಟನು" ಎಂದು ಶಿವನು ನುಡಿದನು.

ದೇವಿ ಕೇಳ್ ನಿನ್ನಂಶದಾ ಮಹ
ದೇವಿ ನನ್ನಂಶದ ಗಣಂಗಳು
ದೇವಕನ್ನೆಯರೆಲ್ಲರಲ್ಲಮನಿಂದೆ ಜಗವಱಿಯೆ
ತೀವಿ ತಮ್ಮಯ ನಾಮ ರೂಪು
ಕ್ರೀವಿಳಾಸವನಿಳುಹಿ ನಿತ್ಯ ನಿ
ರಾವಲಂಬದ ಸುಖಿಗಳಾದರು ಗಿರಿಜೆ ಕೇಳೆಂದ ೧೭

ಲೇಸು ಮತ್ತೆಯು ನಿಮ್ಮವರು ಕೈ
ಲಾಸಪದವಿಯ ಮೀಱಿ ನಿರುಪಮ
ವಾಸವನೆ ವೆಂಟಣಿಸಿಕೊಂಡರೆಲೈ ಮಹಾದೇವ
ಈ ಸುಖಂಗಳನಲ್ಲಮನೆ ನಿ
ರ್ಣೈಸಿ ಕೊಟ್ಟನು ಶರಣರಿಗೆ ಸಂ
ತೋಷವಿನ್ನೆನಗಾದುದೆಂದಳು ಬಳಿಕ ಗಿರಿಜಾತೆ ೧೮

ದೇವ ನೀನೆಂದಂತೆ ಘನ ಮಹಿ
ಮಾವಲಂಬನು ತಪ್ಪದೈ ಪ್ರಭು
ದೇವ ನಾನದನಱಿದೆನೀಗಳು ನಿನ್ನ ಕರುಣದಲಿ
ದೇವ ನಿನ್ನ ನಿಜಸ್ವರೂಪಕಿ
ದಾವುದರಿದೆಂದೆನುತ ಪಾರ್ವತಿ
ದೇವಿ ಸಂತೋಷದಲಿ ನುಡಿದಳು ಬಳಿಕ ಶಂಕರಗೆ ೧೯

ಇಂತು ಸತತೋತ್ಸಾಹದಿಂದಲಿ
ಸಂತತಾನಂದೈಕಸುಖದಲಿ
ಕಾಂತೆ ಸಹಿತಿರುತಿರ್ದನೀಶ್ವರನತ್ತ ಬಳಿಕಿತ್ತ
ಚಿಂತಿತಾರ್ಥವನಖಿಳ ಭಕ್ತರ
ತಿಂತಿಣಿಗೆ ಕೊಡುತಲ್ಲಮಪ್ರಭು
ಸಂತಸದಲ್ಲಿರುತಿರ್ದನೆಲ್ಲರ ಹೃದಯಕಮಲದಲಿ ೨೦

೧೭. "ದೇವಿ ಕೇಳು, ನಿನ್ನ ಸಾತ್ವಿಕಾಂಶದ ಮಹಾದೇವಿ ಹಾಗೂ ನನ್ನ ಅಂಶದ ಗಣಗಳು, ದೇವ ಕನ್ಯೆಯರು, ಎಲ್ಲರೂ ಜಗವೆಲ್ಲ ತಿಳಿಯುವಂತೆ ಅಲ್ಲಮನ ಕಾರಣದಿಂದ ಲೋಕದಲ್ಲೆಲ್ಲಾ ತುಂಬಿ ತಮ್ಮ ನಾಮ ರೂಪು ಕ್ರಿಯೆ ವಿಲಾಸಗಳನ್ನು ಕಳಚಿ, ನಿತ್ಯರೂ, ನಿರಾವಲಂಬಿಗಳೂ ಆದ ಸುಖಿಗಳಾದರು" ಎಂದು ಶಿವನು ನುಡಿದನು. ೧೮. "ಒಳ್ಳೆಯದು, ಮತ್ತೆ ನಿಮ್ಮವರು ಕೈಲಾಸಪದವಿಯನ್ನು ಮೀರಿ ಎಣೆಯಿಲ್ಲದ ನೆಲೆಯನ್ನು ಸೇರಿದರು. ಎಲೆ ಮಹಾದೇವ, ಈ ಸುಖವನ್ನು ಅಲ್ಲಮನೇ ನಿರ್ಧರಿಸಿ ಶರಣರಿಗೆ ಕೊಟ್ಟನು. ಇನ್ನು ನನಗೆ ಸಂತೋಷವಾಯಿತು" ಎಂದು ನುಡಿದು ಗಿರಿಜೆ ಮತ್ತೆ ಹೀಗೆಂದಳು. ೧೯. "ದೇವಾ, ನೀನೆಂದಂತೆ ಪ್ರಭುದೇವನು ಅತಿಶಯವಾದ ಮಹಿಮೆಯಿಂದ ಕೂಡಿದವನು. ಇದು ತಪ್ಪದು. ನಾನಿದನ್ನು ಈಗ ನಿನ್ನ ಕರುಣೆಯಿಂದ ತಿಳಿದೆನು. ದೇವ ನಿನ್ನ ಸಹಜಸ್ಥಿತಿಗೆ ಇದಾವ ಅಸಾಧ್ಯ" ಎಂದು ಪಾರ್ವತಿದೇವಿ ಆ ಬಳಿಕ ಶಂಕರನಿಗೆ ಸಂತೋಷದಿಂದ ನುಡಿದಳು. ೨೦. ಹೀಗೆ ಸತತವಾದ ಉತ್ಸಾಹದಿಂದ ಕೂಡಿ, ಸತತವಾದ ಆನಂದವೆಂಬ ಏಕಸುಖದಿಂದ ಈಶ್ವರನು ತನ್ನ ಪತ್ನಿಯೊಂದಿಗೆ ಇರುತ್ತಿದ್ದನು. ಆ ಬಳಿಕ

ಬಾಲರನು ವೃದ್ಧರನು ಭೂಮೀ
ಪಾಲರನು ಬಡವರನು ಸದಮಲ
ಶೀಲರನು ಗುಣಿಗಳನು ಗೋ ಬ್ರಾಹ್ಮರನು ಭಕ್ತರನು
ಲೋಲತೆಯಲಿ ಸಮಸ್ತಜಾತಿಯ
ಜಾಲವನು ಸರ್ವರನು ಕರುಣಿಸಿ
ಪಾಲಿಸುತಲಿರುತಿರ್ದನೆಮ್ಮಯ ಗುರು ಗುಹೇಶ್ವರನು ೨೧

ಹಿರಿಯರಿಗೆ ಕಿಱಿಯರಿಗೆ ಸದಮಲ
ಚರಿತರಿಗೆ ಚದುರರಿಗೆ ಸಜ್ಜನ
ಶರಣರಿಗೆ ಮುಗ್ಧರಿಗೆ ಸಕಳಕಳಾವಿದಗ್ಧರಿಗೆ
ಗರುವರಿಗೆ ಹಿತವರಿಗೆ ಸಚರಾ
ಚರರಿಗನುದಿನ ಕರುಣದಿಂದಲಿ
ವರದನಾಗಲಿ ಗುರು ಗುಹೇಶ್ವರಲಿಂಗ ಲೀಲೆಯಲಿ ೨೨

ಆಲಸಿಕೆಯಿಂದಾದೊಡೋದಲು
ನಾಲಗೆಯ ಬಱ ಬಿಟ್ಟು ಹೋಹುದು
ಕೇಳಲನುಕರಿಸಿದೊಡೆ ಕರ್ಣೇಂದ್ರಿಯಕೆ ದಣಿವಹುದು
ಆಲಿಸಿದ ಪದದರ್ಥ ಮನಸಿನ
ಮೇಲೆ ನಿಲೆ ನಿತ್ಯತ್ವವಹುದೆನೆ
ಲಾಲಿಸುವುದದನೊಲಿವೊಡೀ ಪ್ರಭುಲಿಂಗಲೀಲೆಯಲಿ ೨೩

ನೋಡಿದರೆ ಭಯಭಕ್ತಿಯಲಿ ಕೊಂ
ಡಾಡಿದರೆ ರಾಗದಲಿ ರಂಜಿಸಿ
ಹಾಡಿದರೆ ಹಾರೈಸಿದರೆ ಕಿವಿಗೊಟ್ಟು ಕೇಳಿದರೆ
ಕೂಡೆ ಲೀಲೆಯನಱಿದು ಹರುಷವ
ಮಾಡಿದರೆ ಭವಬಾಧೆಗಳನೀ
ಡಾಡಿ ನಿತ್ಯವ ಹಡೆವರೀ ಪ್ರಭುಲಿಂಗಲೀಲೆಯನು ೨೪

ಇತ್ತ ಮನದಲ್ಲಿ ಧ್ಯಾನಿಸಿದ ಅಪೇಕ್ಷೆಯನ್ನು ಸಕಲಭಕ್ತರ ಸಮೂಹಕ್ಕೆ ನೀಡುತ್ತ ಅಲ್ಲಮಪ್ರಭುವು ಸಂತಸದಿಂದ ಎಲ್ಲರ ಹೃದಯಕಮಲದಲ್ಲಿ ಇರುತ್ತಿದ್ದನು. ೨೧. ಬಾಲಕರು, ವೃದ್ಧರು, ಭೂಪಾಲರು, ಬಡವರು, ಪರಿಶುದ್ಧ ಚಾರಿತ್ರವುಳ್ಳವರು, ಗುಣವಂತರು, ಗೋ ಬ್ರಾಹ್ಮಣರು ಇವರೆಲ್ಲರನ್ನು ಸಂತಸದಿಂದ ತೂಗಾಡಿಸುತ್ತ, ಸರ್ವಜೀವರಾಶಿಗಳನ್ನು ಅನುಗ್ರಹಿಸಿ ಪಾಲಿಸುತ್ತ ನಮ್ಮ ಗುರು ಗುಹೇಶ್ವರನು ಇರುತ್ತಿದ್ದನು. ೨೨. ದೊಡ್ಡವರಿಗೆ, ಚಿಕ್ಕವರಿಗೆ, ಪರಿಶುದ್ಧ ಚಾರಿತ್ರವುಳ್ಳವರಿಗೆ, ಜಾಣರಿಗೆ, ಒಳ್ಳೆಯವರಾದ ಶರಣರಿಗೆ, ಮುಗ್ಧರಿಗೆ, ಸರ್ವಕಲೆಗಳಲ್ಲಿ ನೈಪುಣ್ಯ ಪಡೆದವರಿಗೆ, ಶ್ರೇಷ್ಠರಾದವರಿಗೆ, ಯೋಗ್ಯರಾದವರಿಗೆ, ಸಚರಾಚರರಿಗೆ, ದಿನನಿತ್ಯ ಕರುಣೆಯಿಂದ ಗುರು ಗುಹೇಶ್ವರಲಿಂಗನು ತನ್ನ ಲೀಲೆಯಲ್ಲಿ ಕೃಪೆಮಾಡುವವನಾಗಲಿ. ೨೩. ಆಲಸ್ಯದಿಂದಲಾದರೂ ಓದಲು ಒಣಗಿದ ನಾಲಗೆಯು ಸರಿಗೊಳ್ಳುವುದು; ಕೇಳಲು ಪ್ರಯತ್ನಿಸಿದರೆ ಕರ್ಣೇಂದ್ರಿಯಗಳಿಗೆ ತೃಪ್ತಿಯಾಗುವುದು; ಕೇಳಿದ ಪದದ ಅರ್ಥ ಮನಸ್ಸಿನ ಮೇಲೆ ನಿಲ್ಲಲು ಮುಕ್ತಿ ಪ್ರಾಪ್ತವಾಗುವುದು. ಅದನ್ನು ಬಯಸುವುದಾದರೆ ಈ ಪ್ರಭುಲಿಂಗಲೀಲೆಯನ್ನು ಕೇಳುವುದು. ೨೪. ಈ ಪ್ರಭುಲಿಂಗಲೀಲೆಯನ್ನು ನೋಡಿದರೆ, ಭಯಭಕ್ತಿಗಳಿಂದ ಕೊಂಡಾಡಿದರೆ, ರಾಗಬದ್ಧವಾಗಿ

ಒಂದು ಸಾವಿರದೊಂದುಶತ ಹ
ನ್ನೊಂದು ಪದವೆಂದೆಂಬ ಪರುಷದ
ಸಂದ ಶಿಲೆಯನು ಬಳಸಿದಿಪ್ಪತ್ತೈದು ಗತಿಯೆಂಬ
ಹೊಂದಿಗೆಯ ಸೋಪಾನಗಳ ಬಲಿ
ದಂದವಿಸಿಯಲ್ಲಮನ ಪರಮಾ
ನಂದಲೀಲಾಮೃತಸರೋವರವಾಯ್ತು ಜಗದೊಳಗೆ ೨೫

ಅಂತು ಗತಿ ೨೫ಕ್ಕಂ ಪದ ೧೧೧೧ಕ್ಕಂ ಮಂಗಳಂ

ಮಂಗಳ ಮಹಾ ಶ್ರೀ ಶ್ರೀ ಶ್ರೀ ಸಮಾಪ್ತಂ

ಸೊಗಸಿನಿಂದ ಕೂಡಿ ಹಾಡಿದರೆ, ಇಚ್ಛೈಸಿದರೆ, ಕಿವಿಗೊಟ್ಟು ಕೇಳಿದರೆ, ಜೊತೆಯಲ್ಲೇ ಪ್ರಭುವಿನ ಲೀಲೆಯನ್ನು ತಿಳಿದು ಸಂತೋಷಿಸಿದರೆ ಹುಟ್ಟುಸಾವುಗಳ ಬಾಧೆಯನ್ನು ಕಳೆದು ಕೈವಲ್ಯವನ್ನು ಪಡೆವರು. ೨೫. ಈ ಪ್ರಭುಲಿಂಗಲೀಲೆಯು ಒಂದುಸಾವಿರದ ಒಂದುನೂರ ಹನ್ನೊಂದು ಪದ್ಯಗಳೆಂಬ ಪ್ರಖ್ಯಾತವಾದ ಪರುಷಶಿಲೆಯನ್ನು ಬಳಸಿರುವ ಇಪ್ಪತ್ತೈದುಗತಿಯೆಂಬ ಚೆನ್ನಾಗಿ ಹೊಂದಿಕೊಂಡಿರುವ ಮೆಟ್ಟಲುಗಳಿಂದ ಕೂಡಿ ಲೋಕದಲ್ಲಿ ಅಲ್ಲಮನ ಪರಮಾನಂದಲೀಲಾಮೃತವೆನ್ನುವ ಸರೋವರವಾಯಿತು.

# ಅನುಬಂಧಗಳು

## ೧. ಪಾರಿಭಾಷಿಕ ಪದಗಳು

### (ಸಂಖ್ಯೆಗಳು ಗತಿ ಮತ್ತು ಪದ್ಯಗಳನ್ನು ಸೂಚಿಸುತ್ತವೆ)

**ಆತ್ಮತತ್ವ** ೧೮-೨೪ :

ವೀರಶೈವಧರ್ಮದಲ್ಲಿ ೩೬ ತತ್ವಗಳಿವೆ. ಇವುಗಳ ಜ್ಞಾನದಿಂದ ಮನುಷ್ಯನು ತಾನಾರೆಂಬುದನ್ನು ಅರಿತು ತನ್ನ ಅಂತಃಶಕ್ತಿಯನ್ನು ಬೆಳೆಸಿಕೊಂಡು ಸಾಮರಸ್ಯವನ್ನು ಹೊಂದುವನು. ಈ ೩೬ ತತ್ವಗಳಲ್ಲಿ ೨೫ ತತ್ವಗಳಿಗೆ ಆತ್ಮತತ್ವಗಳೆಂದು ಹೆಸರು. ಅವಾವುವೆಂದರೆ ಕರ್ಮೇಂದ್ರಿಯಗಳು ೫; ಜ್ಞಾನೇಂದ್ರಿಯಗಳು ೫; ಪ್ರಾಣಾದಿ ವಾಯುಗಳು ೫; ಶಬ್ದಾದಿ ವಿಷಯಗಳು ೫; ಚಿತ್ತ, ಮನ, ಬುದ್ಧಿ, ಅಹಂಕಾರಗಳು ೪; ಜೀವನು ೧. ಇವುಗಳ ಜ್ಞಾನದಿಂದ ಮನುಷ್ಯನು ತನ್ನನ್ನು ತಾನು ತಿಳಿಯಲು ಶಕ್ತನಾಗುತ್ತಾನೆ.

**ಆರು ಚಕ್ರ** ೧೮-೨೫ ; ೨೧-೨೦ ; ೨೨-೪೯ :

ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞೇಯ. ಗುದದಲ್ಲಿ ಆಧಾರಚಕ್ರ, ಗುಹ್ಯದಲಿ ಸ್ವಾಧಿಷ್ಠಾನಚಕ್ರ, ಉದರ ಅಥವಾ ನಾಭಿಸ್ಥಾನದಲ್ಲಿ ಮಣಿಪೂರಕಚಕ್ರ, ಹೃದಯದಲ್ಲಿ ಅನಾಹತಚಕ್ರ, ಕಂಠದಲ್ಲಿ ವಿಶುದ್ಧಿಚಕ್ರ, ಲಲಾಟದಲ್ಲಿ ಆಜ್ಞಾಚಕ್ರ - ಹೀಗೆ ಆರು ಚಕ್ರಗಳಿವೆ. ಮಿದುಳಿನ ಮಧ್ಯಭಾಗದಲ್ಲಿ (ನೆತ್ತಿಯಲ್ಲಿ) ಬ್ರಹ್ಮಚಕ್ರವೂ, ಮಸ್ತಕಾಗ್ರದಲ್ಲಿ ಶಿಖಾಚಕ್ರವೂ, ತಲೆಯ ಹಿಂಭಾಗದಲ್ಲಿ ಪಶ್ಚಿಮಚಕ್ರವೂ ಇವೆ. ಮಿದುಳಿನಲ್ಲಿ ಬರುವ ಚಲನೆಗಳು ಈ ಚಕ್ರಗಳಿಗೆ ಮೊದಲು ಬರುತ್ತವೆ. ಮಿದುಳಿನಲ್ಲಿರುವ ಬ್ರಹ್ಮಚಕ್ರವು ಆಧಾರ ಸ್ವಾಧಿಷ್ಠಾನಚಕ್ರಗಳಿಗೆ, ಶಿಖಾಚಕ್ರವು ಮಣಿಪೂರಕ ಅನಾಹತಚಕ್ರಗಳಿಗೆ ಮತ್ತು ಪಶ್ಚಿಮಚಕ್ರವು ವಿಶುದ್ಧಿ ಆಜ್ಞಾಚಕ್ರಗಳಿಗೆ ಪ್ರತ್ಯಕ್ಷ ಸಂಬಂಧ ಪಡುತ್ತವೆ. ಮಿದುಳಿನಲ್ಲಿ ಉತ್ಪನ್ನವಾಗುವ ಈ ಚಲನೆಗಳು ಆಯಾ ಚಕ್ರಗಳ ದ್ವಾರಾ ಬೇರೆ ಬೇರೆ ಅವಯವಗಳಿಗೆ ಪಸರಿಸುತ್ತವೆ.

**ಆರು ಶಕ್ತಿ** ೨೨-೪೯ :

ಕ್ರಿಯಾಶಕ್ತಿ, ಜ್ಞಾನಶಕ್ತಿ, ಇಚ್ಛಾಶಕ್ತಿ, ಆದಿಶಕ್ತಿ, ಪರಾಶಕ್ತಿ ಮತ್ತು ಚಿತ್‌ಶಕ್ತಿ ಎಂದು ಶಕ್ತಿಗಳಲ್ಲಿ ಆರು ಬಗೆ. ಕರ್ಮೇಂದ್ರಿಯಗಳಾದ ವಾಕ್, ಪಾದ, ಪಾಣಿ, ಪಾಯು, ಗುಹ್ಯ - ಇವುಗಳ ವ್ಯಾಪಾರಗಳು ಈ ಕ್ರಿಯಾಶಕ್ತಿಯಿಂದಲೇ ನಡೆಯುತ್ತವೆ. ಬಾಹ್ಯಕ್ರಿಯೆಗಳು ಈ ಶಕ್ತಿಯಿಂದಲೇ ಜರುಗುತ್ತವೆ. ಈ ಕರ್ಮೇಂದ್ರಿಯಗಳು ಸ್ವತಂತ್ರವಾಗಿ ವ್ಯವಹರಿಸಲಾರವು. ಅವುಗಳಿಗೆ ಜ್ಞಾನಶಕ್ತಿಯ ಸಹಾಯವು ಬೇಕು. ಶ್ರೋತ್ರ, ತ್ವಕ್ಕು, ನೇತ್ರ, ಜಿಹ್ವೆ, ಘ್ರಾಣ ಇವುಗಳು ಜ್ಞಾನೇಂದ್ರಿಯಗಳು. ಈ ಜ್ಞಾನೇಂದ್ರಿಯಗಳಿಂದಲೇ ಜ್ಞಾನಶಕ್ತಿಯು ಬಲಪಡುವುದು. ಕ್ರಿಯಾಶಕ್ತಿಗೆ ಈ ಜ್ಞಾನಶಕ್ತಿಯ

ಸಹಾಯವು ಅತ್ಯವಶ್ಯವಾಗಿ ಬೇಕು. ಇಲ್ಲದಿದ್ದರೆ ಮನುಷ್ಯನ ಕ್ರಿಯೆಗಳು ತಪ್ಪಿ ಹೋಗುವುವು. ಕ್ರಿಯಾಶಕ್ತಿ, ಜ್ಞಾನಶಕ್ತಿ ಇವುಗಳ ಚಲನೆಗೆ ಇಚ್ಛಾಶಕ್ತಿಯೂ ಅವಶ್ಯವಾದುದು, ಮನುಷ್ಯನಿಗೆ ಇಚ್ಛೆ ಇಲ್ಲದಿದ್ದರೆ ಕ್ರಿಯಾಶಕ್ತಿಯೂ ಜ್ಞಾನಶಕ್ತಿಯೂ ಕುಂಠಿತವಾಗುವುವು. ಚಿತ್‌ಶಕ್ತಿ, ಪರಾಶಕ್ತಿ, ಆದಿಶಕ್ತಿಗಳು ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾ ಶಕ್ತಿಗಳಿಗಿಂತ ಸೂಕ್ಷ್ಮವಾದವುಗಳು. ಆದಿಶಕ್ತಿಯು ಇಚ್ಛಾಶಕ್ತಿಗಿಂತ ಸೂಕ್ಷ್ಮವಾದುದು. ಇಚ್ಛೆಗೆ ಅದು ಪ್ರೇರಣೆಮಾಡುವಂತಹುದು. ಇಚ್ಛೆಯೂ ಕೂಡ ಸ್ಥೂಲತರವಾದುದು. ಇದಕ್ಕೂ ಸಹ ಆದಿಶಕ್ತಿಯು ಪ್ರೇರಕವಾಗಿರುತ್ತದೆ. ಪರಾಶಕ್ತಿಯು ಆದಿಶಕ್ತಿಗಿಂತಲೂ ಸೂಕ್ಷ್ಮವಾದುದು. ಈ ಶಕ್ತಿಯು ಶರಣಸ್ಥಲದಲ್ಲಿರುವವನಲ್ಲಿ ಜಾಗೃತವಾಗಿ ವ್ಯವಹರಿಸು ತ್ತದೆ. ಇದು ಎಲ್ಲಕ್ಕೂ ಮಿಗಿಲಾದುದು. ಚಿತ್‌ಶಕ್ತಿಯು ಪರಾಶಕ್ತಿಗಿಂತಲೂ ಸೂಕ್ಷ್ಮ ಇದು ಮಿಕ್ಕ ಎಲ್ಲ ಶಕ್ತಿಗಳನ್ನು ಗರ್ಭೀಕರಿಸಿಕೊಂಡಿರುತ್ತದೆ. ಇದು ಐಕ್ಯಸ್ಥಲದಲ್ಲಿರುವವನಲ್ಲಿ ಜಾಗ್ರತ ವಾಗಿರುತ್ತದೆ. ಈ ಪ್ರಕಾರ ಚಿತ್‌ಶಕ್ತಿಯಿಂದ ಪರಾಶಕ್ತಿ, ಪರಾಶಕ್ತಿಯಿಂದ ಆದಿಶಕ್ತಿ, ಆ ಮೇಲೆ ಅನುಕ್ರಮವಾಗಿ ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿ, ಇವುಗಳು ಪ್ರಾದುರ್ಭವಿಸಿ ಮನುಷ್ಯನ ಬೇರ ಬೇರೆ ಶರೀರಗಳಲ್ಲಿ ಅವುಗಳ ಸ್ವಭಾವದಂತೆ ವ್ಯವಹರಿಸುತ್ತವೆ. ಇವೆಲ್ಲವುಗಳು ಪರಸ್ಪರ ಅವಲಂಬಿಗಳು.

**ಆರುಗತಿ (ಆರು ಸ್ಥಲ ?)** ೨೨-೪೯ :

ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ.

**ಆರು ಭೂತಗಳು** ೧೮-೨೫ :

ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳೆಂಬ ವೈರಿಸಮಾನರಾದ ಭೂತಗಳು.

**ಆರು ಮತಿ** ೨೨-೪೯:

ಐದು ಇಂದ್ರಿಯ ಮತ್ತು ಮನಸ್ಸಿನಿಂದಾಗುವ ಜ್ಞಾನ ಅಥವಾ ಮತಿ, ಶ್ರುತಿ, ಖಂಡ, ಕೇವಲ, ಜ್ಯೋತಿ, ಮಹಾಜ್ಯೋತಿ ಎಂಬ ಆರು ಜ್ಞಾನಗಳು.

**ಆರುವರ್ಣ** ೨೨-೪೯ :

ಪೀತ, ಶ್ವೇತ, ಹರಿತ, ಮಾಂಜಿಷ್ಠ, ಕಪೋತ, ಮಾಣಿಕ್ಯ - ಇವು ಆರು ವರ್ಣಗಳು.

**ಆರು ಸಂಪತ್ತು** ೨೨-೪೯:

ಅಣಿಮಾದಿಸಿದ್ಧಿ, ಧರ್ಮ, ಯಶಸ್ಸು, ಧನ, ಜ್ಞಾನ ಮತ್ತು ವಿಜ್ಞಾನ.

**ಈಡಾ (ಇಡಾ) ಪಿಂಗಳ** ೧೮-೨೧ ; ೨೧-೧೬:

ನಮ್ಮ ದೇಹದಲ್ಲಿರುವ ನಾಡಿಗಳಲ್ಲಿ ೧೦ ಬಹು ಮುಖ್ಯವಾದುವುಗಳು. ಅವು ಯಾವುವೆಂದರೆ ಈಡಾ, ಪಿಂಗಳ , ಸುಷುಮ್ನ, ಗಾಂಧಾರಿ, ಹಸ್ತಿಜಿಹ್ವೆ, ಪೂಷ,

ಪಯಸ್ವಿನೀ, ಲಕುಹ, ಅಲಂಬು, ಶಂಕಿನೀ. ಇವುಗಳಲ್ಲಿ ಈಡಾ, ಪಿಂಗಳ, ಸುಷುಮ್ನಗಳೇ ಅತ್ಯಂತ ಮುಖ್ಯನಾಡಿಗಳು. ಈ ನಾಡಿಗಳ ಕ್ರಿಯೆಗಳು ಶರೀರದಲ್ಲಿರುವ ನರಗಳೊಳಗಿಂದ ನಡೆಯುತ್ತವೆ. ಶರೀರವು ಉಸಿರಾಡಿಸುವುದು, ನಿರೀಕ್ಷಿಸುವುದು, ಕೇಳುವುದು, ಹಸಿವೆಯಾಗುವುದು, ಆಹಾರದಿಂದ ಅದಕ್ಕೆ ಶಾಂತಿಯಾಗುವುದು, ಇವು ಈ ನಾಡಿಗಳ ಮೂಲಕವೇ ಚಲನೆ ಹೊಂದುತ್ತವೆ. ಈಡಾ - ಇದು ನಾಸಾಪುಟದ ಎಡಭಾಗ, ವಾಯುವನ್ನು ಹೊರಗೆ ಹಾಕುತ್ತದೆ. ಪಿಂಗಳ - ಇದು ನಾಸಾಪುಟದ ಬಲಭಾಗ. ಇದು ವಾಯುವನ್ನು ಒಳಕ್ಕೆ ಎಳೆದುಕೊಳ್ಳುತ್ತದೆ.

ಸುಷುಮ್ನ - ನಾಸಾಪುಟ ಎಡ, ಬಲ ಭಾಗಗಳ ನಡುವೆ ಇದ್ದುಕೊಂಡು ತಲೆ ಮಿದುಳಿನಲ್ಲಿ ಪ್ರವೇಶಿಸುತ್ತದೆ. ಇದು ವಾಯುವನ್ನು ಕುಂಭದಂತೆ ತಡೆಯುತ್ತದೆ. ಸುಷುಮ್ನಾನಾಡಿಯು ಗುದಸ್ಥಾನದಿಂದ ಬೆನ್ನೆಲುಬಿನ ನಡುವೆ ತಂತಿಯಂತೆ ಕಪಾಲ ಪರಿಯಂತರ ಉದ್ದವಾಗಿ ಇರುತ್ತದೆ. ಇದಕ್ಕೆ ಬಲಗಡೆ ಇರುವುದು ಪಿಂಗಳ ನಾಡಿ. ಅದು ಸಹ ಕಪಾಲ ಪರಿಯಂತರ ಬಂದು ಅಲ್ಲಿಂದ ಮಿದುಳಿನಲ್ಲಿ ಸೂರ್ಯಮಂಡಲ ವನ್ನು ವ್ಯಾಪಿಸಿಕೊಂಡು ಬಲ ಮೂಗಿನಿಂದ ಹೊರಟುಹೋಗುತ್ತದೆ. ಈಡೆಯು ಸುಷುಮ್ನಾನಾಡಿಯ ಎಡಗಡೆಯಿಂದ ಮೂಲಾಧಾರದಿಂದ ಕಪಾಳಪರಿಯಂತರ ಹೋಗಿ ಮಿದುಳಿನಲ್ಲಿ ಚಂದ್ರಮಂಡಲವನ್ನು ವ್ಯಾಪಿಸಿರುತ್ತದೆ. ಅದರ ಮೂಲಕ ಎಡ ಮೂಗಿನಿಂದ ಉಸಿರು ಹೊರಟುಹೋಗುತ್ತದೆ. ಸುಷುಮ್ನಾನಾಡಿಯ ಆಗ್ನೇಯದಲ್ಲಿ ಸೂಕ್ಷ್ಮವಾದ ರಂಧ್ರವಿರುತ್ತದೆ. ಅದೇ ಬ್ರಹ್ಮರಂಧ್ರ. ಈ ಸುಷುಮ್ನಾನಾಡಿಯನ್ನು ಚೈತ್ಯನಗೊಳಿಸುವುದರಿಂದ ಮನುಷ್ಯನ ಯೋಗಸಾಮರ್ಥ್ಯವು ಹೆಚ್ಚುವುದು. ಆಸನ ಮತ್ತು ಪ್ರಾಣಾಯಾಮ ಇವುಗಳೊಡನೆ ಕೂಡಿದ ಯೋಗಸಾಧನೆಯಿಂದ ಈ ನಾಡಿಯು ಉತ್ತೇಜಿತವಾಗುವುದು.

**ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ** ೧೩-೬೯:

ತ್ಯಾಗಾಂಗ, ಭೋಗಾಂಗ, ಯೋಗಾಂಗಗಳಿಂದ ಮನುಷ್ಯನ ಸ್ಥೂಲ, ಸೂಕ್ಷ್ಮ ಕಾರಣ ಶರೀರಗಳಲ್ಲಿ ಪರಮಾತ್ಮನ ಕಳೆಯು ಪ್ರಜ್ವಲಿಸುತ್ತದೆ. ಈ ಕಳೆಯೇ ಲಿಂಗವೆನಿಸಿ ಕೊಳ್ಳುತ್ತದೆ. ಇದೇ ಆ ಮೂರು ಶರೀರಗಳಲ್ಲಿ ಅನುಕ್ರಮವಾಗಿ ಇಷ್ಟಲಿಂಗ, ಪ್ರಾಣ ಲಿಂಗ, ಭಾವಲಿಂಗ ಎಂಬ ಹೆಸರುಗಳನ್ನು ತಾಳಿ ಪ್ರಕಟವಾಗುತ್ತದೆ. ಇಷ್ಟಲಿಂಗವು ಸತ್ ಕ್ರಿಯಾಸ್ವರೂಪವುಳ್ಳದ್ದಾಗಿರುತ್ತದೆ. ಈ ಕ್ರಿಯೆಗಳಿಗೆ ಸಾಧನವಾಗಿರುವಂತಹವು ಇಂದ್ರಿಯಗಳು. ಈ ಇಂದ್ರಿಯಗಳಿಗೆ ಚೈತನ್ಯವಾಗಿರುವುದು ಪ್ರಾಣವು. ಈ ಪ್ರಾಣ ದಲ್ಲಿಯೇ ಪ್ರಾಣಲಿಂಗವು ನೆಲೆಗೊಳ್ಳುತ್ತದೆ. ಈ ಪ್ರಾಣಲಿಂಗಕ್ಕೆ ಪುನಃ ಮೂಲವಾಗಿರು ವುದು ಭಾವಲಿಂಗವು. ಭ್ರಮೆಗಳು ಮನುಷ್ಯನಲ್ಲಿ ನಷ್ಟವಾಗಿ ಶಿವಾನುಭವವು ನೆಲೆ ಗೊಳ್ಳಲು ಈ ಭಾವಲಿಂಗವು ಕಾರಣ ಶರೀರದಲ್ಲಿ ಪ್ರಜ್ವಲಿಸಹತ್ತುತ್ತದೆ. ಈ ಪ್ರಕಾರ ಇಷ್ಟಲಿಂಗವು ಅಂಗದಲ್ಲಿ ಅಳವಡುತ್ತದೆ. ಪ್ರಾಣಲಿಂಗವು ಮನದಲ್ಲಿ ಅಳವಡುತ್ತದೆ. ಭಾವಲಿಂಗವು ಭಾವದಲ್ಲಿ ಅಳವಡುತ್ತದೆ. ಅಂದರೆ ಇಷ್ಟಲಿಂಗವು ಬಾಹ್ಯಶರೀರದಲ್ಲಿ

ತೋರುತ್ತದೆ. ಪ್ರಾಣಲಿಂಗವು ಪ್ರಾಣದಲ್ಲಿ ತೋರುತ್ತದೆ. ಭಾವಲಿಂಗವು ಇವೆಲ್ಲವುಗಳಿಗೂ ಮೇಲಿರುವ ಕಾರಣ ಶರೀರದಲ್ಲಿ ನೆಲೆಗೊಂಡಿರುತ್ತದೆ.

**ಕರ್ಮೇಂದ್ರಿಯಗಳು** ೧೨-೧೫:

ವಾಕ್, ಪಾದ, ಪಾಣಿ, ಪಾಯು, ಗುಹ್ಯ - ಎಂಬ ಐದು ಬಗೆಯವುಗಳು.

**ಕಾಪಾಲ** ೧೯-೨೧ :

ಶೈವಪಂಥದ ಒಂದು ಹೆಸರು. ಕಾಪಾಲಿಕ ಪಂಥ ವಾಮಾಚಾರಪದ್ಧತಿಯು ಕಾಪಾಲಿಕರದು. ಕರ್ಣಾಟಕದಲ್ಲಿ ಇವರು ಪ್ರಬಲರಾಗಿರಲಿಲ್ಲ. ಉತ್ತರಭಾರತದಲ್ಲಿ ಇವರು ಸ್ವಲ್ಪಮಟ್ಟಿನ ಸಂಖ್ಯೆಯಲ್ಲಿ ಇದ್ದಿರಬಹುದು. ಕಾಪಾಲಿಕರು ಶ್ರೀಶೈಲದಲ್ಲಿದ್ದ ರೆಂದೂ ಇವರಲ್ಲಿ ಒಬ್ಬನಾದ ಗೋರಕ್ಷನನ್ನು ವಾದದಲ್ಲಿ ಅಲ್ಲಮಪ್ರಭುವು ಸೋಲಿಸಿ ವೀರಶೈವ ಧರ್ಮೋಪದೇಶವನ್ನು ಆತನಿಗೆ ಮಾಡಿದನೆಂದೂ ಚಾಮರಸನ ಪ್ರಭುಲಿಂಗ ಲೀಲೆಯಲ್ಲಿ ಬರುತ್ತದೆ. ಉಮಾಸಮೇತನಾದ ಶಿವನನ್ನು ಆರಾಧಿಸಿ ತತ್ಫಲವಾದ ಪುಣ್ಯದಿಂದ ಕೈಲಾಸವನ್ನು ಸೇರಿ ಅಲ್ಲಿ ಉಮೆಯಷ್ಟೇ ಸುಂದರಿಯಾದ ಸ್ತ್ರೀಯೊಡನೆ ವಿಹರಿಸುವುದು ಈ ಕಾಪಾಲಿಕರ ಗುರಿಯಾಗಿದ್ದಿತು.

**ಸ್ಥೂಲ, ಸೂಕ್ಷ್ಮ ಕಾರಣ ಶರೀರಗಳು** ೧೯-೫೮ ; ೨೪-೮ :

ಇವನ್ನು ತನುತ್ರಯಗಳೆಂದೂ ಕರೆಯಲಾಗುವುದು. ಸ್ಥೂಲ ಶರೀರ - ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ ಎಂಬ ಪಂಚಮಹಾಭೂತಗಳಿಂದ ಆದ ಬಾಹ್ಯ ಶರೀರವೇ ಸ್ಥೂಲಶರೀರವು. ಇದು 'Physical body' ಎಂದ ಹೇಳಬಹುದು. ಸೂಕ್ಷ್ಮ ಶರೀರ - ಶ್ರೋತ್ರ, ತ್ವಕ್ಕು, ನೇತ್ರ, ಜಿಹ್ವೆ, ಘ್ರಾಣ ಈ ಜ್ಞಾನೇಂದ್ರಿಯಗಳು ; ಶಬ್ದ, ಸ್ಪರ್ಶ, ರೂಪ, ರಸ, ಗಂಧ ಈ ಪಂಚ ವಿಷಯಗಳು ; ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ, ಈ ಪಂಚವಾಯುಗಳು ; ಮನ, ಬುದ್ಧಿ ಇವುಗಳುಳ್ಳದ್ದೇ ಸೂಕ್ಷ್ಮ ಶರೀರವು. ಇದು 'Mental body' ಎಂದು ಹೇಳಬಹುದು. ಕಾರಣ ಶರೀರ - ಇದು ಸ್ಥೂಲ, ಸೂಕ್ಷ್ಮ ಶರೀರಗಳಲ್ಲಿ ಚೈತನ್ಯವನ್ನುಂಟುಮಾಡುವಂತಹದು. ಸ್ಥೂಲ, ಸೂಕ್ಷ್ಮ ಶರೀರಗಳಲ್ಲಿ ಆಗುವ ಅನುಭವಗಳನ್ನೆಲ್ಲ ಇದು ತನ್ನಲ್ಲಿ ಸಂಗ್ರಹಿಸಿಕೊಳ್ಳುತ್ತದೆ. ಮತ್ತು ಅವುಗಳಿಗೆ ಬೇಕಾದ ಕಾಲದಲ್ಲಿ ಅದರ ಉಪಯೋಗವನ್ನು ಅಂದರೆ ಅನುಭವವನ್ನು ಒದಗಿಸಿಕೊಡುತ್ತದೆ. ಇದನ್ನು 'Casual body' ಎಂದು ಹೇಳಬಹುದು. ಸ್ಥೂಲ ಶರೀರದಲ್ಲಿ ಕ್ರಿಯೆಯು ಗೋಚರವಾಗುವಂಥ ಸ್ವರೂಪದಲ್ಲಿರುತ್ತದೆ. ಸೂಕ್ಷ್ಮ ಶರೀರದಲ್ಲಿ ಮನಸ್ಸು ಬಹು ಪ್ರಬಲವಾದದ್ದು. ಆದರೆ ಕಾರಣಶರೀರದಲ್ಲಿ ಜ್ಞಾನವು ಸಂಗ್ರಹಿಸಲ್ಪಡುವುದುಂಟು.

**ಆಯತ, ಸ್ವಾಯತ, ಸನ್ನಿಹಿತ** ೧೭-೨೦ :

ಇವು ಶರಣಸ್ಥಲದಲ್ಲಿರುವವನ ಲಿಂಗಸಾನ್ನಿಧ್ಯವನ್ನು ಸೂಚಿಸುತ್ತವೆ. ಲಿಂಗಾಯತ, ಲಿಂಗಸ್ವಾಯತ, ಲಿಂಗಸನ್ನಿಹಿತ ಎಂಬ ಶಬ್ದಗಳು ಷಟ್‌ಸ್ಥಲಶಾಸ್ತ್ರದಲ್ಲಿವೆ.

ಲಿಂಗಾಯತ ಎಂದರೆ ಲಿಂಗದ ಮರ್ಮವನ್ನು ಸ್ಥೂಲಕ್ರಿಯೆಗಳಲ್ಲಿ ಅರಿತವನು ಎಂಬರ್ಥವು ಇಲ್ಲಿ ಇರುತ್ತದೆ. ಆದರೆ ಲಿಂಗಮರ್ಮವನ್ನು ಹೆಚ್ಚಿಗೆ ತಿಳಿದು ಆಚರಿಸುವವನು ಲಿಂಗಸ್ವಾಯತ. ಇದಕ್ಕೂ ಹೆಚ್ಚಿಗೆ ತಿಳಿದವನು ಲಿಂಗಸನ್ನಿಹಿತನು.

**ತೃಪ್ತಿಲಿಂಗ ೧೬-೨೮ :**

ಮನುಷ್ಯನಲ್ಲಿ ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳಿರುವವಷ್ಟೇ ? ಅವುಗಳಿಗನು ಸಾರವಾಗಿ ಲಿಂಗದ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ ಎಂಬ ಮೂರು ವಿಭಾಗಗಳನ್ನು ಮಾಡುತ್ತಾರೆ. ಇಷ್ಟಲಿಂಗವು ಕ್ರಿಯೆಗೆ ಸಂಬಂಧಪಡುತ್ತದೆ. ಪ್ರಾಣ ಲಿಂಗವು ಮನಸ್ಸಿಗೆ ಸಂಬಂಧಪಡುತ್ತದೆ. ಭಾವಲಿಂಗವು ಜ್ಞಾನಕ್ಕೆ ಸಂಬಂಧಪಡುತ್ತದೆ. ಭಾವಲಿಂಗಕ್ಕೆ ಜ್ಞಾನಲಿಂಗ, ಸುಜ್ಞಾನಲಿಂಗ ಅಥವಾ ತೃಪ್ತಿಲಿಂಗ ಎಂಬ ಹೆಸರುಗಳೂ ಉಂಟು. ಈ ತೃಪ್ತಿಲಿಂಗವು ತೃಪ್ತಿ ಅಂದರೆ ಆಯಾಸ್ಥಲಗಳಲ್ಲಿ ಉಂಟಾದ ಅನುಭವಗಳ ಮೂಲಕ ಸೂಕ್ಷ್ಮಶರೀರದಲ್ಲಿ ಪ್ರವಹಿಸಹತ್ತಲು ಅದು ಅನುಕ್ರಮವಾಗಿ ಆಚಾರತೃಪ್ತಿ, ಗೌರವತೃಪ್ತಿ, ಲಿಂಗತೃಪ್ತಿ, ಚರತೃಪ್ತಿ, ಪ್ರಸಾದತೃಪ್ತಿ, ನಿರ್ಭಾವತೃಪ್ತಿ ಎಂದು ಹೇಳಲ್ಪಡುತ್ತದೆ.

**ತೂರ್ಯ, ತೂರ್ಯಾತೀತ ೨೪-೯:**

ಮನುಷ್ಯನ ಪ್ರಗತಿಯನ್ನು ಜಾಗ್ರತ್, ಸ್ವಪ್ನ, ಸುಷುಪ್ತಿ, ತೂರ್ಯ, ತೂರ್ಯಾತೀತ ಎಂಬ ಐದು ಅವಸ್ಥೆಗಳ ಮೂಲಕ ವಿವರಿಸುವ ವಾಡಿಕೆಯಿದೆ. ಮನುಷ್ಯನಿಗೆ ಅಂತರಂಗ, ಬಹಿರಂಗವೆಂಬೆರಡು ಇರುತ್ತವೆ. ಇವುಗಳಲ್ಲಿ ಬಹಿರಂಗದ ಕ್ರಿಯೆಗಳು ಜಾಗ್ರದವಸ್ಥೆಯನ್ನು ಸೂಚಿಸುತ್ತವೆ. ಇದು ಸ್ಥೂಲವು. ಅಂತರಂಗವು ವಿಕಾಸ ಹೊಂದುವಾಗ ಬಾಹ್ಯಕ್ರಿಯೆಗಳ ಮೇಲಿನ ಲಕ್ಷ್ಯವು ಹೊರಟುಹೋಗಿ ಅದು ಜಾಗ್ರತ ವಾಗುತ್ತದೆ. ಇದು ಸ್ವಪ್ನಾವಸ್ಥೆಯು. ಮುಂದೆ ಬಾಹ್ಯಕ್ರಿಯೆಗಳೂ ಅಂತರಂಗ ಕ್ರಿಯೆಗಳೂ ನಷ್ಟವಾಗಿ ಮನುಷ್ಯನು ಸದಾ ಪರಮಾತ್ಮನ ಧ್ಯಾನದಲ್ಲಿ ಮುಳುಗಿರುತ್ತಾನೆ. ಇದು ಅತ್ಯಂತ ಉಚ್ಚತರವಾದ ಸ್ಥಿತಿಯು. ಇದನ್ನೇ ಸುಷುಪ್ತಾವಸ್ಥೆ ಎನ್ನಲಾಗುವುದು. ಇದರಲ್ಲಿ ಮನುಷ್ಯನಿಗೆ ನಿಜಸುಖವು ತಲೆದೋರುತ್ತದೆ. ಆಗ ಅವನಿಗೆ ಅಂತರಂಗ ಬಹಿರಂಗ ವೆಂಬ ಭೇದಗಳು ಉಳಿಯುವುದಿಲ್ಲ. ಇದನ್ನು ತೂರ್ಯಾವಸ್ಥೆ ಎಂದು ಕರೆಯ ಲಾಗುವುದು. ಇದರ ಮುಂದೆ ಪ್ರಗತಿಯುಂಟಾದಲ್ಲಿ ಈ ಸುಖವು ಅಸ್ತಿತ್ವದಲ್ಲಿ ಉಳಿಯುವುದಿಲ್ಲ. ಇದನ್ನು ತೂರ್ಯಾತೀತಾವಸ್ಥೆ ಎಂದು ಕರೆಯಲಾಗುವುದು.

ವಚನಕಾರರು ಅಂತರಂಗ ಬಹಿರಂಗಗಳಲ್ಲಿ ಭೇದವೆಣಿಸುವುದಿಲ್ಲ. ಅಂತರಂಗ ದಲ್ಲಿ ಯಾವ ಶಕ್ತಿಗಳು ವಿಕಾಸ ಹೊಂದುತ್ತವೋ ಅವುಗಳ ಉಪಯೋಗವನ್ನು ಮನುಷ್ಯನು ಬಹಿರಂಗದಲ್ಲಿಯೂ ಕೂಡ ಮಾಡಬೇಕೆಂಬುದು ವಚನಕಾರರ ಮುಖ್ಯ ತತ್ವ. ಮನುಷ್ಯನಿಗೆ ಬಹಿರಂಗವನ್ನು ಅಂದರೆ ಬಾಹ್ಯಕ್ರಿಯೆಗಳನ್ನು ಬಿಡಲಿಕ್ಕಾಗದು ಎಂಬುದೇ ಅವರ ಈ ತತ್ವದ ಸಾರ. ಈ ಬಹಿರಂಗದ ಕ್ರಿಯೆಗಳ ಸಹಾಯದಿಂದಲೇ

ಮನುಷ್ಯನು ಅಂತರಂಗದ ಗುಣಗಳನ್ನು ಅಂದರೆ ಇಂದ್ರಿಯ, ಮನಸ್ಸು, ಬುದ್ಧಿ - ಇವೇ ಮೊದಲಾದುವುಗಳನ್ನು ವಿಕಾಸಮಾಡಿಕೊಳ್ಳತಕ್ಕದ್ದು. ಹೀಗೆ. ವಚನಕಾರರ ಪ್ರಕಾರ ಅಂತರಂಗ ಬಹಿರಂಗಗಳು ಪರಸ್ಪರ ಅವಲಂಬಿಗಳು. ಹೀಗಾಗಿ ಜಾಗ್ರತ್, ಸ್ವಪ್ನ, ಸುಷುಪ್ತಿ ಎಂಬ ಅವಸ್ಥೆಗಳಲ್ಲೂ ಭೇದವಿಲ್ಲ. ವಚನಕಾರರು 'ತೂರ್ಯ' ಶಬ್ದವನ್ನು 'ಲಿಂಗಸುಖ' ಎಂಬ ಭಾವದಲ್ಲೂ 'ತೂರ್ಯಾತೀತ' ಎಂಬ ಶಬ್ದವನ್ನು 'ಶೂನ್ಯ' ಎಂಬ ಅರ್ಥದಲ್ಲೂ ಉಪಯೋಗಿಸಿರುವರು.

**ನವಚಕ್ರ** ೧೩-೭೨ :

ಮಿದುಳಿನಲ್ಲಿ ಮೂರುಚಕ್ರಗಳಿವೆ. ಮಿದುಳಿನ ಮಧ್ಯಭಾಗದಲ್ಲಿ ಬ್ರಹ್ಮಚಕ್ರ, ಮಸ್ತಕಾಗ್ರದಲ್ಲಿ ಶಿಖಾಚಕ್ರ, ತಲೆಯ ಹಿಂಭಾಗದಲ್ಲಿ ಪಶ್ಚಿಮಚಕ್ರ - ಹೀಗೆ ಇವೆ. ಶರೀರದ ಉಳಿದ ಭಾಗಗಳಲ್ಲಿ ಆರು ಚಕ್ರಗಳಿವೆ. ಗುದದಲ್ಲಿ ಆಧಾರಚಕ್ರ, ಗುಹ್ಯದಲ್ಲಿ ಸ್ವಾಧಿಷ್ಠಾನಚಕ್ರ, ಉದರ ಅಥವಾ ನಾಭಿಸ್ಥಾನದಲ್ಲಿ ಮಣಿಪೂರಕಚಕ್ರ, ಹೃದಯದಲ್ಲಿ ಅನಾಹತಚಕ್ರ, ಕಂಠದಲ್ಲಿ ವಿಶುದ್ಧಿ ಚಕ್ರ, ಲಲಾಟದಲ್ಲಿ ಆಜ್ಞಾಚಕ್ರ ಹೀಗೆ ಇವೆ. ಇವು ಮೂಲಚಿತ್ತುವಿನ ಮೂಲಕ ಮಿದುಳಿನಲ್ಲಿ ಉಂಟಾಗುವ ಚೈತನ್ಯಕ್ಕೆ ಕೇಂದ್ರ ಸ್ಥಾನಗಳೆಂದು ಹೇಳಬಹುದು.

**ನಾದ-ಬಿಂದು-ಕಳೆ** ೬-೧೫ ; ೧೮-೨೨ ; ೧೯-೨:

ಶೂನ್ಯ ಅಥವಾ ಬಯಲಿನಲ್ಲಿ ಮೊದಲು ನಾದವು ಹುಟ್ಟುತ್ತದೆ. ಜಗತ್ತು ಉಂಟಾಗಬೇಕೆಂಬ ಅಭಿಲಾಷೆಯೇ ಇದಕ್ಕೆ ಕಾರಣವು. ಈ ಅಭಿಲಾಷೆಯೇ ಚಿತ್ತುವೆನಿಸಿಕೊಳ್ಳುತ್ತದೆ. ನಾದವೆಂದರೆ ಒಂದು ಬಗೆಯ ಅಲುಗಾಡುವಿಕೆ (Vibration). ಈ ಅಲುಗಾಡುವಿಕೆಯಿಂದ ಬಿಂದುವು ಉದಯವಾಗುತ್ತದೆ. ಬಿಂದುವು ವಸ್ತುವೆಂದು ಹೇಳಬಹುದು. ಅದು ಸ್ಥೂಲವು. ಅದರಲ್ಲಿ ನಾದವಿದೆ. ಈ ನಾದವು ಈ ಬಿಂದುವಿಗೆ ಚೈತನ್ಯ ಕೊಡುತ್ತದೆಯೆಂದು ಹೇಳಬಹುದು. ಇವೆರಡೂ ಪರಸ್ಪರಾವಲಂಬಿಗಳು. ಇವೆರಡೂ ಪ್ರಕಟವಾದ ಕೂಡಲೆ ಕಲೆಯು ಆ ವಸ್ತುವಿನಲ್ಲಿ ಉತ್ಪನ್ನವಾಗುತ್ತದೆ. ಈ ಕಲೆಯ ಮೂಲಕವಾಗಿಯೇ ವಸ್ತುವಿನ ಗುಣ, ರೂಪ ಮೊದಲಾದುವುಗಳು ತೋರುತ್ತವೆ. ನಾದ-ಬಿಂದು-ಕಲೆಗಳು ಯಾವಾಗಲೂ ಒಟ್ಟುಗೂಡಿ ವ್ಯವಹರಿಸುತ್ತವೆ. ಆದರೆ ಅವು ಮೂಲಚಿತ್ತುವಿನಲ್ಲಿ ಬೆರೆತಿರುತ್ತವೆ. ನಾದ-ಬಿಂದು-ಕಲೆ-ಮೂಲಚಿತ್ತು ಈ ನಾಲ್ಕೂ ಕೂಡಿದಲ್ಲಿ ಒಂದು ಪದಾರ್ಥವಾಗುತ್ತದೆ. ಮೂಲಚಿತ್ತುವಿನ ಮೇಲೆಯೇ ಪದಾರ್ಥಗಳ ವೈಶಿಷ್ಟ್ಯವು ಅವಲಂಬಿಸಿದೆ. ಪದಾರ್ಥಗಳ ವೈಶಿಷ್ಟ್ಯದ ವ್ಯವಹರಣೆಯು ನಾದ-ಬಿಂದು-ಕಲೆಗಳ ಮುಖಾಂತರವಾಗಿಯೇ ನಡೆಯುತ್ತದೆ. ಜಗತ್ತಿನಲ್ಲೆಲ್ಲಾ ಈ ನಾದ-ಬಿಂದು-ಕಲೆಗಳು ಪಸರಿಸಿರುತ್ತವೆ. ಅವಿಲ್ಲದೆ ಜಗತ್ತು ನಡೆಯಲಾರದು. ಅವು ಸಣ್ಣದರಲ್ಲಿಯೂ ದೊಡ್ಡದರಲ್ಲಿಯೂ ಇರುತ್ತವೆ.

**ಬ್ರಹ್ಮರಂಧ್ರ** ೧೮-೨೬ :

ಇದು ಶಿರದಲ್ಲಿದೆಯೆಂದು ಹೇಳುವರು (ವಿವರಣೆಗೆ ನೋಡಿ-ಈಡಾ ಪಿಂಗಳಾ)

**ಮೂರವಸ್ಥೆ** ೨೩-೫೨ :

ಜಾಗ್ರತ್, ಸ್ವಪ್ನ, ಸುಷುಪ್ತಿ - ಎಂಬ ಮನಸ್ಸಿನ ಮೂರು ಅವಸ್ಥೆಗಳು.

**ಷಡ್‌ದರ್ಶನ** ೨೧-೨೯:

ಶೈವ, ಶಾಕ್ತ, ವೈಷ್ಣವ, ಸೌರ, ಗಾಣಪತ್ಯ, ಮಾಯಾವಾದಿ ಇವು ಆರು ದರ್ಶನಗಳು.

**ಸಪ್ತಧಾತು** ೧೮-೨೩ :

ದೇಹದ ರಸ, ರಕ್ತ, ಮಾಂಸ, ಮೇದಸ್ಸು, ಮಜ್ಜ, ಅಸ್ಥಿ, ಶುಕ್ಲ ಈ ಏಳು ಸತ್ವಗಳು.

**ಸಪ್ತವ್ಯಸನಗಳು** ೨೩-೫೨ :

ಬೇಟೆ, ಮದ್ಯಪಾನ, ದ್ಯೂತ, ಕಠಿಣವಾಗಿ ನುಡಿಯುವುದು, ಕಠಿಣವಾಗಿ ಶಿಕ್ಷಿಸುವುದು, ಕಠಿನ ದಂಡ, ವ್ಯಭಿಚಾರ - ಇವು ಏಳು ಬಗೆಯ ಕೆಟ್ಟ ಚಾಳಿಗಳು.

---

# ೨. ಅರ್ಥಕೋಶ

(ಸಂಖ್ಯೆಗಳು ಗತಿ ಮತ್ತು ಪದ್ಯವನ್ನು ಸೂಚಿಸುತ್ತವೆ)

## ಅ

ಅಕ್ಕಜ ೪-೧೯ ; ೬-೩೪ ಅಸೂಯೆ ; ಆಶ್ಚರ್ಯ

ಅಕ್ಕಱು ೬-೩೪ ಪ್ರೀತಿ

ಅಂಗಚಿತ್ತ ೫-೪೨ ಬಹುಮಾನ

ಅಂಗವಟ್ಟ ೫-೪ ಅಂಗಸೌಷ್ಠವ, ಅವಯವಗಳ ಚೆಲುವು, ಸೌಂದರ್ಯ

ಅಗಲ್ ೨೩-೧೫ ತಟ್ಟೆ

ಅಂಗವಣೆ ೧೩-೨೭ ಪರಾಕ್ರಮ

ಅಂಗವಿಸು ೧೯-೪೯ ಇಷ್ಟಪಡು

ಅಂಗೈಸು ೧೦-೧೨ ಸ್ವೀಕರಿಸು

ಅಂಡಲೆ ೨೧-೩ ಪೀಡಿಸು

ಅಂದಣ ೪-೨೫ ಪಲ್ಲಕ್ಕಿ

ಅಗ್ಗ ೧೮-೨ ಶ್ರೇಷ್ಠ

ಅಗ್ಗಳೆಯತನ ೧೧-೩೭ ಹಿರಿಯತನ

ಅಟಮಟಿಗತನ ೭-೫೪ ಮೋಸ

ಅಟಮಟಿಸು ೧೧-೩೨ ಉಪಾಯದಿಂದ ಬಿಡಿಸು

ಅಡಕಿಲು ೪-೧೨ ಒಂದರ ಮೇಲೊಂದು ಪೇರಿಸಿದುದು

ಅಡಬಳ ೮-೧೩ ಮಾಂಸ

ಅಡ್ಡಣಿಗೆ ೨೩-೧೪ ಮೂರು ಕಾಲಿನ ಮಣೆ

ಅಡಸು ೧೪-೨೦ ಪ್ರಾಪ್ತವಾಗು

ಅಣಕ ೮-೨೭ ; ೧೯-೩೬ ಹಾಸ್ಯ, ಕುಚೋದ್ಯ

ಅಣಲು ೨೩-೩೬ ; ೨೩-೪೧ ಬಾಯಿ

ಅಣಿವರಿ ೪-೨೭ ಸಾಲಾಗಿ ನಡೆ

ಅಣ್ಣೆ ೧೮-೫ ಶುದ್ಧ

ಅರ್ತಿ ೩-೩೨ ಪ್ರೀತಿ

ಅತುಳ ೯-೬ ಹೆಚ್ಚಾದ, ಎಣೆಯಿಲ್ಲದ

ಅಂದವಿಗರು ೧೪-೧೩ ರೂಪಿಗಳು

ಅಧ್ವ ೨೦-೩೮ ಮಾರ್ಗ

ಅನುಭಾವಿ ೬-೩೯ ಜ್ಞಾನಿ

ಅನ್ಯಾಪದೇಶ ೧೧-೧೬ ಬೇರೆ ರೀತಿ

ಅಪ್ರಮೇಯ ೨೨-೧ ಅಳೆಯಲಾಗದ

ಅರಿದು ೨-೩೭ ಅಸಾಧ್ಯ

ಅಱಿವು ೨-೩೬ ತಿಳಿವಳಿಕೆ, ಜ್ಞಾನ

ಅಲಂಪು ೧೭-೩ ಸಂತೋಷ

ಅವಧಾನ ೭-೧೨ ; ೨೩-೭ ಏಕಮನಸ್ಕತೆ

ಅಷ್ಟವಿಧಾರ್ಚನೆ ೩-೪೬ ಜಲಾಭಿಷೇಕ, ಗಂಧಧಾರಣ, ಅಕ್ಷತಾರ್ಪಣ, ಪತ್ರ- ಪುಷ್ಪಾರ್ಪಣ, ಧೂಪಸಮರ್ಪಣ, ದೀಪಸಮರ್ಪಣ, ನೈವೇದ್ಯ ಸಮರ್ಪಣ, ತಾಂಬೂಲ ಸಮರ್ಪಣ

ಅಸಿಯ ೫-೬ ತೆಳುವಾದ

ಅಳಬಳ ೫-೨೨ ; ೭-೩೪ ಇಚ್ಛೆ; ಸಾಮರ್ಥ್ಯ ; ಶಕ್ತಿ

ಅಳವಡು ೧೦-೨೪ ಒಪ್ಪು ; ಹೊಂದು

ಅಳವಿ ೫-೧೧ ಸಾಮರ್ಥ್ಯ ; ಶಕ್ತಿ

ಅಳಿ ೫-೪೭ ನಷ್ಟವಾಗು, ಹಾಳಾಗು

ಅಳುಪು ೪-೨೨ ; ೫-೨ ; ೧೫-೨೫ ಪ್ರೀತಿ, ಪ್ರೇಮ ; ಆಶೆ

ಅಷ್ಟಮದ ೨೩-೫೧ ಅಸ್ತ್ರ, ಅರ್ಥ, ಯೌವನ, ಸ್ತ್ರೀ, ವಿದ್ಯೆ, ಕುಲ, ರೂಪ, ಉದ್ಯೋಗ, ಎಂಬ ಹೆಮ್ಮೆಗೆ ಕಾರಣವಾದ ಎಂಟು ವಸ್ತುಗಳು

## ಆ

ಆಡುವೊಲ ೩-೩೧ ಆಟದ ಬಯಲು

ಆಣತಿ ೧೬-೧೪ ಆಜ್ಞೆ

ಆತು ೬-೩೩ ಒದಗಿ, ಸೇರಿ

ಆನಲು ೧೩-೧೩ ಎದುರಿಸಲು, ಪ್ರತಿಭಟಿಸಲು

ಆನು ೨೩-೪೧ ಎದುರಿಸು

ಆಟೋಪ ೨೩-೩೮ ಹೆಗ್ಗಳಿಕೆ

ಆಯತ ೧-೨ ಸಿದ್ಧತೆ, ಸಾಧನ

ಆರವೆ ೧೩-೫೫ ತೋಟ

ಆಱನು ೬-೧೪ ಸಮರ್ಥಳಲ್ಲ

ಆರೂಢ ೧೯-೩೪ ಏರಿರುವಿಕೆ, ಪಡೆದಿರುವಿಕೆ

ಆರೋಗಣೆ ೨೩-೬ ಭೋಜನ

ಆಲಿ ೧೧-೨೩ ದೃಷ್ಟಿ, ನೋಟ

ಆಲಿಕಲ್ಲು ೨೩-೪೧ ಆಣೆಕಲ್ಲು

ಆವರಿಸಿ ೧೪-೧೭ ಗ್ರಹಿಸಿ

ಆವುಜ ೪-೪೧ ಒಂದು ಬಗೆಯ ವಾದ್ಯ

ಆಸನ್ನಿಸು ೧೦-೫ ಸೇರು, ಪ್ರಾಪ್ತವಾಗು

ಆಸಱು ೭-೪೯ ಬಳಲಿಕೆ

ಆಸುರ ೧೯-೨೬ ಭೀಕರ

ಆಳಾಪಿಸು ೩-೩೬ ; ೪-೫೨ ಆಲೋಚಿಸು ; ಸ್ವರದಲ್ಲಿ ಹಾಡು

ಆಳ್ದ ೧೩-೧೦ ಒಡೆಯ

## ಇ

ಇಕ್ಕೆ ೯-೪ ಮನೆ ; ವಾಸಸ್ಥಳ

ಇಕ್ಕೆಲ ೪-೧೦ ಎರಡು ಮಗ್ಗಲು

ಇಟ್ಟಣಿಸು ೪-೪೯; ೨೩-೩೮ ಗುಂಪಾಗು; ಒತ್ತೊತ್ತಾಗು

ಇಡಿ ೧೧-೨ ತುಂಬು

ಇದ್ದೆಸೆ ೪-೨೨ ಎರಡು ಕಡೆ

ಇನಿಯ ೩-೪೫ ಗಂಡ

ಇರ್ಮೆ ೭-೭೦ ಎರಡುಸಾರಿ

ಇರವು ೬-೯ ಸ್ಥಿತಿ

ಇಜೆ ೪-೫ ಹೊಂದಿಸಿ ಹಾಕು

ಇಂಡೆ ೪-೩೦ ಮಾಲೆ

ಇಂಪು ೧-೮ ಮಾಧುರ್ಯ

ಇಂಬಿನಲಿ ೯-೧೪ ಚೆನ್ನಾಗಿ

## ಈ

ಈಡಾಡು ೫-೬೨ ಬಿಸುಡು, ಬಿಡು

ಈಪ್ಸಿತಾರ್ಥ ೯-೫ ಮನಸ್ಸಿನ ಬಯಕೆ

ಈಸು ೧೩-೨೪ ; ೧೬-೪೫ ಇಷ್ಟು

## ಉ

ಉಕ್ಕಲಿಸು ೧೩-೧೪ ಕೈಮೀರು

ಉಗ್ಘಡಣೆ ೫-೯ ಘೋಷ

ಉಗಿ ೧೩-೨೩ ಒಡೆ

ಉಗು ೧೩-೫೯ ಸೇರು

ಉಚ್ಚೆ ೪-೫೦ ಉಷ್ಣ

ಉಡಿನೇವಳ ೫-೫ ಉಡಿದಾರ

ಉತ್ತರಾಯಿ ೧೦-೨೪ ಪರಕೀಯ, ದೂರದವನು

ಉದುಗರ ೧೮-೭ ವಾಂತಿ

ಉದ್ದಂಡ ೧೩-೩ ಗರ್ವಿಷ್ಠ

ಉದ್ದಾಮತೆ ೧೯-೧೩ ಸೊಕ್ಕು

ಒಲಹು ೨೨-೩೩ ತೂಗಾಡು
ಒಸೆದು ೨-೧೩ ಪ್ರಸನ್ನನಾಗಿ, ಪ್ರೀತಿಯಿಂದ
ಒಳಯಿಕೆ ೧೪-೧೫ ಒಳಕ್ಕೆ

ಓ

ಓಗಡಿಕೆ ೧೮-೭ ಜಿಗುಪ್ಸೆ, ಓಕರಿಕೆ
ಓಗರ ೪-೪೩ ಅನ್ನ
ಓಜೆ ೫-೫೬ ಸರಿಯಾದ ಕ್ರಮ, ನಡತೆ
ಓತು ೯-೩೫ ಪ್ರೀತಿಪಟ್ಟು
ಓಪಾದಿಯಲಿ ೫-೧೪ ಹಾಗೆ, ಅಂತೆ
ಓರಂತೆ ೧೬-೫೦ ಒಂದೇಸಮನೆ, ಚೆನ್ನಾಗಿ
ಓಲಗಿಸು ೨-೨೭ ಸೇವೆಮಾಡು
ಓಲೈಸು ೨-೧೬ ಸೇವೆಮಾಡು
ಓವರಿ ೧೮-೨೬ ಕೋಣೆ
ಓವಿ ೫-೩೬ ಪ್ರೀತಿಯಿಟ್ಟು
ಓಷ್ಠ ೧೨-೨೨ ತುಟಿ
ಓಸರಿಸು ೧೦-೨೬ ತೊಲಗಿಹೋಗು

ಕ

ಕಕ್ಕುಲಿಸಿ ೧೦-೫ ಮೋಹಗೊಂಡು
ಕಚ್ಚರಿ ೪-೪೫ ಚಟ್ನಿ
ಕಚ್ಚುಟ ೭-೫೭ ಕೌಪೀನ
ಕಡವಸ ೭-೪೫ ಕೃಷ್ಣಾಜಿನ
ಕಡಿ ೨೩-೪೧ ಕಂಡು
ಕಡುಗಳಲು ೮-೮ ನಿರಾಶೆಹೊಂದು
ಕಡುದುಱು ೩-೪೨ ಕಡಜೀರಿಗೆ ಹುಳ
ಕಡುಹು ೧೩-೩೨ ಶಕ್ತಿ, ಬಲ, ದರ್ಪ
ಕಡೆಗಣಿಸು ೧೬-೧೮ ತಿರಸ್ಕರಿಸು
ಕಡೆಯನು ೧೯-೧೭ ಕೊನೆಯನ್ನು, ಮೋಕ್ಷವನ್ನು
ಕಣ್ಣಕಿಸುರು ೬-೩೪ ದೃಷ್ಟಿದೋಷ
ಕತ ೮-೨೬ ನಿಮಿತ್ತ, ಕಾರಣ
ಕರ್ದಮ ೨೨-೧೧ ಕೆಸರು
ಕನಲು ೭-೮೧ ಸಿಟ್ಟಾಗು
ಕನ್ಯಾಮಾಡ ೫-೧೮ ಅಂತಃಪುರ
ಕಬಳಿಸು ೨೩-೧೮ ನುಂಗು
ಕಬ್ಬಸೆ ೧೯-೧ ನೆಣ, ಕೊಬ್ಬು
ಕರಗ ೪-೩೯ ನೀರಿನ ಪಾತ್ರೆ
ಕರಣ ೪-೫೭ ಕುಣಿಯುವ ಭಂಗಿ
ಕರಣಗಳು ೬-೨೨ ಇಂದ್ರಿಯಗಳು
ಕರಣಿಕ ೨೨-೧೮ ಲೆಕ್ಕಿಗ
ಕಱು ೨-೨೧ ಪುತ್ತಳಿ, ಎರಕದ ಬೊಂಬೆ
ಕಱುಗಟ್ಟು ೪-೯ ಎರಕದಿಂದ ಗಟ್ಟಿಯಾಗು
ಕಱುಬು ೫-೪೩ ಅಸೂಯೆ
ಕವಲುವಟ್ಟೆ ೩-೯ ಬೇರೆ ಮಾರ್ಗ
ಕಳ ೩-೫ ಯುದ್ಧರಂಗ
ಕಾಕರು ೭-೩೭ ನೀಚರು
ಕಾಗಬ್ಬು ೭-೭ ಕಾಡುಗಬ್ಬು (ರಸಹೀನವಾದ ಕಬ್ಬು)
ಕಾಗುದುರೆ ೧೩-೭೦ ನೀಚ ಜಾತಿಯ ಕುದುರೆ
ಕಾರ್ ೧೨-೨ ಕಡಿ, ತಿನ್ನು ;
" ೫-೧೦ ಮಳೆಗಾಲ
ಕಾರಣಕನ್ಯೆ ೩-೩೯ ಅವತಾರ ಮಾಡಿದ ಸ್ತ್ರೀ; ಉದ್ದೇಶಸಾಧನೆಗಾಗಿ ಮನುಷ್ಯಾಕಾರವನ್ನು ಪಡೆದವಳು
ಕಾರಣೆ ೩-೪ ಗೋಡೆಯ ಕೆಳಭಾಗಕ್ಕೆ ಅಲಂಕಾರಕ್ಕಾಗಿ ಎಳೆಯುವ ಕೆಂಪುಗೆರೆ
ಕಾಹು ೫-೬೧ ಕಾವಲು
ಕಾಳುಮತಿ ೭-೭೩ ನೀಚಬುದ್ಧಿ
ಕಿಸಕುಳ ೧೭-೫೮ ತುಚ್ಛ, ಅಲ್ಪ
ಕಿಸುಱು ೬-೩೪ ದೃಷ್ಟಿ
ಕೀನಾಶ ೨೪-೧೨ ಯಮ

## ಖ



## ಗ

ಗುಡ್ಡ ೧೩-೧೩ ಶಿಷ್ಯ
ಗುಲ್ಮ ೧೯-೧೧ ಪೊದರು
ಗಂದೆಯ ೫-೧೫ ಬಾವು

## ಘ

ಘಟಣೆ ೧೬-೨೩ ಪ್ರಾಪ್ತಿ
ಘಸಣೆ ೧೩-೬೪ ಉದ್ಯೋಗ
ಘೂರ್ಮಿಸು ೧೩-೩೦ ಗದರಿಸು, ಗರ್ಜಿಸು

## ಚ

ಚಢಾಳಿಸು ೨-೧೦ ಹೆಚ್ಚಾಗು
ಚರವನು ೧೪-೧೫ ಜಂಗಮಾಕಾರವನ್ನು
ಚಲ್ಲಣ ೪-೨೯ ಚಡ್ಡಿ
ಚಳತೆ ೭-೩೪ ಚಾಂಚಲ್ಯ
ಚಳಬಳಕೆ ೨೩-೨೮ ಚಮತ್ಕಾರ
ಚಳೆಯ ೩-೪ ಚಿಮುಕಿಸು
ಚಾಳು ೭-೫೩ ಚಮತ್ಕಾರ, ಮುಖ ಸ್ತುತಿಯ ಮಾತುಗಳು
ಚಿಮ್ಮುರಿ ೫-೬ ಎಳೆದು ಹಿಂದಕ್ಕೆ ಕಟ್ಟಿದ ಗಂಟು
ಚೈ ೩-೨೯ ಚೆನ್ನಾಗಿ
ಚೌಮಾಳಿಗೆ ೫-೧೮ ಉಪ್ಪರಿಗೆಯ ನಾಲ್ಕನೆ ಅಂತಸ್ತಿನ ಮಂದಿರ
ಚೊಣೆ ೨೩-೪೩ ಅಗ್ರ

## ಜ

ಜಗಳೆ ೪-೪ ಒಂದು ವಾದ್ಯವಿಶೇಷ
ಜಡಿ ೧೩-೧೪ ಬೆದರಿಸು
ಜಾತಿಜಾಣಿಕೆ ೪-೨೧ ಸಹಜವಾದ ಜಾಣ್ಮೆ
ಜಾವಳಿಗ ೫-೩೯ ಸಾಮಾನ್ಯ ಮನುಷ್ಯ
ಜಿನುಗು ೫-೫೭ ಅಲ್ಪ ; ಕೀಳು
ಜುಣುಗು ೧೯-೩೬ ಜಾರಿಹೋಗು
ಜೋಗವಿಸು ೫-೭೨ ಸಿದ್ಧಮಾಡು
ಜೋಗೈಸು ೧೮-೧೩ ಜೋಕೆಮಾಡು
ಜೋಡು ೧೦-೧೯ ಕವಚ
ಜೋಹ ೭-೩೦ ವೇಷ
ಜಂಕಿಸು ೩-೩೨ ಬೆದರಿಸು
ಜಂಗುಳಿ ೩-೩೧ ಸಮೂಹ
ಜೊಂಪಿಸು ೧೬-೧೫ ಮೈಮರೆ
ಜೋಜು ೨೨-೩೪ ಸೋರು

## ಟ

ಟೋಣೆ ೨೨-೩೦ ಮೋಸಮಾಡು

## ಠ

ಠವಣೆ ೨-೨೨ ಲೆಕ್ಕ

## ಡ

ಡಗೆ ೧೪-೪ ಬಿಸಿಲಿನ ತಾಪ ; ನೀರಡಿಕೆ
ಡಾವಣೆ ೩-೧೦ ಅನೇಕ ದನಗಳನ್ನು ಕಟ್ಟುವ ಒಂದು ಹಗ್ಗ
ಡಾಳಕತನ ೫-೩೬ ಬಣ್ಣದ ಮಾತು, ಚಮತ್ಕಾರ

## ತ

ತಕ್ಕೆ ೨-೨೨ ಬಾಹುಲ್ಯ
ತತ್ತ ೨೩-೪೭ ಒದಗಿದ
ತತ್ತಡೆ ೭-೮೧ ಸಂಭವಿಸಿದರೆ
ತತ್ತವಸರ ೧೪-೧೭ ಸಂಬಂಧಪಟ್ಟ ಕೆಲಸ; ಇರುವ ಕೆಲಸ
ತಮಂಧ ೩-೨೨ ಕಗ್ಗತ್ತಲೆ
ತರಹರ ೩-೧೭ ಸಮಾಧಾನ, ಶಾಂತಿ
ತಬ್ಬಿಬ್ಬು ೭-೨೬ ಗಾಬರಿ
ತಲ್ಲಣ ೩-೧೮ ಅಂಜಿಕೆ
ತವನಿಧಿ ೧೯-೧೦ ಭಂಡಾರ
ತಳಿತ ೪-೬೨ ; ೭-೨೫ ಅರಳಿದ, ಹೊಂದಿದ
ತಳುವು ೧೪-೧೫ ತಡ
ತಾಗುನಿರೋಧ ೧೬-೩೭ ಅಡೆತಡೆ
ತಿಟ್ಟವಿಡು ೬-೮ ರೂಪುಗೊಳ್ಳು
ತಿಣ್ಣನೆ ೬-೮ ಹೆಚ್ಚಾಗಿ
ತುತ್ತು ೨೩-೨೭ ನುಂಗು

ತುರಿಯ ೫-೧೦ ವಾದ್ಯ

ತುಱುಗು ೧೪-೪ ತುಂಬಿರು

ತುರಿಯೋದ್ಧಾರ ೫-೧೦ ವಾದ್ಯಧ್ವನಿ

ತೂಪಿಱೆ ೩-೨೬ ಉಃಫೆಂದು ಊದು

ತೆಕ್ಕನೆ ೨೨-೩ ಇದ್ದಕ್ಕಿದ್ದಂತೆ

ತೆತ್ತಿಗ ೪-೨೫ ; ೨೩-೪೭ ಸೇವಕ; ಆಪ್ತ; ಸಂಬಂಧಿ, ಸ್ನೇಹಿತ

ತೆತ್ತಿಸು ೪-೧೪ ಜೋಡಿಸು, ಹೊಂದಿಸು

ತೆರೆ ೧೭-೧೮ ಚರ್ಮದ ಸುಕ್ಕು

ತೊಡೆ ೧೩-೩೨ ನಾಶಮಾಡು

ತೊನಹು ೨೨-೩೩ ತೂಗಾಟ

ತೊಱೆ ೧೭-೪ ನದಿ

ತೋಟಿ ೧೩-೭ ಜಗಳ

ತೋರ ೪-೯ ದೊಡ್ಡ

## ದ

ದಣಿಸು ೨೩-೪೪ ತೃಪ್ತಿಪಡಿಸು

ದಶಾವಸ್ಥೆ ೭-೧೭ ಅಭಿಲಾಷೆ ಚಿಂತಾಸ್ಮೃತಿ ಗುಣಕೀರ್ತನ ಉದ್ವೇಗ ಪ್ರಲಾಪ ವ್ಯಾಧಿ ಜಡತಾ ಮರಣಾಖಾಃ ದಶಾವಸ್ಥಾಃ - ವಾಗ್ಭಟಃ ಕಾವ್ಯಾನುಶಾಸನ ದೃಙ್‌ಮನಕಿ ಸಂಗಸಂಕಲ್ಪಾ ಜಾಗರಃ ಕೃಶತಾ ರತಿಃ ।

ಹ್ರೀ ತ್ಯಾಗೋನ್ಮಾದಮೂರ್ಛತಾ ಇತ್ಯ ನಂಗದಶಾ ದಶ ॥ - ದಶರೂಪಕ ವಿರಹಿಗಳು ಬಳಲುವ ದಶಾವಸ್ಥೆಗಳು ಕೆಳಗಿನಂತಿವೆ :

೧. ಬಿಡದೆ ನಿಟ್ಟಿಸುವ ೨. ಕಂಡೊಡನೆ ಚಿಂತಿಸುವ ೩. ನೊಂದು ಅಡಿಗಡಿಗೆ ಸುಯ್ವ ೪. ಜ್ವರವಿಡಿದು ತಾಪಿಸುವ ೫. ಸೆಕೆಗೆ ಒಡಲನುರೆ ಕಳಲ್ವ ೬. ಭುಕ್ತಿಗಳನುಳಿದು ವಿಕಳಿಸುವ ೭. ನುಡಿಯಡಗಿ ಸುಮ್ಮನಿರ್ಪ ೮. ಕಡು ಸೊರಗಿ ಮೂರ್ಛಿಸುವ ೯. ಸುಧೆ ಯುಂಡುದರಿಂ ಉಸುರ್ ಮಿಡುಕುತಿಹ ೧೦. ಗಳಗತಪ್ರಾಣೆ ಯಾಗಿ ಬಾಯ್ಗಳಂ ಬಿಡುವ - ಈ ಪತ್ತು ಪ್ರಕಾರದ ಅವಸ್ಥೆಗಳಿಗೆ ದಶಾವಸ್ಥೆ ಎಂದು ಹೆಸರು. (ಚೆನ್ನಬಪು ೧೯-೩೧)

ದರ್ಶನ ೨೦-೨೭ ತತ್ವಜ್ಞಾನ

ದಸರಿದೊಡಕು ೧೨-೨೨ ರೇಶಿಮೆಯ ಹುರಿಯಂತೆ ತೊಡಕಾದುದು

ದಾಯ ೧-೩ ; ೧೯-೩೭ ಉಪಾಯ, ಸಾಧನ ; ಪಾಲು

ದಾಯಿಗ ೧-೧೧ ಸಾಧಕ, ಭಕ್ತ

ದಾರವಟ್ಟ ೨-೬ ಅಗಸೆಯ ಬಾಗಿಲು

ದೀಪನೋತ್ಸವ ೨೩-೨೩ ಹುರುಪಿನ ಸಂಭ್ರಮ

ದೀವಸಿ ೧೩-೫೯ ಧೀರ

ದುಗುಡ ೫-೬೭ ಚಿಂತೆ, ದುಃಖ

ದುಗುಲ ೩-೨೬ ದುಕೂಲ, ಸೀರೆ

ದುಮ್ಮಾನ ೮-೧೦ ದುಃಖ

ದುರಿತ ೨-೩೩ ಪಾಪ ,

ದುಸ್ತರ ೨-೩೯ ಅಸಾಧ್ಯ

ದೂರ್ವೆ ೪-೪೦ ಗರಿ

ದೂಱು ೨೩-೧೨ ಆಕ್ಷೇಪಣೆ

ದೇಹಾರ ೨೦-೨೮ ಪೂಜೆ

ದೇಸಿಗ ೮-೩ ಮನೆಮಾರು ಇಲ್ಲದವ

ದಂಡಿ ೨೧-೨೧ ; ೨೨-೩೮ ಸಮತೋಲ, ವಿಪರೀತ ವರ್ತನೆ, ಅತಿರೇಕ, ಹೆಚ್ಚು

ದಂಡಿಗೆ ೪-೨೭ ಪಲ್ಲಕ್ಕಿ

ದಂಡೆ ೪-೪೦ ಹೂಮಾಲೆ

ದಂದುಗ ೨೦-೩೫ ಪೀಡೆ, ಕಷ್ಟ

**ಧಾ**

ಧಾವತಿ ೭-೬೪ ಶ್ರಮ, ತವಕ

ಧೂಪಿಸು ೭-೪೪ ಬಳಲು, ಆಯಾಸ ಹೊಂದು

**ನ**

ನಟ್ಟುವಿಗತನ ೭-೩೭ ನಟನವೃತ್ತಿ

ನಾಗವಾಸ ೫-೧೭ ದೇವಾಲಯದ ಸಿಬ್ಬಂದಿಯ ಒಂದು ಭಾಗ- ದೇವ ದಾಸಿ ಯರ ವಾಸದ ಪ್ರದೇಶವನ್ನು, ಪರ್ಯಾಯವಾಗಿ ಅದರ ಸಮೂಹ ವನ್ನು ನಿರ್ದೇಶಿಸುತ್ತದೆ. (ಹೆಚ್ಚಿನ ವಿವರಣೆಗೆ ಡಾ. ಎಂ. ಚಿದಾನಂದ ಮೂರ್ತಿಯವರ, 'ನಾಗವಾಸ ಎಂದರೇನು?' 'ಅಲ್ಲಮನ ಮನೆ ತನದ ಬಗ್ಗೆ ಒಂದು ಸ್ಪಷ್ಟೀಕರಣ' ನೋಡಿ: ಸಂಶೋಧನೆ; ಪ್ರ.ಕ.ಸಂ. ೫೫ ಸಂಚಿಕೆ ೧)

ನಾರಂಗ ೩-೩ ಕಿತ್ತಳೆ

ನಿಖಿಳೆ ೧೨-೨೭ ಪರಿಪೂರ್ಣೆ

ನಿಗಡ ೩-೫ ಆನೆಯನ್ನು ಕಟ್ಟುವ ಸರಪಣಿ

ನಿಚ್ಚಟರು ೧೮-೩೫ ಸ್ಥಿರ, ದೃಢ ಮನುಷ್ಯರು ; ಚಿತ್ತಸ್ಥೈರ್ಯವುಳ್ಳವರು

ನಿಧಾನ ೧೨-೬ ಆಧಾರ

ನಿಧಾನಿಸು ೮-೨೩ ಆಲೋಚಿಸು

ನಿಪ್ಪಸರ ೧೯-೩೫ ಕ್ರೂರವಾದ, ಉರವಣೆ

ನಿಬ್ಬರ ೭-೭ ವಿಶೇಷವಾದ

ನಿಬ್ಬೆಱಗು ೧೧-೧೯ ರೆಪ್ಪೆ ಹೊಡೆಯದ ದೃಷ್ಟಿ

ನಿರಾಕುಳ ೨-೯ ವ್ಯಸನವಿಲ್ಲದ

ನಿರಾಳ ೨-೯ ಶಾಂತವಾದ

ನಿಜೆಗೆ ೪-೫೪ ಶೋಭೆ

ನಿಲವು ೮-೧೬ ಸ್ಥಿತಿ, ಔನ್ನತ್ಯ

ನಿರ್ಲೇಪನು ೧೩-೧೮ ಸಂಬಂಧವಿಲ್ಲ ದವನು, ತೊಂದರೆ ಇಲ್ಲದವನು

ನಿರ್ವಯಲು ೧೨-೧೧ ಲಿಂಗೈಕ್ಯ, ಮುಕ್ತಿ, ಬಯಲಾಗುವುದು

ನಿರ್ವಾಣ ೧೬-೩ ಮುಕ್ತಿ

ನಿಶ್ಚಲ ೨-೯ ಸ್ಥಿರ, ಚಲಿಸದ

ನಿಸ್ಸೀಮ ೧೯-೧೩ ಎಣೆಯಿಲ್ಲದ, ಸಾಟಿಯಿಲ್ಲದ

ನೀಱ ೨೧-೩೦ ಚೆಲುವ, ಪ್ರಿಯ

ನೀಱೆ ೫-೬೬ ಸುಂದರಿ

ನೆಗಳು ೧-೧೯ ಮಾಡು, ಉಂಟಾಗು, ಪ್ರಕಟವಾಗು

ನೆನಪು ೩-೧೫ ಧ್ಯಾನ

ನೆಮ್ಮು ೭-೭೦ ಆಸರೆ ಮಾಡಿಕೊಳ್ಳು

ನೆಮ್ಮುಗೆ ೭-೭೧ ಸಂಬಂಧ

ನೆರವು ೧೬-೩೭ ಸಹಾಯ

ನೆಱತೆ ೮-೩೦ ಪೂರ್ಣತೆ

ನೆಱೆವುದೆ ೨೩-೪೧ ಸಾಕಾಗುವುದೆ

ನೆಱಹು ೫-೫೫ ಕೂಡಿಸಿಹೇಳು

ನೆಲನುಗ್ಗಡಣೆಕಾರರು ೨೨-೧೭ ಪಾದಾವ ಧಾನವನ್ನು ಹೇಳುವವರು

ನೇವುರ ೪-೭ ಪೈಜಣ, ನೂಪುರ

ನೇಸಱು ೬-೨೦ ಸೂರ್ಯ

ನೈವಾರಿಸು ೧೬-೩೨ ನಿವಾರಿಸು

**ಪ**

ಪಕ್ಕ ೮-೧೩ ರೆಕ್ಕೆ

ಪಚನಿಸು ೧೮-೨೭ ಬೇಯಿಸು

ಪಟು ೧೨-೧೫ ತೀಕ್ಷ್ಣ, ದಕ್ಷ

ಪತಂಗ ೧೨-೨೫ ; ೨೧-೨೫ ಸೂರ್ಯ

ಪತಿಕರಿಸು ೫-೩೩ ಸ್ವೀಕರಿಸು, ಸಹಾಯ ಮಾಡು

ಪಯಪಾಡು ೪-೫೭ ನಾಟ್ಯದಲ್ಲಿ
ಪಾದಗಳನ್ನು ಇಡುವ ರೀತಿ
ಪರಿಕಿಸು ೭-೬೧ ಆಲೋಚಿಸು
ಪರಿಕರಣೆ ೨೨-೪ ಸಿದ್ಧತೆ, ವ್ಯವಸ್ಥೆ
ಪರಮಾರ್ಥ ೨೨-೧ ಅಲೌಕಿಕ
ಪರಿಚರಿಸಿ ೩-೩೬ ಅಭ್ಯಾಸಮಾಡಿ,
ವ್ಯಾಸಂಗಮಾಡಿ
ಪರಿಚರ್ಯೆ ೫-೧೮ ಅಭ್ಯಾಸದ, ವ್ಯಾಸಂಗದ
ಪರಿಣಮಿಸು ೧೨-೪ ನಮಸ್ಕಾರ ಮಾಡು
ಪರಿಮಿತಾಲಯ ೧೬-೨ ಮಿತಗೋಷ್ಠಿ
ಸೇರಿರುವ ಮನೆ
ಪರಿಯಾಣ ೨೩-೧೪ ತಟ್ಟೆ
ಪರಿವಿಡಿ ೪-೨೧ ; ೧೬-೪೪ ಕ್ರಮ
ಪರಿವೇಷ್ಟಿಸು ೪-೧೦ ಸುತ್ತುಗಟ್ಟು, ಆವರಿಸು
ಪರುಠವಣೆ ೨-೩ ಸರಿಯಾದ ವ್ಯವಸ್ಥೆ
ಪರುಠವಿಸು ೧-೭ ; ೧೪-೨೭ ಪ್ರಸಾರ
ಮಾಡು, ವಿವರಿಸು, ವಿಸ್ತರಿಸು
ಪಲ್ಲಟಿಸು ೩-೧೩ ಕ್ರಮತಪ್ಪು,
ವಿಚಾರವಶವಾಗು
ಪಲ್ಲವಿಸಿ ೭-೧೮ ಹೆಚ್ಚಿ
ಪಳದೆ ೨೩-೩೨ ಕಾಯಿಹುಳಿ, ಮಜ್ಜಿಗೆಹುಳಿ
ಪಾಡು ೪-೫೮ ರೀತಿ
ಪಾತ್ರ ೪-೬೬ ಲಾಸ್ಯ, ಕುಣಿತ ; ೨೨-೩೭
ವೇಷ, ನಟನೆ
ಪಾಯಕ ೨೨-೪೪ ಕಾಲಾಳು
ಪಾಯವಟ್ಟ ೪-೭ ಪೆಂಡೆಯ, ಅಂದುಗೆ,
ಕಾಲಿನ ಆಭರಣ
ಪಾಷಾಣ ೧೩-೯ ಕಲ್ಲು
ಪುರೀಷ ೧೯-೧ ಮಲ
ಪೂವಲಿ ೩-೪ ರಂಗವಲ್ಲಿ
ಪೆಚ್ಚುನೀರ್ ೩-೨೬ ಮಕ್ಕಳು ಬೆಳೆಯಲು
ನಿತ್ಯವೂ ಎರೆಯುವ ನೀರು
ಪ್ಪೈಜೆ ೨-೪೧ ಪ್ರತಿಜ್ಞೆ
ಪ್ರಸ್ತಾವ ೩-೧೫ ಸಮಯ, ಸಂದರ್ಭ
ಪ್ರಳಯ ೧೩-೨೪ ಸಾವು
ಪಂಚಮುಖ ೨೦-೨೬ ಸಿಂಹ

## ಬ

ಬಕ್ಕಟಿ ೨೨-೩೬ ಬರಿದು
ಬಗೆಬಂದ ೭-೩ ಮನಸ್ಸಿಗೆ ಬೇಕಾದ
ಬಟ್ಟೆ ೭-೮೦ ದಾರಿ
ಬಡಬ ೨೩-೪೧ ಸಮುದ್ರದ ತಳದಲ್ಲಿರುವ
ಬೆಂಕಿ ; ಕಡಲ್ಗಿಚ್ಚು
ಬಣಗು ೨೨-೩೬ ಕ್ಷುಲ್ಲಕ, ಅಪ್ರಯೋಜಕ,
ಅಲ್ಪ
ಬನ್ನ ೧೬-೩೪ ತೊಂದರೆ, ಸೋಲು, ಭಂಗ
ಬಯಿನು ೨೨-೩ ಅತ್ಯಾಸೆ (?)
ಬಱಿದೆ ೫-೬೦ ಸುಮ್ಮನೆ, ವ್ಯರ್ಥವಾಗಿ
ಬಱುಮಾತು ೨-೪೦ ವ್ಯರ್ಥವಾದ ಮಾತು
ಬಲವರು ೪-೩೭ ಪ್ರದಕ್ಷಿಣೆ ಮಾಡು
ಬಲ್ಲವಿಕೆ ೨೨-೧೭ ತಿಳುವಳಿಕೆ, ಚಾತುರ್ಯ
ಬಲ್ಲಹ ೭-೪೬ ಒಡೆಯ, ಸ್ವಾಮಿ
ಬಲಿದು ೪-೫- ಬಿಗಿಮಾಡಿ
ಬಸವಳಿ ೭-೪೪ ಶಕ್ತಿಗುಂದು
ಬಳಲು ೪-೩೨ ಸಡಿಲಾಗು
ಬಳವಿಗೆ ೩-೨೮ ಬೆಳವಣಿಗೆ
ಬಳಸು ೪-೨೭ ಸುತ್ತುಮುತ್ತು
ಬಾಣಸ ೮-೧೩ ಅಡಿಗೆ
ಬಾತೊಡೆ ೫-೬೨ ಉಬ್ಬಿದರೆ
ಬಾಯ್ದೆರೆ ೨-೩೦ ತುಟಿ
ಬಾರಿ ೭-೩೯ ಹೊಡೆತ, ಸರತಿ
ಬಿದಿರಿಸು ೧೯-೫೩ ಚೆಲ್ಲು
ಬಿದ್ದಿನ ೨೨-೨೬ ಅತಿಥಿ

ಬಿದ್ದಿನಂ ೨೩-೫೦ ಔತಣಕ್ಕೆ
ಅರ್ಹನಾದವನು, ಅತಿಥಿ
ಬಿನ್ನಣ ೨೩-೩೭ ಮನೋಹರ
ಬಿನುಗು ೧೬-೪೯ ಕ್ಷುಲ್ಲಕ, ಕೀಳು
ಬಿಱುಬು ೧೯-೩೨ ಕಾಠಿಣ್ಯ, ಪ್ರಬಲ
ಬಿಱುಹೊಯಿಲು ೧೯-೨೯ ಬಲವಾದ
ಹೊಡೆತ
ಬೀಯ ೧-೧೨ ವೆಚ್ಚ, ವ್ಯಯ
ಬುಲ್ಲವಣೆ ೧೫-೪೨ ಹೆಚ್ಚುವಿಕೆ
ಬೆಗಡು ೫-೩೫ ಭಯ
ಬೆದೆ ೬-೮ ಬಿತ್ತನೆ
ಬೆಬ್ಬನೆ ಬೆಱೆತು ೧೬-೩೮ ಅಹಂಕಾರದಿಂದ
ಮೈಮರೆತು
ಬೆಬ್ಬಳ ೨೨-೩೮ ಗಲಿಬಿಲಿ, ಗಾಬರಿ
ಬೆಸುಗೆ ೩-೮ ಹೊಂದಿಕೆ, ಕೂಡಿಕೆ
ಬೆಳವಿಗೆ ೬-೮ ಬೆಳವಣಿಗೆ
ಬೆಳೆನೀರ್ ೨-೧೪ ಬೆಳೆಯಲು ಹಾಕುವ
ನೀರು
ಬೇವಸ ೫-೨೪ ಚಿಂತೆ
ಬೋನ ೨೩-೨೨ ಅನ್ನ
ಬೋಳೆಯರು ೭-೪೬ ದೇವತೆಗಳು
ಬೋಳೈಸು ೫-೩೫ ಸಮಾಧಾನಮಾಡು
ಬಂದಿಕಾಱ ೭-೫೩ ಕಳ್ಳ
ಬಿಂಕಕಾಱ ೫-೧೩ ಸಮೂಹ
ಬಿಂದ ೫-೧೭ ಸಮೂಹ
ಬೆಂಬಿದ್ದು ೫-೫೭ ದುಃಖದಲ್ಲಿ ಬೆಂದವಳಾಗಿ

## ಭ

ಭಣಿತೆ ೨೨-೧೦ ಮಾತಿನ ರೀತಿ
ಭರ ೧೦-೫ ಆತುರ
ಭರಭಾರ ೧೬-೭ ಹೆಚ್ಚಾದ ಭಾರ
ಭವಭಾರಿ ೧೩-೬ ಸಂಸಾರಿ
ಭವರೋಗಿ ೧೩-೨೬ ಜನನ
ಮರಣಗಳೆಂಬ ರೋಗವುಳ್ಳವನು
ಭವಿ ೧೧-೧೧ ವೀರಶೈವದೀಕ್ಷೆ
ಪಡೆಯದವನು
ಭಾಗೆಯ ೫-೭೨ ಭಾಗ, ಪಾಲು
ಭಾರಂಕ ೮-೮ ದುಃಖಭಾರ
ಭಾವುಕ ೧-೮ ಪಂಡಿತ, ಸಹೃದಯ
ಭಾವುಕದ ನುಡಿ ೭-೮೦ ಹುಚ್ಚುಮಾತು,
ಅಸಂಬದ್ಧವಾದ ಮಾತು
ಭುಲ್ಲವಣೆ ೬-೧೧ ಹೆಚ್ಚುಗೆ
" ೨೩-೩೦ ಸಂಭ್ರಮ
" ೨೪-೭ ಮೋಹ
ಭುಲ್ಲವಿಪ ೨೩-೨ ಹೆಚ್ಚುವ
ಭುಲ್ಲವಿಸು ೨-೩೭ ಗರ್ವದಿಂದ ಉಬ್ಬು
ಭೋಗದವ ೫-೭೨ ಸೇವಕ
ಭೋಗಾರುಹ ೧೪-೮ ಸುಖದಾಯಕ
ಭಂಡ ೨೩-೪೧ ಭಂಡಾರ

## ಮ

ಮಕರಿಸು ೭-೩೬ ಹೆಚ್ಚಾಗು
ಮಗ್ಗು ೧೩-೨೬ ವಶೀಕರಣ ;
" ೧೯-೪೧ ಕಾಣದಂತಾಗು
ಮಡಲು ೫-೮ ಉಡಿ
ಮನಕತ ೭-೮೨ ಸಿಟ್ಟು
ಮಮಕರಿಸು ೧೨-೨೮ ; ೨೩-೫೦
ಅಹಂಕರಿಸು
ಮರುಜೇವಣಿ ೧೯-೧೪ ಸಂಜೀವನ ಬೇರು
ಮರುಳಾಡು ೫-೬೦ ನಿಂದಿಸು
ಮಱವೆ ೫-೨೫ ; ೧೯-೪೧ ಅಜ್ಞಾನ
ಮಲಯಜ ೯-೩೧ ಶ್ರೀಗಂಧದ ಮರ
ಮಲೆವುತ ೨-೪೨ ಗರ್ವಿಸುತ್ತ
ಮಸಕ ೭-೪೮ ವಿಜೃಂಭಣೆ
" ೧೮-೩ ಅಬ್ಬರ

ಮಂಡಗೆ ೨೩-೨೪ ಹಂಡೆ
ಮಾರ್ಕೊಂಡು ೮-೨೩ ಪ್ರತಿಭಟಿಸಿ, ತಿರಸ್ಕರಿಸಿ
ಮಾಡ ೧೯-೨೩ ಮನೆ
ಮಾಣಿಸು ೧೨-೩ ಹೋಗಲಾಡಿಸು, ನಿವಾರಿಸು
ಮಾದು ೧೮-೩ ಅಡಗು
ಮಾದುದು ೭-೪೮ ಅಡಗಿತು, ಹೋಯಿತು
ಮಾಱು ೨೩-೧೨ ಪ್ರತಿ
ಮಾಱಾಂತು ೧೯-೩೬ ಎದುರಾಗಿ
ಮಿಡುಕು ೫-೭೦ ಅಲ್ಲಾಡು, ಚಲಿಸು
ಮಿತ್ತು ೨-೨೨ ಕೊಲ್ಲುವ ಶಕ್ತಿ
ಮಿಱುಪ ೫-೬ ಹೊಳೆಯುವ
ಮುಕ್ಕುಹೋಗು ೫-೪೯ ಭಂಗವಾಗು
ಮುಟ್ಟಿ ೧೯-೧೪ ಮುಷ್ಟಿ
ಮುಟ್ಟಲಿ ೧೬-೪೪ ಕಡೆತನಕ, ಮುಗಿಯುವವರೆಗೆ
ಮುಡುಬ ೧೧-೨೪ ಹೆಳವ
ಮುಡುಹು ೧೯-೩೩ ಭುಜ
ಮುತ್ತು ೩-೧೩ ಮುಪ್ಪಾಗಿ
ಮುರಿ ೧೩-೩೩ ತಿರುಗು
ಮುಱಿವಡೆದ ೭-೭೧ ಸೋತ, ಅವಮಾನಿತಳಾದ
ಮುರುಟಿಸು ೩-೧೩ ಕುಗ್ಗಿಸು
ಮುಂಗುಡಿ ೪-೨೭ ಮುಂಭಾಗದಲ್ಲಿರುವ ಸಮೂಹ, ಸೇನೆ
ಮುಂತೆ ೨-೪೨ ಮೊದಲು
ಮೆಲಕಲಿಸಿ ೧೨-೨ ತಿನ್ನಲಿಕ್ಕೆ ಕಲಿಸಿ
ಮೇಲುದ ೪-೪೨ ಮೇಲೆ ಹೊದ್ದು ಕೊಳ್ಳುವ ಬಟ್ಟೆ, ಸೆಲ್ಲೆ
ಮೇಳ ೬-೩೯ ಜೊತೆ, ಸಹವಾಸ
ಮೇಳಾಪ ೬-೧೬ ಸೇರಿಕೆ, ಜೊತೆ
ಮೊಗಸು ೧-೧೬ ಪ್ರಯತ್ನಮಾಡು, ಶ್ರಮಿಸು, ಸಾಧನೆಮಾಡು
ಮೊಗ್ಗರ ೧೩-೧೧ ಸಮೂಹ
ಮೊಗ್ಗರವಾಯು ೧೩-೧೧ ಗುಂಪಾಗಿ ಮೇಲೆ ಬೀಳು
ಮೋಡಿ ೧೯-೩೪ ರೀತಿ, ಕ್ರಮ
ಮೋಹಿಸಿ ೨೩-೬೦ ಗುಂಪುಗೂಡಿ, ಸೇರಿ

**ಯ**

ಯೂಪ ೨೦-೩೮ ಯಜ್ಞಪಶುವನ್ನು ಕಟ್ಟುವ ಕಂಬ
ಯೋಗವಟ್ಟಿಗೆ ೭-೪೫ ಧ್ಯಾನಕಾಲದಲ್ಲಿ ಬೆನ್ನು ಮೊಳಕಾಲುಗಳ ಸುತ್ತ ಕಟ್ಟಿಕೊಳ್ಳುವ ವಸ್ತ್ರ

**ರ**

ರಟ್ಟು ೫-೬೯ ಪ್ರಚಾರ, ಬಹಿರಂಗ
ರಾಗ ೧೩-೨೯ ಅನುರಕ್ತಿ, ಸಂಸಾರದಲ್ಲಿ ಆಸಕ್ತಿ
ರಾಘ ೧೩-೭೦ ತೊಡೆ
ರುಚಿ ೨-೧೩ ಕಿರಣ, ಕಾಂತಿ

**ಱ**

ಱೋಡಾಡು ೭-೬೧ ಹಾಸ್ಯಮಾಡು, ಕಾಡು

**ಲ**

ಲಹರಿ ೨೩-೬೦ ತೆರೆ
ಲಾಕುಳ ೭-೪೫ ಯೋಗದಂಡ
ಲಾಗಿಸು ೨೧-೫ ದಾಟಿಸು
ಲಾಗು ೧೮-೭ ; ೧-೯ ಜಾಗ್ರತೆ
ಲಾವಕ ೫-೬೪ ; ೨೨-೨೬ ಚಾಡಿಕೋರ
ಲಾಸ್ಯ ೪-೬೧ ಸಂಗೀತದಿಂದ ಕೂಡಿದ ನೃತ್ಯ
ಲುಳಿ ೩-೨೫ ಹೊಳಪು, ಕಾಂತಿ
ಲೋಚು ೭-೫೭ ತಲೆಯ ಕೂದಲನ್ನು ಕೀಳಿಸಿಕೊಳ್ಳುವದು

**ವ**

ವರುಷ ೧೪-೧೧ ಮಳೆ
ವರ್ಮ ೧೫-೧೪ ಮರ್ಮ

ವಹಣೆ ೫-೯ ಸೊಬಗು
ವಾಘೆ ೧೩-೭೦ ; ೧೮-೧೯ ಕಡಿವಾಣ
ವಾರುವ ೧೮-೧೯ ಕುದುರೆ
ವಾಸ ೪-೫೬ ಕೊಳಲು
ವಾಸನೆ ೨೪-೫ ಕರ್ಮಫಲ
ವಾಸಿ ೭-೬೪ ಪಂಥ
ವಾಸಿಗ ೫-೧೩ ಊಳಿಗದವ, ಸೇವಕ
ವಿಕಲ್ಪ ೧೯-೨೭ ಭ್ರಾಂತಿ
ವಿಡಾಯ ೧-೧೧ ; ೭-೧ ಆಡಂಬರ
೧೨-೨೧ ಶಕ್ತಿ
ವಿಧಾವಂತ ೫-೨ ಬಾಡಿಗೆ ಹಣಕ್ಕಾಗಿ
ದುಡಿಯುವವ
ವಿಧಿ ೧-೧೨ ನೇಮ, ರೀತಿ
ವಿನಿಯೋಗ ೩-೩೫ ಊಳಿಗ, ಸೇವೆ
ವಿಸಟಂಬರಿ ೧೪-೯ ಯಥೇಚ್ಛವಾಗಿ ಹರಿ
ವೆಗ್ಗಳಿಸಿ ೩-೧೩ ಹೆಚ್ಚಾಗಿ
ವೇದನಿಸು ೭-೧೬ ದುಃಖವನ್ನುಂಟು
ಮಾಡು
ವೇದಿಸು ೪-೪ ಪ್ರಕಟಮಾಡು;
" ೭-೨೧ ತಿಳಿಸು
ವೇಧೆ ೧೭-೨ ಗುರಿ
ವೈಹಾಳಿ ೧೦-೪ ಕುದುರೆಯ ಸವಾರಿ

**ಸ**

ಸಕೀಲ ೧೨-೧೬ ಸಂಬಂಧ
ಸಗಾಡಿಕೆ ೧೪-೨೭ ಹೊಂದಿಕೆ
ಸಘಾಟಿಕೆ ೧೯-೧೨ ಅತಿಶಯತೆ
ಸಮನಿಸು ೩-೪ ಉಂಟಾಗು
ಸಮಯ ೧೦-೨೪ ಮತಸಿದ್ಧಾಂತ
ಸಮವಾದ ೧೪-೭ ಹೊಂದಿದ,
ಕೂಡಿಕೊಂಡ, ಒಂದಾದ
ಸಮಾಧಿ ೧೮-೧೩ ಏಕಾಗ್ರಚಿತ್ತ
ಸಮ್ಮೇಳ ೩-೮ ಕೂಟ, ಜೊತೆ
ಸರಿಸ ೪-೨೨ ಹತ್ತಿರ, ಸಮೀಪ, ಎದುರು
ಸಲ್ಲವಿಡು ೫-೧೪ ಬಿಟ್ಟುಬಿಡು
ಸವ್ಯಾಪಸವ್ಯ ೧೯-೩೪ ಎಡಬಲ
ಸಸಿನೆ ೪-೫ ನೆಟ್ಟಗೆ, ಚೆನ್ನಾಗಿ, ಸರಿಯಾಗಿ
ಸಂಘಟ ೧೬-೩೨ ಪ್ರಯತ್ನ, ಹಂಚಿಕೆ
ಸಂಚಲವಾಗಿ ೩-೧೫ ಚೆನ್ನಾಗಿ ಚಲಿಸಿ
ಸಂಚಿಸು ೨೩-೪೨ ಸಂಗ್ರಹಿಸು
ಸಂದ ೭-೧೯ ಹೆಸರಾದ
ಸಂದಣಿಸು ೨-೮ ಒಟ್ಟುಗೂಡಿಸು
ಸಂಪನ್ನ ೧೮-೩೦ ಸಂಭಾವಿತ
ಸಂಭಾವಿಸು ೫-೧೨ ಗೌರವಿಸು
ಸಂವರಿಸು ೭-೪೫ ಗಂಟುಕಟ್ಟು
ಸಾರಗಟ್ಟು ೪-೩೯ ಎತ್ತರದಲ್ಲಿ ನಿಂತು
ಅಭಿಷೇಕ ಮಾಡಲು ಬರುವಂತೆ
ಅಟ್ಟವನ್ನು ಕಟ್ಟು
ಸಾರಣೆ ೩-೪ ಸಾರಿಸುವುದು
ಸಾರಲು ೭-೬೨ ಬಳಿಸೇರಲು
ಸಾರೆ ೧೧-೩೨ ಸಮೀಪ
ಸ್ವಾನುಭಾವ ೮-೨೬ ಸ್ವಂತ ಅನುಭಾವ
ಸಾಂಗತ್ಯ ೩-೧೯ ಸಂಬಂಧ, ಕೂಟ
ಸೀಕರಿಗರಿಸು ೧೩-೩೦ ಕರಿಕುಗೊಳಿಸು,
ಸುಡು
ಸೀಗುರಿ ೧-೧೫ ಚವರಿ
ಸುಧಾಳ ೩-೨೫ ಕಾಂತಿ
ಸುಮಾನ ೩-೨ ಆನಂದ
ಸುವಿಧಾನ ೧೭-೨೨ ರಕ್ಷಿಸುವುದು
ಸೂಡುತಲಿ ೭-೪೫ ಗಂಟುಕಟ್ಟಿ
ಸೇದಿ ೧೮-೧೭ ಬಿಗಿದು
ಸೊಡರಕ್ಕಿ ೩-೨೬ ಅಕ್ಕಿಸುಟ್ಟ ಕಾಡಿಗೆ
ಸೊಮ್ಮು ೩-೩೦ ಐಶ್ವರ್ಯ
ಸೋಹೆ ೫-೪೩ ಕುರುಹು, ಚಿಹ್ನೆ
ಸೌರಂಭ ೩-೨ ಸಂಭ್ರಮ, ಆನಂದ,
ಸಂತೋಷ
ಸ್ವಯ ೧೯-೧ ಪ್ರತ್ಯಕ್ಷ

**ಹ**

ಹಕ್ಕೆ ೨೦-೩೦ ಮಲಗುವ ಹಾಸಿಗೆ

ಹಡೆ ೧-೬೯ ಪಡೆ

ಹಣ್ಣಿದ ೭-೨೩ ; ೨೨-೩ ಸಿದ್ಧಮಾಡಿದ,
ಜೋಡಿಸಿದ

ಹರವರಿ ೮-೩೧ ಪ್ರಕಟಣೆ

" ೨೨-೪೫ ನೆಲೆ

ಹಱುಗೋಲ ೨೨-೧೪ ದೋಣಿ

ಹಱುವ ೧೮-೩೪ ಉಪಾಯ

ಹವಣಿಸು ೨೩-೫೦ ಆಲೋಚಿಸು

ಹಸರಿಸು ೨೩-೪೯ ವ್ಯಾಪಿಸು

ಹಳವಿಗೆ ೪-೨೧ ಧ್ವಜ

ಹಾರವಿಸು ೪-೩೯ ಹಾರೈಸು

ಹಾರು ೨-೧೬ ನಿರೀಕ್ಷಿಸು

ಹಿಳುಕು ೮-೧೧ ಬಾಣದ ಹಿಡಿ

ಹಿಸುಣತೆ ೧೬-೪೦ ಚಾಡಿಕೋರತನ

ಹುಗಿಲು ೧೮-೮ ಸೀಳುವಿಕೆ

ಹುದು ೧೬-೪೨ ಹೊಂದಿಕೊಳ್ಳುವುದು

ಹೆಕ್ಕಳ ೧೧-೫ ಹೆಚ್ಚಳ

ಹೆಟ್ಟುಗೆ ೯-೩ ಸ್ತ್ರೀ

ಹೆಡಿಗೆ ೨೩-೧೭ ಮಂಕರಿ

ಹೆಱೆ ೯-೩೦ ಚಂದ್ರ

ಹೇಡಾಡು ೧೮-೩೫ ಹಿಮ್ಮೆಟ್ಟು

ಹೊಣಕೆ ೨೩-೨೭ ಯುದ್ಧ, ಸ್ಪರ್ಧೆ

ಹೊದ್ದು ೨೩-೫೦ ಸೇರು

ಹೊರಳಿ ೨-೨ ಸಮೂಹ, ಗುಂಪು

ಹೊಲಬು ೧-೧ ರೀತಿ
೭-೪೨ ಮಾರ್ಗ, ದಾರಿ

ಹೋರಟೆ ೧೧-೫ ಹೋರಾಟ, ಜಗಳ



ಕನ್ನಡ ಸಾಹಿತ್ಯ ಪರಿಷತ್ತಿನಿಂದ
ಮರುಮುದ್ರಣಗೊಳ್ಳುತ್ತಿರುವ ಮತ್ತು ಹೊಸದಾಗಿ
ಮುದ್ರಿತವಾಗುತ್ತಿರುವ ವಿವಿಧ ಪ್ರಕಾರಗಳ ಪುಸ್ತಕಗಳನ್ನು
ಸಹೃದಯರು ಮೆಚ್ಚಿ ಸ್ವೀಕರಿಸಲು ಯೋಗ್ಯವಾಗುವಂತೆ
ಆಕರ್ಷಕ ವಿನ್ಯಾಸಗಳಲ್ಲಿ ಸಿದ್ಧಪಡಿಸಿದ ಮೇಲೆ ಅವುಗಳ
ಮಾರಾಟದ ಪ್ರಮಾಣ ಹೆಚ್ಚುತ್ತಿರುವುದನ್ನು ಕಂಡು ನನಗೆ
ಸಂತೋಷವಾಗಿದೆ. ಓದುಗರು ಬಯಸುವ ಪುಸ್ತಕಗಳನ್ನು
ಅವರ ಕೈಗೆ ತಲಪುವಂತೆ ಮಾಡುವುದೇ
ಪುಸ್ತಕೋದ್ಯಮದ ಪ್ರಾಥಮಿಕ ಆಶಯ.
ಈ ಉದ್ಯಮವನ್ನು ಅತ್ಯಂತ ಗಂಭೀರವಾಗಿ ಪರಿಗಣಿಸಿ,
ಕಾಲಕಾಲಕ್ಕೆ ಬದಲಾಗುತ್ತಿರುವ ಓದುಗರ ಅಭಿರುಚಿಗೆ
ಸ್ಪಂದಿಸುತ್ತ, ಆ ಕ್ಷೇತ್ರದಲ್ಲಿ ಬಹುವೇಗವಾಗಿ ಸಾಗುತ್ತಿರುವ
ಪ್ರಕಾಶಕರ ನಡುವೆ ಕನ್ನಡ ಸರಸ್ವತಿಯ ಆರಾಧನೆ
ಮಾಡುತ್ತಿದ್ದೇವೆಂದು ಭಾವಿಸುವುದರ ಜೊತೆಗೆ
ಹೊಸಕಾಲದ ಅಗತ್ಯಕ್ಕೆ ಅನುಗುಣವಾಗಿ ಬದಲಾಗುವುದೇ
ಜೀವಂತಿಕೆಯ ಲಕ್ಷಣ ಎಂದು ಕನ್ನಡ ಸಾಹಿತ್ಯ ಪರಿಷತ್ತು
ಪರಿಗಣಿಸಿದೆ.

**ಪುಂಡಲೀಕ ಹಾಲಂಬಿ**
ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು



**ಕನ್ನಡ ಸಾಹಿತ್ಯ ಪರಿಷತ್ತು**
ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು–೫೬೦೦೧೮

**ಬೆಲೆ ರೂ. 150/-**